# ಶ್ರೀ ಸಿದ್ಧಾರೂಢ ಚರಿತಾಮೃತ



ಪ್ರಕಾಶಕರು :
ಮೆ|| ಪಿ. ಪಿ. ಶಾಬಾದಿಮಠ ಬುಕ್-ಡಿಪೊ, ಗದಗ.
1985]                [ಬೆಲೆ : 12-00

# ಅರ್ಪಣೆ

ವೈದಿಕ ಜ್ಞಾನ ಗಂಗೆಯು ಪೂಜಾವೈಭವದಿಂದಲೂ, ವೈರಾಗ್ಯದ ವೈಭವದಿಂದಲೂ, ವೇದಾಂತ ವೈಭವದಿಂದಲೂ ಹರಿದು ದಾನವ ಮಾರ್ಗದ ಜನರನ್ನು ಜ್ಞಾನಮಾರ್ಗದ ಕಡೆಗೆ ಹಾದಿ ತೋರಿಸಿ ಭೂಲೋಕವನ್ನೇ ಸ್ವರ್ಗಲೋಕವನ್ನಾಗಿ ಮಾಡುತ್ತಿರುವ ಮಹಾ ಮಹಿಮರಾದ—

೧) ಶ್ರೀ ೧೦೦೮ ರಂಭಾಪುರಿ ಜಗದ್ಗುರು ವೀರಸಿಂಹಾಸನಾಧೀಶ್ವರ ಪ್ರಸನ್ ರೇಣುಕ ವೀರಗಂಗಾಧರ ಶಿವಾಚಾರ್ಯರು ಬಾಳೆಹೊನ್ನೂರು.

೨) ಶ್ರೀ ಜಗದ್ಗುರು ಗಂಗಾಧರ ಸ್ವಾಮಿಗಳು, ಮೂರುಸಾವಿರ-ಮಠ ಹುಬ್ಬಳ್ಳಿ.

೩) ಶ್ರೀ ವೇದಾಂತಾಚಾರ್ಯ ಸ್ವಾಮಿ ನಂದೀಶ್ವರ ಶಿವಾಚಾರ್ಯರು ಶ್ರೀ ಶಿವಾನಂದಮಠ ಗದಗ.

೪) ಶ್ರೀ ಪರಮಹಂಸ ಜಗನ್‌ಜ್ಯೋತಿ ಮುಪ್ಪಿನಾರ್ಯ ಮಹಾಸ್ವಾಮಿಗಳು ಐರಣಿ.

೫) ರುದ್ರಸ್ವಾಮಿಗಳು ರುದ್ರಾಕ್ಷಿಮಠ ಹುಬ್ಬಳ್ಳಿ.

೬) ಶ್ರೀ ವೇದಾಂತ ಕೀರ್ತಿ ಬ್ರಂ. ಶ್ರೀ ಸಿದ್ಧವೀರಸ್ವಾಮಿಗಳು ಗೋಪನಕೊಪ್ಪ.

ಈ ಮಹಾಸ್ವಾಮಿಗಳವರಿಗೆ ಭಕ್ತಿಪೂರಕವಾಗಿ ಅರ್ಪಿಸಿರುವೆ.

ದಿನಾಂಕ—
೨೬-೧೨-೧೯೬೯.
ಸೋಮವಾರ

ಇಂತಿ ತಮ್ಮ
ಮೊ॥ ಗಿರಿಯಪ್ಪಗೌಡಾ ಓದುಗೌಡ್ರ
ಜ್ಞಾನಾನಂದಾಶ್ರಮ, ಹುಲಕೋಟಿ.
ತಾ:—ಗದಗ. ಜಿ:—ಧಾರವಾಡ

# ಮುನ್ನುಡಿ

ಸದ್ಗುರುವಾದಿಗಾದಿ ಗುರು ಜಂಗಮ ಕೋಟಿಗೆ ಮುಖ್ಯನಾದ ಭಾವಸ್ಥಸದ್ಗುರು ।
ಆಗಮಂಗಳೆಡೆಗಾಣದೆ ಬೊಬ್ಬಿಡೆ ಪ್ಯಾಟಿಗೈಯದು ದೆದ್ಗುರು ।
ಭಕ್ತದೇಹಿಕಲ ಸದ್ಗುರು ಷಟಸ್ಥಲ ಚಿತ್ತಕ್ರಿಯಾಸ್ಪದಂ ವದ್ಗುರು ।
ರೇಣುಕೇಶ್ವರ ಮಹಾಗುರು ಮಾಳ್ಕೆಮಗೆ ಇಷ್ಟ ಸಿದ್ಧಿಯಂ ||

ನಮ್ಮಯ ಭಾರತಿ ಸಂಸ್ಕೃತಿಯು ಜಗತ್ತಿನ ಶ್ರೇಷ್ಠ ಸಂಸ್ಕೃತಿಗಳಲ್ಲಿ ಒಂದಾಗಿರುವದು. ಅಗಸ್ತ್ಯ, ರೇಣುಕ, ಕಾಳಿದಾಸ, ವಾಲ್ಮೀಕಿ, ಶ್ರೀಪತಿ ಪಂಡಿತಾರಾಧ್ಯ, ಸ್ವಪ್ರಭಾನಂದ ಶಿವಾಚಾರ್ಯ, ಬಸವೇಶ್ವರ, ಶಂಕರಾಚಾರ್ಯ, ಚನ್ನಬಸವ, ಪ್ರಭುದೇವ, ಯಡೆಯೂರಶಿದ್ಧಲಿಂಗೇಶ, ರಾಮಾನುಜಾಚಾರ್ಯ, ಮಧ್ವಾಚಾರ್ಯ, ಶ್ರೀಮದ್ ಅಥಣಿ ಮುರುಘೇಂದ್ರ ಶಿವಯೋಗಿಗಳು ಅವರ ಪರಂಪರೆಯನ್ನು ಅನುಸರಿಸಿದ ಸಿದ್ಧಾರೂಢ ಯತಿಗಳಿಂದ ಭಾರತೀಯ ಸಂಸ್ಕೃತಿಯು ದಿನೇದಿನೇ ಬೆಳೆಯುತ್ತಲಿರುವದು.

ನಮ್ಮಯ ಸಂಸ್ಕೃತಿಯು ತಮ್ಮಷ್ಟಕ್ಕೆ ತಾವೇ ಇದ್ದುಕೊಂಡು ತಮ್ಮಯ ಪೂಜಾಲೋಲದಿಂದ ಮಹಾತ್ಮರಾಗಿ ಅಮರರಾಗಿರುವರು. ಮಹಾತ್ಮರ ಸಂಸ್ಕೃತಿಯ ಗುಂಪು ಒಂದು. ತಮ್ಮ ಪೂಜಾ ಆನಂದದೊಂದಿಗೆ ಭಕ್ತಕೋಟಿಯನ್ನು ಕರೆದುಕೊಂಡು ಅವರಿಗೂ ಕೂಡಾ ಪೂಜಾ ಆನಂದದ ಸವಿಯನ್ನು ತೋರಿಸಿ ಅವರನ್ನು ತಮ್ಮೊಂದಿಗೆ ಇಹಲೋಕದಿಂದ ಮುಕ್ತಮಾಡುವದು ಇನ್ನೊಂದು ಗುಂಪು. ಹೀಗೆ ನಮ್ಮಯ ಯತಿಗಳಲ್ಲಿ ಎರಡು ಗುಂಪು.

ಅದೇ ಪ್ರಕಾರ ನಮ್ಮಯ ಚರಿತ್ರನಾಯಕರಾದ ಸಿದ್ಧಾರೂಢ ಯತಿಗಳು ತಮ್ಮ ಪೂಜಾ ಆನಂದದೊಂದಿಗೆ ಭಕ್ತಕೋಟಿಯನ್ನು ಪೂಜಾನಂದಗೊಳಿಸಿ ಸ್ವರೂಪದ ವರೆಗೆ ಕರೆದುಕೊಂಡು ಹೋಗಿ ಮುಮುಕ್ಷುಗಳಿಗೆ ದಾರಿ ಮಾಡಿ ಕೊಟ್ಟಿದ್ದಾರೆ.

ನಿಜವಾಗಿಯೂ ಚರಿತ್ರನಾಯಕರು ಹುಟ್ಟಿದ ವೇಳೆಯಲ್ಲಿ ಭಾರತದಲ್ಲಿ ಬಹಳ ಹಾಹಾಕಾರ ಪರಿಸ್ಥಿತಿಯು ಇದ್ದಿತು. ಏಕಂದರೆ ಆಂಗ್ಲರ ಆಳಿಕೆ ಯಿಂದ ವೈದಿಕತ್ವವು ಗಾಳಿಗೆ ತೂರಿ ಎಲ್ಲ ಹಿಂದೂ ಜನರು ಮಿಶಿನರಿಗಳ

ಪ್ರಭಾವಕ್ಕೊಳಗಾಗಿ ಪಾಶ್ಚಾತ್ ಸಂಸ್ಕೃತಿಗೆ ಮಾರು ಹೋಗಿದ್ದರು. ಚರಿತ್ರ ನಾಯಕರು ಜನ್ಮಿಸಿದ ಬಿದರಿಕೋಟೆಗ್ರಾಮವು ಹೈದರಾಬಾದ ನೈಜಾಮ ಸರಕಾರದ ದಬ್ಬಾಳಿಕೆಗೆ ಅಲ್ಲಿ ಧರ್ಮವು ನಶಿಸಿ ಹೋಗಿತ್ತು. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ "ಯಾವ ಕಾಲದಲ್ಲಿ ಧರ್ಮವು ನಾಶವಾಗುವದೋ ಅದೇ ಕಾಲಕ್ಕೆ ನಾನು ಅವತರಿಸುವೆನು" ಎಂದು ಗೀತೆಯಲ್ಲಿ ಅರ್ಜುನನಿಗೆ ಶ್ರೀ ಕೃಷ್ಣನು ಉಪದೇಶಿಸಿದಂತೆ ಬಿದರಿಕೋಟೆಯಲ್ಲಿ ಮಹಾ ಶರಣ ಗುರು ಶಾಂತಪ್ಪ ಸಾಧ್ವಿ ಮಲ್ಲಮ್ಮ ಇವರ ಪವಿತ್ರ ಗರ್ಭದಿಂದ ಶಿವನ ಅವತಾರವಾಯಿತು. ಅವರೇ ಸಿದ್ಧಿಪುರುಷ ಸಿದ್ಧಾರೂಡರು.

"ಬೆಳೆಯ ಸಿರಿಯನ್ನು ಮೊಳಕೆಯಲ್ಲಿ ನೋಡು" ಎಂಬಂತೆ ಚಿಕ್ಕಂದಿನಲ್ಲಿಯೇ ಶಿವಾವತಾರಿಗಳಾದ ಸಿದ್ಧಾರೂಢರು ಅನೇಕ ಪವಾಡಗಳನ್ನು ಉದಾ-- ಜೀವಂತ ಇದ್ದ ಎಮ್ಮೆಯನ್ನು ಸಾಯಿಸುವದು ಮತ್ತೆ ಅದನ್ನು ಬದುಕಿಸುವದು. ಹುಡುಗನನ್ನು ನೀರಲ್ಲಿ ಮುಳುಗಿಸಿ ಸಾಯಿಸುವದು ಅವನನ್ನು ಜೀವಂತ ಮಾಡುವದು. ಹೀಗೆ ಅನೇಕ ಪವಾಡಗಳನ್ನು ಮಾಡಿ ಕೀರ್ತಿವಂತನಾಗಿದ್ದರೆ ನಿಜವಾಗಿ ಹೇಳಬೇಕಾದರೆ ವೇದಾಂತದ ಮುದ್ದೆಯೇ ಸಿದ್ಧಾರೂಢರಾಗಿ ಹುಟ್ಟಿ ಬಂದರೋ ಏನೋ ಎಂಬಂತೆ ಚಿಕ್ಕಂದಿನಿಂದಲೂ ವೇದಾಂತದ ಗಹನವಾದ ವಿಷಯವನ್ನು ಸಹಜವಾಗಿ ಮುಮುಕ್ಷಗಳಿಗೆ ತಿಳಿಸಿ ವೇದಾಂತದ ಕೀರ್ತಿ ಶಂಕರರಾದರು. ಮುಂದೆ ಮುಮುಕ್ಷುಗಳೊಂದಿಗೆ ದೇಶ ಪರ್ಯಟನ ಮಾಡುತ್ತ ನಾನಾ ಪವಾಡಗಳನ್ನು ಎಸಗುತ್ತಾ ಗಜದಂಡ ಸ್ವಾಮಿಗಳಲ್ಲಿಗೆ ಬಂದು ವೇದಾಂತ ನೈಜ ಸಿದ್ಧಾಂತವನ್ನು ಗುರು ಸೇವೆ ಮಾಡಿಕೊಂಡು ಕರತಲಗೊಳಿಸಿಕೊಂಡು ಗುರು ಅಪ್ಪಣೆಯ ಮೇರೆಗೆ ಹುಬ್ಬಳ್ಳಿಗೆ ಬಂದು ಮಹಾ ಮಠವನ್ನು ಕೆಟ್ಟಿಕೊಂಡು ಸಾವಿರಾರು ಮುಮುಕ್ಷಗಳಿಗೆ ವೇದಾಂತ ಸಿದ್ಧಾಂತವನ್ನು ಹೇಳಿ ಅನ್ಯಮಾರ್ಗದಿಂದ ಅವರನ್ನು ಸನ್ಮಾ-ರ್ಗಕ್ಕೆ ಹಚ್ಚಿದ್ದಾರೆ. ಇಂದಿಗೆ ಕರ್ನಾಟಕದಲ್ಲಿ ಸಾವಿರಾರು ಪಂಡಿತರು ಸಿದ್ಧಾರೂಢರ ಶಿಷ್ಯಸಂಪ್ರದಾಯವನ್ನು ಮುಂದುವರಿಸಿದ್ದಾರೆ. ಇಂದಿಗೂ ಹುಬ್ಬಳ್ಳಿ ಶ್ರೀ ಸಿದ್ಧಾರೂಢರ ಕೇಂದ್ರವಾಗಿ ವೇದಾಂತಾಧ್ಯಾತ್ಮಿಕ ಕೇಂದ್ರವಾ-ಯಿತು. ಇಂಥ ಮಹಾತ್ಮರು ಎಲ್ಲರಿಗೂ ಬೆಳಕಾಗಿ ೧೯೨೯ ನೇ ಇಸ್ವಿಯಲ್ಲಿ ಉಪಾಧಿರಹಿತವಾಗಿ ಪರಿಪೂರ್ಣಾವಸ್ಥೆಯನ್ನು ಹೊಂದಿದರು.

ಮಹಾ. ಶಿವಾನುಭಾವಿಗಳೂ ಪವಾಡ ಪುರುಷರು ಆದ ಶ್ರೀ ಸಿದ್ಧಾ-ರೂಢರ ನೈಜ ಚರಿತ್ರೆಯನ್ನು ಜನತೆ ಓದಿ ಆನಂದ ಹೊಂದಲೆಂದು ಸಿದ್ಧಾರೂಢರ ಶಿಷ್ಯ-ಪ್ರಶಿಷ್ಯ ಶ್ರೀಮಂತ ಗಿರಿಯಪ್ಪಗೌಡರು ಬಸನಗೌಡರು ಓದುಗೌಡರ ಆಧ್ಯಾತ್ಮಿಕ ಜ್ಞಾನಾನಂದಾಶ್ರಮ ಹುಲಕೋಟಿ ಇವರು ಬಹು ಸೊಗಸಾಗಿ ಅಚ್ಚು ಕನ್ನಡದಲ್ಲಿ ಬರೆದು ಸಿದ್ಧಾರೂಢರ ಚರಿತ್ರೆಯನ್ನೋದುವ ಮುಮುಕ್ಷಗಳಿಗೆ ಮಹದುಪಕಾರವನ್ನು ಮಾಡಿದ್ದಾರೆ. ಶ್ರೀಯುತರ ಮನೆತನವು ಸದಾ ಲಕ್ಷ್ಮೀ ಸರಸ್ವತಿಯರ ವೈರವಿಲ್ಲದೆ ಸದಾ ಮುಂದುವರೆಯಲಿ ಎಂದು ಜಗತ್ಕಲ್ಯಾಣಕರ್ತನಾದ ರೇಣುಕ ಭಗವತ್ಪಾದರನ್ನು ಸ್ಮರಿಸುವೆ.

ತಾ. ೨೬-೧೨-೧೯೬೯

ಇತಿ ತಮ್ಮ ಕನ್ನಡ ಸಾಹಿತ್ಯ
ವಾಗ್ದೇವಿ ಕುವರ.
ಶ್ರೀ ವಿದ್ವಾನ್ ವಿರೂಪಾಕ್ಷ ರಾಜಯೋಗಿ
ಎಸ್. ಹಿರೇಮಠ
ಪಂಚಾಚಾರ್ಯ ಸಾಹಿತ್ಯ ಮಂದಿರ,
ಸಿಗ್ಗಾಂವ.



## ಓದುಗರ ಮುಂದೆ ನನ್ನ ಒಂದೆರಡು ಮಾತುಗಳನ್ನು ಇಡಬೇಕೆಂಬ ಹಂಬಲ

ಜ್ಞಾನಂದಾಶ್ರಮದಲ್ಲಿ ಪ್ರತಿವರುಷ ಶ್ರಾವಣ ಶುದ್ಧ ಪ್ರತಿಪದಕ್ಕೆ ಶ್ರೀ ಬಸವಂತಾಚಾರ್ಯರು ಭಾಮಿನಿ ಷಟ್ಪದಿಯಲ್ಲಿ ರಚಿಸಲ್ಪಟ್ಟ ಶ್ರೀ ಸಿದ್ಧಾ-ರೂಢರ ಚರಿತ್ರವನ್ನು ಹಚ್ಚಿ ಒಂದು ತಿಂಗಳ ಅಂದರೆ ಕಡೆಯ ಸೋಮವಾರಕ್ಕೆ ಮುಕ್ತಾಯಗೊಳಿಸುವ ಸಾಂಪ್ರದಾಯವು ಬಹುಕಾಲದಿಂದಲೂ ನಡೆದು ಬಂದದ್ದಾಗಿದೆ.

ಅದನ್ನು ಶ್ರದ್ಧೆಯಿಂದ ಶ್ರವಣ ಮಾಡುವಂಥ ಶ್ರೋತೃಗಳು. ಈ ಚರಿತ್ರವು ಬಹು ಅರ್ಥಗರ್ಭಿತ ಸ್ವಾರಸ್ಯವುಳ್ಳದ್ದಾಗಿರುವದು. ಇದನ್ನು ವಚನರೂಪದಲ್ಲಿ ರಚಿಸಿದ್ದಾರೆ. ಎಂಥವರಿಗಾದರೂ ಸುಲಭವಾಗಿ ತಿಳಿಯುವ ದಲ್ಲದೇ ನಿತ್ಯಪಾರಾಯಣ ಮಾಡಿಕೊಳ್ಳುವದಕ್ಕೂ ಬಹು ಉಪಯುಕ್ತ ಗ್ರಂಥ ವಾಗುವದು ಎಂದು ಸೂಚಿಸಿದರು. ಅವರ ಸೂಚನೆಯ ಮೇರೆಗೆ ಈ ಗ್ರಂಥ ಬರೆಯುವ ಸೇವೆಯ ಸುಯೋಗವು ನನಗೆ ದೊರೆತದ್ದು ನನ್ನ ಸೌಭಾಗ್ಯವೆಂದೇ ತಿಳಿಯುತ್ತೇನೆ.

ಗದ್ಯರೂಪದಲ್ಲಿ ರಚಿಸಿರುವ ಈ ಚರಿತ್ರವನ್ನು ಧಾರವಾಡದಲ್ಲಿರುವ ಪರಮಾನಂದ ನಿಲಯದ ಒಡೆಯರಾದ "ಶ್ರೀ ಸಹಜಾನಂದ (ಕಂಠೀಯವ)ರು" ಭಕ್ತಿಪೂರ್ವಕವಾಗಿ ನಿಧಾನದಿಂದ ನಿರೀಕ್ಷಿಸಿ ಅದರೊಳಗಿರುವ ದೋಷಗಳನ್ನು ದೂರೀಕರಿಸಿ ಓದುಗರಿಗೆ ಬಹು ಸರಳವಾಗುವಂತೆ ಮಾಡಿಕೊಟ್ಟದ್ದಕ್ಕಾಗಿ ಅವರ ಪ್ರೇಮದ ನೆನಹು ಮರೆಯದಂತಾಗಿದೆ.

ಶ್ರೀಯುತ ಮೆಸರ್ಸ, ಪಿ. ಸಿ. ಶಾಬಾದಿಮಠ, ಗದಗ ಇವರು ಇದನ್ನು ನೋಡಿ ಸಂತೋಷಪಟ್ಟು "ಪ್ರೀತಿಯಿಂದ ನಾವು ಇದನ್ನು ಪ್ರಿಂಟು ಮಾಡಿ ಸುತ್ತೇವೆ" ಎಂದು ಹೇಳಿ ತಮ್ಮ ಚಂದ್ರಶೇಖರ ಮುದ್ರಣಾಲಯಕ್ಕೆ ಕೊಟ್ಟರು. ೫೬ ಪುಟಗಳು ಪ್ರಿಂಟಾದವು. ಆದರೆ ಟಾಯಿಪುಗಳ ಸವಕಳಿ ಮೂಲಕ ಅಚ್ಚುಗಳು ಸ್ವಚ್ಛವಾಗಲಿಲ್ಲ. ಅವುಗಳನ್ನು ಮಾಲಕರಿಗೆ ತೋರಿಸಲಾಗಿ ಅವರು "ಹಾಗಾದರೆ ಇನ್ನೊಂದು ತಿಂಗಳೊಪ್ಪತ್ತು ತಡೆಯಿರಿ, ಬೆಂಗಳೂರಿ ನಿಂದ ಹೊಸ ಟಾಯಿಪುಗಳನ್ನು ತರಿಸಿ ಪ್ರಿಂಟು ಮಾಡಿಸೋಣವಂತೆ" ಎಂದು ಹೇಳಿದರು. ಅದರಂತೆ ಹೊಸ ಟಾಯಿಪುಗಳನ್ನು ತರಿಸಿ ಓದುಗರಿಗೆ ಹುಮ್ಮಸು ಹುಟ್ಟುವಂತೆ ಒಳ್ಳೇ ಅಚ್ಚುಕಟ್ಟಿನಿಂದ ಗ್ರಂಥವು ಬಹು ಸುಂದರವಾಗುವಂತೆ

ಸ್ವಚ್ಛವಾಗಿ ಅಚ್ಚು ಹಾಕಿಸಿಕೊಟ್ಟ ಪ್ರಿಂಟಿಂಗ ಪ್ರೆಸ್ಸಿನ ಒಡೆಯರಿಗೂ ಹಾಗೂ ಪ್ರೂಫುಗಳನ್ನು ಕರೆಕ್ಶನ್ ಮಾಡುವಾಗ್ಗೆ ೩-೪ ಸಾರೆ ಪುನಃ ಪುನಃ ನೋಡಿ ನೋಡಿ ನಾವು ಎಷ್ಟೋ ತ್ರಾಸು ಕೊಟ್ಟಾಗ್ಯೂ ಕೆಂಪೋಜಿಂಗ, ಪ್ರಿಂಟಿಂಗ ಮತ್ತು ಬೈಂಡಿಂಗ್ ವರ್ಕರ್ಸ ಇವರು ಬೇಸರಗೊಳ್ಳದೆ ಉದಾಸೀನಮಾಡದೆ ಅತ್ಯಂತ ಪ್ರೇಮದಿಂದ ಗ್ರಂಥ ಪೂರ್ತಿಯಾಗುವವರೆಗೂ ನಮ್ಮ ಕೂಡ ಶಾಂತರೀತಿ ಯಿಂದ ವರ್ತಿಸಿದ ಅವರೆಲ್ಲರಿಗೂ ಶ್ರೀ ಸದ್ಗುರುವರನು ಆಶೀರ್ವದಿಸಲೆಂದು ಪ್ರಾರ್ಥಿಸಿಕೊಳ್ಳುತ್ತೇನೆ.

ಎಷ್ಟೋ ಆಯಾಸವಾಗಿದ್ದರೂ ಬಹು ಉಲ್ಹಾಸದಿಂದ ಪ್ರೂಫುಗಳನ್ನು ಕರೆಕ್ಶನ್ ಮಾಡುವಾಗ್ಗೆ ಸಂಸ್ಕೃತ ಶ್ಲೋಕಗಳಲ್ಲಿ ಕಂಡು ಬಂದ ತಪ್ಪುಗಳ ನ್ನೆಲ್ಲ ಒಪ್ಪಾಗುವಂತೆ ಮಾಡುತ್ತ ವಾಕ್ಯಗಳನ್ನು ಸರಿಪಡಿಸುತ್ತ ಗ್ರಂಥ ಪೂರ್ತಿಯಾಗುವವರೆಗೂ ಶ್ರಮವಹಿಸಿ ಎಲ್ಲ ಪ್ರೂಫುಗಳನ್ನು ತಿದ್ದಿ ಸರಿಪಡಿಸಿ ಕೊಟ್ಟಂಥ ಶ್ರೀ ಸದ್ಗುರು ಶಿವಾನಂದ ಸ್ವಾಮಿ ಕೃಪಾಪೋಷಿತ ಆತ್ಮೀಯಬಂದು "ಸಾಹಿತ್ಯ ವೇದಾಂತಾಚಾರ್ಯರೂ ಹಾಗೂ ನನ್ನ ಅತ್ಯಂತ ಪ್ರೀತಿಗೆ ವಿಷಯರಾದ ಶ್ರೀ ನಂದೀಶ್ವರಸ್ವಾಮಿಗಳು, ಅವರ ಅತ್ಯಂತ ಪ್ರೀತಿಗೆ ಪಾತ್ರನಾದ ನನ್ನ ಆನಂದವು ಸಮರಸವಾಗಿದೆ.

ಅಲ್ಲದೇ ನನ್ನ ಗ್ರಂಥವನ್ನು ಮೂಲಾಗ್ರವಾಗಿ ನೋಡಿ ಸಂತೋಷ ಪಟ್ಟು ಸುಂದರವಾಗಿ ಮುನ್ನುಡಿಯನ್ನು ಬರೆದುಕೊಟ್ಟ ಶ್ರೀ ವಿರೂಪಾಕ್ಷ ರಾಜಯೋಗಿ ಎಸ್. ಹಿರೇಮಠ, ಶಿಗ್ಗಾಂವ ಪಂಚಾಚಾರ್ಯ ಸಾಹಿತ್ಯ ಮಂದಿರ ಇವರ ಉಪಕಾರವನ್ನು ಕೂಡಾ ಸ್ಮರಿಸದೇ ಇರಲಾರೆ.

ಇನ್ನು ಪ್ರೂಫು ಕರೆಕ್ಶನ್ ಮಾಡುವನೆಂದರೆ ಎಳ್ಳಿನೊಳಗಿನ ಹಳ್ಳು ಆರಿಸಿದಂತೆ ಇರುವದು. ಎಷ್ಟೋ ದಿಟ್ಟಿಸಿನೋಡಿದರೂ ಅಲ್ಪ-ಸ್ವಲ ಉಳಿದೇ ಇರುವವು ಅವುಗಳನ್ನು ಕೊನೆಯಲ್ಲಿ ಪ್ರಕಟಿಸಲಾಗಿದೆ. ವಾಚಕರು ಮೊದಲಿಗೆ ಅವುಗಳನ್ನು ನೋಡಿ, ತಿದ್ದಿ ಸರಿಪಡಿಸಿಕೊಂಡು ಓದಬೇಕೆಂದು ಸವಿನಯ ಸೂಚನೆ.

ಜ್ಞಾನಾನಂದಾಶ್ರಮ,
**ಹುಲಕೋಟಿ.**

ತಮ್ಮ ಆತ್ಮೀಯ ಬಂಧು
**ಗಿರಿಯಪ್ಪ ಬ. ಓದುಗೌಡ್ರ.**

|| ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ||



# ಶ್ರೀಗುರು ಸಿದ್ಧಾರೂಢ ಸ್ವಾಮಿಗಳವರ ಚರಿತ್ರೆ

## ಬಾಲಲೀಲಾ ಕಾಂಡ

### ಅಧ್ಯಾಯ ೧.

|| ಓಂ ತತ್ಸತ್ ||

—ಶ್ರೀ ಸದ್ಗುರು ಸಿದ್ಧಾರೂಢಾಯ ನಮೋನಮಃ—

ಈಗ ಶ್ರೀಮದಾರೂಢ ಸ್ವಾಮಿಗಳವರ ಪರಮ ಚರಿತ್ರೆಯನ್ನು ಬರೆಯುವದಕ್ಕೆ ಮಂಗಲಮಸ್ತು.

ಬ್ರಹ್ಮಾನಂದಂ | ಪರಮ ಸುಖದಂ ಕೇವಲಂ | ಜ್ಞಾನಮೂರ್ತಿಂ | ದ್ವಂದ್ವಾತೀತಂ | ಗಗನ ಸದೃಶಂ | ತತ್ವಮಸ್ಯಾದಿಲಕ್ಷ್ಯಂ || ಏಕಂ ನಿತ್ಯಂ | ವಿಮಲ ಮಚಲಂ | ಸರ್ವಧಿ ಸಾಕ್ಷಿಭೂತಂ | ಭಾವಾತೀತಂ | ತ್ರಿಗುಣ ರಹಿತಂ ಸದ್ಗುರುಂ ತಂ ನಮಾಮಿ ||೧||

ಚಿದಂಬರ ಮಠಾಧೀಶಂ ಸಿದ್ಧಾರೂಢ ಯತೀಶ್ವರಂ ||
ಶಿಷ್ಯಪ್ರಶಿಷ್ಯರೂಪೇಣ ಬೋಧಕಂ ಗುರುಮಾಶ್ರಯೇ ||೨||
ಯದಂಘ್ರಿ ಕಮಲದ್ವಂದ್ವಂ ತಾಪತ್ರಯ ನಿವಾರಣಂ ||
ಶಾಂತ್ಯೈಕ್ಯ ಪದದಂ ದೇವಂ ಸಿದ್ಧಾರೂಢ ಮಹಂ ಭಜೆ ||೩||
ಸಚ್ಚಿದಾನಂದ ನಿರ್ದೋಷಂ ಭಕ್ತಾನಾಮಾದಿ ಕಾರಣಂ |
ಭವತಾಪ ವಿನಾಶಾರ್ಥಂ ಸಿದ್ಧಾರೂಢಂ ನಮಾಮ್ಯಹಂ ||೪||
ಸಿದ್ಧಸದ್ಗುರು ಪಾದಾಬ್ಜಂ ಜನನೀ ಜನಕಸ್ತಥಾ |
ತತ್ವೋಪದೇಶ ಕರ್ತಾರಂ ವಂದೆ ಭಕ್ತಿಃ ಪುರಸ್ಸರಂ ||೫||

ಪ್ರಥಮ ಮಂಗಲದೊಂದಿಗೆ ಪ್ರಥಮಾಧ್ಯಾಯ ಪ್ರಾರಂಭವು.

ಶ್ರೀ ಗಣೇಶನಿಗೂ, ಶ್ರೀ ಶಾರದೆಗೂ, ಶ್ರೀ ದಕ್ಷಿಣಾ ಮೂರ್ತಿಗೂ, ಶ್ರೀ ಪರಬ್ರಹ್ಮಕ್ಕೂ ನಮಸ್ಕಾರ ರೂಪ ಮಂಗಲಮಾಡಿದ್ದಾರೆ.

—ಭಾಮಿನಿಷಟ್ಪದಿ—

ಸೂಚನಾಪದ— ಇಳೆಯ ಜನ ಕಲ್ಯಾಣಕೋಸುಗ |
ಮಿಳೆ ಧಿಕ ಮಹಬಿದರಿಕೋಟೆಯೋ |
ಕೊಲವಿನಿಂ ಶಿವನವತರಿಸಿದಂ ಸಿದ್ಧನಾಮದಲಿ ||

ಪದ—೧ ರಿಂದ ೧೮ ಮಂಗಳಾಚರಣ

ಪೂರ್ಣಮಿದು ಪರಬ್ರಹ್ಮವೆಂಬುದು । ಪೂರ್ಣನವತಾನೀಶನೆಂಬನು | ಪೂರ್ಣಮಿಪ್ಪರು ಜೀವರೆಲ್ಲರು ಜಗವು ಭೂತಗಳು | ಪೂರ್ಣಮಿವು ದೃಗ್ ದೃಶ್ಯ ಮಾಯೆಯು | ಪೂರ್ಣಮಿವು ತ್ರಿಪುಟಿಗಳ ವಿದ್ಯೆಯು | ಪೂರ್ಣಮಿವು ಗಳ ಸಾಕ್ಷಿಯೆನಿಪಾನೆಂಬುದುಂ ಪೂರ್ಣಂ ||೧||

ಭೂಮವೇತಾಂ ಸಗುಣಮಾಗಿಹ | ಸೋಮಧರದೇಸಿಯುವ
ಕರ್ತನೆ | ನಾಮರೂಪ ಕ್ರಿಯಾವಿದೂರನೆ ನಾಗಭೂಷಣನೇ ||೧||
ವಾಮದೇವನೆ ಶಾಮಕಂಠನೆ | ಕಾಮವೈರಿಯೆ ಕೋಮಲಾಂಗನೆ |
ಸ್ವಾಮಿಶಿವ ಸರ್ವೋತ್ತಮನೆ ನಿನಗಾನು ವಂದಿಪೆನು ||೨||
ಲೋಕವಂದ್ಯ ಕೃಪಾಂಬುನಿಧಿಯೇ | ಲೋಕಮಯಳೇ ಸುಗುಣ

ಭೂಷಣಿ । ಲೋಕಮೂಲಳೆ । ಪಾಪರಹಿತಳೆ ನಿತ್ಯ ಸುಖಕಾರೆ ||
ಲೋಕಸೃಷ್ಟಿನಿ ದೇವಿಶಂಕರೀ । ಲೋಕಪಾಲಿನಿ ತೂರ್ಯರೂಪಿಣಿ ।
ಲೋಕಲಯ ಕಾರಿಣಿಯೆ ತೂರ್ಯಾತೀತೆ ವಂದಿಪೆನು ||೩||

ಗಣಪತಿ ಶ್ರೀ ಪಾರ್ವತೀಸುತ । ಮಣಿಕಿರೀಟಾಭರಣ ಭೂಷಿತೆ
ದಿನಪತೇಜಃ ಕಾಯಭಾಸಿತ ಗಂಧವಿನ್ಯಸ್ತಾ ||
ಅಣಿಮ ಮೊದಲಹ ಸಿದ್ಧಿನಾಯಕೆ । ಗುಣಮಣಿಯೆ ಈ ಕೃತಿಗೆ ವಿಘ್ನವು।
ಗಣಿಸಲಣುಮಾತ್ರಂ ಬಂದಪೊಲು ರಕ್ಷಿಪುದು ದಯದಿಂ ||೪||
ಪೂರ್ಣವಹಗುರು ಪೂರ್ಣಬೋಧಕ । ಪೂರ್ಣತಾರಕ ಪೂರ್ಣ
ವ್ಯಾಪಕ । ಪೂರ್ಣಚೇತನ ಪೂರ್ಣ ಸಚ್ಚಿನ್ಮಾತ್ರ ಮೇದಾಂಗ ||
ಪೂರ್ಣನಾಮಕ ಪೂರ್ಣರೂಪಕ । ಪೂರ್ಣಮಪ್ಪಂತೀ ಚರಿತ್ರವು ||
ಪೂರ್ಣ ಶುಭಮಂ ಭೂರಿಲತಾ ಗುರುಸಿದ್ಧನೇ ಮಾಡೈ ||೫||

ಸ್ಮರಿಸುವೆನು ಸುವಸಿಷ್ಠಮುನಿಯಂ । ಸ್ಮರಿಸುವೆನು ವಾಲ್ಮೀಕಿ
ಮುನಿಯಂ। ಸ್ಮರಿಸುವೆನು ಶ್ರೀವ್ಯಾಸಮುನಿಯಂ ಸ್ಮರಿಪೆ ಶುಕಮುನಿಯಂ ।
ಸ್ಮರಿಪೆ ಶ್ರೀಗುರು ಶಂಕರಾರ್ಯರ । ಸ್ಮರಿಪೆ ನಿಜಗುಣ ಯೋಗಿವರನಂ ।
ಸ್ಮರಿಪೆ ನಿಶ್ಚಲದಾಸ ಜಡಿಸಿದ್ಧಾರ್ಯರಂ ಮನದಿ ||೬||
ಅಸಿತ ಗಿರಿಕಜ್ಜಲವ ಸಲೆಗೂ । ಡಿಸಿದ ಶರಧಿಯ ಪಾತ್ರೆಯಂ ವಿರ ।
ಚಿಸಿತ ಭೂಪತ್ರವನೆನೆಸಗಿ ಸುರತರುವ ಲೇಖನಿಯ ॥
ಕುಶಲ ಮತಿಯಿಂ ಮಾಡಿ ಭಾರತಿ । ಯು ಸಮತವ ಮಹಿಮೆಯನು
ಗುರುವೇ । ಒಸೆದು ರಚಿಸಲಿಕಾಗದಿರೆ ಮೌನವನು ವಹಿಸಿದಳು ||೭||

ಇಂಥ ನಿನ್ನಯ ಮಹಿಮೆಯಿರಲೆ । ನ್ನಂಥ ಮೂಢಗೆ ಸಾಧ್ಯವೇ
ತವ । ಪಂಥ ಮಿರ್ಪುದು ಭಕ್ತಹೃದ್ ಗೃಹವಾಸಿಯೆಂದೆಂಬ॥
ಎಂಥ ವಿವನೆನೆದೆನ್ನ ಕರಣದಿ । ನಿಂತು ನೀಂ ಪ್ರೇರಿಸಿದ ತೆರನೀ ।
ಗ್ರಂಥದಲಿ ಶ್ರುತಿಸಾರವನು ತವ ಮಹಿಮೆಯನು ಲಿಖಿಪೆಂ ||೮||
ಜ್ಞಾನಸೇವನು ಮೊದಲು ವೇದವ । ಜ್ಞಾನವಿಲ್ಲದ ಮಹಿಷಗಂ ತಾಂ ।
ಜ್ಞಾನಪ್ರೇರಿಸುತದರ ಮುಖದಿಂ ನುಡಿಸಿದಂದದಲಿ ||

ಜ್ಞಾನಿಗುರುವೇ ಮಹಿಷನಂಥಾ । ಜ್ಞಾನಿನಾಂ ನೀನೆನ್ನೊಳ್ಳೈದೀ ।
ಜ್ಞಾನಪವಿತ್ರೆನ್ನಿಂದ ನುಡಿಸೈಯಿದನು ದಯದಿಂದಾ ||೯||
ರೂಢಿವಾಕ್ಯದಿ ಯೆಲ್ಲರುಂ ತಾವ್ ! ನೋಡಿ ತಿಳಿವಂತೀ ಕೃತಿಯನಾ ।
ರೂಢ ಕೃಪೆಯಿಂ ಭಾಮಿನೀ ಷಟ್ಪದಿಯೊಳ್ರಚಿಸಿಹೆನು ||
ಮೂಢ ಪೇಳಿದುದೆಂದು ನಿಂದಿಸ | ಬೇಡಿ ನೀವಾದ್ಯಂತ ಪಾಗಿದ ।
ನೋಡಿರಮೃತವು ದೊರೆಯದಿರ್ದೊಡೆ ನಿಂದಿಪುದು ಬಳಿಕ ||೧೦||
ಈ ಮಹಾ ಸುಚಿತ್ರರೂಪದ । ಭಾಮಿನಿಮಂಗಗಳು ಸಂಧಿಗ ।
ಳೀ ಮಹಾ ಚರಿತಾರ್ಥಗಳ್ ಸತ್ಕಲೆಗಳಾಗಿಹವು ||
ಪ್ರೇಮಕರ ವಸ್ತ್ರಾದಿ ಭೂಷಣಂ | ರಾಮಣೀಯಕ ವಚನ ರಚನವು ।
ಶ್ರೀ ಮಹಾತ್ಮಾರೂಢಸ್ವಾಮಿಗಳೊಡೆಯರಾಗಿಹರು ||೧೧||
ಪ್ರಾಸುಗಣಯತಿ ಲಕ್ಷಣಂಗಳ | ದೋಷಮಿರಲಿದರೊಳಗೆ
ನೋಡದೆ । ಭಾಸುರದಿ ವರನೀರ ದುಗ್ಧ ನ್ಯಾಯದಂದದಲಿ ||
ಈಶ ಪರಮಾರ್ಥಪೂರ್ಣದದರಿಂ | ದೋಷರಹಿತಮಿದೆಂದು ಬಹುಳೋ
ಲ್ಲಾಸದಿಂದಿರರ್ಥಮಂ ಗ್ರಹಿಸುವದು ಸಜ್ಜನರು ||೧೨||
ಪೂರ್ಣ ಜಯಕರ ಶಿವನ ಕೃಪೆಯಿಂ । ಪೂರ್ಣವೇದಾಂತಾರ್ಥ
ಬೋಧಿಪ | ಪೂರ್ಣಸಿದ್ಧನ ಚರಿತೆ ಪೇಳುವೆನಿದನು ಮನವೊಲಿದು ||
ಪೂರ್ಣಶ್ರವಣವ ಮಾಳ್ಪರಮನಂ | ಪೂರ್ಣಶುದ್ಧಿಯದಾಗುವದು
ನಿಜ । ಪೂರ್ಣಕಷ್ಟದಿ ಸಾಧ್ಯವಹ ಯೋಗದೊಳುದಣಿಯ್ಯುವರೆ ||೧೩||
ನಿರುತ ಸದ್ಗುರುವಿಂದ ವೀಮಹಾ | ಪರಮ ಗುರುಮಹಿಮಾ
ಚರಿತ್ರೆಯ । ಹರುಷದಿಂ ಸಜ್ಜನರಗೂಡಿಸಿ ಭಕ್ತಿಪೂರ್ವಕದಿ ||
ಸರಸ ಗಂಧಾಕ್ಷತೆಗಳಂ ತಾವ್ | ಧರಿಸಿ ಪರಿಮಳ ಪುಷ್ಪಫಲಗಳ ।
ನಿರಿಸುತರ್ಚಿಸುತರ್ಥಸಹಿತಂ ಕೇಳಬೇಕು ಸದಾ ||೧೪||
ನಿರುತ ನಡಿಸುವದಾಗದಿರ್ದೊಡೆ | ಪರಮ ಚಾತುರ್ಮಾಸ
ದೋಳ್ತಾವ್ । ನಿರುತದಿಂ ನಡಿಸುವದು ಬಳಿಕ ಮದಾಗದಿರ್ದೊಡೆ ತಾಂ |
ಹರುಷದಿಂ ಶ್ರಾವಣದಿ ತಪ್ಪದೆ । ಭರದಿ ನಡೆಸಲ್ ವೇಳ್ಕಿದಾಗದೊ ।
ಡಿರಲು ಸುವಿಜಯದಶ್ಮಿವಾಸರಗಳೊಳು ನಡಿಸುವದು ||೧೫||

ನೇಮವಿದು ನಡೆಯದಿರೆ ಸಲೆ ಶ್ರೀ | ರಾಮನೌಮಿಯ ದಿನಗ
ಳೊಳು ಬಹು | ಪ್ರೇಮದಿಂ ನಡಿಸಲಹುದದು ತಾನಾಗದಿರೆ ಮತ್ತಂ ||
ಶ್ರೀ ಮಹಾ ಶಿವರಾತ್ರಿಯೊಳು ನಿ | ಸ್ಸೀಮ ಭಕ್ತಿಯೊಳೇಳು ದಿನದೊಳು |
ರಾಮಣೀಯಕಮಾಗಿ ನಡಿಸುವಡಿದನು ಸಂತಸದೆ | ೧೬||

ಮಾಸ ಶಿವರಾತ್ರಿಯೊಳಗಮಮಾ | ವಾಸ್ಯದೊಳು ಪೌರ್ಣಿಮೆ
ಯೊಳುಂ ಪ್ರಾ ದೋಷಿಕದೆ ಗುರು ಶುಕ್ರ ಶಶಿ ವಾಸರದೆ ತಪ್ಪದಲೇ ||
ಬೇಸರದೆ ನಡಿಸಲ್ಕೆಕ್ರಮದಿಂ | ದೋಷ ಪರಿಹರವಾಗಿ ಮನದು |
ಲ್ಲಾಸ ದಾಶೆಗಳೇಕ ಚಿತ್ತತ್ವಾದಿ ವಶವಹವು ||೧೭||

ಕ್ಲೇಶ ಪಂಚಕ ಜನನ ಮೃತಿಗಳು | ನಾಶ ಮಪ್ಪುವು ಸರ್ವದಾ ಸುಖ |
ಸೂಸುವದು ಹೃದಯದಲ್ಲಿ ಸತ್ಯಮಿದೆಂದು ನಂಬುವದು ||
ಈ ಸುಮಾರ್ಗದೊಳಾತ್ಮಜ್ಞಾನವು | ಭಾಸಿಸುತ ನಿಜ ಮುಕ್ತಿಯಪ್ಪುದು |
ದಾಸಭಾವದಿ ಬೇಡಿಕೊಂಬೆನೋದಿರ್ಪೆಯಿದನು ||೧೮||

ಮೊದಲು ಗ್ರಂಥಕರ್ತರು ಈಶಾವಾಸ್ಯೋಪನಿಷತ್ತಿನ ಓಂ ಪೂರ್ಣ ಮದಃ ಪೂರ್ಣಮಿದಂ ಎಂಬ ಮಂತ್ರದೊಂದಿಗೆ ಪರಬ್ರಹ್ಮ. ಈಶ, ಜೀವರು, ಜಗತ್ತು, ಭೂತಗಳು, ದೃಗ್ದೃಶ್ಯ, ಮಾಯೆ, ವಿದ್ಯೆ, ಅವಿದ್ಯೆ, ತ್ರಿಪುಟಿಗಳು, ಕಾಲ, ಪುರುಷ, ಪ್ರಕೃತಿ, ಗುಣ, ಬುದ್ಧಿ, ಅಹಮು, ಚಿತ್ತ, ಜ್ಞಾನೇಂದ್ರಿಯ ಗಳು, ಕರ್ಮೇಂದ್ರಿಯಗಳು. ರಸಾದಿತನ್ಮಾತ್ರ, ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ ಮೊದಲಾದವುಗಳೆಲ್ಲದರಲ್ಲಿ ಪರಿಪೂರ್ಣ ಭಾವವನ್ನು ಬಿಂಬಿಸಿ ಅವಕ್ಕೆಲ್ಲ ತಾನೆನಿಪ ಪದವು ಸಾಕ್ಷಿಯಾಗಿ ಪರಿಪೂರ್ಣವಾಗಿರುವದನ್ನು ಮನವರಿಕೆ ಮಾಡಿದ್ದಾರೆ.

ನಂತರ ಪರಮಾತ್ಮನ ಸಗುಣ ನಿರ್ಗುಣ ಶ್ರೇಷ್ಠತೆಯನ್ನು ಕೊಂಡಾಡಿ ಲೋಕಮಾತೆ ಪಾರ್ವತಿಯನ್ನು ತೂರ್ಯಾತೀತೆಯೆಂದು ಹಾಡಿ ವಿಘ್ನನಾಶಕ ಅಗ್ರಪೂಜಾರ್ಹನಾದ ಗಜಾನನನನ್ನು ತಮ್ಮ ಈ ಕೃತಿಗೆ ವಿಘ್ನಾದಿಗಳು ಬರ ದಂತೆ ಕಾಪಾಡಬೇಕೆಂದು ಕರುಣೆಯನ್ನು ಕೋರಿದ್ದಾರೆ ಮತ್ತು ಗ್ರಂಥ ಕರ್ತನಾದ ತನಗೆ ಚರಿತ್ರ ನಾಯಕನೂ, ಪೂರ್ಣ ಬೋಧಕನೂ, ಸದ್ಗುರುವೂ ಆದ ಶ್ರೀ ಸಿದ್ಧಾರೂಢರಲ್ಲಿ ಶ್ರದ್ಧೆಯಿಂದ ಶುಭವನ್ನು ಬೇಡಿದ್ದಾರೆ.

ಇದು ಅಲ್ಲದೆ ತಮ್ಮ ಬೆಂಬಲಕ್ಕಾಗಿ ಬೆನ್ನೆಲುವಿನಂತಿರುವ ವಶಿಷ್ಠ, ವಾಲ್ಮೀಕಿ, ವ್ಯಾಸ, ಶುಕ ಮೊದಲಾದ ಮುನಿಗಳನ್ನೂ ಅಧಿಕ ವಿದ್ಯಾ ಸಂಪನ್ನರಾದ ಶಂಕರಾಚಾರ್ಯರನ್ನೂ, ನಿಜಗುಣರನ್ನೂ, ನಿಶ್ಚಲದಾಸರನ್ನೂ ಜಡಿಸಿದ್ಧ ಮುಂತಾದ ಗುರು ಪುಂಗವರನ್ನು ಅತ್ಯಧಿಕವಾಗಿ ಕೊಂಡಾಡಿರುವರು. ಮತ್ತು ಪರಬ್ರಹ್ಮವನ್ನು ಬಣ್ಣಿಸುವಲ್ಲಿ ಶಾರದೆಯ ಕೊರತೆಯನ್ನು ಈ ರೀತಿಯಾಗಿ ಬಣ್ಣಿಸಿದ್ದಾರೆ.

ಹಿಮಗಿರಿಯನ್ನೇ ಮಸಿಯನ್ನಾಗಿ ಮಾಡಿ ಸಪ್ತಶರಧಿಯಲ್ಲಿ ಕರಗಿಸಿ ತನ್ನ ಕುಶಲ ಮತಿಯಿಂದ ಭೂಮಿಯನ್ನೇ ಕಾಗದವನ್ನಾಗಿರಿಸಿ ಕಲ್ಪತರುವನ್ನೇ ಲೇಖನಿಯನ್ನಾಗಿ ಮಾಡಿಕೊಂಡು ಅತಿ ಸಾಹಸದಿಂದ ಬಣ್ಣಿಸಲು ಪ್ರಾರಂಭ ಮಾಡಿದ ಶಾರದೆಗೆ ಬ್ರಹ್ಮನ ಅಪಾರತ್ವವು ಮೌನ ಮುದ್ರೆಯನ್ನು ತಂದೊಡ್ಡಿತು. ಅಂದ ಮೇಲೆ ಮಿಕ್ಕವರ ಪಾಡೇನು ? ಎಂದು ಮಾರ್ಮಿಕವಾಗಿ ಹೇಳಿ ಇಂಥ ಶಾರದೆಗೆ ಅಸಾಧ್ಯವೆನಿಸಿದ ಮೇಲೆ ನನ್ನಂಥವನಿಂದ ಈ ಚರಿತ್ರವನ್ನು ರಚಿಸಿದ ನಿನ್ನ ಮಹಿಮೆಯನ್ನು ಏನೆಂದು ಬಣ್ಣಿಸಲಿ ? ಜ್ಞಾನದೇವನು ಕೋಣನ ಮುಖದಿಂದ ವೇದಘೋಷಮಾಡಿಸಿದ ಐತಿಹಾಸಿಕವನ್ನು ನೆನಪಿಗೆ ತಂದುಕೊಂಡು ಅದರಂತೆ ನನ್ನ ಕೃತಿಯೂ ಆಗಿರುವದೆಂದು ಸೂಚಿಸಿ ತಮ್ಮ ಕೃತಿಯನ್ನು ರೂಢಿವಾಕ್ಯದಿಂದ ಭಾಮಿನಿ ಷಟ್ಪದಿಯಲ್ಲಿ ರಚಿಸಿರುವರು. ಇದನ್ನು ಮೂಢನು ಹೇಳಿರುವನು. ಇದನ್ನೇನು ನೋಡುವದು ಎಂದು ಬಿಡಬಾರದು. ಇದನ್ನು ಆದ್ಯಂತ ನೋಡಿ ಸರಿಬಾರದಿದ್ದರೆ ನಿಂದಿಸಿರಿ ಎಂದು ಸವಿನಯದಿಂದ ಸಾರಿ ಸಾರಿ ತಿಳಿಹೇಳಿ ಗ್ರಂಥದಲ್ಲಿರುವ ಮುಂದಿನ ವಿಷಯವನ್ನು ಬಹು ಸ್ವಾರಸ್ಯವಾಗಿ ವಿಮರ್ಶಿಸಿದ್ದಾರೆ.

ಈ ಗ್ರಂಥದಲ್ಲಿ ಪ್ರಕಟವಾಗಿರುವ ಸತ್ಕಲಾರೂಪ ಸಂಧಿಗಳೂ, ಮನೋಹರ ವಚನಗಳೂ, ಅಲಂಕಾರ ಮೊದಲಾದವೆಲ್ಲಕ್ಕೂ ಶ್ರೀ ಸಿದ್ಧಾರೂಢರೇ ಒಡೆಯರಾಗಿದ್ದಾರೆಂದು ಹೇಳಿ ಅರ್ಥಾಲಂಕಾರಕ್ಕೆ ರಸಿಕರು ಪ್ರಾಧಾನ್ಯ ಕೊಡಬೇಕೆಂದೂ ಪ್ರಾಸ, ಗಣ, ಯತಿ ಮೊದಲಾದ ವ್ಯಾಕರಣ ನೇಮಗಳಿಗೆ ವಿಶೇಷ ಗಮನಕೊಡಬಾರದೆಂದೂ ಹಂಸಕ್ಷೀರನ್ಯಾಯದಂತೆ ಸಂತೋಷದಿಂದ ಸ್ವೀಕರಿಸಬೇಕೆಂದು ಹಾರೈಸಿದ್ದಾರೆ ಮತ್ತು ಈ ಮಹಾಗ್ರಂಥವನ್ನು

ಶ್ರವಣ ಮಾಡುವದರಿಂದ ಚಿತ್ತಶುದ್ಧಿ ಮೂಲಕ ಆತ್ಮಜ್ಞಾನವಾಗುವದು. ಅದು ಕಾರಣ ಸಜ್ಜನರಾದವರೆಲ್ಲರೂ, ನಿರ್ಮಲ ಮನದಿಂದ ನಿತ್ಯ ಶ್ರವಣ ಮಾಡಬೇಕು. ಒಂದು ವೇಳೆ ಸದಾ ನಡೆಸುವದು ಆಗದಿದ್ದರೆ ಚತುರ್ಮಾಸ, ಶ್ರಾವಣ, ವಿಜಯದಶಮಿ, ಮಹಾ ಶಿವರಾತ್ರಿ, ರಾಮನವಮಿ, ಹುಣ್ಣಿಮೆ, ಅಮವಾಸ್ಯ ಮೊದಲಾದವುಗಳಲ್ಲಿ ಯಾವುದಾದರೂ ಒಂದು ಸಮಯ ನಿಯಮ ನವನ್ನು ಗೊತ್ತುಮಾಡಿಕೊಂಡು ಕ್ರಮದೊಂದಿಗೆ ನಡೆಸಿದ್ದಾದರೆ, ಫಲ ಶ್ರುತಿ ರೂಪವಾಗಿ ಅತ್ಯಂತ ದುಃಖ ನಿವೃತ್ತಿ ಪರಮಾನಂದ ಪ್ರಾಪ್ತಿಯಾಗುವದೆಂಬ ಭರವಸೆ ಕೊಟ್ಟಿದ್ದಾರೆ. ಇದು ಅಲ್ಲದೆ ಸಕಲರು ಈ ಗ್ರಂಥದ ಪ್ರಯೋಜನ ಪಡೆಯಬೇಕಾಗಿ ದಾಸ್ಯಭಾವದಿಂದ ಪ್ರಾರ್ಥಿಸಿ ಕಥಾ ನಿರೂಪಣೆಯನ್ನು ಈ ರೀತಿಯಾಗಿ ಮಾಡಿದ್ದಾರೆ.

ದೇವರ್ಷಿಗಳೂ ತ್ರಿಲೋಕ ಸಂಚಾರಿಗಳೂ ಆದ ನಾರದರ ಸವಾರಿಯು ಕೈಲಾಸಕ್ಕೆ ಆಗಮಿಸಿತು. ಆಗ ಪಾರ್ವತೀ ಪತಿ ಶಂಕರನು, ನಾರದರು ಬರುವದನ್ನು ಕಂಡು, ಆದರದಿಂದ ಗೌರವಿಸಿ ಬರಮಾಡಿಕೊಂಡು, ಶೃಂಗರಿಸಿದ ದಿವ್ಯ ಪೀಠದ ಮೇಲೆ ಕುಳ್ಳಿರಿಸಿ, ''ಸಕಲ ಮುನಿರತ್ನಗಳಲ್ಲಿ ಶಿಖಾಮಣಿಯಂತೆ ಒಪ್ಪುತ್ತಿರುವ ನಾರದ ಮುನಿ ಶ್ರೇಷ್ಠರೇ, ತಾವು ತ್ರಿಲೋಕ ಸಂಚಾರಿಗಳು ತಮಗೆ ಎಲ್ಲ ಲೋಕಗಳ ಪರಿಚಯ, ಆದರೆ ಭೂಲೋಕದ ಸಮಾಚಾರವೇನು ? ಎಂದು ಶಂಕರನು ಕೇಳಿದನು.

ಆಗ ನಾರದರು ''ಜಗದುತ್ಪತ್ತಿ, ಸ್ಥಿತಿ, ಲಯಗಳಿಗೆ ಕಾರಣ ಕರ್ತನಾದ ಹೇ ಕರುಣಾಕರ ಶ್ರೀ ಶಂಭುವೇ ! ಆಲಿಸು. ಕಲಿಯುಗದ ಪಂಚ ಸಹಸ್ರ ವರುಷಕ್ಕೆ ಧರ್ಮವು ನಶಿಸುತ್ತ ಅಧರ್ಮವು ತಾಂಡವಾಡುತ್ತದೆಂದು ಭವಿಷತ್ ಪುರಾಣದಲ್ಲಿ ಹೇಳಿದಂತೆ ಅದು ಈಗ ಸಂಭವಿಸಿದೆ. ಅನ್ನದ ಅಭಾವದಿಂದ ಪ್ರಜೆಗಳು ಪ್ರಾಣಸಂಕಟದಲ್ಲಿದ್ದಾರೆ. ಅದುಕಾರಣ ಸುಲಭವಾದ ಶ್ರೀ ಪಂಚಾಕ್ಷರೀ ಮಂತ್ರವನ್ನು ನರರಿಗೆ ಉಪದೇಶಿಸಿ ಅವರಲ್ಲಿ ಭಕ್ತಿ ಹುಟ್ಟಿಸಿ ಜ್ಞಾನ ಬೋಧಿಸುವದಕ್ಕಾಗಿ ಭೂಲೋಕದಲ್ಲಿ ತಮ್ಮ ಅವತಾರವಾಗಬೇಕೆಂದು ಬಿನ್ನೈಸಿಕೊಳ್ಳುತ್ತೇನೆ'' ಎಂದರು.

ಪದ:—೧೯ ರಿಂದ ೨೮ರವರೆಗೆ ನಾರದರ ಸೂಚನೆಯಂತೆ ಈಶಾಜ್ಞೆಯಿಂದ ಪ್ರಮಥರು ಧರೆಗೆ ಅವತರಿಸಿದ್ದು.

ಆಗ ಪರಶಿವನು ನಾರದೋಕ್ತಿಯನ್ನು ಮನ್ನಿಸಿ ತನ್ನ ಮಂಗಲಕರ ಮನೋಹರ ಮಹಾ ಸಭೆಯಲ್ಲಿ ಪ್ರಕಾಶಮಯರಾಗಿರುವ ದೇವತೆಗಳನ್ನೂ ಮುನಿಗಳನ್ನೂ ಬರಮಾಡಿಕೊಂಡು ಅವರಿಗೆ ಅಪ್ಪಣೆ ವಿಧಿಸಿದ್ದೇನಂದರೆ, "ಹೇ ದೇವಗಣ ಮುನಿಗಳೇ ನಾರದೋಕ್ತಿಯಂತೆ ಈಗ ತಾವೆಲ್ಲರೂ ಭೂಲೋಕದ ಜನಗಳಿಗೆ ಭಕ್ತಿ, ಜ್ಞಾನ, ವೈರಾಗ್ಯ ಹುಟ್ಟಿಸುವದಕ್ಕಾಗಿ ಭೂಲೋಕದಲ್ಲಿ ಅವತರಿಸಬೇಕೆಂದನು". ಆಗ ದೇವತೆಗಳು "ಹೇ ದೇವಾ, ತಮ್ಮ ಪಾದದಗಲುವಿಕೆಯ ಕ್ಲೇಶ ನಮ್ಮನ್ನು ಬಾಧಿಸುವದು. ಆದಕಾರಣ ತಾವು ಭೂಲೋಕಕ್ಕೆ ಅವತರಿಸಿದ್ದಾದರೆ ತಮ್ಮ ಆಜ್ಞಾನುಸಾರ ನಾವೂ ತಮ್ಮನ್ನು ಹಿಂಬಾಲಿಸಿ ಸುಖಿಗಳಾಗುವೆವು'' ಎಂದು ವಿಜ್ಞಾಪಿಸಿಕೊಂಡರು. ಅದಕ್ಕನುಗುಣವಾಗಿ ಶಿವನೇ ಸಿದ್ಧನಾಮದಿಂದ ಅವತರಿಸಿದನು. ಮಿಕ್ಕದೇವತೆಗಳು ಶ್ರೀ ಶಿವಾನಂದಸ್ವಾಮಿ, ಷಣ್ಮುಖಸ್ವಾಮಿ, ಅನಂತಸ್ವಾಮಿ, ಗೊಂದಾವಲಿ ಸಾಧು, ತಮ್ಮಣ್ಣಶಾಸ್ತ್ರಿ, ಗರಗದ ಮಡಿವಾಳ ಮಹಾಸ್ವಾಮಿಗಳು, ನಾಗಲಿಂಗ ಸ್ವಾಮಿಗಳು, ಸಹಜಾನಂದ, ವಿವೇಕಾನಂದ, ರಾಮತೀರ್ಥರು, ಶರೀಫ, ಕಬೀರ, ನಿರ್ವಾಣಪ್ಪರು, ರಾಮದಾಸರು, ಖಾಸ್ಗತಪ್ಪನವರು, ಜಡಿಸಿದ್ಧ ಮೊದಲಾದ ಹೆಸರುಗಳಿಂದ ಅವತರಿಸಿದರು. ಒಟ್ಟಾರೆ ಕೈಲಾಸವೇ ಬರಿದಾಗಿ ಭೂಲೋಕ ದೇವತೆಗಳಿಂದ ತುಂಬಿ ಕಂಗೊಳಿಸಹತ್ತಿತು.

**ಪದ ೨೯ ರಿಂದ ೬೩ ರ ವರೆಗೆ ಈಶನು ಧರೆಗೆ ಸಿದ್ಧನಾಮದಿಂದ ಅವತರಿಸಿದ್ದು ಮತ್ತು ಎಳ್ಳಿನ ಮಹಿಮೆ ತೋರಿದ್ದು—**

ಮನೋಹರ ನಾಲ್ಕು ವೇದಗಳಿಗೆ ತೌರು ಮನೆ ಎನಿಸಿಕೊಂಡ ಭಾರತದಲ್ಲಿ ಋಷಿಪುಂಗವರ ಹಾಗೂ ಶರಣರ ಬೀಡಾದ ಕನ್ನಡ ನಾಡಿನಲ್ಲಿ ಕಂಗೊಳಿಸುವ ಬಿದರೀಕೋಟೆ ಎಂಬ ಗ್ರಾಮದಲ್ಲಿ ಅತ್ಯುನ್ನತ ಸ್ಥಿತಿಯಲ್ಲಿ ಈರ್ವರು ದಂಪತಿಗಳಿದ್ದರು. ಅವರೀರ್ವರ ಹೆಸರುಗಳು ಗುರುಶಾಂತಪ್ಪ ದೇವಮಲ್ಲಮ್ಮ ಇವರೀರ್ವರ ಮನಸ್ಸು ಶಿವಭಕ್ತಿ ಭಾವದಿಂದ ಕೂಡಿ ಒಂದಾಗಿತ್ತು. ಸತ್ಕಾರ್ಯಗಳಲ್ಲಿ ಅವರ ಆಸಕ್ತಿ ಬಹಳ. ಅತಿಥಿಗಳಾಗಿ ಬಂದ ಯತಿಗಳನ್ನು ಸತತ ಪೂಜಿಸಿ ಭಕ್ಷ್ಯಭೋಜ್ಯಗಳಿಂದ ತೃಪ್ತಿಗೊಳಿಸುತ್ತಿದ್ದರು. ಶ್ರೀ ವೀರಭದ್ರಸ್ವಾಮಿಗಳು ಅವರ ಕುಲಗುರುಗಳಾಗಿದ್ದರು. ದಂಪತಿಗಳೀರ್ವರೂ,

ಗುರುಗಳಿಂದ ಶೈವಪುರಾಣವನ್ನು ಪತಿನಿತ್ಯ ಕ್ರಮದಿಂದ ಶ್ರವಣ ಮಾಡುತ್ತಿದ್ದರು ಅವರಿಗೆ ಈರ್ವರು ಗಂಡುಮಕ್ಕಳಿದ್ದರು. ತಾಯಿ–ತಂದೆಗಳು, ಅವರಿಗೆ ವಿದ್ಯೆ ಕಲಿಸುತ್ತ ಸದಾ ಸದ್ಗುರು ಸೇವೆಯಲ್ಲಿ ನಿರತರಾಗಿದ್ದರು. ಗುರುಶಾಂತಪ್ಪನು ಒಂದು ದಿನ ಶುಭಕನಸನ್ನು ಕಂಡನು. ಅದೆಂಥ ಸ್ವಪ್ನ ! ರಜತಾಚಲದಿಂದ ಇಳಿದು ಬಂದ ಪರಮಾತ್ಮನು ತನ್ನ ಹೃದಯದಲ್ಲಿ ಸೇರಿ ದೇದೀಪ್ಯಮಾನವಾಗಿ ಬೆಳಗಿದಂತಾಯಿತು. ಅದರೊಂದಿಗೆ ಮಧುರ ಮಂಜುಳ ವಾಣಿಯೊಂದು ಕೇಳಿ ಬಂತು. "ಗುರುಶಾಂತಪ್ಪ, ನಿನ್ನ ಸದ್ಭಕ್ತಿಗೆ ಮೆಚ್ಚಿ ನಿನಗೆ ಪುತ್ರನಾಗಿ ಜನ್ಮವೆತ್ತುವೆನು," ಎಂದಂತಾಯಿತು. ಆಗ ಗುರುಶಾಂತಪ್ಪನು ಕಣ್ಣು ತೆರೆದನು, ಏನೂ ಇರಲಿಲ್ಲ. ಪೂರ್ವದಿಕ್ಕಿನ ಕಿಡಿಕಿಗೆ ಇಣಿಕಿದನು. ಆಗ ಆಕಾಶಕ್ಕೆ ಭೂಷಣನಾದ ರವಿಯು ಪಶ್ಚಿಮಾದ್ರಿಗೆ ತೀವ್ರ ಪಯಣ ಮಾಡಲು ಸಿದ್ಧನಾದನು. ಆಗ ಅವನ ಕೆಂಬಣ್ಣದಿಂದ ಸೂಸುತ್ತಿರುವ ಸುವರ್ಣದಂತೆ ಹೊಳೆಯುವ ಕಿರಣದ ಕದಿರುಗಳು ಮುಂದಾಳಾಗಿ ಕವಿದ ಕಗ್ಗತ್ತಲೆಗೆ ಸುದ್ದಿಮುಟ್ಟಿಸಲು ಮೂಡಿ ಬಂದವು. ಅದನ್ನು ಕಂಡು ನಕ್ಷತ್ರಗಳೆಲ್ಲ ಭಯಗೊಂಡು ಮಾಯವಾಗಹತ್ತಿದವು. ಆಗ ಗುರುಶಾಂತಪ್ಪನು ಎದ್ದು ತನ್ನ ಸ್ವಪ್ನದ ಎಲ್ಲ ಸಂಗತಿಯನ್ನು ತನ್ನ ಪತ್ನಿಗೆ ಅರುಹಿದನು. ಅದನ್ನು ಕೇಳಿ ದೇವಮಲ್ಲಮ್ಮನು "ಹೇ ಕಾಂತಾ, ನೀವು ಕಂಡಂಥ ಕನಸನ್ನೇ ನಾನೂ ಕಂಡೆನು. ಅದೇನೆಂದರೆ ಪರಮೇಶ್ವರನ ತೊಡೆಯಲ್ಲಿದ್ದ ಪಾರ್ವತಾದೇವಿಯು ಬಂದು, ನನ್ನ ತೊಡೆಯ ಮೇಲೆ ಒಂದು ಬಿಳಿತಾವರೆಯನ್ನಿಟ್ಟಳು. ಅದರೊಡನೆ ಇನಿವಾತಿನಿಂದ "ನಿನ್ನ ಗರ್ಭಕ್ಕೆ ಮುಕ್ಕಣ್ಣ ಮೂಡಿಬರುವನು" ಅಂದಂತಾಗಿ "ಒಂದು ದಿವ್ಯ ಪ್ರಕಾಶರೂಪವು ನನ್ನ ಹೃದಯ ಸೇರಿದಂತಾಯಿತು." ಹೀಗೆ ದಂಪತಿಗಳೀರ್ವರೂ ತಮ್ಮ ತಮ್ಮ ಸ್ವಪ್ನದ ಸಂಗತಿ, ಹೇಳುತ್ತ ಕೇಳುತ್ತ ಪರಮಾತ್ಮನ ಅಗಾಧ ಮಹಿಮೆಯನ್ನು ವರ್ಣಿಸುತ್ತ ಕಾಲಕಳೆಯಹತ್ತಿದರು.

ಹಿಂದಕ್ಕೆ ನರಕದಲ್ಲಿ ಬಿದ್ದಂಥ ನರಕಿಗಳಿಂದ ಶಿವಪಂಚಾಕ್ಷರಿ ನುಡಿಸಿ ಅವರಿಗೆ ಕೈಲಾಸಪದವಿ ಕೊಟ್ಟಂಥ ಸಾನಂದಮಹರ್ಷಿಯು ಸದಾಶಿವನಲ್ಲದೆ ಬೇರುಂಟೆ ? ಅದರಂತೆ ನರರನ್ನುದ್ಧರಿಸಲಿಕ್ಕೆ ದೇವಮಲ್ಲಮ್ಮನ ಗರ್ಭದಲ್ಲಿ

ಮೂಡಿದನು ಅಘಹರನು. ಅಂದು ಮಲ್ಲಮ್ಮನ ಉದರವು ಪವಿತ್ರತೆ ಪಡೆದಿತ್ತು. ಅವಳ ಗರ್ಭಕ್ಕೆ ಅಪೂರ್ವ ತೇಜಸ್ಸು ಬಂದಿತ್ತು. ಶುಭಾಂಗಿಗೆ ಶುಭಕರ ಗರ್ಭಧಾರಣವಾಗಿ ಅವಳ ಮುಖಲಕ್ಷಣ ಮೊದಲುಗೊಂಡು ತನು ಸಹಿತ ಕೇತಕೀವರ್ಣವಾಯಿತು. ಅದನ್ನು ಪುರದ ಸ್ತ್ರೀಯರು ಕಂಡು ಮಮತೆಯಿಂದ ತರತರದ ಬಯಕೆಯ ಊಟ ತರಹತ್ತಿದರು ಅವರು ತರುವ ಪದಾರ್ಥಗಳೆಲ್ಲ ಅವಳಿಗೆ ಸೇರದಾದವು.

ಅವಳ ಊಟದ ಬಯಕೆಯೇ ಬೇರೆಯಾಗಿತ್ತು. ಹಾಲು, ಹಣ್ಣು ಕಲ್ಲುಸಕ್ಕರೆ, ದ್ರಾಕ್ಷಿ, ಜೇನುತುಪ್ಪ ಮೊದಲಾದ ಸಾತ್ವಿಕ ಆಹಾರಗಳಲ್ಲಿಯೇ ಅವಳ ಇಷ್ಟ. ಇದು ಅಲ್ಲದೆ ಗಂಧದ ಹೊಗೆಗಾಗಿ ಅವಳ ಮನಸ್ಸು ಯಾವಾಗಲೂ ಹಾತೊರೆಯುತ್ತಿತ್ತು. ದೀನದಲಿತರನ್ನು ಕಂಡರೆ ಅವಳಿಗೆ ಬಹಳ ಕುತೂಹಲದಿಂದ ಸಹಾಯ ಸಲ್ಲಿಸುತ್ತಿದ್ದಳು. ತಾನಾರು ? ಹುಟ್ಟಿಬಂದುದರ ಸಾರ್ಥಕವೇನು ? ಮುಕ್ತಿ ಮುಕ್ತಿ ಅನ್ನುವರಲ್ಲಾ ಅದನ್ನು ನಾನೆಂದಿಗೆ ಪಡೆದೇನು, ಎಂಬ ವಿಚಾರಧಾರೆ ಅವಳಲ್ಲಿ ಬಲವತ್ತರವಾಗುತ್ತ ನಡೆಯಿತು. ಮತ್ತು ಏಕಾಂತ ಪೂಜೆ, ಧ್ಯಾನ, ಪಂಚಾಕ್ಷರೀಮಂತ್ರ ಜಪ ಅವಳಿಗೆ ಹೆಚ್ಚು ಮೆಚ್ಚಿಗೆಯಾಗಹತ್ತಿತು. ಪಂಚಾಕ್ಷರಿ ಮಂತ್ರದುಚ್ಚಾರವನ್ನು ಅವಳು ಕ್ಷಣಮಾತ್ರವೂ ಬಿಡದಾದಳು. ಲೌಕಿಕ ಮಾತುಕತೆಗಳಿಗಿಂತ ಅಧ್ಯಾತ್ಮ ಮಾತು-ಕತೆಗಳೇ ಅವಳಿಗೆ ಬಹಳ ಇಷ್ಟವಾಗುತ್ತಿದ್ದವು. ಹೀಗೆ ದೇವ ಮಲ್ಲಮ್ಮನು ಸುವಿಚಾರದಲ್ಲಿ ಕಾಲಕಳೆಯುತ್ತಿರಲು ದಿನದಿನಕೆ ಗರ್ಭವು ಬೆಳೆದು ನವಮಾಸ ತುಂಬಿದವು. ಪ್ರಸವಕಾಲ ಒದಗಿ ಬೇನೆಗಳು ಮೇಲಿಂದ ಮೇಲೆ ಬರಹತ್ತಿದವು. ಶಿವನೆ ಹರಹರಾ ಶಂಭೋ, ಶಂಕರಾ, ಮುಕ್ಕಣ್ಣಾ ಈ ವೇದನೆ ತಾಳಲಾರೆ ತವಿಸು ತವಪಾದವೇ ಗತಿ ಎಂದು ತಧ್ಯಾನದಲ್ಲಿ ಮೈ ಮೈಮರೆತು ಕುಳಿತಳು. ಆಗ ಪುರದ ಸಾಧ್ವಿಯರು ಸಾಗಿಬಂದು ಹೆರಿಗೆಗೋಸುಗ ಸಲಕರಣೆಗಳನ್ನು ಸಿದ್ಧಪಡಿಸಹತ್ತಿದರು. ಕೆಲವರು ಹೊರಸು ಬಿಗಿದರು, ಕೆಲವರು ನೀರು ತಂದರು, ಮತ್ತೆ ಹಲವರು ಕುಳ್ಳು ಕಟ್ಟಿಗೆ ತಂದರು ಉಳಿದವರು ನೀರುಕಾಸಿ ಅಗ್ಗಿಷ್ಟಿಗೆ ತಯಾರಿಸಿ ಅರಿಷಿಣ ಸಜ್ಜುಗೊಳಿಸಿ ಎಲ್ಲ ಸಲಕರಣೆ ತಯಾರುಮಾಡುವಷ್ಟರಲ್ಲಿ ಶುಭ ನಕ್ಷತ್ರ, ಯೋಗ, ಕರಣಯುಕ್ತವಾದ

ಕರ್ಕ ಲಗ್ನದಲ್ಲಿ ಶಕೆ ಹದಿನೇಳುನೂರಾ ಐವತ್ತೆಂಟನೆಯ ದುರ್ಮುಖಿನಾಮ ಸಂವತ್ಸರ ಶ್ರೀರಾಮನವಮಿ ಶನಿವಾರ ಗೋಧೂಳಿ ಸಮಯದಲ್ಲಿ ಶಿವನೆ ಜನಿಸಿದನು ಸಿದ್ಧನಾಮದಲಿ.

ಆಗ ಸುಮಂಗಲೆಯರು ಬಾಣಂತಿಗೆ ಅರಿಷಿಣ ಹೂಸಿ ನೀರೆರೆದು ಹೊರಸಿನ ಮೇಲೆ ಮಲಗಿಸಿ ಅಗ್ಗಿಷ್ಟಿಗೆ ಕೊಟ್ಟರು. ಮತ್ತು ಕೂಸಿನ ಎಲ್ಲ ಕ್ರಿಯೆ ತೀರಿಸಿ ದೇವಮಲ್ಲಮ್ಮನ ಮಗ್ಗಲಿಗೆ ಮಲಗಿಸಿದರು.

ಪವಿತ್ರ ಮಗನ ಉದಯದೊಂದಿಗೆ ಸೂರ್ಯನು ತನ್ನ ಹೊಂಬಣ್ಣದ ತಂಪಾದ ರಶ್ಮಿಗಳನ್ನಿರಿಸಿ ವಿಶ್ರಾಂತಿ ಹೊಂದಿದನು. ಆಗ ಕಾಡಿಗೆ ಹೋಗಿದ್ದ ಗೋವುಗಳು ತಮ್ಮ ಕರುಗಳ ನೆನಪಾಗಿ "ಅಂಬಾ" ಎಂದು ಕರೆಯುತ್ತ ಓಡುತ್ತ ಮನೆಗೆ ಬರಹತ್ತಿದವು. ಮನೆಗಳೆಲ್ಲ ದೀಪಗಳಿಂದ ಪ್ರಕಾಶಿಸಿದವು. ಸುಮಂಗಲೆಯರು ಬಾಗಿಲು ತೊಳೆದು ಅಂಗಳಕ್ಕೆ ಛಳೆಹೊಡೆದು ಸುಗಂಧದ ಧೂಪ ಹಾಕಿದರು. ಎಲ್ಲ ದೇವಾಲಯಗಳಲ್ಲಿ ವಾದ್ಯಗಳ ನಿನಾದದೊಂದಿಗೆ ವಿಧಿವತ್ ಸಾಯಂಕಾಲ ಪೂಜಾಧಿಗಳು ಸಂಭ್ರಮದಿಂದ ಸಾಂಗವಾಗಿ ಸಾಗತೊಡಗಿದವು. ಸ್ವರ್ಗದಲ್ಲಿದ್ದ ದೇವತೆಗಳು ಕೈಲಾಸದಲ್ಲಿದ್ದ ಶಂಕರನು ಭೂಲೋಕದಲ್ಲಿ ಅವತರಿಸಿರುವದನ್ನು ನೋಡಬೇಕೆಂಬಾತುರದಿಂದ ವಿಮಾನಾರೂಢರಾಗಿ ಬರುವರೋ ಏನೋ ಎಂಬಂತೆ ಸಂಜೆಯ ಮೇಘಗಳು ಅಬ್ಬರದಿಂದ ಉಬ್ಬುಬ್ಬಿ ಬರಹತ್ತಿದವು. ಏಕಮನದಿಂದನೇಕರು ಅನೇಕ ತರದ ಸೇವೆ ಮಾಡುವದನ್ನು ನೋಡಲು ದಾತಾರನು ಧರಣಿಗೆ ಇಳಿದು ಬಂದನೆಂದು, ಮಾರುತನು ಕಸವ ತೆಗೆಯಲು ಬಂದನೇನೋ ಎಂಬಂತೆ ಭರದಿಂದ ಗಾಳಿಯು ಬೀಸಿತು. ಮಾರುತನ ಕಾರ್ಯ ಮುಗಿಯಿತೆಂದು ವರುಣನು ಬಂದು ಛಳೆ ಹೊಡೆದನು ಎಂಬಂತೆ ಮಳೆ ಸುರಿಯಿತು. ಹರನ ಜಡೆಯಲ್ಲಿದ್ದ ಗಂಗೆಯು ತನ್ನ ಒಡೆಯನನ್ನು ಬಿಟ್ಟಿರಲಾರದೇ ಓಡಿ ಬಂದಳೆಂಬಂತೆ ನದಿಗಳು ತುಂಬಿ ಬಂದವು. ನಾಕದಲ್ಲಿದ್ದ ದೇವತೆಗಳು ದೇವದುಂದುಭಿಯನ್ನು ಬಾರಿಸುವರೇನೋ ಎಂಬಂತೆ ಗುಡುಗು ಸಿಡಿಲುಗಳು ಅರ್ಭಟದ ನಿನಾದಿಗೆ ಕಿವಿಗಳು ಗಡುಕಿಚ್ಚಿದವು. ಅದನ್ನು ಕಂಡು ಮಾರುತನು ಸಹಿಸದೆ ಪ್ರಚಂಡ ಬಿರುಗಾಳಿಯನ್ನೆಬ್ಬಿಸಲು ಮೋಡಗಳೆಲ್ಲ ಚದುರಿ ಆಕಾಶವು ನಿರಭ್ರ

ವಾಯಿತು. ಅಂಥ ನಿರಭ್ರ ಆಕಾಶದಲ್ಲಿ ಅನಂತಕೋಟಿ ನಕ್ಷತ್ರಗಳು ಸಿದ್ಧ ನನ್ನು ನೋಡಲು ಎದ್ದು ಬರುವಂತೆ ಮೂಡಿ ಬರಹತ್ತಿದವು. ರಜನಿಗೆ ಭೂಷಣನಾದ ಅರ್ಧಚಂದ್ರನು ಶೀತ, ಕಾಂತಿ, ದವಳ, ನಿರ್ಮಳ, ಆನಂದ ಗಳಿಂದೊಡಗೂಡಿ ಸಕಲರಿಗೂ ಮನಾನಂದ ಬೀರಿದನು.

## — ಶಿಶುವಿಗೆ ನಾಮಕರಣ ಮಹೋತ್ಸವ —

ಆ ಸಮಯಕ್ಕೆ ಅವರ ಗುರುಗಳಾದ ವೀರಭದ್ರಪ್ಪಸ್ವಾಮಿಗಳು ಸ್ನಾನ ಮಾಡಿಸಿ, ನಡುಗೃಹದಲ್ಲಿ ಪಂಚಕಲಶ ಹೂಡಿಸಿದರು. ಮಂತ್ರೋಚ್ಚಾರದಿಂದ ದೇವತಾ ಸ್ಥಾಪನೆ ಮಾಡಿದರು. ನಂತರ ಶಿವಸೂತ್ರದಿಂದ ಚಿಲ್ಲಿಂಗಧಾರಣ ಮಾಡಿದರು..

ಶಿಶುವಿಗೆ ಹದಿಮೂರು ದಿವಸ ತುಂಬಿದವು. ಆಗ ಸಾಧ್ವಿಯರು ತಮ್ಮ ತಮ್ಮ ಮನೆಗಳಿಂದ ಉಚಿತ ಕಾಣಿಕೆ ತಂದರು. ಮತ್ತು ಮುತ್ತೈದೆಯರು ಉಡಿ ತುಂಬಿಕೊಂಡು ಗಂಗೆಗೆ ಬಂದರು. ಅಲ್ಲಿ ಗಂಗೆಯನ್ನು ಸಂಭ್ರಮದಿಂದ ಪೂಜಿಸಿ ಕುಂಭ ತುಂಬಿ ನೀರು ತಂದರು. ತಂದ ಕುಂಭವನ್ನೂ ಶ್ರೀ ಗಂಧದ ತೊಟ್ಟಿಲನ್ನೂ ಪೂಜಿಸಿದರು. ನಂತರ ಶಿಸು-ಬಾಣಂತಿಯರನ್ನು ಸತ್ಕರಿಸಿ ದರು. ಬಳಿಕ ಅಲಂಕೃತರಾದ ಸುಮಂಗಲೆಯರು ಆಭರಣಗಳಿಂದ ತುಂಬಿದ ತಮ್ಮ ಎರಡೂ ಮುಂದೋಳುಗಳನ್ನು ಮುಂದು ಮಾಡಿ ತಮ್ಮ ಹಿಗ್ಗು ಮುಖ ದಿಂದ ಶಿಸುವಿನ ಮುದ್ದು ಮುಖಕ್ಕೆ ಲಟ್‌ಲಟ್ ಮುದ್ದು ಕೊಟ್ಟು ಎತ್ತಿ ಹಾರಿಸಿ ತೂಗಾಡಿಸಿ ಶೃಂಗರಿಸಿದ ತೂಗುವ ತೊಟ್ಟಿಲದಲ್ಲಿಟ್ಟರು.

ವಿಶಾಲ ನೊಸಲು, ಕಪೋಲಗಳಲ್ಲಿಟ್ಟ ಕಸ್ತೂರಿಯ ಬೊಟ್ಟು, ಕಡೆಗಣ್ಣಿಗೆ ಹಚ್ಚಿದ ಕಪ್ಪು, ತಲೆಯದುಂಗುರುಗೂದಲುಗಳಿಂದ ಕಂಗೊಳಿ ಸುವ ತುಂಬಿದ ತನ್ನ ತೊಡೆ ತೋಳ್ಗಳಿಂದ ಒದ್ದಾಡುತ್ತ ಕಾಲುಗಳ ಹೆಬ್ಬೆರ ಳನ್ನು ಬಾಯೊಳಿಟ್ಟು ಆಡುವ ನಗುಮುಖದ ಮಗುವಿಗೆ ಗುರು, ತಾಯ್ತಂದೆ ಗಳಿಂದ ಪ್ರೇರಿತವಾದ ಸಿದ್ಧನೆಂಬ ಹೆಸರನ್ನಿಟ್ಟು, ಇಂದುವದನೆಯರು ಸಂತಸದಿಂದ ಜೋಗುಳ ಪಾಡಿದರು.

"ಜೋ ಸುಖ ಬ್ರಹ್ಮಸ್ವರೂಪಿ ಜೋ ಜೋ । ಜೋ ಸದಾಶಿವ ಮೂರ್ತಿ ಜೋ ಜೋ । ಜೋ ಸುಸದ್ಗುರು ದೇವ–ಪ್ರಮಥ ಪ್ರಾಣನೆ ಜೋ

ಜೋ || ಜೋ ಸುರಾಸುರವಂದ್ಯ ಜೋ ಜೋ । ಜೋ ಸುಮುನಿಕುಲ ವಿನುತ ಜೋ ಜೋ । ಜೋ ಶರಣಜನತಾರಕನೆ ಶಿಸು ಸಿದ್ಧನೆ ಜೋ ಜೋ||" ಮಂದಗಮನೆಯರು ಮಂದಹಾಸದಿಂದ ಮೆಲ್ಲಮೆಲ್ಲನೆ ಚಂದದಿಂದ ತೊಟ್ಟಿಲ ಮುಟ್ಟಿ ಮುಟ್ಟಿ ತೂಗುತ್ತ ಜೋಗುಳಪಾಡಿ ಸಂಭ್ರಮದಿಂದ ಹೆಸರಿಡುವ ಕಾರ್ಯ ಮುಗಿಸಿದರು.

ಶಿಸುವು ದಿನಕೊಂದು ಚಂದವಾಗಿ ಬಿದಿಗಿಯ ಚಂದ್ರನಂತೆ ಬೆಳೆಯತೊಡಗಿತು. ಮುದ್ದು ಮಗುವು ಮಾಡುವ ಲೀಲೆಯನ್ನೂ ಅವನು ದಟ್ಟಡಿಯಿಂದ ಒತ್ತೊತ್ತಾಗಿ ಇಟ್ಟು ನಡೆಯುವ ನಡಿಗೆಯನ್ನೂ ನೋಡುತ್ತ ಅವನ ವಿನೋದ ಇನಿಮಾತುಗಳನ್ನು ಕೇಳುತ್ತ, ತಂದೆ-ತಾಯ್ಗಳು ಮಗುವಿನ ಮಮಕಾರದ ಆನಂದದಲ್ಲಿ ಮೈಮರೆತು ಲಾಲನೆ-ಪಾಲನೆಗಳಿಂದ ಪೋಷಣೆ ಮಾಡಹತ್ತಿದರು. ಅಷ್ಟರಲ್ಲಿ ಸಿದ್ಧನಿಗೆ ಐದುವರುಷ ತುಂಬಿದವು.

ಸಂಪ್ರದಾಯ ಪ್ರಕಾರ ವೀರಭದ್ರಗುರುಗಳು ಸಿದ್ಧನ ತಾಯಿ-ತಂದೆಗಳಿಗೆ ಶೈವ ಪುರಾಣವನ್ನು ಶ್ರವಣ ಮಾಡಿಸುತ್ತಿದ್ದರು. ಆ ಸಮಯದಲ್ಲಿ ಸಿದ್ಧನು ಶ್ರದ್ಧೆಯಿಂದ ತಾಯಿಯ ಪಕ್ಕದಲ್ಲಿ ಕುಳಿತು ತಾನೂ ಶ್ರವಣ ಮಾಡುತ್ತಿದ್ದನು. ಆದರಲ್ಲಿ ಶಿವಜೀವರೈಕ್ಯಾನಂದ ವಿಷಯವು ಪ್ರಾರಂಭವಾಯಿತು ಅದನ್ನು ಕೇಳಿ ಸಿದ್ಧನಿಗೆ ತಾನೂ ಲಿಂಗಾಂಗ ಸಾಮರಸ್ಯ ಜ್ಞಾನವನ್ನು ಪಡೆದುಕೊಳ್ಳ ಬೇಕು ಎಂಬ ಅತೀ ತೀವ್ರ ಇಚ್ಛೆಯುಂಟಾಯಿತು. ಅದನ್ನು ಪಡೆದುಕೊಳ್ಳುವ ದಕ್ಕಾಗಿ ರಾಗದ್ವೇಷಾದಿಗಳ ಉರುಳಿನೊಳಗೆ ಸಿಲುಕದೆ ಸತ್ಯ, ಶಾಂತಿ, ದಯೆ, ದಾಕ್ಷಿಣ್ಯ ಮೊದಲಾದ ಸದ್ಗುಣಗಳಿಂದ ಸರ್ವರೊಡನೆ ಸಮಭಾವದಿಂದ ಸುಸಂಪ್ರೀತಿಯಿಂದ ವರ್ತಿಸಿ ಸರ್ವರ ಪ್ರೇಮಕ್ಕೆ ಪಾತ್ರನಾದನು

ಸಿದ್ಧನು ಗೋಪಾಲಕರಂತಿರುವ ತನ್ನ ಎಲ್ಲ ಬಾಲ ಮಿತ್ರರ ಮಧ್ಯದಲ್ಲಿ ಬಾಲಕೃಷ್ಣನಂತೆ ತೋರುತ್ತಿದ್ದನು. ಒಂದುದಿನ ತಾನು ತನ್ನ ಎಲ್ಲಗೆಳೆಯರನ್ನು ಕರೆದು ನಿಮಗೆ ತಿನ್ನಲು ಎಳ್ಳು ಬೆಲ್ಲ ಕೊಡುವೆ ಬನ್ನಿರೆಂದು ಮನೆಗೆ ಕರೆದೊಯ್ದನು. ಮನೆಯಲ್ಲಿ ತನ್ನ ತಾಯಿಯು ಎಳ್ಳನ್ನು ಒಂದು ಗಡಿಗೆಯಲ್ಲಿ ತುಂಬಿ ನೆಲುವಿನ ಮೇಲೆ ಇಟ್ಟಿದ್ದಳು. ಅದನ್ನು ಕಂಡು ಪಂಚಾಕ್ಷರೀ ಮಂತ್ರವನ್ನು ನುಡಿಯುತ್ತ ಒಂದು ದಂಡದಿಂದ ಅದಕ್ಕೆ ತಿವಿದನು. ಕೂಡಲೆ ಗಡಿಗೆ ಒಡೆದು

ಎಳ್ಳಿನ ರಾಶಿಯು ಭೂಮಿಯ ಮೇಲೆ ಸುರಿಯಿತು. ಸಿದ್ಧನು ಅದನ್ನು ಕಂಡು ಬಹು ಉಲ್ಲಾಸದಿಂದ ಬೆಲ್ಲದ ಗಡಿಗೆಯನ್ನು ತಂದು, ಎಲ್ಲ ಗೆಳೆಯರಿಗೂ ಬೊಗಸೆ ತುಂಬ ಎಳ್ಳು, ಮುದ್ದಿ ಬೆಲ್ಲವನ್ನು ಕೊಡುತ್ತ "ನೀವೆಲ್ಲರೂ ಇಂದು ಸಂಕ್ರಾಂ-ತಿಯ ದೋಷ ಕಳೆದುಕೊಳ್ಳಿರಿ," ಎಂದನು. ಆಗ ಹುಡುಗರು ಸಿದ್ಧನಿಗೆ ಎಳ್ಳು ಬೆಲ್ಲ ಕೊಡುತ್ತ, ತಾವೂ ತಿನ್ನುತ್ತ ಬೀದಿಯಲ್ಲಿ ಕಂಡಕಂಡವರಿಗೆಲ್ಲ ಕೊಡುತ್ತ ನಡೆದರು. ಸಿದ್ಧನು ಎಲ್ಲರಿಗೂ, ಎಳ್ಳು ಬೆಲ್ಲವನ್ನು ಎಷ್ಟು ಕೊಟ್ಟರೂ, ಅವು ಸವಿಯದೆ ಅಷ್ಟೇ ಉಳಿದವು. ಬಾಲಕರು ಬೀದಿ ಹಿಡಿದು ಎಲ್ಲರಿಗೂ ಕೊಡುತ್ತ ಹೋಗುವದನ್ನು ಕಂಡು ಅವರೆಲ್ಲರೂ ಇವನ್ನೆಲ್ಲಿಂದ ತಂದಿರಿ ? ಎಂದು ಕೇಳಿದರು. ಆಗ ಹುಡುಗರು ಸಿದ್ಧನು ಕೊಟ್ಟನೆಂದು ಹೇಳಿ-ದರು. ಆಗ ಅವರೆಲ್ಲರೂ ಸಿದ್ಧನ ಲೀಲೆಯನ್ನು ನೋಡಬೇಕೆಂದು ಅಲ್ಲಿಗೆ ಬಂದರು. ಅವರೆಲ್ಲರೂ ಎಳ್ಳಿನ ರಾಶಿಯನ್ನು ಕಂಡು ಇವನು ಶಿವನವತಾರಿಯು. ಇದು ಸತ್ಯವೆಂದು ಸಿದ್ಧನಿಗೆ ಎಲ್ಲರೂ ನಮಿಸಿದರು. ಅಷ್ಟರಲ್ಲಿ ಸಿದ್ಧನ ತಾಯಿಯು ಮನೆಗೆ ಬಂದು ಮಗನ ಮಹಿಮೆಯನ್ನು ಕಣ್ಣಾರೆ ಕಂಡು ಮಗು ಸಿದ್ಧಾ ! ಇದೇನಚ್ಚರಿ ? ಎಂದು ಕೇಳಿದಳು, ಆಗ ಸಿದ್ಧನು "ಅವ್ವಾ ಇದೆಲ್ಲವು ನಿನ್ನ ಪಾದ ಮಹಿಮೆ" ಎಂದನು. ದೇವಮಲ್ಲಮ್ಮನು "ಕಂದಾ ನೀನು ದೇವಾಂಶವಿದ್ದು ಇದೆಲ್ಲ ನಿನ್ನ ಮಹಿಮೆಯೆಂದು ಹೇಳಬಹುದೇ ?" ಎಂದಳು. ಅದಕ್ಕೆ "ಅಹುದವ್ವಾ ಇದೆಲ್ಲವೂ ನಿನ್ನ ಮಹಿಮೆಯೇ, ನೀನು ಕೇವಲ ಪರಮಾತ್ಮನ ಚಿಚ್ಛಕ್ತಿಯು ನೀನು ಮೂಲ ಮಾಯೆ ಶುದ್ಧ ರೂಪಿಣಿ, ಸದ್ರೂಪಿಣಿ, ಕಾಲಾತೀತಳು, ಮತ್ತು ಆದಿಶಕ್ತಳಾದ ನಿನ್ನಿಂದಲೇ ಈ ನಿಖಿಳ ಮಹಿಮೆಯು ತೋರುವದು, ಇದು ಸತ್ಯ" ಎಂದನು.

ಪುರ ಜನರು ಈ ಮುದ್ದು ಕಂದನ ಮುಖಾರವಿಂದದಿಂದ ಎದ್ದು ಬರುವ ತತ್ವಗರ್ಭಿತ ವಾಕ್ಯಗಳನ್ನು ಕೇಳಿ "ಮಲ್ಲಮ್ಮನ ಉದರದಿಂದ ಮಲ್ಲಿಕಾರ್ಜು-ನನೇ ಒಡಮೂಡಿರುವನು ಎಂದು ನಿಶ್ಚಯಿಸಿ ಸಿದ್ಧನಿಗೂ ಮಲ್ಲಮ್ಮನಿಗೂ ಎಲ್ಲರೂ ನಮಿಸಿದರು. "ಮಲ್ಲವ್ವಾ ನೀನು ಧನ್ಯಳು ! ಧನ್ಯಳು !! ಎಂದು ಹಾಡಿ ಹರಿಸಿದರು. ಕರುಣಿ ಸಿದ್ಧನು ಪುರ ಜನರನ್ನು ಕರೆಕರೆದು ಎಳ್ಳು ಬೆಲ್ಲ ಕೊಡಹತ್ತಿದನು. ಅವರೆಲ್ಲರೂ ಕೊಂಡು ನಮಿಸಿ ಜಯ ಜಯಕಾರ ಮಾಡುತ್ತ ಹೊರಟುಹೋದರು.

ಒಂದು ದಿನ ತಾಯಿಯು ಪ್ರೀತಿಯಿಂದ "ಕಂದಾ ನೀನು ಇನ್ನು ದೊಡ್ಡವನಾದಿ, ಶಾಲೆಗೆ ಹೋಗಬೇಕಪ್ಪಾ" ಎಂದು ಮುದ್ದು ಮಾತಿನಿಂದ ಹೇಳಿದಳು. ಕೂಡಲೇ ಸಿದ್ಧನು "ನೀನು ಹೀಗೆ ನುಡಿಯುವದು ಚಂದ ವೇನಮ್ಮಾ ? ಈ ಭೂರೂಪ ಶಾಲೆಗೆ ನಾನು ಗುರುವಾಗಿ ಬಂದಿರುವೆನು. ಎಂದಾದರೂ ಲಕ್ಷ್ಮಿಯು ಧನಿಕರನ್ನು ಇಚ್ಛಿಸುವಳೇ ? ಶಾರದೆಯು ಪಂಡಿತ ರನ್ನು ಅಪೇಕ್ಷಿಸುವಳೇ ? ಅದರಂತೆ ನಾನು ಶಾಲಾಭ್ಯಾಸವನ್ನು ಬಯಸ ಬೇಕೇ ? ಮಂದಮತಿಗಳಿಗೆ ಅಕ್ಷರದ ಇಚ್ಛೆಯು ನಿತ್ಯವ್ಯಾಪಕ, ನಿರ್ಮಲ ಸುಖರೂಪ ಅಕ್ಷರಾತ್ಮಂಗೆ ಶಾಲೆಯ ಇಚ್ಛೆ ಇರುವದೇ ?" ಎಂದನು. ಕಂದ ನಾಡಿದ ಈ ಜ್ಞಾನಪರ ಮಾತುಗಳನ್ನು ಕೇಳಿ ದೇವಮಲ್ಲಮ್ಮನು ಹಿರಿಹಿರಿ ಹಿಗ್ಗಿದಳು. ಇವು ಶ್ರುತಿ ವಾಕ್ಯವೆಂದು ಸಂತೋಷಹೊಂದಿದಳು. "ಇಂಥ ಮತಿವಂತ ಮಗನನ್ನು ಪಡೆದ ನನ್ನ ಗರ್ಭವು ನುತಿ ಇಲ್ಲದಷ್ಟು ಸಫಲ ವಾಯಿತು. ನಾನೇ ಧನ್ಯಳು ! ನನ್ನ ಜನ್ಮ ಪಾವನವಾಯಿತು." ಎಂದು ಸಂತೋಷ ಸಾಗರದಲ್ಲಿ ಮುಳುಗಿ ಮೈಮರೆತಳು ಎಂಬಲ್ಲಿಗೆ

ಮಂಗಲ— ಶ್ರೀಕರವು ಶಿವಬೊಮ್ಮರಸ್ತಿತೆ |
ಶ್ರೀಕರವು ಚಿಚ್ಛಕ್ತಿಯಸ್ತಿತೆ |
ಶ್ರೀಕರವು ತಿರ್ಯಕ್ಸುರಾಸುರ ಮನುಜರಸ್ತಿತ್ವ ||
ಶ್ರೀಕರವು ಶ್ರುತಿ ಗುರುಗಳಸ್ತಿತೆ
ಶ್ರೀಕರವು ಶುದ್ಧಾತ್ಮನಸ್ತಿತೆ |
ಶ್ರೀಕರಾಸ್ತಿತೆ ತಾನು ಸರ್ವರಿಗೆ ಶ್ರೀಕರಮಂ ||

ಎಂಬ ಮಂಗಲದೊಂದಿಗೆ ಇತಿ ಶ್ರೀಮಚ್ಛಿದ್ಧಾರೂಢ ಭಾರತಿ ಪರಿವ್ರಾಜ ಕಾಚಾರ್ಯಾವತಾರ ಲೀಲಾ ಚರಿತ್ರ ಕಲ್ಪದ್ರುಮದೊಳು ಜನನ ಮತ್ತು ಮಹಿಮಾವರ್ಣನೆ ಎಂಬ ಒಂದನೆ ಅಧ್ಯಾಯ ಸಮಾಪ್ತಿ.

ಓಂ ತತ್ಸತ್ ಪರಬ್ರಹ್ಮಣೆ ನಮಃ

————

|| ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ||



# ಬಾಲಲೀಲಾ ಕಾಂಡ

## ಅಧ್ಯಾಯ ೧.

|| ಓಂ ತತ್ಸತ್ ||

**ಶ್ರೀಗುರು ಸಿದ್ಧಾರೂಢಾಯ ನಮೋನಮಃ**

ಈ ಅಧ್ಯಾಯದಲ್ಲಿ ಶಾಲಾ ಗುರುಗಳಿಗೆ ಓಂಕಾರದರ್ಥವನ್ನು ಹೇಳಿದ್ದು, ಎಮ್ಮೆಯನ್ನು ಕೊಂದು ಪುನಃ ಬದುಕಿಸಿದ್ದು ಮತ್ತು ದೇವದತ್ತನನ್ನು ಕೆರೆಯಲ್ಲಿ ಮುಳುಗಿಸಿ ಕೆಲಪು ಕಾಲದ ಮೇಲೆ ಹೊರಗೆ ಕರೆದ ವಿಷಯಗಳು ಇರುವವು.

ಸ್ತುತಿ:— ಶರಣು ಗುರವೇ ವೇಷಧಾರಣ |
ಪುರುಷ ನಾನಿಹೆ ನಿನ್ನ ವಚನದಿ |
ತರತರದ ವೇಷಗಳ ತೋರುತ ಕಡೆಯ ನರವೇಷವಂ ||
ಧರಿಸಿರುವೆ ನಿದು ನಿನ್ನ ಮನಕ್ಕೆ |
ದಿರಲು ಮುಕ್ತಿಯು ನೀಡು ಸರಿಬರ |
ದಿರಲಿಕೀ ವೇಷಗಳ ಹಾಕುವದನ್ನು ನೀಂ ಬಿಡಿಸೈ ||

ಪದ:— ೧– ೫ **ಶಾಲಾಧ್ಯಾಪಕರಿಗೆ ಓಂಕಾರದರ್ಥವನ್ನು ಹೇಳಿದ್ದು**

ಮರುದಿವಸ ಗುರುಶಾಂತಪ್ಪನು ಮಗನಿಗೆ "ಈಗ ನೀನು ಹಟ ಮಾಡುವದು ಒಳಿತಲ್ಲ. ತೀವ್ರ ಶಾಲೆಗೆ ನಡೆ" ಎಂದು ರಾಗದಿಂ ರಮಿಸುತ್ತ ಕೈ ಹಿಡಿದು ಶಾಲೆಗೆ ಕರೆದೊಯ್ದು ಗುರುಗಳ ವಶಕ್ಕೆ ಕೊಟ್ಟು, "ಗುರುಗಳೇ ಈ ಬಾಲಕನಿಗೆ ಮೊದಲು ಧೂಳಾಕ್ಷರ ಕಲಿಸಿರಿ" ಎಂದು ಹೇಳಿ ಮನೆಗೆ ಬಂದನು.

ಆಗ ಗುರುಗಳು ಸಿದ್ಧ ಬಾಲಕನನ್ನು ತಮ್ಮ ಹತ್ತಿರ ಕುಳ್ಳಿರಿಸಿಕೊಂಡರು ನಂತರ ಧೂಳ ಹಲಗೆಯ ಮೇಲೆ "ಓಂ" ಎಂದು ಅಕ್ಷರ ಬರೆದು "ತೀಡು" ಎಂದರು. ಆಗ ಸಿದ್ಧನು ಗುರುಗಳಿಗೆ ನಮಿಸಿ "ಗುರುವರೇಣ್ಯರೇ, ಈ ಓಂಕಾರದರ್ಥವೇನು ?" ಹೇಳಿರೆಂದನು. ಅದಕ್ಕೆ ಶಾಲಾ ಗುರುಗಳು, ಈಗ ನಿನಗೆ ಇದರ ಅರ್ಥವನ್ನು ಹೇಳಿದರೆ ನೀನು ಹೇಗೆ ಗ್ರಹಿಸಬಲ್ಲೆ ? ಮೊದಲು ನೀನು ಅಕ್ಷರ ಜ್ಞಾನ ಮಾಡಿಕೊಳ್ಳಬೇಕು. ಆ ಮೇಲೆ ವ್ಯಾಕರಣ ಕಲಿತು ಜಾಣನಾಗು. ನಂತರ ನಿನಗೆ ಓಂಕಾರದ ಅರ್ಥವನ್ನು ಹೇಳುವೆನು," ಅಂದರು. ಸಿದ್ಧನು "ಗುರುಗಳೇ, ನನ್ನ ಬುದ್ಧಿಯು ಶುದ್ಧ ವೈಯ್ಯಾಕರಣಿ ಇರುವದು. ನೀವು ಇದರ ಅಥವನ್ನು ಸಿದ್ಧಮಾಡಿ ತಿಳಿಸಿದ ಬಳಿಕ ನಾನು ತೀಡುವೆನು," ಎಂದನು.

ಗುರುಗಳು ಹುಡುಗನು ಹಿಡಿದ ಹಟಕ್ಕೆ ಆಶ್ಚರ್ಯಪಟ್ಟು ಹಾಗಾದರೆ "ಕೇಳು, ಓಂಕಾರದಲ್ಲಿ ಪ್ರಸಿದ್ಧವಾಗಿರುವ ಅಕಾರ, ಉಕಾರ ಮತ್ತು ಮಕಾರ ಹೀಗೆ ಮೂರು ಅಕ್ಷರಗಳಲ್ಲಿರುವವು. ಅವುಗಳಲ್ಲಿ ಮೊದಲಿನ "ಅ" ಅಕ್ಷರದ ಮುಂದೆ ಎರಡನೆಯದಾದ 'ಉ' ಅಕ್ಷರ ಬರಲು ಗುಣಸಂಧಿಯಿಂದ ಓಕಾರವಾಗುತ್ತದೆ ಆ ಓಕಾರದ ಮುಂದೆ ಮೂರನೆಯದಾದ 'ಮ್' ಅಕ್ಷರ ಬರಲು ಓಂ ಆಗುವದು" ಎಂದು ಹೇಳಿದರು. ಸಿದ್ಧನು ಅದನ್ನು ಕೇಳಿ, "ಗುರುಗಳೇ, ನಾನು ಓಂಕಾರದ ಅರ್ಥವನ್ನು ಕೇಳಿದರೆ ನೀವು ವ್ಯಾಕರಣದ ನಿಯಮವನ್ನು ಹೇಳುತ್ತಿರಲ್ಲಾ" ಎಂದನು. ಗುರುಗಳು ಹುಡುಗನ ಮಾತಿಗೆ ಆಶ್ಚರ್ಯಗೊಂಡು "ಹಾಗಾದರೆ ಅದರ ಅರ್ಥ ಗೊತ್ತಿದ್ದರೆ ನೀನೇ ಹೇಳು" ಎಂದರು.

ಆಗ ಸಿದ್ಧನು, "ಗುರುಗಳೇ, ಹಾಗಾದರೆ ಕೇಳಿರಿ. 'ಓಂಕಾರವು' ಬ್ರಹ್ಮವಾಚಕ ಪದವು. ಆ ಓಂಕಾರ ರೂಪ ಸಗುಣಬ್ರಹ್ಮನಿಗೆ ಮಾಯೆಯ

ಪಂಚಗುಣಗಳು ಆವರಿಸಿರುವದರಿಂದ ಅವನು ಪಂಚಮುಖ ಬ್ರಹ್ಮನೆಂದು ಹೇಳಿಕೊಂಡನು. ಸತ್ವ, ರಾಜಸ, ತಾಮಸ, ಶುದ್ಧಸತ್ವ ಮತ್ತು ಅಶುದ್ಧ ಸತ್ವ ಇವೇ ಮಾಯೆಯ ಪಂಚಗುಣಗಳು. ಇವುಗಳಿಂದ ಕ್ರಮವಾಗಿ ವಾಮದೇವ, ಸದ್ಯೋಜಾತ, ಅಘೋರ, ತತ್ಪುರುಷ ಮತ್ತು ಈಶಾನ್ಯವೆಂಬ ಪಂಚಮುಖಗಳು ತೋರಿದವು. ಈ ಮುಖಗಳಿಂದ ಕ್ರಮವಾಗಿ ಅ, ಉ, ಮ ಅರ್ಧಮಾತ್ರೆ ಮತ್ತು ಬಿಂದು ಎಂಬ ಪಂಚಾಕ್ಷರಗಳು ಜನಿಸಿದವು. ಈ ಪ್ರಕಾರ ಪರಶಿವನ ಪಂಚಮುಖದಿಂದ ಹುಟ್ಟಿದ ಈ ಓಂ ಪ್ರಣವಾಕ್ಷರವು ಅನಂತ ತತ್ವ ಜ್ಞಾನ ಗರ್ಭಿತವಾಗಿ ಭ್ರಾಂತಿ ಪರಿಹಾರಕ್ಕೆ ಕಾರಣವಾಯಿತು. ಈ ನಮಃ ಶಿವಾಯ ಪಂಚಾಕ್ಷರಗಳಿಗೆ ತಾಮಸ ಗುಣದ ಪ್ರಕೃತಿಯು ಬೆರೆಯಲು ಪಂಚ ಭೂತಗಳಾದವು. ನಕಾರದಿಂದ ಪೃಥ್ವಿ, ಮಕಾರದಿಂದ ಜಲ, ಶಿಕಾರದಿಂದ ಅಗ್ನಿ, ವಕಾರದಿಂದ ವಾಯು ಮತ್ತು ಯಕಾರದಿಂದ ನಭ ಹೀಗೆ ಪಂಚ ಭೂತಗಳು ಉದಿಸಿದವು. ಅವುಗಳ ಪಂಚೀಕರಣದಿಂದ ಹಂಚಿ ಅನಂತ ಜಾತಿಯ ಮಿಂಚುವ ತನುಗಳು ಮತ್ತು ಅವುಗಳಿಗೆ ಬೇಕಾಗುವ ವಿಚಿತ್ರ ಭೋಗ ಭಾಗ್ಯಂಗಳು ಹುಟ್ಟಿದವು ಈ ರೀತಿ ಜಗವು ಮೆರೆಯುವದು. ತೋರುವದೆಲ್ಲವೂ ಭೂತಮಯ; ಮೂರು ಶಕ್ತಿಮಯವು. ಸರ್ವತೋರಿಕೆಯು ಓಂಕಾರ ಪ್ರಣವಮಯವು ! ಅದುಕಾರಣ ಸರ್ವಜಗತ್ತು ಬ್ರಹ್ಮಮಯ ವೆಂದು ಶ್ರುತಿಯು ಸಾರುತ್ತಿರುವದು. ಇದೆಲ್ಲವನ್ನು ಕಳೆದುಳಿದ ಶೇಷವೇ ಓಂಕಾರದ ಲಕ್ಷ್ಯಾರ್ಥವು. ಈ ಅರ್ಥವು ಶ್ರೋತ್ರಿಯ ಬ್ರಹ್ಮನಿಷ್ಠ ಯೋಗೀ–ಶ್ವರನಿಗಾಗುವದಲ್ಲದೆ ನಿಮಗಾಗದು, ನಾನು ನಿಮ್ಮ ಶಾಲೆಯಲ್ಲಿ ಸುಮ್ಮನೆ ಕೂಡ್ರುವದು ವ್ಯರ್ಥ" ಎಂದು ಹೇಳಿ ಅಲ್ಲಿಂದ ಹೊರಟುಹೋದನು.

ಸಿದ್ಧನಾಡಿದ ಇಂಥ ಬೋಧಪರ ವಾಕ್ಯಗಳನ್ನು ಕೇಳಿ ಶಾಲಾ ಗುರುಗಳ ಹೃದಯಾಕಾಶದಲ್ಲಿ ಜ್ಞಾನಕಿರಣಗಳು ಉದಯವಾದವು. ಇವನು ಪರಶಿವ ನೆಂದು ಮನದಲ್ಲಿ ಪೂಜ್ಯ ಭಾವನೆಯಿಂದ ವಂದಿಸಿದರು.

ಈ ವಾರ್ತೆ ಕೇಳಿದ ತಂದೆ ಮೊದಲುಗೊಂಡು ಪುರಜನ ಸಹಿತ ಧಾವಿಸಿ ಶಾಲೆಗೆ ಬಂದರು. ಅವರೆಲ್ಲರನ್ನು ಶಾಲಾ ಗುರುಗಳು ಬರಮಾಡಿಕೊಂಡರು. "ನಿಮ್ಮ ಕಂದನಾಡಿದ ವಾಕ್ಯಗಳ ಅರ್ಥವನ್ನು ತಿಳಿದುಕೊಳ್ಳುವ ಸಾಮರ್ಥ್ಯವು

ನಮ್ಮಲ್ಲಿಲ್ಲ. ಅವನು ನರರೂಪದಿಂದ ಬಂದ ಪರಶಿವನೇ ಹೌದು, ಎಂದು ಅಲ್ಲಿ ನಡೆದ ಎಲ್ಲ ವಿಷಯವನ್ನು ವಿಸ್ತರಿಸಿದರು. ಪುರದ ಜನರು ಅದೆಲ್ಲವನ್ನು ಕೇಳಿ ಸಂತೋಷವುಳ್ಳವರಾಗಿ, "ಗುರುಶಾಂತಪ್ಪ ನಿನ್ನ ಮಗನು ಸರ್ವಜ್ಞನಾಗಿ ಅವನ ಕೀರ್ತಿಯು ಜಗತ್ತಿಗೆ ಬೆಳಗಿ ಚಿರಕಾಲವಾಗಿ ಉಳಿಯಲಿ," ಎಂದು ಹರಿಸಿ ಹೊರಟು ಹೋದರು.

ಪದ— ೧೬ ರಿಂದ ೨೦ ರ ವರೆಗೆ ಎಮ್ಮೆಯನ್ನು ಕೊಂದು ಪುನಃ ಬದುಕಿಸಿದ್ದು.

ಒಂದು ದಿನ ಸಿದ್ಧನು ತಮ್ಮದೊಂದು ಎಮ್ಮೆಯ ಮೇಲೆ ಕುಳಿತು ತನ್ನ ಎಲ್ಲ ಗೆಳೆಯರಿಗೆ, "ನಾನು ಆನೆಯ ಮೇಲೆ ಕುಳಿತಿರುವೆನು. ನೀವೆಲ್ಲರೂ ವಾದ್ಯಗಳ ಧ್ವನಿಮಾಡುತ್ತ ನಡೆಯಿರಿ" ಎಂದನು. ಸಿದ್ಧನ ನುಡಿಕೇಳಿ ಎಲ್ಲ ಹುಡುಗರು ಬಾಯಿಂದ ಊದುತ್ತ, ಕೈಗಳಿಂದ ತಮ್ಮ ತೊಡೆಗಳನ್ನು ಬಾರಿಸಹತ್ತಿದರು. ಎಮ್ಮೆಯು ಎಷ್ಟು ಹೊಡೆದರೂ ಅದು ಮುಂದಕ್ಕೆ ನಡೆಯದಿರಲು ಸಿದ್ಧನು "ನಿನಗೆ ಅಹಂಭಾವ ತುಂಬಿರುವದರಿಂದ ನೀನು ಮಿಸುಕದೆ ಹಾಗೆಯೇ ಬೀಳು," ಎಂದು ಶಪಿಸಿದನು. ಕೂಡಲೆ ಮಹಿಷಿಯು ನಿರ್ಜೀವಿಯಾಗಿ ಭೂಮಿಗೆ ಉರುಳಿತು. ಅದನ್ನು ಕಂಡು ಎಲ್ಲ ಹುಡುಗರು ದೇವಮಲ್ಲಮ್ಮನಿದ್ದಲ್ಲಿಗೆ ಓಡಿ ಬಂದು "ಸಿದ್ಧನು ನಿಮ್ಮ ಎಮ್ಮೆಯನ್ನು ಕೊಂದನು" ಎಂದು ಹೇಳಿದರು. ಬಾಲಕರ ನುಡಿಕೇಳಿ ಮಲ್ಲಮ್ಮನು ಧಾವಿಸಿ ಬಂದು ಸತ್ತು ಬಿದ್ದಿರುವ ಎಮ್ಮೆಯನ್ನು ಕಂಡು "ಕಂದಾ ! ಇದೇನು ಮಾಡಿದೆ ? ಗಬ್ಬದೆಮ್ಮೆಯನ್ನು ಕೊಂದುಬಿಟ್ಟೆಯಾ ? ಚಂದವಾಯಿತೇ ನಿನಗೆ !" ಎಂದು ರೋದಿಸಹತ್ತಿದಳು.

ಸಿದ್ಧನು, "ಅಮ್ಮಾ ಸುಮ್ಮನೇಕೆ ಅಳುವೆ ? ನಿನ್ನ ಜನ್ಮಕ್ಕೆ ಇದರಿಂದ ಬಹು ಕಷ್ಟ. ಇದರ ಮಲಮೂತ್ರ ತೆಗೆಯುವದೂ, ಇದರ ಮೈ ತೊಳೆಯುವದೂ, ಕೂಳು ತಿನ್ನಿಸುವದೂ, ಮೇಸುವದೂ, ನೀರು ಕುಡಿಸುವದೂ, ಹಾಲು ಕರೆಯುವದೂ, ಕಡೆಯುವದೂ ಇವೆಲ್ಲ ನಿನ್ನ ಜನ್ಮಕ್ಕೆ ಬಹು ಗೋಳೆಂದು ತಿಳಿದು ಹೀಗೆ ಮಾಡಿರುವೆನಮ್ಮಾ. ಇವೆಲ್ಲ ಕಷ್ಟಗಳು ನಿನಗೆ ಬೇಕಾಗಿದ್ದರೆ ತೆಗೆದುಕೊಳ್ಳು ನಿನ್ನ ಎಮ್ಮೆಯನ್ನು" ಎಂದು ಪಂಚಾಕ್ಷರಿಮಂತ್ರ

ಉಚ್ಚರಿಸಿ ಮಹಿಷಿಯ ಮೇಲೆ ತನ್ನ ಅಮೃತ ಹಸ್ತವನ್ನೆಳೆದನು. ತಕ್ಷಣವೇ ನಿರ್ಜೀವಿಯಾಗಿ ಬಿದ್ದ ಎಮ್ಮೆಯು ಸಜೀವಿಯಾಗಿ ಎದ್ದು ನಿಂತಿತು. ಸಿದ್ಧನ ಈ ಅಗಾಧವಾದ ಮಹಿಮೆಯನ್ನು ಕಂಡವರೆಲ್ಲರೂ "ಇವನು ನಾಗಭೂಷಣ ನಲ್ಲದೆ ನರನಲ್ಲ. ಇದು ಸತ್ಯ" ಎಂದು ಸ್ತುತಿಸಿ ನಮಿಸಿದರು.

ಕೆಲವು ದಿನಗಳು ಗತಿಸಿದ ಬಳಿಕ ಒಂದು ದಿನ ಸಿದ್ಧನು ತನ್ನೆಲ್ಲ ಗೆಳೆಯರನ್ನು ಕೂಡಿಕೊಂಡು ಸ್ನಾನಕ್ಕೆಂದು ಕೆರೆಗೆ ಬಂದನು. "ಈಗ ನಾವೆಲ್ಲರೂ ಕೆರೆಯ ಮಧ್ಯ ಹೋಗಿ ಈಸೋಣ ಬನ್ನಿರಿ ಎಂದನು. ಅವರಲ್ಲಿ ದೇವದತ್ತ ನೆಂಬ ಹುಡುಗನು "ನನಗೆ ಈಸಲಿಕ್ಕೆ ಬರುವದಿಲ್ಲ, ಅಲ್ಲಿಗೆ ಬರಲಿಕ್ಕೆ ಭಯ ವಾಗುತ್ತದೆ" ಎಂದನು. ಆಗ ಸಿದ್ಧನು ನಿನ್ನನ್ನು ನಿರ್ಭಯನನ್ನಾಗಿ ಮಾಡು ತ್ತೇನೆ" ಬಾ ಎಂದು ಮಧ್ಯ ನೀರಿಗೆ ಅವನನ್ನು ತಂದು ಮುಳುಗಿಸಲು ಪ್ರಯತ್ನ ನಡೆಯಿಸಿದನು. ಆ ಹುಡುಗನು ಗಾಬರಿಗೊಂಡು ಚೀರಹತ್ತಿದನು. ಆಗ ಎಲ್ಲ ಹುಡುಗರು ಕೂಡಿ ಸಿದ್ಧನನ್ನೇ ಮುಳುಗಿಸೋಣ ಬನ್ನಿರೆಂದು ಅವರೆಲ್ಲರೂ ಸಿದ್ಧನಿಗೆ ಮುತ್ತಿ ಅವನನ್ನು ಮುಳುಗಿಸಲು ಪ್ರಯತ್ನಿಸಿದರು. ಆದರೆ ಅವರ ಪ್ರಯತ್ನವೇನೂ ನಡೆಯಲಿಲ್ಲ. ಯೋಗಿ ಸಿದ್ಧನು ತಾನು ಮುಳಗದೆ ಬೇಗನೇ ಆ ಹುಡುಗನನ್ನೊತ್ತಿ ಮುಳುಗಿಸಿ ದಂಡೆಗೆ ಬಂದನು. ಈಗ "ನಿನಗೆ ಜಲದ ಭಯವು ನೀಗಿತು" ಎಂದು ಹರುಷದಿಂದ ಚಪ್ಪಾಳೆ ತಟ್ಟುತ್ತ ನಗಹತ್ತಿದನು. ಎಲ್ಲ ಹುಡುಗರು ಭಯಗೊಂಡವರಾಗಿ, ಇದೇನು ಸಿದ್ಧಾ ! ದೇವದತ್ತನನ್ನು ಮುಳುಗಿಸಿ ಕೊಂದು ಬಿಟ್ಟೆ ! ಏನಿದನ್ಯಾಯ ?" ಎಂದರು. ಸಿದ್ಧನು, ನನ್ನದೇನು ಅನ್ಯಾಯ ನೀವೇ ಹೇಳಿರಿ ! ಅವನು ಭವರೂಪ ಸಂಸಾರ ಸಾಗರಕ್ಕೆ ಭಯಗೊಂಡಿದ್ದನು. ಅವನನ್ನು ಜಲರೂಪ ಪರಮಾತ್ಮ ನಲ್ಲಿ ನಾನು ನಿಮಗ್ನ ಮಾಡಿದ್ದರಿಂದ ಭಯರಹಿತನಾದನು. ಹೀಗಿದ್ದು ನೀವು ಏನೂ ತಿಳಿಯದೇ ನನ್ನನ್ನು ಸುಮ್ಮನೆ ಹಳಿಯುವದು ಇದು ಒಳ್ಳೆಯದಲ್ಲ" ನೋಡಿರೆಂದನು.

ಅಷ್ಟರಲ್ಲಿ ಆ ಹುಡುಗನ ತಾಯಿಯು ಮಗನ ಈ ಘಾತವಾರ್ತೆಯನ್ನು ಕೇಳಿ ಗಾಬರಿಗೊಂಡು ಅಗಣಿತ ದುಃಖದಿಂದ ಚೀರುತ್ತ ಎದೆಎದೆ ಬಡಕೊಂಡು ಅಳುತ್ತ ಬಂದಳು. ಅದನ್ನು ಕೇಳಿ ಊರ ಜನರೂ ಓಡಿಬಂದರು. "ಹುಡು

ಗರೇ ! ಏನಿದು ನಿಮ್ಮಾಟ ! ದೇವದತ್ತನನ್ನು ಕೊಂದವರಾರು ?" ಎಂದು ಕೇಳಿದರು. ಆಗ ಎಲ್ಲ ಹುಡುಗರು ಸಿದ್ಧನೇ ಕೊಂದನು, ಎಂದು ಹೇಳಿದರು. ಮರಣ ಹೊಂದಿದ ಮಗುವಿನ ತಾಯಿಯು, ನೀನು ಭೂಮಿಯ ಮೇಲೆ ಹುಟ್ಟಿ ಬಂದು ಕರುಣವಿಲ್ಲದೆ ಕಟುಕತನದಿಂದ ಇಂಥ ಕಾರ್ಯವನ್ನು ಮಾಡಿದೆಯಾ ? ಹುರಿಯಲವ್ವಾ ! ಇವನ ವಂಶ, ಇವನ ದುರಗಿ ನುಂಗಲಿ, ಎನ್ನ ಮರುಗ ಹತ್ತಿ ಇವನ ಒಡಲು ಬಿರಿಯಲಿ," ಎಂದು ರೋಧಿಸಹತ್ತಿದಳು. ಅವಳು ರೋಧಿಸುವದನ್ನು ಕೇಳಿ ಸಿದ್ಧನು "ಅಮ್ಮಾ ಪುತ್ರ ಸತ್ತನೆಂದು ಸುಮ್ಮನೆ ಯಾಕೆ ಶೋಕಮಾಡುವಿ; ಅವನು ತಾರಕವೆನಿಪ ಕೆರೆಯ ತೀರ್ಥದೊಳು ನಿಜ ಬ್ರಹ್ಮಾನಂದದಲ್ಲಿರುವನು. ಸುಮ್ಮನಿಪ್ಪವನನ್ನು ಕೂಗಿದರೆ; ಗಮ್ಮನೆದ್ದು ಬರುವನು ಅದಕ್ಕೆ ಏಕೆ ಶೋಕಮಾಡುವದು ?" ಎಂದನು.

ಆಗ ದೇವದತ್ತನ ತಾಯಿ, "ದೇವದತ್ತಾ, ಎಲ್ಲಿರುವಿ ? ಬಾರೋ ಮಗನೇ," ಎಂದು ಕೂಗಿದಳು. ಕೂಡಲೇ ದೇವದತ್ತನು ಮಧ್ಯ ಕೆರೆಯಿಂದ ಎದ್ದು ಬಂದು "ಅಮ್ಮಾ ನನ್ನನ್ನು ಏಕೆ ಕರೆದೆ ? ಎಂದು ಕೇಳಿದ. ಕುಂದಿದ ಮುಖವುಳ್ಳ ತಾಯಿಯು ಕೆರೆಯೊಳಗಿಂದ ಎದ್ದು ಬಂದ ತನ್ನ ಮುದ್ದು ಮಗನನ್ನು ಕಂಡು ತನ್ನ ಹಿಗ್ಗು ಮುಖದಿಂದ ಮುದ್ದಿಸುತ್ತ, ತೆಕ್ಕೆಬಡಿದು ಬಿಗಿದು ಅಪ್ಪಿಕೊಂಡಳು. "ಕಂದಾ ಮೂವರು-ನಾಲ್ಕು ತಾಸು ನೀನು ಮಡುವಿನಲ್ಲಿ ಮುಳುಗಿದ್ದು ಕಂಡು ನನ್ನ ಮಗ ಸತ್ತನೆಂದು ದುಃಖದಿಂದ ಕೂಗಿಕೊಂಡೆನು. ಹೇಳು ಮುದ್ದು ಮಗನೇ ! ಇಲ್ಲಿಯವರೆಗೆ ನೀರೊಳಗೆ ನಿನ್ನ ಪ್ರಾಣ ಹೇಗೆ ಉಳಿಯಿತು ?" ಎಂದು ಆತುರದಿಂದ ಕೇಳಿದಳು. ದೇವದತ್ತನು "ಅಮ್ಮಾ ನನ್ನ ಪ್ರಾಣಕ್ಕೇನೂ ಅಪಾಯವಿಲ್ಲದೆ ಸಿದ್ಧನ ದಯದಿಂದ ನೀರೊಳಗೆ ನಾನು ಸುಖವಾಗಿದ್ದೆನು. ನೀನು ರೋದಿಸುತ್ತ ಆತುರದಿ ಕೂಗಿ ಕರೆಯುವ ನಿನ್ನ ಆರ್ತಧ್ವನಿ ಕೇಳಿ ಕಾತುರಗೊಂಡು ಹೊರಗೆ ಬಂದೆನು," ಎಂದನು ಜನರು, "ಇವನು ನೀರೊಳಗೆ ಇಷ್ಟು ಹೊತ್ತು ಹೇಗೆ ಬದುಕಿಕೊಂಡಿದ್ದನು ? ಇದನ್ನು ಸಿದ್ಧನನ್ನೇ ಕೇಳಬೇಕು," ಎಂದು ಎಲ್ಲರೂ ಸಿದ್ಧನ್ನು ಮುತ್ತಿ ಕೇಳಿದರು.

ಆಗ ಸಿದ್ಧನು, "ಇವನ ಸ್ಥಿತಿಯನ್ನು ವಿಚಾರಿಸಿದರೆ ಇವನ ಪ್ರಾಣವು ಸುಷುನ್ನ ನಾಡಿದ್ವಾರ ಶಿಖಾಚಕ್ರಕ್ಕೆ ಏರಿತ್ತು. ಚಾತಕಪಕ್ಷಿಯು, ಸ್ವಾತಿ

ಬಿಂದುವಿನಿಂದ ಸುಖಿಸುವಂತೆ ಆತನು ಪುರೀತತಿ ನಾಡಿಯೊಳಿದ್ದುಕೊಂಡು ಯಾವ ತರದ ಅಪಾಯವನ್ನು ಹೊಂದದೆ ಸುಖದಿಂದಿದ್ದನು" ಎಂದು ಹೇಳಿದನು. ಆಗ ಸರ್ವರೂ ಇದನ್ನೆಲ್ಲ ಕೇಳಿ, "ಕಾಯುವ, ಕೊಲ್ಲುವ, ಸೃಷ್ಟಿಸುವ ದೇವನೇ ಈ ರೂಪ ಧರಿಸಿ ಬಂದಿರುವನು" ಎಂದು ಎಲ್ಲರೂ ಭಕ್ತಿಭಾವದಿಂದ ಹೀಗೆ ಸ್ತುತಿಸಿದರು. ದೇವದೇವನೆ ಪರಮ ಪುರುಷನೇ । ದೇವದೇವನೆ ಪೂರ್ಣ ಭೂಮನೆ । ದೇವ ಜಗದ್ಗುರುವೆ ಜಯಜಯತೆಂದು ಪೊಗಳಿದರು. ಎಂಬಲ್ಲಿಗೆ—

ಮಂಗಲ— ಗುರುವೆಯೀ ಭವಶರಧಿಯೊಳ್ ನೆಲ ।
ಸಿರುತ ಸಿಕ್ಕವರನ್ನು ನುಂಗುತ ।
ಭರದಿ ದುಃಖವ ನೀವ ಮೋಹವೆನಿಪ್ಪ ಮೊಸಳೆಯನು ॥
ನೆರೆನಸಿಸಲಿಕೆ ಯೋಗ್ಯವ ಮೇಣ್ ।
ವರ ಗಜೇಂದ್ರನ ಮರಣ ದುಃಖವ ।
ಪರಿಹರಿಸಿ ಪೊರೆದಂಥ ನಿನ್ನಯ ಚ-ಣಕಾಂ ನಮಿಪೆ ॥

ಎಂಬ ಮಂಗಲದೊಂದಿಗೆ ಇತಿ ಶ್ರೀ ಮಚ್ಛಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ ಲೀಲಾ ಚರಿತ್ರೆ ಕಲ್ಪದ್ರುಮದೊಳು ಸಂಜೀವನ ಕರಣ ವರ್ಣನೆ ಎಂಬ ಎರಡನೇ ಅಧ್ಯಾಯ ಸಮಾಪ್ತಿ.



|| ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ||



# ಬಾಲಲೀಲಾ ಕಾಂಡ

## ಅಧ್ಯಾಯ ೩

|| ಓಂ ತತ್ಸತ್ ||

**ಶ್ರೀಗುರು ಸಿದ್ಧಾರೂಢಾಯ ನಮೋನಮಃ**

|| ಓಂ ತತ್ಸತ್ ಪರಬ್ರಹ್ಮಣೇ ನಮಃ ||

ಈ ಅಧ್ಯಾಯದಲ್ಲಿ ವನಭೋಜನಕ್ಕೆ ಹೋದಲ್ಲಿ ನೇರಲ ಹಣ್ಣಿನ ಮಹಿಮೆ ತೋರಿಸಿದ್ದು, ನಾನೇ ನನ್ನ ಮಗನೆಂಬುದನ್ನು ಸಿದ್ಧಮಾಡಿದ್ದು ಸತ್ತ ಸರ್ಪಕ್ಕೆ ಪ್ರಾಣಕೊಟ್ಟ ವಿಷಯವಿರುವದು.

ಸ್ತುತಿ— ಗುರುವರನೆ ಯನ್ನನ್ನು ಪಿಡಿಯುತ ।
ಶಿರವ ಕೊರೆವರಿಗಳಲಿ ಮತ್ತಂ ।
ಹರುಷದಿಂ ನೆರೆಪೊರೆವ ಸಜ್ಜನರಲ್ಲಿ ಯಾವಾಗ್ಯೂ ||
ಮೆರೆಯುತೆನ್ನೊಳ್ಳಾನು ನೆಲೆಯಾ ।
ಗಿರುವ ಗುರು ಭಾವನೆಯು ಕೆಡದಂ ।
ತಿರಿಸುತೆನ್ನಂ ಪಾಲಿಸೆನ್ನುತ ನಿನಗೆ ನಾಂ ನಮಿಪೆ

ಪದ— ೧ ರಿಂದ ೧೫ ರ ವರೆಗೆ ವನಭೋಜನಕ್ಕೆ ಹೋದಾಗ ನೇರಲಹಣ್ಣಿನ ಮಹಿಮೆ ತೋರಿಸಿದ್ದು.

## ಅರಣ್ಯದ ವರ್ಣನೆ

ಒಂದು ದಿನ ಪುರಜನರೆಲ್ಲರೂ ಕೂಡಿ ಆನಂದದಿಂದ ವನ ಭೋಜನ ಮಾಡಿ ಬರಬೇಕೆಂದು ನಿಶ್ಚಯಿಸಿದರು. ಅದೇ ಪ್ರಕಾರ ಆವತ್ತಿನ ದಿವಸ ಸರ್ವರೂ ತಮ್ಮ ತಮ್ಮ ಮನೆಗಳಲ್ಲಿ ತಮ ತಮಗೆ ಬೇಕಾದ ತರತರದ ಪಕ್ವಾನ್ನದ ಅಡಿಗೆಯನ್ನು ತಯಾರಿಸಿ ಹೆಡಿಗೆಯನ್ನು ತುಂಬಿಟ್ಟರು. ನಾರಿಯರು ತರತರದ ಸಡಗರದ ಉಡುಗೊರೆ ಉಟ್ಟು ಹೊಸ ಕುಪ್ಪಸ ತೊಟ್ಟರು. ಮುತ್ತು ರತ್ನಗಳಿಂದ ಕೆತ್ತಲ್ಪಟ್ಟ ಚಿನ್ನದ ಆಭರಣಗಳನ್ನು ಧರಿಸಿದರು. ನೊಸಲು ಕಪೋಲಗಳಿಗೆ ಕುಂಕುಮ ಅರಿಷಿಣ ಹಚ್ಚಿಕೊಂಡರು. ಹೆರಳಿಗೆ ಪರಿಮಳ ಪುಷ್ಪ ಮುಡಿದರು. ಮೆಲ್ಲ ಮೆಲ್ಲನೆ ಎಲ್ಲ ತರುಣ ತರುಣಿಯರು ತುಂಬಿಟ್ಟ ಹೆಡಿಗೆಗಳನ್ನು ಹೊರಲು ಹುಡುಗ ಹುಡುಗಿಯರು ಓಡುತ್ತ ನಡೆದರು. ವೃದ್ಧರೂ ಬಾಲಬಾಲಕಿಯರನ್ನೆತ್ತಿಕೊಂಡ ತರುಣಿಯರೂ ತಂಡೋಪ ತಂಡದಿಂದೊಡಗೂಡಿ ಸರಸ ಸಲ್ಲಾಪಗಳನ್ನಾಡುತ್ತ ಸಾಗಿ ಬಂದು ಎಲ್ಲರೂ ಭೀಮರಾಯನ ವನಕ್ಕೆ ಕೂಡಿದರು. ಆ ವನವು ಎತ್ತರ ಪ್ರದೇಶವಾದ್ದರಿಂದ ಸೃಷ್ಟಿ ಸೌಂದರ್ಯ ಅತಿ ಸುಂದರವಾಗಿ ಕಂಗೊಳಿಸುತ್ತಿತ್ತು. ಸುತ್ತಲೂ ನೀಲ ಬಣ್ಣದ ಮುಗಿಲು ಧರಣಿಗೆ ಕೊಪ್ಪರಿಗೆ ಇಟ್ಟಂತೆ ತೋರುತ್ತಿತ್ತು. ಪರ್ವತಗಳ ಸಾಲುಗಳು ಸುತ್ತಲೂ ಕೋಟೆ ಕಟ್ಟಿದಂತೆ ಭದ್ರವಾಗಿದ್ದವು. ದೂರದಿಂದ ಹರಿಯುವ ನದಿಗಳು ಸರ್ಪಗಳು ಹರಿದು ಹೋಗುತ್ತವೆ ಏನೋ ಎಂಬಂತೆ ಕಂಗೊಳಿಸುತ್ತಿದ್ದವು. ಎತ್ತರದ ಪ್ರದೇಶದಿಂದ ಹರಿದು ಬಂದು ಕೊಳ್ಳಕ್ಕೆ ಬೀಳುವ ನೀರಿನ ಅಬ್ಬರ ನಿನಾದಿಗೆ ಕಿವಿಗಳು ಗಡಚಿಕ್ಕುತ್ತಿದ್ದವು. ಸರೋವರಗಳಲ್ಲಿ ಬೆಳೆದಿರುವ ತಾವರೆಯ ಮೊಗ್ಗೆಗಳು ತರುಣಿಯರ ದಂತ ಪಂಕ್ತಿಯಂತೆ ಶೋಭಿಸುತ್ತಿದ್ದವು. ಹಣ್ಣುಕಾಯಿಗಳಿಂದ ತುಂಬಿದ ಅನಂತ ಜಾತಿಯ ಗಿಡಮರಗಳು ಬಾಗಿ ಬಳಕುತ್ತಿದ್ದವು. ತೇಗು, ಅಡಿಕೆ, ತೆಂಗು ಮೊದಲಾದ ಗಿಡಗಳು ಮುಗಿಲಿಗೆ ಮುದ್ದು ಕೊಡುತ್ತವೆಂಬಂತೆ ಎದ್ದು ನಿಂತಿದ್ದವು. ಭತ್ತದ ಗದ್ದೆಗಳು ಹಸಿರು ಮುಡಿಯನ್ನುಟ್ಟು ಲಕ್ಷ್ಮಿ ಎದ್ದು ನಿಂತಿರುವಳೆಂಬಂತೆ ಶೋಭಿಸುತ್ತಿದ್ದವು. ಬಾಳೆಯ ಬನದೊಳಗೆ

ಬಾಳೆಯ ಗೊನೆಗಳು ತರುಣರನ್ನು ಕಂಡು ತಲೆ ಬಗ್ಗಿಸುವ ತರುಣಿಯರಂತೆ ಬಾಗಿಕೊಂಡಿದ್ದವು. ಎತ್ತ ನೋಡಿದತ್ತ ಫಲಭರಿತ ತರುಗಳು, ಎತ್ತನೋಡಿದತ್ತ ಪುಷ್ಪಭರಿತ ಲತೆಗಳ ಮಂಟಪ, ನೋಡಿದತ್ತೆಲ್ಲ ಚಂದ್ರಕಾಂತದ ಬಂಡೆಗಳು, ಸುತ್ತಲು ತಂಗೊಳವು, ಎಲ್ಲ ಕಡೆಗೂ ಕಮಲ ಕುಮುದುಗಳಿಂದ ಆ ವನವು ಶೋಭಾಯಮಾನವಾಗಿ ಕಂಗೊಳಿಸುತ್ತಿತ್ತು.

ಬಂದ ಪುರಜನರೆಲ್ಲರೂ ವನದ ಸೊಬಗನ್ನು ಕಂಡು ಸಂತೋಷವುಳ್ಳವರಾಗಿ ಸರಸ ಸಲ್ಲಾಪಗಳನ್ನಾಡುತ್ತ ಸರೋವರಗಳಲ್ಲಿ ಸ್ನಾನಮಾಡಿದರು. ಮತ್ತು ತಮ್ಮ ತಮ್ಮ ನಿತ್ಯ ಕರ್ಮಗಳನ್ನು ಆಚರಿಸಿ ಮುಗಿಸಿದರು. ನಂತರ ವೃಕ್ಷಗಳ ಛಾಯೆಯಲ್ಲಿ ಕುಳಿತು ಎಲ್ಲರೂ ತಮ್ಮ ತಮ್ಮ ಮನೆಯೊಳಗಿಂದ ತಂದ ಅಡಿಗೆಯ ಹೆಡಿಗೆಗಳನ್ನು ಹೆಣ್ಣುಮಕ್ಕಳು ಬಿಚ್ಚಿ ವನದೇವಿಗೂ ಗಂಗೆಗೂ ನೈವೇದ್ಯಮಾಡಿ ನಮಿಸಿದರು. ಬಳಿಕ ಎಲ್ಲರಿಗೂ ಎಲೆಹಾಕಿ ಉಣಬಡಿಸಿದರು.

ಇತ್ತ ಊರೊಳಗೆ ಒಬ್ಬನು ಸಿದ್ಧನನ್ನು ಕುರಿತು, "ಲಲನೆಯರು, ತರುಣರು, ವೃದ್ಧರು, ಬಾಲ-ಬಾಲಕಿಯರೆಲ್ಲರೂ ತೋಟದೂಟಕ್ಕೆ ಹೋಗಿರುವರು. ಆಗ ನೀನು ಯಾರಿಗೂ ಕಾಣಿಸಲಿಲ್ಲ ಅದು ಕಾರಣ ನನಗೆ ನಿನ್ನನ್ನು ಹುಡುಕಿಕೊಂಡು ಬಾ, ಎಂದು ಹೇಳಿದರು. ಊರೆಲ್ಲ ತಿರುಗಿದರೂ ಎಲ್ಲಿಯೂ ನೀನು ಕಾಣಿಸಲಿಲ್ಲ. ಈಗ ಕಂಡೆ ನಡೆ ಹೋಗೋಣ," ಎಂದನು. ಆಗ ಸಿದ್ಧನು ಮಾರ್ಗಗಮನ ಮಾಡಿದ ವೇಗವನ್ನು ಆ ಮನುಷ್ಯನು ಕಂಡ ಸಿದ್ಧನಿಗೆ ಕೇಳುತ್ತಾನೆ, "ನಿನಗೆ ವಾಯು ವಶವಾಗಿದೆಯೋ ? ಅಥವಾ ಮನೋವೇಗ ಸಿದ್ಧಿಯೋ ? ನಿಜವಾಗಿ ನಿನಗೆ ಯಾವ ಸಾಧನ ಸಾಧಿಸಿರುವದು. ಇದ್ದ ಸಂಗತಿ ಮರೆಮಾಚದೆ ಹೇಳು," ಎಂದನು.

ಅದಕ್ಕೆ ಸಿದ್ಧನು, "ಯಾವನು ಅನಿಲ ದೇವೋಪಾಸನವನ್ನು ಏಕ ಮನಸ್ಸಿನಿಂದ ಮಾಡುವನೋ ಅವನಿಗೆ ತೀವ್ರಗಮನ ಸಿದ್ಧಿಸುವದು. ಬಳಿಕ ಆ ಘನ ಮನೋವೇಗವನ್ನು ಪಡೆದೊಡೆ ಮಿನುಗುತ ವಿರಾಟರೂಪನೊಳು ಚನ್ನಾಗಿ ಮನಸ್ಸು ಲಯಿಸುವ ಉಪಾಸನವನ್ನು ತಾನು ಮಾಡಬೇಕು," ಎಂದನು. ಆ ಪುರುಷನು ಪರಮ ಸಿದ್ಧನ ವಾಕ್ಯವನ್ನು ಕೇಳಿ, "ಇದು ನಿನಗೊಬ್ಬನಿಗೆ ಸಾಧ್ಯವಲ್ಲದೆ ದುರಿತ ಭವಮಾಲೆಯಲ್ಲಿ ಬಳಲುವ ನಮ್ಮಂಥ ನರರಿಗೆ ಸಾಧ್ಯವೇ ?

........ಧರುಣಿಯೊಳಗವತರಿಸಿ ಮನುಜರನು ಕರುಣದಿಂದ ಪೊರೆಯ ಬಂದ ಪರಶಿವನೇ ನೀನಿರುವಿ" ಬಾ ಎಂದು ಅವರ ಊಟದ ಸಮಯಕ್ಕೆ ಅಲ್ಲಿಗೆ ಕರೆ ತಂದನು. ಆಗ ಅವರಿಗೂ ಎಲೆ ಹಾಕಿ ಊಟಕ್ಕೆ ಬಡಿಸಿದರು. ಎಲ್ಲರ ಊಟ ಮುಗಿದ ನಂತರ ಜನರು ತೋಟದಲ್ಲಿರುವ ಹಣ್ಣುಗಳನಿಚ್ಛಿಸಿ ಮನದು ದ್ವೇಗದಿಂದ ಮುಂದೊರೆದು ಮನದೊಳಗೆ ಅಲಿದಾಡಹತ್ತಿದರು.

ಸಿದ್ಧನು ಅದನ್ನು ಕಂಡು ಅವರಲ್ಲಿ ಉಂಟಾಗಿರುವ ಮೋಹ ಭ್ರಾಂತಿಗೆ ಸಂತೋಷವನ್ನುಂಟು ಮಾಡುವ ಒಂದು ಮಹಿಮೆಯನ್ನು ತೋರಿಸ ಬೇಕು ಎಂದು ಮನದಲ್ಲಿ ಶಿವನನ್ನು ನೆನೆದು ತನ್ನೆದುರಿನಲ್ಲಿದ್ದ ಒಂದು ಜಂಬೂ ಫಲವನ್ನು ಮುಟ್ಟಿ ಅಕ್ಷಯ ರಾಶಿಯಾಗುವಂತೆ ಮಾಡಿದನು. ಅತ್ತ ಫಲಗಳನ್ನು ಹುಡುಕುತ್ತಿದ್ದ ಜನರು ಇತ್ತ ಸಿದ್ಧನ ಹತ್ತಿರ ಬಿದ್ದಿರುವ ಉತ್ತಮ ಜಂಬೂಫಲದ ರಾಶಿಯನ್ನು ಕಂಡು ಅಲ್ಲಿಗೆ ಎಲ್ಲರೂ ಓಡುತ್ತ ಬಂದರು. ಆಗ ಸಿದ್ಧನು "ಅವರೆಲ್ಲರಿಗೂ ನೀವು ಬುದ್ಧಿವಂತರಾಗಿ ಶುದ್ಧ ಮನದಿಂದ ನಿಮ್ಮ ಉದರ ತುಂಬುವಂತೆ ತಿನ್ನಿರಿ," ಎಂದನು. ತಾವು ಹೊಟ್ಟೆತುಂಬ ತಿಂದುದಲ್ಲದೆ ಕೆಲವು ಬುದ್ಧಿಗೆಡಿಗಳು ಆಶೆಯಿಂದ ಕಪ್ಪು ಪದರೊಳು ಕಟ್ಟಿಕೊಳ್ಳುವದನ್ನು ಸಿದ್ಧನುಕಂಡು,

ಆಶೆಯಂಬುದು ಕಾಮಮಯ ತಾ ।
ನಾಶೆಯುಂಬುದು ಕ್ರೋಧಮಯ ತಾ ।
ಆಶೆಯುಂಬುದು ಲೋಭಮಯ ವಾಶೆಯದು ಮೋಹಮಯ ॥
ಆಶೆಯುಂಬುದು ಮದಮಯಂ ಮೇ ।
ಣಾಶೆಯೆಂಬುದು ಮತ್ಸರಂ ಮಹ ।
ದಾಶೆ ತಾಂ ಪೇಭೂತವೆನಿಸುತ ಮೋಸಗೊಳಿಸುವದು ॥
ಇದುವೆ ಮೂರ್ತಿತ್ರಯರ ನುಂಗಿಹು ।
ದಿದುವೆ ಸನ್ಮಾರ್ಗವನು ಕೆಡಿಸಿಹು ।
ದಿದುವೆ ಯೋಗಿಯ ಮನವ ವಿಷಯಕೆ ಹಚ್ಚಿ ನಗುತಿಹುದು ॥
ಇದುವೆ ಡಂಭವ ಮಾಡ ಹಚ್ಚುವ ।
ದಿದುವೆ ದುಃಖಕೆ ಮೂಲಕಾರಣ ।
ವಿದುವೆ ಮೂಲೋಕವನು ನುಂಗಿಹುದೆಂದುಸುರುತಿರಲು ॥

ಹೀಗೆ ಆಶೆಯ ಬಗ್ಗೆ ಸಿದ್ಧನಿಂದ ಬೋಧವನ್ನು ಕೇಳಿ ನಾಚಿ ಭಯ ಭೀತರಾಗಿ ಕಂಗೊಳಿಪ ತಾವು ಕಟ್ಟಿಕೊಂಡ ಫಲಗಳನ್ನು ಬಿಸುಟಿ ಬಿಟ್ಟರು. ಸಿದ್ಧನು ಅದನ್ನು ನೋಡಿ, "ನೀವು ಬಹಿರಂಗದ ಸೇವಕ್ಕೆ ಚಲ್ಲುವದರಿಂದ ಏನು ಫಲ ? ಮನಸ್ಸಿನ ಆಶೆ ಬಿಟ್ಟಿದ್ದಾದರೆ ನಿಮಗೆ ಸುಖ ದೊರೆಯು ವದು" ಎಂದನು.

(ಪದ— ೧೬ ರಿಂದ ೨೫) ನಾನೇ ನನ್ನ ಮಗನೆಂಬುದನ್ನು ಸಿದ್ಧಪಡಿಸಿದ್ದು

ಅವರೊಳ್ಳೊಬ್ಬ ದಿನಜೋಡ ಧನಿಕನು ಸಿದ್ಧನ ಈ ನೀತಿಯಮಾತನ್ನು ಕೇಳಿ ಮನದಲ್ಲಿ ಚಕಿತನಾಗಿ "ತಮ್ಮಾ ನೀನಾರ ಮಗನು" ಎಂದು ಕೇಳಿದನು. ಅದಕ್ಕೆ ಸಿದ್ಧನು, "ನಾನು ನನ್ನ ಮಗನು" ಎಂದು ಉತ್ತರ ಕೊಟ್ಟನು. ಆಗ ಸಾವುಕಾರನು, "ನಿನ್ನ ಮಗನು ನೀನು ಹೇಗಾಗುತ್ತಿ ತಮ್ಮಾ" ಎಂದು ಕೇಳಿ ದನು. ಸಿದ್ಧನು ಹಾಗಾದರೆ ಇದರ ಮರ್ಮವನ್ನು ಹೇಳುತ್ತೇನೆ ಸಾವಧಾನ ದಿಂದ ಕೇಳಿರಿ. ಈ ಪ್ರಪಂಚಪೆಂಬ ಯಾತ್ರೆಯಲ್ಲಿ ಗಗನಾದಿಗಳೆಂಬ ಕ್ಷೇತ್ರ ಗಳನ್ನು ತಿರುಗುತ್ತ ಸತ್ಪಾತ್ರ ನರದೇಹವೆಂಬ ಈ ಕ್ಷೇತ್ರಕ್ಕೆ ಬಂದ ಯಾತ್ರಿ ಕನು ನಾನು. ಈ ಧರಣಿಯೊಳಗೆ ನಾನು ಯಾರಮಗನೆಂದು ಹೇಳಲಿ ? ಯಾಕಂದರೆ 'ಈ ಕೂಸನ್ನು ನಾನು ಹೆತ್ತಿರುವೆನು. ಇವನು ನನ್ನ ಮಗನು' ಅನ್ನುವಳು ತಾಯಿ. 'ನನ್ನ ವೀರ್ಯದಿಂದ ಜನಿಸಿರುವದರಿಂದ ನನ್ನ ಮಗ ಅನ್ನುವನು' ತಂದೆ. 'ನನ್ನನ್ನು ಸೇವಿಸಿ ನಿನ್ನಲ್ಲಿ ವೀರ್ಯವಾಗಿರುವದರಿಂದ ನನ್ನ ಮಗ, ಅನ್ನುವಳು ಅನ್ನಪೂರ್ಣೇಶ್ವರಿ. 'ನನ್ನಲ್ಲಿ ಹುಟ್ಟಿ ಬೆಳೆದು ನೀನು ಆಹಾರವಾಗಿರುವದರಿಂದ ನನ್ನ ಮಗ ಅನ್ನುವಳು ಭೂಮಾತೆ" 'ನನ್ನ ಉಷ್ಣದಿಂದ ನೀನು ಜನಿಸಿ ಮಳೆ ರೂಪದಿಂದ ಸುರಿದು ನಿನ್ನಲ್ಲಿ ಹುಟ್ಟಿಬೆಳೆದು ಅನ್ನವಾದುದರಿಂದ ನನ್ನ ಮಗ ಅನ್ನುವನು, ಅಗ್ನಿ ದೇವನು' ನನ್ನ ಘರಷಣ ದಿಂದ ನೀನು ಜನಿಸಿರುವದರಿಂದ ನನ್ನ ಮಗ ಅನ್ನುವನು ಮಾರುತನು' 'ನನ್ನ ಒಡಲಲ್ಲಿ ನೀನು ಹುಟ್ಟಿರುವದರಿಂದ ನನ್ನ ಮಗ ಅನ್ನುವದು ಆಕಾಶ' ನನ್ನಿಂದ ಹುಟ್ಟಿ ಗಗನಾದಿಗಳಲ್ಲಿ ಸಂಚರಿಸುವದರಿಂದ ನನ್ನ ಮಗ ಅನ್ನು ವದು ಸ್ವರ್ಗ' ಇವನನ್ನು ಪೂರ್ವದಲ್ಲಿ ಹೆತ್ತ ಗರ್ಭದಂತೆ ಹೊತ್ತಿರುವೆನು ಆದಕಾರಣ ನನ್ನ ಮಗ ಅನ್ನುವದು ಕಾಲ.' ಶರೀರವು ಕರ್ಮಜನ್ಯವೆಂದು

ಶೃತಿ ಸಾರುತ್ತಿರುವಾಗ, ನೀವೆಲ್ಲರೂ ಹೀಗೆ ನುಡಿಯುವದು ನ್ಯಾಯವೇ ? ಅವರವರ ಕರ್ಮಕ್ಕನುಸಾರ ಅವರವರಿಗೆ ಆಯಾಯ ಶರೀರವನ್ನು ಕೊಟ್ಟಿರುವೆನು. ಅದು ಕಾರಣ ನನ್ನ ಮಗನು, ಅನ್ನುವಳು ಕರ್ಮದೇವತೆ. ನಾನು ಮೊದಲಿಗೆ ಇವರೆಲ್ಲರಲ್ಲಿ ಸ್ವಲ್ಪ ಸ್ವಲ್ಪ ಕಾಲ ವಾಸಮಾಡಿದ್ದರಿಂದ ಇವರೆಲ್ಲರೂ, ಆದರ ಅಭಿಮಾನದಿಂದ ನನ್ನ ಮಗ ನನ್ನ ಮಗ ಎಂದು ವಾದಿಸುವರು. ಇದು ಸರಿಯಾದೀತೇ ? ವಿಚಾರಿಸಿ ನೋಡಿದರೆ ನನ್ನ ಕರ್ಮದಿಂದ ನಾನು ಹುಟ್ಟಿ ಬಂದಿರುವೆನು. ನನ್ನ ಕರ್ಮಕ್ಕೆ ನಾನೇ ಕರ್ತನು. ನಾನೆಂಬ ಕರ್ತನೇ ಜೀವರೂಪನು ಮತ್ತು ನನ್ನ ಜೀವ ಎಂದು ಅನ್ನುವನು. ಆತ್ಮರೂಪ ಪರಮಾತ್ಮನಲ್ಲಿ ತೋರಿದ್ದರಿಂದ ಸರ್ವ ಜೀವರುಗಳು ಪರಮಾತ್ಮನ ಮಕ್ಕಳು ನಾನು ಆತ್ಮ ಸ್ವರೂಪನು. ಅಂದಮೇಲೆ ನಾನು ನನ್ನ ಮಗನೆಂದು ಹೇಳುವದರಲ್ಲಿ ಯಾವ ಸಂದೇಹವು ಇಲ್ಲ" ಎಂದನು.

ಚತುರ ಸಿದ್ಧನ ಇಂಥ ಅನುಭವ ವಾಕ್ಯವನ್ನು ಪುರಜನರು ಹರುಷದಿಂದ ಆಲಿಸುತ್ತ "ಈ ಕಲಿಯುಗದಲ್ಲಿ ಉರುತರ ದುಃಖಾಗ್ನಿಯಿಂದ ಪರಿತಾಪಿಸುತ್ತಿರುವ ಜನರನ್ನು ದಯದಿಂದ ಪೊರೆಯುವದಕ್ಕಾಗಿ ಹರನೇ ಈ ನರ ರೂಪದಿಂದ ಬಂದಿರುವ ದೇವನಿವನು" ಎಂದು ನುತಿಸಿ ನಮಿಸಹತ್ತಿದರು. ಪುನಃ ಅವರೆಲ್ಲರೂ ಅನ್ನವನ್ನು ಭುಂಜಿಸಿ ವಿನೋದದಿಂದ ಹಾಡುತ್ತ ಕುಣಿಯುತ್ತ ತೋಟದಿಂದ ಊರಿಗೆ ಹೋಗಲು ಅನುವಾದರು.

### ಪದ:— ೨೬ ರಿಂದ ೩೬ ರ ವರೆಗೆ ಸತ್ತ ಸರ್ಪಕ್ಕೆ ಪ್ರಾಣಕೊಡಲು ಊರ ಜನರು ಸಿದ್ಧನನ್ನು ಮರೆಸಿದ್ದು

ಅವರೆಲ್ಲರೂ ಊರಿಗೆ ಬರುವಾಗ ಮಧ್ಯಮಾರ್ಗದಲ್ಲಿ ಸತ್ತುಬಿದ್ದ ಒಂದು ಸರ್ಪವನ್ನು ಕಂಡು, ಎಲ್ಲರೂ ಹೆದರಿ "ಅಯ್ಯೋ ಸತ್ತೆವು" ಎಂದು ಚಿಟ್ಟನೇ ಚೀರುತ್ತ ಓಡಹತ್ತಿದರು. ಸಿದ್ಧನು ಅದನ್ನು ಕಂಡು, "ಏಕೆ ಓಡುವಿರಯ್ಯಾ ?" ಸಾಕು ನಿಲ್ಲಿರಿ. ಹೆಣಕ್ಕೆ ಬೆದರುವ ನಿಮ್ಮ ಶೂರತನಕ್ಕೆ ಧೀರರು ನಗದಿರುವರೇ ? ಲೋಕಪಿತಗೆ ಆಭರಣವಾದ ಶ್ರೀಕಾರ ಈ ಆದಿಶೇಷನು ನಿಮ್ಮ ಶಕ್ತಿಯನ್ನು ಪರೀಕ್ಷಿಸಲು ಭೂಲೋಕಕ್ಕೆ ಬಂದಿರುವನು. ನಿಮ್ಮ ಭೀತಿಯನ್ನು ದೂರಮಾಡಿಕೊಳ್ಳುವದಕ್ಕೆ ಸುಲಭವಾದ ಒಂದು ಶಿವ

ಮಂತ್ರವಿರುವದು. ಅದನ್ನು ನೀವು ಆನಂದದಿಂದ ಸ್ಮರಿಸುತ್ತ ಈ ಭಯವನ್ನು ಕಳೆದುಕೊಳ್ಳಿರಿ. ಇದು ಜಗತ್ತಿನಲ್ಲಿ ಸದ್ಭಕ್ತರಿಗೆ ಪ್ರಸಿದ್ಧವಾಗಿ ನಾಲ್ಕು ವೇದಗಳಲ್ಲಿ ಹೇಳಿದ ಧರ್ಮವು. ಆದ್ದರಿಂದ ಚಂದದಿಂದ ನಿಮ್ಮ ಮಂದ ಬುದ್ಧಿಯನ್ನು ಬಿಟ್ಟು ಬನ್ನಿರಿ," ಎಂದು ಎಲ್ಲರನ್ನು ಕರೆದು ಆ ಉರಗವನ್ನು ಹಿಡಿದು ಅವರಿದ್ದಲ್ಲಿಗೆ ತಂದು ನಿಲ್ಲಿಸಿದನು. ಕೂಡಲೇ ಆ ಜನರು ಅದನ್ನು ಕಣ್ಣಾರೆ ಕಂಡು, "ಅಯ್ಯೋ ! ಇದು ಸಜೀವ ಹಾವೆಂದು ತಿಳಿದು ನಾವು ಓಡಿ ಹೋದೆವು. ಇದೇನಾಶ್ಚರ್ಯ ! ಈ ಸಣ್ಣ ಹುಡುಗನ ಧೈರ್ಯ ಎಂತಹದು! ನಾವು ಹೇಡಿಗರು, ಅಜ್ಞರು" ಎನ್ನಹತ್ತಿದರು.

ಇವರಾಡುವ ಮಾತನ್ನು ಕೇಳಿ ಸಿದ್ಧನು ಮತ್ತೆ ಅವರಿಗೆ ಹೇಳಹತ್ತಿದನು. "ಈ ಕ್ಷಿತಿ (ಭೂಮಿ)ಗೆ ಸುಖವನ್ನು ಕೊಡುವಂಥ ಶಿವ ಪಂಚಾಕ್ಷರಿಯನ್ನು ಲಕ್ಷ್ಯಪೂರ್ವಕ ಉಚ್ಚರಿಸಿರಿ ಆ ಉಕ್ಷವಾಹನನ ದಯದಿಂದ ಆದಿಶೇಷನು ಬದಿಗೆ ಸಾಗುವನು," ಎಂದು ನುಡಿದನು. ಸಿದ್ಧನ ಮಾತನ್ನು ಎಲ್ಲರೂ ಮನ್ನಿಸುತ್ತ ಆ ಶಿವ ಪಂಚಾಕ್ಷರಿಯ ಮಂತ್ರವನ್ನು ಭಜಿಸಿ ನಮಿಸಿದರು. ಕೂಡಲೇ ಸರ್ಪವು ಚೇತರಿಸಿ ಸಳ್ಳನೆ ಸರಿದು ಹೋಯಿತು. ಆಗ ಅವರೆಲ್ಲರು ಸಿದ್ಧನ ಮಹಿಮೆ ಕಣ್ಣಾರೆ ಕಂಡು ಆಶ್ಚರ್ಯಗೊಂಡು ಅವನ ಪಾದಕ್ಕೆ ಬಿದ್ದು ನಮಿಸಿದರು. ಮತ್ತೂ ಒಮ್ಮೆ ಮಹಾಧ್ವನಿಯಿಂದ ಶಿವ ಮಂತ್ರದ ಗರ್ಜನೆ ಮಾಡಿದರು. ಆ ಗರ್ಜನೆಯನ್ನು ಊರೊಳಗಿನ ಎಲ್ಲ ಜನರೂ ಕೇಳಿ ಇದೇನು ಕೌತುಕವೆಂದು ಓಡಿ ಬಂದು, "ಇದೇನು ಅಬ್ಬರಣೆ !" ಎಂದು ಕೇಳಿದರು. ಹರುಷ ಹೊಂದಿದ ಆ ಜನರು, "ಶೈವರಲ್ಲಿ ಅಧಿಕರಾದ ನಮ್ಮ ಗುರುಶಾಂತಪ್ಪನವರ ಸುಪುತ್ರನಾದ ಸಿದ್ಧನ ಮಹಿಮೆಯನ್ನು ಹೇಳುವದಕ್ಕೆ ಅಸಾಧ್ಯವು," ಎಂದರು. ಮತ್ತು ಅವನು ಮಾಡಿದ ಪವಾಡವನ್ನೆಲ್ಲ ಪುರಜನರಿಗೆ ಅರುಹಿದನು. ಅವರೆಲ್ಲರೂ ಅದನ್ನು ಕೇಳಿ ಸಂತೋಷಗೊಂಡು ಬಾಲ ಸಿದ್ಧನನ್ನು ಹೆಗಲ ಮೇಲೆ ಕೂಡ್ರಿಸಿಕೊಂಡು ಗ್ರಾಮಕ್ಕೆ ಕರೆತಂದರು.

"ಸುದುರ್ಲಭನಾದ ಗುರು ಮೂರ್ತಿಯು ನವ್ಮೆಲ್ಲರ ಪೂರ್ವ ಪುಣ್ಯದ ಫಲದಿಂದ ಇಂದು ನಮಗೆ ಪ್ರಾಪ್ತನಾದನು" ಎಂದು ಹಿಗ್ಗುತ್ತ ಅವನನ್ನು

ವಾದ್ಯಗಳ ಸಂಭ್ರಮದೊಡನೆ ಪುರದೊಳು ಮೆರೆಸುತ್ತ "ಇವನ ಚರಣ ದ್ವಯವು ಕ್ಷೇತ್ರವು ಇವನ ಅಭಯಕರವು ಸುರಧೇನು ಇವನ ನುಡಿಗಳು ಶ್ರುತಿಗಳು, ರವಿ ಶಶಿಗಳು ಇವನ ಅಕ್ಷಿಗಳು ಇವನ ಪ್ರಾಣವೇ ಹಂಸರೂಪವು ಇವನ ಮನವೇ ಬ್ರಹ್ಮದೇವರು ಇವನೇ ಪರಶಿವನು. ಇದು ಸತ್ಯಸತ್ಯ ವೆಂದು" ನುತಿಸಿದರು ಎಂಬಲ್ಲಿಗೆ ಮಂಗಲ.

ಜಯತು ಜಯ ಜಯ ಭಕ್ತಪಾಲಕ ।
ಜಯತು ಜಯ ಜಯ ಮುಕ್ತಿದಾಯಕ ।
ಜಯತು ಜಯ ಜಯ ಪಾವನಾತ್ಮಕ ಪಾಹಿ ನಿರ್ಮಾಯಾ ॥

ಜಯತು ಜಯ ಸಚ್ಚಿತ್ಸುಖಾತ್ಮಕ ।
ಜಯತು ಸರ್ವಾಧಾರ ವ್ಯಾಪಕ
ಜಯತು ಸರ್ವಜ್ಞಾನ ರೂಪಕ ಜಯತು ಗುರುರಾಯಾ ॥

ಇತಿ ಶ್ರೀಮಚ್ಚಿದ್ಧಾರೂಢ ಪರಿವ್ರಾಜಕಾಚಾರ್ಯಾವತಾರ ಲೀಲಾ ಚರಿತ್ರ ಕಲ್ಪ ಧ್ರುವದೊಳ್ ಜನಕೆ ಅಕ್ಷಯವಾದ ಜಂಬೂ ಫಲ ಮತ್ತು ಸತ್ತ ಹಾವಿಗೆ ಪ್ರಾಣವಿತ್ತ ಮಹಿಮೆಯೆಂಬ ಮೂರನೇ ಅಧ್ಯಾಯ ಸಮಾಪ್ತಿ.



|| ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ||



# ಬಾಲಲೀಲಾ ಕಾಂಡ

## ಅಧ್ಯಾಯ ೩

|| ಓಂ ತತ್ಸತ್ ||

### ಶ್ರೀಗುರು ಸಿದ್ಧಾರೂಢಾಯ ನಮೋನಮಃ

ಈ ಅಧ್ಯಾಯದಲ್ಲಿ ಸಿದ್ಧನು ಗುರು ಶೋಧನಾರ್ಥ ಗೃಹತ್ಯಾಗ ಮಾಡ ಲಿಕ್ಕೆ ಸರ್ಪದಿಂದ ಕಚ್ಚಿಸಿಕೊಂಡು ಸತ್ತದ್ದು, ದೇವಮಲ್ಲಮ್ಮನು ಈಶ್ವರನನ್ನು ಬೈದದನ್ನು, ಈಶ್ವರನು ಜಂಗಮವೇಷದಿಂದ ಬಂದು ಸಿದ್ಧನನ್ನು ವೈದ್ಯೋಪ- ಚಾರದಿಂದ ಬದುಕಿಸಿ ಅವನಿಗೆ ಬ್ರಹ್ಮಚರ್ಯಾಶ್ರಮವನ್ನು ಕೊಟ್ಟ ವಿಷಯ ವಿರುವದು.

ಮಂಗಲ:— ಶ್ರೀ ಮಹಾಗುರುವಿಂಗೆ ಸತ್ಸುಖ ।
ಧಾಮ ಚಿದ್ರೂಪಂಗೆ ಸಾಧು ।
ಪ್ರೇಮಿಯೆನಿಸುವವಂಗೆ ತ್ರೈಜಗದಾದಿ ಬೀಜಂಗೆ ||
ಕಾಮಹರ ದೇವಗಂಗೆಯಾತ್ಮಾ ।
ರಾಮ ನಿಸ್ಸೀಮಂಗೆ ಶ್ರೇಯಃ ।
ಕಾಮಿತ ಜನ ಕಲ್ಪವೃಕ್ಷಂಗಾನು ವಂದಿಸೆನು ||

**(ಪದ:— ೧–೨ ರ ವರೆಗೆ) ಸಿದ್ಧನು ಗುರುಶೋಧನಾರ್ಥ ಗೃಹ ತ್ಯಾಗ ಮಾಡಲು.... ಸರ್ಪದಿಂದ ಕಚ್ಚಿಸಿಕೊಂಡು ಸತ್ತದ್ದು**

ಶ್ರೀ ಸಿದ್ಧನ ತಾಯ್ತಂದೆಗಳು ಸ್ವಗೃಹದಲ್ಲಿ ತಮ್ಮ ಕುಲಗುರುಗಳಾದ ವೀರಭದ್ರ ಸ್ವಾಮಿಗಳನ್ನು ಗಂಧ ಭಸ್ಮಾಕ್ಷತೆ ಪತ್ರಿ ಪುಷ್ಪಾದಿಗಳಿಂದ ಪೂಜಿಸಿ ಅತಿ ಭಕ್ತಿಯಿಂದ ಕೂಡಲ ಸಂಗಮದೇವರ ವಚನಗಳನ್ನು ನಿತ್ಯ ಸಾಂಪ್ರದಾಯದಂತೆ ಶ್ರವಣ ಮಾಡುತ್ತಿದ್ದರು. ಆ ಕಾಲಕ್ಕೆ ಗುರುಗಳು, ಸದ್ಭಕ್ತರೇ, ಕೇಳಿರಿ. ಈ ತೋರುವ ಧನ, ಕನಕ, ವಸ್ತ್ರ, ವಾಹನ, ಸ್ತ್ರೀ, ಪುತ್ರ ಸಕಲ ಸಂಪತ್ತು ಮತ್ತು ಈ ಧರಣಿ, ಜಲ, ಅಗ್ನಿ, ವಾಯು, ನಭ, ನಾಕ, ರವಿ, ಶಶಿ ಮೊದಲಾದ ಇವೆಲ್ಲವುಗಳು ಮನದ ಕಲ್ಪನೆಯಲ್ಲಿ ಹೊಳೆದು ತೋರುತ್ತವೆ. ಇವೆಲ್ಲವೂ ಕನಸಿನ ವಸ್ತುಗಳಂತೆ ಕಡೆಗೆ ನಾಶಹೊಂದುವ ಕಾರಣ ಮಿಥ್ಯ ವೆಂದು ತಿಳಿಯಿರಿ," ಎಂದು ಬೋಧಿಸಿದರು.

ಆಗ ತಾಯಿಯ ಮಗ್ಗಲಲ್ಲಿ ಕುಳಿತ ಸಿದ್ಧನು ಅದನ್ನು ಕೇಳಿ ದಿಗ್ಗನೆ ಎದ್ದು ಸ್ವಾಮಿಗಳ ಪಾದಕ್ಕೆ ಬಿದ್ದು "ಗುರುಗಳೆ ! ನಭವು ವ್ಯಾಪಕವಿದ್ದು ಅದು ಮನದಲ್ಲಿ ಎಂತು ಉದಿಸಿ ಲಯಿಸುವದು ? ಇದನ್ನು ತಾವು ತಿಳಿಸಿ ಕೊಡಬೇಕು." ಎಂದು ಕೈಜೋಡಿಸಿ ವಿನಯದಿಂದ ಕೇಳಿಕೊಂಡನು.

ಚಿಕ್ಕ ಮುದ್ದು ಮಗನ ಮುಖದಿಂದ ಹೊರಬಿದ್ದ ಇಂಥ ಪ್ರಶ್ನೆಯನ್ನು ಕೇಳಿ ಗುರುಗಳು ಚಕಿತರಾಗಿ "ಹೇ ಮುದ್ದು ಬಾಲಕನೆ, ಈ ನಿನ್ನ ಯೋಗ್ಯ ಪ್ರಶ್ನೆಯನ್ನು ನ್ಯಾಯಶಾಸ್ತ್ರದಲ್ಲಿ ಬಲ್ಲಿದರಾದ ಜಗದ್ಗುರುಗಳಲ್ಲಿಗೆ ಹೋಗಿ ಕೇಳಿದ್ದಾದರೆ ಅವರು ನಿನಗೆ ಸಮರ್ಪಕ ಉತ್ತರ ಕೊಡುತ್ತಾರೆ" ಎಂದು ಹೇಳಿದರು.

ಸಿದ್ಧನು ಗುರುಗಳು ಹೇಳಿದ್ದನ್ನು ಕೇಳಿ ತನ್ನ ಮನದಲ್ಲಿ "ಈಗ ನಾನು ಗುರುಗಳನ್ನು ಹುಡುಕಲು ಹೋದರೆ ನನ್ನ ತಂದೆ ತಾಯ್ಗಳು ಒಪ್ಪರು. ಇದಕ್ಕೊಂದು ಉಪಾಯ ಮಾಡಬೇಕು." ಎಂದು ಆಲೋಚಿಸಿ, ಹರನೇ, ನೀನೇ ಅದನ್ನು ನೆರವೇರಿಸಿ ಪೊರೆಯಬೇಕು." ಎನ್ನಲು ಆತನ ಬವಭುಜ ಅದರಿತು.

ಅಂದು ಗುರುವಾರ ದಿನ, ತಾನು ಮನೆಯಿಂದ ಹೊರಟು ಊರ ಹೊರಗಿನ ಒಂದು ಶಿವಾಲಯದೊಳಗೆ ಬಂದು ಕುಳಿತನು. ಮತ್ತು ಏಕ

ಚಿತ್ತದಿಂದ ಆದಿಶೇಷನನ್ನು ಧ್ಯಾನಿಸಿದನು. ಕೂಡಲೆ ಒಂದು ಬಿಲದ್ವಾರ ದಿಂದ ಪರಶಿವನೇ ಸರ್ಪರೂಪದಿಂದ ಬಂದನು. ಸಿದ್ಧನು ಅದನ್ನು ಈಕ್ಷಿಸಿದ ಕೂಡಲೆ ಪುರಜನರನ್ನು ಕೂಡಿಸಲು ಚಿಟ್ಟನೇ ಚೀರಿ ಬೊಬ್ಬೆಯನಿಟ್ಟನು. ತರಳನ ಆರ್ತಸ್ವರವನ್ನು ಕೇಳಿ ಪುರಜನರು, ತಾಯ್ತಂದೆಗಳು ಸಹಿತ ಒತ್ತರದಿ ಓಡುತ್ತ ಅಲ್ಲಿಗೆ ಬಂದರು. ಅವರ ಸಮುಕ್ಷಮ ಸಿದ್ಧನ ಮೊಣಕಾಲಿಗೆ ಸರ್ಪವು ಕಚ್ಚಿತು. ಸರ್ವರು ಅದನ್ನು ಕಂಡು ಗಡಬಡಿಸಿ ಹಾವು ಕೊಲ್ಲುವ ಯತ್ನ ಮಾಡುವಷ್ಟರಲ್ಲಿ ಅದು ಒಂದು ಸ್ಥಾನದಲ್ಲಿ ಅಡಗಿತು. ಜನರು ಅಚ್ಚರಿ ಗೊಂಡು ಹಾವನ್ನು ಹುಡುಕ ಹತ್ತಿದರು ಅಷ್ಟರಲ್ಲಿ ಸಿದ್ಧನಿಗೆ ವಿಷವೇರಿ ತನುವಿಗೆಲ್ಲ ವ್ಯಾಪಿಸಿತು. ಮತ್ತು ಅವನ ಪ್ರಾಣವನ್ನು ಪುರೀತತಿಗೆ ಏರಿ ಸುತ್ತ ಚಿತ್ತವನ್ನು ನಿಸ್ತೇಜವಾಗುವಂತೆ ಮಾಡಿತು. ಆಗ ಸಿದ್ಧನು ಶಿವ ನಾಮವನ್ನು ಸ್ಮರಿಸುತ್ತ ಧರಣಿಗೆ ಒರಗಿದನು. ಆತನ ಬಾಯೊಳಗೆ ಬುರುಗು ಬರಹತ್ತಿತು.

ಪದ — (೧೩–೧೬ ವರೆಗೆ) **ದೇವಮುಲ್ಲಮ್ಮನು ಈಶ್ವರನನ್ನು ಬೈದದ್ದು.**

ಕಂದನ ಸ್ಥಿತಿಯನ್ನು ಕಂಡು ತಂದೆ ತಾಯ್ಗಳಿಗೆ ಮೂರ್ಛೆ ಬಂದು ಕತ್ತರಿಸಿದ ಕದಳಿ ಧರಣಿಗೆ ಉರುಳಿದಂತೆ ನೆಲಕ್ಕೆ ಬಿದ್ದರು. ಕೂಡಿದ ಜನ ರಲ್ಲಿ ಕೆಲವರು ತಂದೆ ತಾಯ್ಗಳನ್ನು ಮತ್ತೆ ಹಲವರು ಮಗುವನ್ನು ಉಪಚರಿಸ ಹತ್ತಿದರು. ಎಲ್ಲ ಜನರು, "ನಮ್ಮ ಪೂರ್ವ ಪುಣ್ಯದಿಂದ ಈ ಮಹಿಮನು ಇಂಥ ಗರ್ವರಹಿತರ ಮಗನಾಗಿ ನಮಗೀಗ ಲಭಿಸಿದ್ದನು. ಇಂಥವನನ್ನು ಉರ್ವಿ ಯೊಳಗೆ ಉಳಿಸದೆ ಕರದೊಳಗಿರ್ದ ಶುಕನನ್ನು ಬಿಡಾಲ [ಬೆಕ್ಕು] ಒಯ್ದಂತೆ ಸರ್ಪನು ಒಯ್ದನು. ಅಕಟಕ್ಟ" ಎಂದು ಮರುಗಹತ್ತಿದರು. ಎಲ್ಲಿ ನೋಡಿದರೂ ಸುತನ ವರ್ಣನೆ, ಎತ್ತ ನೋಡಿದರೂ ಗೋಳಿಡುವ ಧ್ವನಿ ಹಾಯ್ ! ಹಾಯ್ !! ನಾವಿದನು ಕಣ್ಣಿನಿಂದ ನೋಡಬಾರದು ಎಂದು ಎಲ್ಲ ಜನರೂ ಹಾಹಾಕಾರ ಮಾಡಹತ್ತಿದರು. ಎಲ್ಲರ ಮುಖಗಳು ಬಾಡಿ ದವು. ಕಣ್ಣೀರಿನಿಂದ ವಸ್ತ್ರಗಳು ಒದ್ದೆಯಾದವು. ಹೀಗೆ ಎಲ್ಲರೂ ಕೈಹು ಶೋಕದ ಕಡಲೊಳು ಮುಳುಗಿದರು. ಇಂಥ ಸಹಿಸಲಸಾಧ್ಯ ಭಯಾನಕ ವಾದ ಸಮೂಹದಲ್ಲಿ ದಂಪತಿಗಳೀರ್ವರು ಮೂರ್ಛೆಯಿಂದ ಎಚ್ಚತ್ತು

ಗಡಬಡಿಸಿ ಗೋಳಿಡುತ್ತ "ಹೇ ಕಂತು ಹರನೆ', ಪ್ರೀತಿಯಿಂದ ನೀನು ಇಂಥ ಮಹಾ ಮಹಿಮ ಜ್ಞಾನ ಸಂಪನ್ನನಾದ ಸುಪುತ್ರನನ್ನು ಕೊಟ್ಟು ಏಳು ವರುಷಕ್ಕೆ ಮೃತ್ಯುದೇವಿಯ ಬಾಯ್ಗೆ ಅವನನ್ನು ತುತ್ತು ಮಾಡಿದೆಯಾ! ನೀನು ಕೊಟ್ಟ ಕಂದನ ಕುತ್ತಿಗೆ ನೀನೇ ಕೊಯ್ದೆಯಾ? ನಿನಗೆ ಕರುಣೆ ಎಷ್ಟೂ ಬರಲಿಲ್ಲವೇ? ನಿಷ್ಕರುಣಿ" ಎಂದು ಗೋಳಿಟ್ಟು ಕಡುಸಂಕಟದಿಂದ ತಾಯಿಯು ಶಿವನನ್ನು ಕೆಳಗಿನಂತೆ ಶಪಿಸಿದಳು.

ಹತ್ತಲಿನ್ನಯ ಶಾಪವದು ಯಾ!
ವತ್ತು ಮಸಣದೆ ವಾಸಮಾಡುತ |
ನಿತ್ಯ ಭೂತದೊಳಾಡು ಪೆಣಗಳ ಬೂದಿ ಬಡಕೊಂಡು ||
ನಿನ್ನ ಫಣಿಯೊಳು ಕೆಂಡವಿಕ್ಕಲಿ |
ನಿನ್ನ ನೆತ್ತಿಗೆ ನೀರು ಹೊಯ್ಯಲಿ |
ನಿನ್ನ ಪಡೆದವರೆಲ್ಲದಾಗಲಿ ಪ್ರಳಯ ಕಾಲದಲಿ ||
ನಿನ್ನ ಸಂಪದ ಲಯವು ಪೊಂದಲಿ |
ನಿನ್ನ ಕರದೊಳಗೋಡು ಬರಲಿ |
ನಿನ್ನ ಪುತ್ರನ ಒಡಲು ಬಿರಿಯಲಿ ಪರಮ ನಿರ್ವಾಣಿ ||
ನಿನ್ನ ಕೊರಳಿಗೆ ಹಾವು ಸುತ್ತಲಿ |
ನಿನ್ನ ಬಾಯೊಳು ವಿಷವ ಸುರಿಯಲಿ |
ನಿನ್ನ ವೃತ್ತಿಯು ಬಿಕ್ಕೆ ಬೇಡುವವಾಗಲಿಯನಾದಿ ||
ನಿನ್ನ ವಸನವು ಚರ್ಮವಾಗಲಿ |
ನಿನ್ನ ಸತಿಯನ್ನಸುರನೊಯ್ಯಲಿ |
ನಿನ್ನ ಭಕ್ತನೆ ನಿನ್ನ ಸುಡಲಿಕೆ ಬೆನ್ನು ಹತ್ತಿರಲಿ ||

ಹೀಗೆ ಸಾಧ್ವಿ ದೇವಮಲ್ಲಮ್ಮನು ಕಂದನನ್ನೆತ್ತಿ ತಂದು ಗಂಡನ ಮುಂದೆ ಹಾಕಿದಳು. ಆಗ ಗುರುಶಾಂತಪ್ಪನು ತುಂಬಿದ ಕಣ್ಣುಗಳಿಂದ ಕಂದನೇ, ಸುಂದರಾಂಗನೆ, ಚಂದ್ರವದನನೆ ಕೊಂದನೇ ನಿನ್ನನ್ನು ಶಿವನು? ಆನಂದವಾಯಿತೇ ಈಗ ಅವನಿಗೆ? ಹಾಯ್! ಹಾಯ್!! ಎಂದು ಹಲಬುತ್ತ ದುಃಖಾರ್ಣವದಲ್ಲಿ ಬೆಂದು ತಳಮಳಿಸಿದನು. ದೇವಮಲ್ಲಮ್ಮನು ಮತ್ತೆ

ಮಗನ ಮುಖದಲ್ಲಿ ಮುಖವಿಟ್ಟು, ಕಂದಾ ! ಮಗನೆ ! ನೀನು ಶಾಲೆಯ ಜಾಣಗುರುಗಳಿಗೆ ನೀವು ಜಡಮತಿಗಳೆಂದು ಹೇಳಿ ಅವರಿಗೆ ಪ್ರಣವಾರ್ಥ ಹೇಳಿ ತಿಳಿಸಿದಿ. ಸತ್ತ ಮಹಿಷಿಗೆ, ಸತ್ತ ಹಾವಿಗೆ, ಸತ್ತ ಮಗನಿಗೆ ಪ್ರಾಣ ಕೊಟ್ಟು ಅತುಲ ಮಹಿಮೆ ದೋರಿದಿ. ಇಂಥ ಮಹಿಮಾನ್ವಿತ ಮಗನನ್ನು ನಾನೆಂತು ಮರೆಯಲಿ ? ಕ್ಷಿತಿಯೊಳಗಿನ್ನೆಂತು ಬದುಕಲಿ ? ಅಯ್ಯೋದೇವರೇ'' ಎಂದು ಕಡು ದುಃಖದಿಂದ ಸಂತಪಿಸುತ್ತ ತತ್ತರಿಸಿ ಭೂಮಿಗೆ ಬಿದ್ದಳು.

### (ಪದ-- ೧೭--೩೦ ರ ವರೆಗೆ) ಈಶ್ವರನು ಜಂಗಮರೂಪದಿಂದ ಬಂದು ಸಿದ್ಧನನ್ನು ವೈದ್ಯೋಪಚಾರದಿಂದ ಬದುಕಿಸಿ ಬ್ರಹ್ಮಚರ್ಯಾಶ್ರಮವನ್ನು ಕೊಟ್ಟಿದ್ದು

ಅಷ್ಟರಲ್ಲಿ ಶಿವನು ಪ್ರಮಥಗಣಗಳೊಡನೆ ಜಂಗಮನ ವೇಷ ತಾಳಿ ''ನಾವು ಸರ್ಪದಿಂದ ಕಡಿಸಿಕೊಂಡು ಸತ್ತವರನ್ನು ಬದುಕಿಸಬಲ್ಲೆವು,'' ಎಂದು ಸಾರುತ್ತ ಅಲ್ಲಿಗೆ ಬಂದನು ಆಗ ಎಲ್ಲ ಜನರು, "ನಮ್ಮ....ಮಗನನ್ನು ಬದುಕಿಸಿರಿ'' ಎಂದು, ಬಂದ ಮಹಿಮನ ಪಾದಕ್ಕೆ ನಮಿಸಿ ಬೇಡಿಕೊಂಡರು.

ಆಗ ಜಂಗಮನು ಸಿದ್ಧನಿರುವಲ್ಲಿಗೆ ಬಂದು ಅವನ ಸರ್ವಾಂಗಗಳನ್ನು ಒಂದೊಂದಾಗಿ ಮುಟ್ಟುತ್ತ ಜೀವಿಸುವ ಲಕ್ಷಣವಿರುವ ಒಂದೊಂದನ್ನೇ ಪರಿಶೋಧಿಸಹತ್ತಿದನು ನಡುನೆತ್ತಿಯಲ್ಲಿ ಚಲಿಸುತ್ತಿರುವ ಒಂದು ಸುಳಿಗೂದಲನ್ನು ಕಂಡು ಜಂಗಮರು ದಂಪತಿಗಳಿಗೆ ಹೇಳುತ್ತಾರೆ, ''ಇವನು ಜಗತ್ತಿಗೆ ಗುರುವಾಗುವನು. ಇವನಿಗೆ ಮನೆ ಬಿಟ್ಟು ಗುರುಗಳನ್ನು ಆರಿಸಿಕೊಂಡು ಅವರಿಂದ ಬೋಧ ಪಡೆಯುವದಕ್ಕೆ ನೀವು ಸಂತೋಷದಿಂದ ಅಪ್ಪಣೆ ಕೊಡುತ್ತೇವೆಂದು ನಮಗೆ ವಚನ ಕೊಟ್ಟಿದ್ದಾದರೆ ಇವನನ್ನು ಬದುಕಿಸುವ ಯತ್ನ ಮಾಡುತ್ತೇವೆ. ಇಲ್ಲವಾದರೆ ಬಂದ ಹಾದಿಗೆ ಸುಂಕವಿಲ್ಲನೆಂಬಂತೆ ಹೊರಟು ಹೋಗುತ್ತೇವೆ,'' ಎಂದರು. ಆಗ ಸಿದ್ಧನ ತಂದೆ-ತಾಯಿಗಳು ''ನಮ್ಮ ಮಗನು ಭೂಮಿಯ ಮೇಲೆ ಎಲ್ಲಿಯಾದರೂ ಜೀವಿಸಿಕೊಂಡಿರಲಿ. ಅವನು ಬದುಕಿದರೆ ಸಾಕು. ಮೊದಲು ಅವನನ್ನು ಬದುಕಿಸಿರಿ. ಅವನಿಗೆ ಗುರುವನ್ನು ಆರಿಸಲು ಅಪ್ಪಣೆ ಕೊಡುತ್ತೇವೆ. ಅದರಂತೆ ತಮಗೆ ವಚನ ಕೊಡುತ್ತೇವೆ,'' ಎಂದು ಹೇಳಿ ನಮಿಸಿದರು.

ಕೂಡಲೆ ಆ ಜಂಗಮನು ಮಂತ್ರಿಸಲು ಅಡಗಿದ ಸ್ಥಳದಿಂದ ಸರ್ಪವು ತಕ್ಷಣ ಬಂದಿತು. ಕಚ್ಚಿದ ಸಿದ್ಧನ ಗಾಯಕ್ಕೆ ಪುನಃ ಕಚ್ಚಿ ವಿಷವೆಲ್ಲವನ್ನು ಹೀರಿತು. ಕೂಡಲೆ ನರವಿಷವು ಸರ್ಪಕ್ಕೆ ಅಡರಿ ಮೂರ್ಛೆ ಹೊಂದಿತು. ಜಂಗಮನು ಪುನಃ ಸರ್ಪಕ್ಕೆ ಮಂತ್ರಿಸಿ ಹುಡುಗನ ನೇತ್ರ ಮತ್ತು ಗಾಯಕ್ಕೆ ಔಷಧ ಲೇಪನ ಮಾಡಿದನು. ಕೂಡಲೆ ಸಿದ್ಧನ ಮೂರ್ಛೆ ತಿಳಿದು ಎದ್ದು "ಶಿವಶಿವಾ" ಎಂದು ಕಣ್ತೆರೆದನು. ಆಗ ಎಲ್ಲರೂ ಕಡು ಆನಂದ ಶರಧಿಯಲ್ಲಿ ಮುಳುಗಿದರು. ಅಷ್ಟರಲ್ಲಿ ಆ ಸರ್ಪವು ಎದ್ದು ಸದ್ಭಕ್ತಿಯಿಂದ ಘನಮಹಿಮನಾದ ಸಿದ್ಧನ ಪಾದಕ್ಕೆ ನಮಿಸಿ ಅವನ ಶಿರದ ಮೇಲೇರಿ ಹೊಳೆಯುವ ತನ್ನ ಹೆಡೆಯನ್ನು ತೆಗೆದು ಆಡಹತ್ತಿತು. ಆಗ ಸಿದ್ಧನು ಅವರೆಲ್ಲರಿಗೂ ಅಗ್ನಿನೇತ್ರವುಳ್ಳ ಪರಶಿವನಂತೆ ಕಂಡನು.

ಬಳಿಕ ಆ ಜಂಗಮರು ಅದೇ ಗುಡಿಯಲ್ಲಿ ಸಿದ್ಧನಿಗೆ ಶಾಸ್ತ್ರವಿಧಿವತ್ ಸ್ನಾನ ಮಾಡಿಸಿದರು. ಮತ್ತು ಅವನ ಅಂಗಕ್ಕೆಲ್ಲ ಭಸ್ಮಲೇಪನ ಮಾಡಿದರು. ಪ್ರೀತಿಯಿಂದ ಪೂಜಾ ವಿಧಿಗಳನ್ನು ತೀರಿಸಿ ದೀಕ್ಷೆಯನ್ನಿತ್ತರು.

ನಂತರ ಜಂಗಮರು "ಜಗದೋದ್ಧಾರಕನೂ, ಮಹಾನುಭಾವನೂ, ಶಿವಾಂಶಸಂಭೂತನೂ ಆದ ನೀನು, ಇಂಥ ಹೀನ ಸಂಸಾರಕ್ಕೆ ಸಿಲುಕಬೇಡ. ದಿವ್ಯ ಸದ್ಗುರು ವರನನ್ನು ಸೇವಿಸಿ ಸಾನುರಾಗದಿಂದ ಅವರ ಕರುಣೆ ಪಡೆದು ಸುಜ್ಞಾನಿ ಎನಿಸುತ್ತ ದಿಗ್ವಿಜಯಿಯಾಗಿ ಮುಮುಕ್ಷುಗಳ ಉದ್ಧಾರ ಮಾಡು," ಎಂದು ಆಶೀರ್ವಾದ ಮಾಡಿದರು.

ಆಗ ಜನಸಮೂಹದಲ್ಲಿ ಒಬ್ಬನು ಮುಂದೆ ಬಂದು ಜಂಗಮರಿಗೆ ನಮಿಸಿ ಭಕ್ತಿಯಿಂದ ಕೈಜೋಡಿಸಿ "ತಾವಾರು ? ತಮ್ಮ ಹೆಸರೇನು ? ತಾವು ಎಲ್ಲಿಂದ ಬಂದಿರಿ ? ತಂದೆಗಳೇ ! ತಾವು ಇವತ್ತೊಂದು ದಿವಸ ನಮ್ಮಲ್ಲಿ ಪ್ರೇಮದಿಂದಿದ್ದು ಹೋಗಬೇಕು" ಎಂದು ಕೇಳಿಕೊಂಡನು. ಆಗ ಜಂಗಮರು "ನಾವು ದೇವನೂರಿನ ಮಠದ ಪಟ್ಟದ್ದೇವರು. ಧರಣಿಯೊಳು ನನಗೆ ಎಲ್ಲಿ ಶಿಷ್ಯರು 'ಶಿವಯ್ಯ'ನೆಂದು ಕರೆಯುವರು. ಎಂದೂ ಸಮಾಧಾನಹೊಂದದಿರುವ ಜಗಳಗಂಟಿಯರಾದ ಇಬ್ಬರು ಮಡದಿಯರು. ಹಟಮಾರಿ ಮೂರು ಮಕ್ಕಳು ಒಂದು ಮುದಿ ಎತ್ತು ಇಂಥ ಸಂಸಾರ ನನ್ನದು. ಇಂಥ ವಿಷಮ ಪ್ರಪಂಚಕ್ಕೆ

ಬೇಸತ್ತು ಸತ್ತುಹೋಗಬೇಕೆಂದು ಸಂತೋಷದಿಂದ ನಾನು ವಿಷ ಕುಡಿದೆನು. ಆದರೂ ನನಗೆ ಸಾವು ಬರಲಿಲ್ಲ. ಹೀಗಿರುವಲ್ಲಿ ನಾವು ನಿಲ್ಲುವದೆಂತು ?'' ಎಂದು ಅವರ ಅನುಮತಿ ಪಡೆದು ಅವರೆಲ್ಲರನ್ನು ಹರಸುತ್ತ ಹೊರಟು ಹೋದರು.

(ಪದ—೩೧—೪೭ ರ ವರೆಗೆ) ಸಿದ್ಧನನ್ನು ಪುರಜನರೂ

ಅಂದು ಸಿದ್ಧನನ್ನು ಸರ್ವರೂ ಪಲ್ಲಕ್ಕಿಯಲ್ಲಿ ಕೂಡ್ರಿಸಿ ಆನಂದದಿಂದ ಗ್ರಾಮದ ನಾಲ್ಕು ಬೀದಿಗಳಲ್ಲಿ ಮೆರೆಸುತ್ತ ವಿರಕ್ತ ಮಠಕ್ಕೆ ತಂದು ಇಳಿಸಿದರು ಮತ್ತು ಸಂಭ್ರಮದಿಂದ ಪೂಜಿಸಿ ಅನ್ನ ಸಂತರ್ಪಣೆ ಮಾಡಿದರು.

ನಂತರ ಒಂದು ದಿನ ಸಿದ್ಧನು, ನಾನು ಪರಮಗುರುಶೋಧನೆ ಮಾಡುವದನ್ನು ಬಿಟ್ಟು ನಿಮ್ಮ ಸತ್ಕಾರಕ್ಕೆ ಮೋಹಿಸಿ ಜನಾನುರಾಗದಿಂದ ನಿಲ್ಲುವದು ಯೋಗ್ಯವಲ್ಲ. ನನಗೆ ಪ್ರಯಾಣಕ್ಕೆ ಅಪ್ಪಣೆ ದಯಪಾಲಿಸಿರಿ'' ಎಂದು ಅವರೆಲ್ಲರ ಅನುಮತಿ ಪಡೆದು ಸರ್ವರಿಗೂ ನಮಿಸಿ, ಹೊರಡಲುದ್ಯುಕ್ತನಾದನು. ಅದನ್ನು ಕಂಡು ತಂದೆ-ತಾಯ್ಗಳು ದುಃಖಾಗ್ನಿಯಿಂದ ಬೆಂದು ನೀರು ತುಂಬಿದ ಕಣ್ಣುಗಳಿಂದ ಸಿದ್ಧನಲ್ಲಿಗೆ ಬಂದರು. ಮಗನನ್ನು ತೆಕ್ಕೆ ಬಡಿದಪ್ಪಿಕೊಂಡು ಅವನ ಮುಖವನ್ನು ಎವೆಯಿಕ್ಕದೆ ದಿಟ್ಟಿಸುತ್ತ ದೊಡ್ಡ ಧ್ವನಿ ತೆಗೆದು ''ಕಂದಾ ನಮ್ಮ ಗತಿಯೇನು ?'' ಎಂದು ಅಳಹತ್ತಿದರು. ಸಿದ್ಧನ ಮಾತಾ ಪಿತರಿಗಾದ ವ್ಯಥೆಯನ್ನು ಪುರಜನರು ಕಂಡು ಒಡಲೊಳಗೆ ಹುದುಗಿಕೊಂಡಿದ್ದ ದುಃಖವನ್ನು ತಡೆಯದೆ, ''ನಮ್ಮನ್ನು ಘಾತಮಾಡಿದನು ಶಿವನು,'' ಎಂದು ಅಳಹತ್ತಿದರು. ಸಿದ್ಧನು ಇವರೆಲ್ಲರ ಗೋಳನ್ನು ಕೇಳಿ, ''ಸುತನು ನನ್ನವನೆಂಬ ಮಮತೆಯು ನಿಮಗೆ ಭ್ರಾಂತಿಯನ್ನು ಹುಟ್ಟಿಸಿರುವದು. ಈ ಮಮತೆಯು ಗತಿಗೊಡುವ ಶಿವನಾಮವನ್ನು ಮರೆಸುವದು 'ಮಮಕಾರದಿಂದ ಮಿಕ್ಕಿದ ಬಂಧನವುಂಟೆ ?' ಎಂದು ನಿಜಗುಣರು ಹೇಳಿದಂತೆ ಮಮಕಾರವು ಮಾನವರನ್ನು ದುಃಖದ ಮಡುವಿನಲ್ಲಿ ಮುಳುಗಿಸುವದು. ಹೀಗೆ ನೀವು ನಿಜಸ್ಥಿತಿ ಕೆಡಿಸಿಕೊಳ್ಳುವದರಿಂದೇನು ಫಲ ? ಶಿವನನ್ನು ನುತಿಸಿರಿ. ''ಸಂತೋಷದಿಂದ ನನ್ನನ್ನು ಕಳುಹಿಸಿಕೊಡಿರಿ,'' ಎಂದನು. ಈ ರೀತಿ ನೀತಿಪರವಾದ ಸಿದ್ಧನ ಶ್ರುತಿಸಾರಭೂತ ಹಿತೋಪದೇಶ ವಾಕ್ಯಗಳನ್ನು ಕೇಳಿ

ತಂದೆಯು "ಮಗನೇ ! ನಾಳಿಗೊಂದು ದಿನವಾದರೂ ಇದ್ದು ಊಟಮಾಡಿ ಹೋಗಯ್ಯಾ," ಎಂದನು ಅದಕ್ಕೆ ಸಿದ್ಧನು ಸಮ್ಮತಿಸಲು, ಸರ್ವರೂ ಆತನನ್ನು ಹರಿಸಿದರು.

ಮರುದಿವಸ ಮುಂಜಾನೆ ತಂದೆ-ತಾಯ್ಗಳು ಜನಸಮೂಹದೊಡನೆ ಸಿದ್ಧನನ್ನು ವಿರಕ್ತಮಠಕ್ಕೆ ಕರೆತಂದರು. ಅಲ್ಲಿ ಅವನಿಗೆ ಮಂಗಲ ಸ್ನಾನ ಮಾಡಿಸಿದರು. ಕಂದ ಸಿದ್ಧನನ್ನು ಕೂಡಿಕೊಂಡು ಎಲ್ಲ ಜನರುಉಲ್ಲಾಸ ದೊಂದಿಗೆ ಪಕ್ವಾನ್ನ ಭೋಜನದಿಂದ ಸಂತೃಪ್ತರಾಗಿ, ವೀಳ್ಯಮೆಲ್ಲುತ್ತ ಆನಂದ ದಿಂದ ಕುಳಿತರು. ಆಗ ಸಿದ್ಧನ ಮಾತಾ–ಪಿತರು ಎದ್ದು ಮುದ್ದು ಮಗನಿಗೆ ಹೊದ್ದುಕೊಳ್ಳಲು ಒಂದು ಶಾಲನ್ನಿತ್ತರು. ಮಗನನ್ನು ಬಿಗಿದಪ್ಪಿ ಮುದ್ದಿಸಿ, "ಶುದ್ಧಮತಿ ಸಿದ್ಧನೇ, ನಮ್ಮನ್ನು ಬಿಟ್ಟುಪೋಗುವಿಯಾ ? ನಮ್ಮ ಗತಿ ಏನು?" ಎಂದು ಗೋಳಿಟ್ಟರು. ಆಗ ಸಿದ್ಧನು, "ಬುದ್ಧಿವಂತರಾದ ಮಮತೆಯ ಮೊದಲಿನ ಈರ್ವರು ಮಕ್ಕಳಿರುವರು. ಅವರನ್ನು ಹೊಂದಿ, ನಾನೇ ಅವ ರೆನ್ನುತ್ತ ತಿಳಿದು ಸುಖಿಸಿರಿ" ಎಂದು ಸಮಾಧಾನ ಹೇಳಿದನು.

ತಂದೆ-ತಾಯ್ಗಳು ಬಹು ಚಿಂತಾಕ್ರಾಂತರಾಗಿ ಗದ್ಗಗ ಕಂಠದಿಂದ ತುಂಬಿದ ಕಣ್ಣುಳ್ಳವರಾಗಿ ಮಂದವಚನೋಕ್ತಿಗಳಿಂದ "ನೀನು ಕುಲಪುತ್ರ ನಪ್ಪಾ," ಎಂದು ಪಟದೊಳಗಿನ ಗೊಂಬೆಯಂತೆ ಮೌನರಾದರು. ಮಾತಾ ಪಿತರು ಆಡುವ ಮಾತಿನ ಮರ್ಮವನ್ನು ತಿಳಿದು, ಸಿದ್ಧನು ಇವರ ಮೋಹ ಪಾಶವನ್ನು ಪರಿಹರಿಸಬೇಕೆಂದು ಈ ರೀತಿ ಹೇಳಿದನು.

"ಮನುಜ ಕುಲದ ಜನನದ ಲಾಭವಾವುದು ? ಆನಾರೆಂದು ತಿಳಿವುದು, ಅದಕ್ಕಾಗಿ ನೀವು ಗುರುಸೇವೆಯನ್ನು ಮಾಡುತ್ತ ಅವರಿಂದ ಜ್ಞಾನವನ್ನು ಪಡೆದು ಅತ್ಯಂತ ದುಃಖ ನಿವೃತ್ತಿ ಪರಮಾನಂದ ಪ್ರಾಪ್ತಿರೂಪ ಮೋಕ್ಷ ಪಡೆಯುವದರಿಂದ ಜನ್ಮದ ಸಾರ್ಥಕವು. ಅದನ್ನು ಬಿಟ್ಟು ದುಷ್ಟ ಪ್ರಪಂಚ ದಲ್ಲಿ ಧುಮುಕಿ ದುಃಖಿಸುವದು ಅನುಚಿತವು. ಸುತನ ಸೊಗಸು ಮಿಗಿಲೆನ್ನದೆ ಅತಿ ಮಮಕಾರ ತೊರೆಯಿರಿ. ಇದೇ ನಿಮ್ಮ ಅನುರಾಗವನ್ನು ವಿಹಿತ ಗುರುವಿನಲ್ಲಿಡಿರಿ "ಆರಿಗಾರೋ ಪುರಂದರ ವಿಠಲ 'ವೆಂಬಂತೆ ನನ್ನ ಕರ್ಮವೇ ನನ್ನನ್ನು ಹುಟ್ಟಿಸಿತು. ನನ್ನ ಕರ್ಮವೆ ಮಹಿಮೆದೋರಿತು. ನನ್ನ ಕರ್ಮವೆ ಸರ್ಪರೂಪದಿಂದ ಕಚ್ಚಿತು. ನನ್ನ ಕರ್ಮವೆ ಮರಳಿ ರಕ್ಷಿಸಿತು. ಸನ್ನುತರೇ ! ಪ್ರಾರಬ್ಧಕರ್ಮವನ್ನು ತಪ್ಪಿಸಲು ಯಾರಿಗೂ ಅಳವಲ್ಲ" ಎಂದು ಬೋಧಿಸಿದನು.

ಆಗ ಪುರಜನರೆಲ್ಲರೂ ವಸ್ತ್ರ, ದಕ್ಷಿಣೆ, ಗಂಧ, ಪುಷ್ಪಾದಿಗಳನ್ನು ತಂದು ಸಿದ್ಧನ ಪಾದಕಮಲಗಳನ್ನು ಪೂಜಿಸಿದರು. ತಂದೆ-ತಾಯ್ಗಳು ಮುದದಿಂದ ಶೇಷೆದಳೆದು ಆರತಿ ಬೆಳಗಿದರು. ಅದರೊಂದಿಗೆ ಎಲ್ಲರೂ ಮಂಗಳ ಗೀತೆ ಪಾಡುತ್ತ ಅವರೂ ಆರತಿ ಮಾಡಿದರು.

ಬಳಿಕ ಸಿದ್ಧನು ಬಂದ ಎಲ್ಲ ದಕ್ಷಿಣೆಯನ್ನು ಪುರದ ದೈವಕ್ಕಿತ್ತು ಹಳೆಯ ದೇವಾಲಯವ ಜೀರ್ಣೋದ್ಧಾರಕ್ಕೆ ವ್ಯಯ ಮಾಡಿರೆಂದನು. ಬಂದ ವಸ್ತ್ರಗಳನ್ನು ಬಡವರಿಗಿತ್ತು ಸರ್ವರಿಗೂ ಹಣ್ಣು ಕಾಯಿಗಳನ್ನು ಆಶೀರ್ವಾದ ಕೊಟ್ಟನು. ಬಳಿಕ ಎಲ್ಲ ಗುರುಹಿರಿಯರಿಗೆ ನಮಿಸಿ ಹೊರಡಲುದ್ಯುಕ್ತನಾದನು.

ಸಿದ್ಧನನ್ನು ಬಿಟ್ಟು ಅಗಲದಿರುವ ಸೋಮ, ಭೀಮರೆಂಬವರು, "ನಾವೂ ನಿನ್ನ ಜೊತೆಗೆ ಬರುತ್ತೇವೆ" ಎಂದು ಅವನ ಸಂಗಡ ಹೊರಟರು. ಎಲ್ಲರೂ ಕೂಡಿ ಸಿದ್ಧನನ್ನು ಪುರದ ಹೊರಗೆ ಕಳುಹ ಬಂದರು. ಮತ್ತು ಎಲ್ಲ ದೇವತೆಗಳನ್ನು ಸಿದ್ಧನ ರಕ್ಷಣೆಗಾಗಿ ಈ ರೀತಿಯಾಗಿ ಪ್ರಾರ್ಥಿಸಿದರು.

ಜಯವನೀಯವೌ ಧರಣಿಮಾತೆಯೇ ।
ಜಯವನೀಯಿರಿ ಸೂರ್ಯಚಂದ್ರರೆ ।
ಜಯವನೀಯಿರಿ ಅಷ್ಟದಿಕ್ಪಾಲಕರೆ ಕಾಲಗಳೆ ॥
ಜಯವನೀಯ್ಯೆ ಕಲಿಯ ಪುರುಷನೆ ।
ಜಯವನೀಯ್ಯೆ ದೇವದೇವನೆ ।
ಜಯವನೀಯಿರಿ ಸಿದ್ಧಗೆಲ್ಲರು ಎಂದು ಕಳುಹಿದರು ॥

ಮಂಗಲ— ಶ್ರೀ ಮಹಾ ಜಡಿಸಿದ್ಧ ಗುರುವಿಗೆ ।
ಕಾಮನಂ ಸಂಹರಿಸಿ ಮುಕ್ತಿಯ ।
ಸ್ವಾಮಿಯೆನಿಪ ಸಚ್ಚಿದಾನಂದಂಗೆ ಪೂರ್ಣಂಗೆ ॥
ಕೋಮಲ ಸುಹೃದಯಂಗೆ ಸದ್ಗುಣ ।
ದಾಮನಿಗೆ ಪರವೇದ ಮೂರ್ತಿಗೆ ।
ನಾಮರಹಿತಗೆ ಭಕ್ತಪಾಲಂಗಾನು ವಂದಿಪೆನು ॥

ಶ್ರೀಮಚ್ಚಿದ್ಘಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ ಲೀಲಾ ಚರಿತ್ರ ಕಲ್ಪದ್ರುಮದೊಳು ಗೃಹಪರಿತ್ಯಾಗವೆಂಬ ೪ ನೇ ಅಧ್ಯಾಯ ಸಮಾಪ್ತಿ.

|| ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ||



# ಗುಣಶೋಧನಾ ಕಾಂಡ

## ಅಧ್ಯಾಯ ೫.

|| ಓಂ ತತ್ಸತ್ ||

**ಶ್ರೀಗುರು ಸಿದ್ಧಾರೂಢಾಯ ನಮೋ ನಮಃ**

ಈ ಅಧ್ಯಾಯದಲ್ಲಿ ಸಿದ್ಧನು ಸೋಮ ಭೀಮರನ್ನು ಕೂಡಿಕೊಂಡ ಸಂಚಾರಕ್ಕೆ ಹೊರಟಿದ್ದು, ಸದಾಶಿವ ಪೇಟೆಯಲ್ಲಿ ಬಸವಣ್ಣನ ಮೇಲೆ ಕುಳಿತ ಆ ಮೂರ್ತಿಗೆ ಪ್ರಾಣ ಪ್ರತಿಷ್ಠೆ ಮಾಡಿದ್ದು, ಮೂರ್ತಿಗಳ ವೈಭವದ ತತ್ತ ತಿಳಿಸಿದ ವಿಷಯವಿರುವದು.

ಸ್ತುತಿ— ಮಂಗಲಾತ್ಮಾರಾಮ ಸದ್ರೂ |
ಪಂಗೆ ನಿರುತಂ ಪೊರೆವ ಚಿದ್ರೂ |
ಪಂಗೆ ಸಹಜಾನಂದ ನಿರ್ಗುಣ ನಿತ್ಯ ಪೂರ್ಣಂಗೆ ||
ಸಂಗರಹಿತಗೆ ನಿರವಯುಗೆ ಪರ
ಮಂಗೆ ಸುನಿರಾಕಾರ ನಿಸ್ಸೀ |
ಮಂಗೆ ಮೂಜಗದಾದಿ ಬೀಜಂಗಾನು ವಂದಿಪೆನು ||

**ಪದ— (೧—೧೪ ರ ವರೆಗೆ) ಸಿದ್ಧನು ಸೋಮ ಭೀಮರನ್ನು ಕೂಡಿಕೊಂಡು ಸಂಚಾರಕ್ಕೆ ಹೊರಟಾಗ, ಆಶೆ ಇಲ್ಲದುದೇ ತೃಪ್ತಿಯೆಂದು ಬೋಧಿಸಿದನು.**

ಅತ್ತ ಸಿದ್ಧನು ತನ್ನ ಗೆಳೆಯರಾದ ಸೋಮ, ಭೀಮರೊಂದಿಗೆ ಮುದದಿಂದ ಮುಂದೆ ಸಾಗಿದನು. ಹೋಗುತ್ತ ಮಾರ್ಗದಲ್ಲಿ ಸೋಮ, ಭೀಮರು 'ಸಿದ್ಧಾ ನೀನು ಊರು ಬಿಟ್ಟು ಏತಕ್ಕೆ ಮತ್ತು ಎಲ್ಲಿಗೆ ಹೋಗುವದು" ? ಹೇಳೆಂದರು.

"ಬುದ್ಧಿಯುತ ಗೆಳೆಯರೆ, ಕೇಳಿರಿ. ಬಾಲ್ಯದೊಳು ಮಿಗೆ ಶುದ್ಧ ಮನದಿಂದ ಎಲ್ಲವನ್ನು ತೊರೆದು ಸದ್ಗುರುವರನನ್ನು ಶೋಧಿಸಬೇಕು. ಆಪ್ತ, ಅಂಗ, ಸ್ಥಾನ, ಸದ್ಭಾವ ಸೇವಾಸಮೇತನಾಗಿ ಅವರ ಕೃಪೆಗೆ ಪಾತ್ರರಾಗಬೇಕು. ಹೀಗೆ ಅವರ ಕೃಪೆಪಡೆದು ಜೀವಬ್ರಹ್ಮೈಕ್ಯಜ್ಞಾನ ಪಡೆದುಕೊಳ್ಳುವದೇ ಮಾನವನ ಮುಖ್ಯ ಕರ್ತವ್ಯವು. ಅದನ್ನು ಈ ಬಾಲ್ಯದಲ್ಲಿಯೇ, ಸಾಧಿಸಿಕೊಳ್ಳಬೇಕು. ಯಾಕಂದರೆ ಈ ಬಾಲ್ಯಾವಸ್ಥೆ ಅಡಗಿ ಯೌವನಾವಸ್ಥೆ ಒದಗಿತೆಂದರೆ ಮನವು ವಿಷಯಗಳಿಗೆ ಮೋಹಿಸಿ ಆ ವಿಷಯದಲ್ಲಿಯೇ ಲೋಲುಪ್ತವಾಗುತ್ತದೆ. ಆಗ ಅದಕ್ಕೆ ಮೋಕ್ಷದ ಅಪೇಕ್ಷೆ ಆಗಲಾರದು ಇನ್ನು ಮುಪ್ಪಿನಾವಸ್ಥೆಯಲ್ಲಿ ತಾನು ಅನುಭವಿಸಿದ ಸಂಸ್ಕಾರರೂಪದ ವಾಸನೆಗಳು ತರಂಗಗಳಂತೆ ಬಿಡುವಿಲ್ಲದೆ, ಮೇಲಿಂದಮೇಲೆ ಬಂದು ಬಂದು ಮನಸ್ಸಿಗೆ ಅಪ್ಪಳಿಸುವವು. ಆವಾಗ್ಗೆ ಸವತಿಯಿಂದ ಹೊಡೆಸಿಕೊಂಡು ಗಂಡನ ಮನೆಯಿಲ್ಲೀದೆ ತವರುಮನೆಗೆ ಹೊರಟು ಹೋಗುವ ಸತಿಯಂತೆ ಜ್ಞಾಪಕ ಶಕ್ತಿಯು ಉಳಿಯದೆ ಹೊರಟು ಹೋಗುವದು. ಅಂಥ ಬುದ್ಧಿಯ ಹೀನ ಸ್ಥಿತಿಯಲ್ಲಿ ಸದ್ಗತಿಯಾಗುವ ಬಗೆ ಎಂತು ? ಇದು ಅಲ್ಲದೆ ಈ ಹೀನ ಜಡ ದೇಹವು ಗಾಳಿಗೊಡ್ಡಿದ ದೀಪದಂತೆಯೂ ನೀರಮೇಲಿನ ಗುರುಳೆಯಂತೆಯೂ ಅನಿತ್ಯವು ಆದ. ಕಾರಣ ಚಿಕ್ಕವಯಸ್ಸಿನಲ್ಲಿಯೇ ಮನಸ್ಸನ್ನು ವಿಷಯಾದಿಗಳಿಗೆ ಹಚ್ಚದೆ ಬ್ರಹ್ಮನಲ್ಲಿ ಮೇಳಗೊಳಿಸುವ ಸದ್ಗುರುಶೋಧನೆಗೆ ನಾನೀಗ ಹೊರಟಿರುವೆನು," ಎಂದನು ಸಿದ್ಧ.

ಆಗ ಸೋಮ ಭೀಮರು, ಸಿದ್ಧನ ಬೋಧೆಯನ್ನು ಕೇಳಿ "ಹಾಗಾದರೆ

ಪರಮಗುರು ಶೋಧನೆಗೆ ನಾವೂ ಸಿದ್ಧರಾದೆವು, ನಡೆ" ಎಂದು ಸಿದ್ಧನು ಅವರನ್ನು ಕೊಡಿಕೊಂಡು ಮುಂದಿನಗ್ರಾಮಕ್ಕೆ ಬರಲು ಹುಟ್ಟಿದರು. ಬಳಿಕ ಸೋಮ, ಭೀಮರಿರ್ವರು ಹಸಿವೆಯಿಂದ ಕಳವಳಿಸಿ, "ಸಿದ್ಧಾ ಈ ಊರೊಳಗೆ ನಮ್ಮನ್ನು ಊಟಕ್ಕೆ ಯಾರು ಕರೆಯುವರು" ? ಎಂದು ಕೇಳಿದರು.

ಸಿದ್ಧನು ಅವರಿಗೆ ಹೇಳುತ್ತಾನೆ. "ನೀವು ಗುರುಶೋಧಕರೋ ? ಕೊಳೆಯುವ ಅನ್ನಶೋಧ ಮಾಡುವವರೊ ? ಇದು ನಿಜಮೋಕ್ಷಾರ್ಥಿಗಳಿಗೆ ಯೋಗ್ಯವಲ್ಲ. ಅನ್ನಕ್ಕಿಂತ ಅಧಿಕವೆನಿಪ್ಪ ತೃಪ್ತಿಗೆ ಶಿವಧ್ಯಾನ. ಸಾಧನವಾಗಿರುವದು. ಅದನ್ನು ತಿಳಿಯದೆ ನೀವು ಹಸಿವೆಯ ಕಡೆಗೆ ಲಕ್ಷ್ಯಕೊಟ್ಟದ್ದಾದರೆ ಬಾಧೆ ಹೆಚ್ಚಾಗುವದು. ಅದುಕಾರಣ ಗೆಳೆಯರೆ, ಅದನ್ನು ತೊರೆದು ಶಿವಧ್ಯಾನ ಮಾಡಿರಿ ಎಂದು ಹೇಳಿದನು.

ಅದಕ್ಕೆ ಸೋಮ ಭೀಮರು, "ಪೂರ್ವದಲ್ಲಿ ಪ್ರಾಣ ಮತ್ತು ಇಂದ್ರಿಯಗಳ ವಿವಾದ ಕಾಲದಲ್ಲಿ ಪ್ರಜಾಪತಿಯು ಪ್ರಾಣಕ್ಕೆ ಮುಖ್ಯತ್ವ ಕೊಟ್ಟಿರುವನು. ಮತ್ತು ಅನ್ನಗತ ಪ್ರಾಣವೆಂದು ಶ್ರುತಿ ಸಾರುವದು. ಅಂದ ಬಳಿಕ ಪ್ರಾಣಕ್ಕೆ ಅನ್ನಕೊಡುವದರಿಂದ ಮನವು ತೃಪ್ತಿಹೊಂದಿ ಧ್ಯಾನ ಸಮನಿಸುವದು ಆದುಕಾರಣ ಪ್ರಾಣಕ್ಕೆ ಮೊದಲು ಅನ್ನಬೇಕು," ಎಂದರು.

## ಕ್ಷುಧೆಯ ಬಾಧೆಗೆ ನಿವಾರಣ ಉಪಾಯ ಹೇಳಿದ್ದು

ಅದಕ್ಕೆ ಸಿದ್ಧನು, "ಸ್ನೇಹಿತರೇ, ನಿಮಗೆ ಇಂಥ ತಾತ್ವಿಕಜ್ಞಾನವಿರಲಾಗಿ ನೀವು ಕಂತುಹರನ ಧ್ಯಾನವನ್ನು ತೊರೆದು ಹಸಿವೆಗೆ ಚಿಂತಿಸುವದು, ಅನುಚಿತವು. ಶಾಂತಿ ಇಲ್ಲದೆ ನಿಮ್ಮ ಮನವು, ಜಲರಾಗ್ನಿದಳದೊಳು ನಿಂತಿರಲು, ನಿಮಗೆ ಹಸಿವೆ ಎನಿಸುವದು. ಜೀವನು ಮನವೆಂಬ ರಥವನ್ನೇರಿ ಪ್ರಾರಬ್ಧ ಕರ್ಮವಶದಿಂದ ಪೂರ್ವದಿಕ್ಕು ಮೊದಲು ಮಾಡಿ ಈಶಾನ್ಯದ ವರೆಗೆ ಎಂಟೂ ದಳಗಳಲ್ಲಿ ತಿರುಗುವಾಗ ಅವನಿಗೆ ಕ್ರಮದಿಂದ ಭಕ್ತಿ, ಹಸಿವೆ, ಸಿಟ್ಟು, ಪಾಪ, ವಿನೋದ, ಸಂಚಾರ, ರತಿಕ್ರೀಡೆ, ಮತ್ತು ಧನಧಾನ್ಯಗಳು ಈ ಎಂಟು ವೃತ್ತಿಗಳು ತೋರುತ್ತವೆ. ಈ ಎಂಟೂ ದಳಗಳನ್ನು ಬಿಟ್ಟು ಮನವು ಕರ್ಣಿಕಕ್ಕೆ ಬರಲು ತಾನು ಚಲಿಸದೆ ಶಿವಧ್ಯಾನದೊಳಡಗುವದು. ಆಗ ಅಲ್ಲಿ ತುಂಬಿರ್ದ ಸುಧೆಯನ್ನು ಕುಡಿಯಲು, ಆಗಳೆ ಹಸಿವು ಹಿಂಗಿ, ಸುಖ ಪ್ರಾಪ್ತವಾಗುವದು

ಹಸಿವು ಪುಟ್ಟುವದು ಹಿಂಗುವದು ಪ್ರಾಣದ ಸ್ವಭಾವವಾದ್ದರಿಂದ, ಅದು ಆತ್ಮ ಗುಣವಲ್ಲ. ಮತ್ತು ಅನ್ನದ ಶಾಂತಿ ಎಂಬುವದು ಹತ್ತು ಗಳಿಗೆಯ ವರೆಗೆ ಇದ್ದು ನಶಿಸುತ್ತವೆ. ಪುನಃ ಹಸಿವು ಪುಟ್ಟುವದರಿಂದ ಅದು ಸತ್ಯಸುಖವಲ್ಲ. ಆದರೆ ಪರತರ ಧ್ಯಾನಯೋಗದಿಂದ ತಾಪತ್ರಯಗಳು ಅಡಗಿ ನಿತ್ಯ ಸುಖ ಪ್ರಾಪ್ತವಾಗುವದನ್ನು ಗೆಳೆಯರೇ ಹೇಳುತ್ತೇನೆ ಕೇಳಿರಿ. ಸಿದ್ಧಾಸನದಲ್ಲಿ ಕುಳಿತು ಮನಸ್ಸನ್ನು ದೃಷ್ಟಿಯನ್ನು ಧ್ಯಾನದಿಂದ ಪೂರ್ಣ ನಿಲ್ಲಿಸಬೇಕು. ಒಳ ಹೊರಗೆ ಚಲಿಸುತ್ತಿರುವ ಪ್ರಾಣವನ್ನು ತಡೆದು ಸುಷುಮ್ನಾ ನಾಡಿಯೊಳಗೆ ಬಲುಮೆಯಿಂದ ಏರಿಸಬೇಕು. ಆವಾಗ್ಗೆ ಮೈಮರೆದು ಆ ಜಠರಾಗ್ನಿಯು ಕ್ಷೀಣಿಸುವದು. ಆಗ ಅನ್ನವಿಲ್ಲದೆ ಕ್ಷುತ್ತಾಪವಡಗಿ ಚಿತ್ತವು ಸ್ಥಿರವಾಗಿ ನಿಲ್ಲುವದು. ಆವಾಗ್ಗೆ ತುಷ್ಟಿ, ಶಾಂತಿಗಳು ತನು-ಮನಗಳಿಗೆ ತೋರುವವು," ಎಂದು ಸೋಮ-ಭೀಮರಿಗೆ ಹೇಳಿದನು.

### [ಪದ:-೧೫-೨೭] ಸದಾಶಿವ ಪೇಟೆಯಲ್ಲಿ ಬಸವಣ್ಣನ ಮೇಲೆ ಕುಳಿತು ಮೂರ್ತಿಯ ಪ್ರಾಣಪ್ರತಿಷ್ಠಾಪನೆ ಮಾಡಿದ್ದು

ಸೋಮ ಭೀಮರೀರ್ವರು ಸಿದ್ಧನ ಬೋಧೆಯನ್ನು ಕೇಳಿ "ಸಿದ್ಧಾ ನೀನಾಡಿದಂತೆ ಆಗಲಯ್ಯಾ, ನಡೆ" ಎಂದರು. ಸಿದ್ಧನು, "ಇಂದು ಹೋಗಿ ಸೇರುವದು ನಳದುರ್ಗಕ್ಕೋ, ಅಥವಾ ಸದಾಶಿವಪೇಟೆಗೋ," ಎಂದು ಕೇಳಿದನು. ಆಗ ಭೀಮನು, "ಆ ನಳದುರ್ಗವು ದೂರವಿದೆ. ಈ ಸದಾಶಿವನ ಪೇಟೆಗೆ ನಾವೆಲ್ಲರೂ ಹೋಗುವದು ಲೇಸು," ಎಂದನು. ಅದಕ್ಕೆ ಮೂವರು ಒಪ್ಪುತ್ತ, ಬೇಸಿಗೆ ಬಿಸಿಲನ್ನು ಸಹಿಸುತ್ತ ಅರ್ಧಗಾವುದ ಹೋಗಲು ಆ ಪುರದ ಬಳಿಯಲ್ಲಿರುವ ಬಸವೇಶ್ವರ ದೇವಾಲಯಕ್ಕೆ ನಡೆದರು. ಅಲ್ಲಿ ವಿಶ್ರಾಂತಿ ಹೊಂದುವದಕ್ಕಾಗಿ ಗುಡಿಯ ನಡು ರಂಗಮಂಟಪದಲ್ಲಿ ಪವಡಿಸಿದರು. ಅವರಲ್ಲಿ ಉಲ್ಲಾಸಿತ ಮುಖ ಸಿದ್ಧನು ಆನಂದದಿಂದ ಕುಣಿಯುತ್ತ ಗುಡಿಯೊಳಗೆ ಪೊಕ್ಕು ನಂದಿಯ ಮೇಲೆ ದೇವಭಾವದಿಂದ ಆರೋಹಣನಾಗಿ ಕುಳಿತನು. ಅತ್ತ ಆ ದೇವರ ಅರ್ಚಕನು ಹೊತ್ತಿಗನುಸರಿಸಿ ಒತ್ತರದಿಂದ ಪೂಜೆ ಮಾಡಲು ಬಂದನು. ಬಸವನ ಮೇಲೆ ಕುಳಿತಿರುವ ಸಿದ್ಧನನ್ನು ಕಂಡು, ಪೂಜಾರಿಯು ಸಿಟ್ಟಿನಿಂದ ಗರ್ಜಿಸುತ್ತ, "ಎಲೋ ಕತ್ತೆಯೇ ನೀನಾರು ?

ಹೊಲೆಯನೋ, ಬೇಡನೋ, ಕುರುಬನೋ, ಏನು ತುರುಕನೋ ? ಯಾ ನಿರುವಿ ? ನೀನು ಶೈವನಾಗಿದ್ದರೆ ನಿನ್ನ ಪುಣ್ಯವನ್ನು ಚೂರುಗಡಿಯುತ್ತ ಸೂರೆಮಾಡಿದೆಯಾ ? ನಿನ್ನ ಭಕ್ತಿ ಭಾವವನ್ನು ಮತ್ತು ಶ್ರೇಷ್ಠ ಧರ್ಮವನ್ನು ಮಣ್ಣುಗೂಡಿಸಿ ಬಿಟ್ಟೆಯಾ ?" ಎಂದು ಬೈದನು.

ಧೀರ ಸಿದ್ಧನು ಅವನಿಗಂಜದೆ, "ನಾನು ನಿಜವಾಗಿ ವೀರಶೈವನಿರುವೆನು. ನನ್ನ ಶ್ರೇಷ್ಠ ಭಕ್ತಿ-ಭಾವವನ್ನು ಶಿವನಲ್ಲಿ ಸೂರೆಗೊಂಡಿರುವೆನು. ನಾನು ವಿಚಾರದಿಂದ ನನ್ನ ಶಿಲೆಯ ಪೂಜೆಯ ಕೊಳಕೆಭಾವವನ್ನು ಮಣ್ಣುಗೂಡಿಸಿರುವೆನು. ಅದು ಬಳಲುತ್ತ ಬಂದು ನಿಮ್ಮಂಥ ಮಂದಮತಿಗಳ ಹೃದಯ ಸೇರಿ ಕೊಂಡಿತು. ಬಳಿಕ ನಾನು ನನ್ನ ಎಲ್ಲ ಪುಣ್ಯವನ್ನು ಪರಹಿತಕ್ಕಾಗಿ ಶ್ರಮಿಸಿ ಸುಟ್ಟಿರುವೆನು. ಅದು ಹೊಳೆಯುವಂಥ ಚೂರ್ಣವಾಗಿ ನಿಮ್ಮ ಫಣೆಗೆ ಭಸ್ಮ ವಾಯಿತು" ಎಂದನು.

ಪೂಜಾರಿಯು ಮತ್ತೆ ರೊಚ್ಚಿಗೆದ್ದು, "ಛೀ ಅಲ್ಪನೇ! ದೇವರೆಂಬ ಕಲ್ಪನೆ ನೀಗಿ, ಬಲತ್ಕಾರದಿಂದ ಬಸವನನ್ನೇರಿರುವಿಯಾ ? ಲಜ್ಜೆಗೇಡಿ ಇಳಿ ಕೆಳಗೆ," ಎಂದು ಕೆರ್ಜರಿದನು.

ಅಲ್ಪನೆಂಬವನು ಏರಿದವನೋ ? ಅಥವಾ ಏರಿಸಿಕೊಂಡವನೋ ? ಅರ್ಚಕನೇ ನೀನು ಇದನ್ನು ಸ್ವಲ್ಪವಿಚಾರಮಾಡು" ಎಂದನು ಸಿದ್ಧನು. ಈ ವೈಚರಿಕ ಲೀಲೆ ಪೂಜಾರಿಗೆ ಏನೂ ತಿಳಿಯಲಿಲ್ಲ. ಅಷ್ಟಕ್ಕೆ ಅವನು ಸುಮ್ಮ ನಾಗಿ ಊರೊಳಗೆ ಹೋಗಿ ಪ್ರಮುಖರೆಲ್ಲರಿಗೂ ಎಲ್ಲ ಸಂಗತಿಯನ್ನು ಅರುಹಿ ಅವರನ್ನು ಗುಡಿಗೆ ಕರೆತಂದನು. ಕೂಡಲೆ ಅವರಲ್ಲೊಬ್ಬ ಶೀಘ್ರ ಕೋಪಿಯು ಸಿದ್ಧನಿಗೆ "ಛಾಪುರೆ ! ಕಡುಪಾಪಿಯೇ ! ಬಸವನ ಮೇಲೆ ಹತ್ತಲಿಕ್ಕೆ ಅದು ದೇವರೆಂಬುದು ನಿನಗೆ ತಿಳಿಯಲಿಲ್ಲವೇ ? ಮೂರ್ಖ ! ಎಂದು ಜೋರಿನಿಂದ ಕೈ ಎತ್ತಿ ಹೊಡೆಯ ಹೋದನು. ಆಗ ಹಿಂದಿರುವ ಬಾಗಿಲದ ಮಳೆಗೆ ಅವನ ಕರವು ತಾಕಿ ರಕ್ತವು ಧಾರಾಳವಾಗಿ ಹರಿಯ ಹತ್ತಿತು. ಆಗ ಅವನು 'ಅಕಟಕಟಾ' ಎಂದು ಗಟ್ಟಿಯಾಗಿ ಕೂಗುತ್ತ ಧರಣಿಗೆ ಉರುಳಿದನು. ಕೂಡಲೆ ಜನರು ಅವನನ್ನು ಹೊರಗೆ ಗಾಳಿಗೆ ತಂದರು. ಬಳಿಕ ಅವರೊಳಗೆ ಓರ್ವನು ಸಮಾಧಾನದಿಂದ ಸಿದ್ಧನಿಗೆ ಕೇಳುತ್ತಾನೆ. "ತಮ್ಮಾ ನೀನು

ದೇವರ ಮೇಲೆ ಏನು ಕಾರಣ ಹತ್ತಿ ಕುಳಿತೆ ? ಅಂಜಬೇಡ ಮರೆಮಾಚದೆ ಹೇಳು" ಎಂದು ಕೇಳಿದನು.

ಅದಕ್ಕೆ ಸಿದ್ಧನು "ಏನೂ ತಿಳಿಯದ ಪಾಪಿ ಮನುಜರು ಹೀನ ಮನದಿಂದ ನಮಿನಮಿಸಿ ಈ ಬಸವನ ಎಲ್ಲ ಪುಣ್ಯವನ್ನು ಹರಣ ಮಾಡಿರುವರು. ಈಗ ಅದು ಶಿಲೆಯಾಗಿ ಮಾತ್ರ ಉಳಿದಿರುವದು. ಅದನ್ನು ನಾನು ಪರೀಕ್ಷಿಸಿ ನಿಮ್ಮ ಹಿತಕ್ಕೋಸ್ಕರ ಈ ಬಸವನಿಗೆ ಪ್ರಾಣಪ್ರತಿಷ್ಠೆ ಮಾಡಬೇಕೆಂದು ಮುದದಿಂದ ಬಂದು ಕುಳಿತಿರುವೆನು. ಆದರೆ ಹಿತವನ್ನು ಹೇಳಹೋದ ಶ್ರೀಕೃಷ್ಣನಿಗೆ ಹೆಮ್ಮೆಯಿಂದ ಅಪಮಾನವೆಸಗಿ ಸುಮ್ಮನೆ ಕೌರವನು ತಾನೇ ಮೋಸ ಹೋದಂತೆ ಅನಾಯಾಸ ನಿಮ್ಮುಂದು ಹರಸಮಯ ಒದಗಿರಲು, ಅದನರಿಯದೆ ನಿಮ್ಮ ಕೃತಿಯಿಂದ ನೀವೇ ಮೋಸ ಹೋಗುವಿರಿ" ಎಂದು ಕರುಣಿಸಿದನು.

ಆಗ ಎಲ್ಲ ಜನರು ತಮ್ಮ ಹೆಮ್ಮೆಯನ್ನು ತೊರೆದು, "ಇವನು ಬಾಲಕನಲ್ಲ. ನಮ್ಮ ಪುಣ್ಯದ ಮೂರ್ತಿಯು ನಾವು ತಿಳಿಯದೆ ಇವನನ್ನು ಸುಮ್ಮನೆ ಹಳಿದೆವು," ಎಂದು ಪಶ್ಚಾತ್ತಾಪ ಹೊಂದಿದರು. "ಇವನು ಸತ್ಯವಾಗಿ ಶಿವನಿರುವನು. ಇವನ ನುಡಿಗಳು ವೇದ ವಾಕ್ಯಗಳು," ಎಂದು ಎಲ್ಲರೂ ಸಿದ್ಧನನ್ನು ಮುತ್ತಿ ದೈನ್ಯತೆಯಿಂದ ನಮಿಸಹತ್ತಿದರು. ನಂತರ ಮೂವರಿಗೂ ಸುಖಭೋಜನ ಮಾಡಿಸಿ ತೃಪ್ತಗೊಳಿಸಿದರು.

**ಪದ— ೨೮-೩೬ ಮೂರ್ತಿಗಳ ವೈಭವದ ತತ್ವವನ್ನು ತಿಳಿಸಿದ್ದು**

ಬಳಿಕ ಅವರೆದೆಳಗೋರ್ವನು ಸಿದ್ಧನಿಗೆ ಪ್ರಶ್ನಿಸಿದ್ದೇನೆಂದರೆ "ಕಾಶಿ, ಪುರ ಪಟ್ಟಣಗಳಲ್ಲಿರುವ ದೇವಾಲಯಗಳಲ್ಲೆಲ್ಲಾ ಶಿಲಾಮೂರ್ತಿಗಳಿರುವವು. ಅವುಗಳ ಪೂಜಾ ವೈಭವಾದಿಗಳಿಂದ ಹೆಚ್ಚುಕಡಿಮೆ ಭೋಗಂಗಳನ್ನು ಪಡೆಯುವದು ಕಂಡು ಬರುತ್ತದೆ. ಅದೇನು ಕಾರಣ" ಎಂದು ಕೇಳಿದನು.

ಅದಕ್ಕೆ ಸಿದ್ಧನು, "ಮುನ್ನಿನ ಋಷಿಪುಂಗವರು ತಮ್ಮ ತಪಸ್ಸು, ಯಜ್ಞಾದಿಗಳ ಪುಣ್ಯ ಫಲವನ್ನು ಆ ಶಿಲಾಮೂರ್ತಿಗಳಿಗೆ ಪ್ರೀತಿಯಿಂದ ಕೊಟ್ಟು ಪ್ರಾಣ ಪ್ರತಿಷ್ಠೆಯನ್ನು ಮಾಡಿರುವರು. ಅಲ್ಲಿಗೆ ಬಹು ಜನರು ಭಕ್ತಿಯಿಂದ ಹೋಗಿ ತಮ್ಮ ಧನ, ಧಾನ್ಯ, ವಸ್ತ್ರ ವಾಹನ ಮೊದಲಾದವುಗಳನ್ನು ತನು

ಮನಗಳಿಂದ ದಾನ ಮಾಡುತ್ತ ಆ ಮೂರ್ತಿಗಳಿಗೆ ಭಕ್ತಿ-ಭಾವಗಳಿಂದ ವಂದಿಸಿ-ನಮಿಸುತ್ತ ಪುಣ್ಯ ಪಡೆದುಕೊಳ್ಳುವರು. ಭಯ ಭಕ್ತಿಗಳಿಂದ ಸತತ ಇಂಥ ಕಾರ್ಯ ನಡೆದಿರಲು ಅದರ ಪುಣ್ಯವರ್ಧನವಾಗುವದು. ಆ ಮೂರ್ತಿಗಳಿಗೆ ಶಾಂತಿ, ಪೂಜಾ, ವೈಭವದ ಉತ್ಸವಕಾರ್ಯಗಳು ಬಿಡುವಿಲ್ಲದೆ ನಡೆಯುವದರಿಂದ ಅವಕ್ಕೆ ನಾಶತ್ವವೆಂತು ? [ಇಲ್ಲೆಂಬ ಭಾವ] ಇನ್ನು ಕೆಲವು ಹಳ್ಳಿ ಪಟ್ಟಣಗಳಲ್ಲಿ ಭ್ರಾಂತಿಗೊಂಡ ಜನರು ತಾಮಸ ಅಹಂಕಾರದಿಂದ ಇಲ್ಲವೆ ಪಕ್ಷಪಾತ ಬುದ್ಧಿಯಿಂದ ಮೂರ್ತಿಗಳನ್ನು ಸ್ಥಾಪಿಸುವರು. ಅದಕ್ಕೆ ಅಜ್ಞರಾದವರು ಸುಮ್ಮನೆ ಹೋಗಿ ನಮಿಸುತ್ತಿರಲಿಕ್ಕೆ ಅ ಮೂರ್ತಿಯ ಪುಣ್ಯವು ನಶಿಸುವದು. ಆಗ ಅದು ಶವದಂತೆ ಶಿಲೆಯಾಗಿ ಉಳಿಯುವದು. ಪುಣ್ಯ ಸಂಚಯಕ್ಕೆ ದಾನ, ಧರ್ಮ, ಪರೋಪಕಾರ, ಪೂಜೆ, ಜಪ, ತಪ, ವಂದನಾದಿಗಳು ಅತ್ಯವಶ್ಯಕ. ಪುಣ್ಯದಿಂದಲೇ ತ್ರಿಲೋಕಗಳಲ್ಲಿ ಸುಖ ಸಂಪತ್ತುಗಳ ವ್ಯವಹಾರಗಳು ನಡೆಯುವವು.

ಪುಣ್ಯದಿಂದ ಧನಿಕನಾಗುವನು. ಪುಣ್ಯದಿಂದ ರಾಜನು, ನರಗಂಧರ್ವನು, ಪುಣ್ಯದಿಂದಲೇ ಬ್ರಹ್ಮ, ಹರಿಹರರುಗಳ ಪದವಿ ಪಡೆಯುವರು. ಪುಣ್ಯದಿಂದಲೇ ಸಾಯುಜ್ಯಮುಕ್ತಿ ಅಪ್ಪುದು. ಇವು ಸತ್ಯವೆಂದು ತೈತ್ತಿರಿಯ ಉಪನಿಷತ್ತು ಹೇಳಿದೆ. ಮತ್ತು ಒಬ್ಬರ ಪುಣ್ಯಗಿಂತ ಒಬ್ಬರ ಪುಣ್ಯವು ಶತಪಟ್ಟು ಅಧಿಕವೆಂದು ಬಣ್ಣಿಸಿರುವದು ತಾಯಿ ಅನ್ನವನ್ನು ತಾನುಂಡು ಮಗುವಿಗೆ ಮೊಲೆಯುಣ್ಣಿಸಿ ಪ್ರೀತಿಯಿಂದ ಪಾಲಿಸುವಂತೆ ಬ್ರಹ್ಮಜ್ಞಾನಿಯು ಅನ್ನವನ್ನು ಭುಂಜಿಸಲು ಆ ಅನ್ನರೂಪ ಪುಣ್ಯವನ್ನು ಈ ಬಸವನು ಉಣ್ಣುತ್ತ ನಿಮ್ಮೆಲ್ಲರಿಗೂ ಸುಖಸಂಪತ್ತನ್ನಿತ್ತು ಪೊರೆಯುವನು" ಎಂದು ಸಿದ್ಧನು ಹೇಳಿದನು.

ಆಗ ಎಲ್ಲ ಜನರು, "ನಮ್ಮ ಪೂರ್ವಜನ್ಮದ ಪುಣ್ಯದಿಂದ ಆ ನಂದೀಶನೇ ಈ ಕಂದನ ರೂಪದಿಂದ ಬಂದಿರುವನು ಎಂದು ನಂಬಿ ಪರಮಭಕ್ತಿಯಿಂದ ಅಂದು ಸಿದ್ಧನನ್ನು ಪೂಜಿಸಿ ಉಣ್ಣಿಸಿ ಪರಮಾನಂದಗೊಳಿಸಿ ಜಯ ಜಯವೆಂದು ಬಿಳ್ಕೊಟ್ಟರು ಎಂಬಲ್ಲಿಗೆ ಮಂಗಲ.

ಷಂಡಗಿತನಿಂ ಬಂಜೆ ತಾಯಿಗೆ ।
ಭಂಡಸುತನಾಗಿ ನರಮಾಂಸವ ।
ಪುಂಡು ಸತಿಯಳನು ತಲೆಗೇರಿಸಿಕೊಂಡು ಮೋಹಿಸುತ ॥

ಮಿಂಡನಿಗೆ ಕುಂಟಣಿಗೆನಾಗುತ |
ಮಂದಿಪ ಸುರಾಭಾಂಡೆಯೊಳು ನೆರೆ |
ಕಂಡು ಸತಿಯನಸುರರಿಗೆ ಕೊಟ್ಟ ಸುದೇವಗೊಂದಿಪೆನು ||

ಇತಿ ಶ್ರೀಮಚ್ಛಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ ಲೀಲಾ ಚರಿತ್ರ ಕಲ್ಪದ್ರುಮದೊಳು ವೃಷಭ ಮೂರ್ತಿ ಪ್ರಾಣ ಪ್ರತಿಷ್ಠೆಯೆಂಬ ೫ ನೇ ಅಧ್ಯಾಯ ಸಮಾಪ್ತಿ.

---



# ಗುರುಶೋಧನಾ ಕಾಂಡ

## ಅಧ್ಯಾಯ ೬.

|| ಓಂ ತತ್ಸತ್ ||

**ಶ್ರೀಗುರು ಸಿದ್ಧಾರೂಢಾಯ ನಮೋನಮಃ**

ಈ ಅಧ್ಯಾಯದಲ್ಲಿ ಸಿದ್ಧ, ಸೋಮ, ಭೀಮರಿವರು ಸಂಚಾರದಲ್ಲಿ ಹಲವು ತರದ ಕಷ್ಟಕ್ಕೊಳಗಾಗಿ ಸೋಮ, ಭೀಮರು ಮರಳಿ ಮನೆಗೆ ಬಂದ ವಿಷಯ ನಡೆಯುವದು.

ಸ್ತೋತ್ರ— ಹರುಷ ಕರುಣಾಮೃತದ ಶರಧಿಯೇ ।
ನಿರುತಮನು ಮುನಿದೇವ ವಂದ್ಯನೆ ।
ಸರಸ ಮಹಿಮನೆ ವೇದಸ್ತುತ್ಯನೆ ನಿತ್ಯ ಮಂಗಲನೆ ॥
ಮೆರೆವ ನಗುರೋರಧಿಕನೆನಿಪನೆ ।
ಪರಮ ಯೋಗಿಗಳಂತರಂಗನೆ ।
ಗುರುವೆ ಪೊರೆಯೈ ನಿನ್ನ ಕರುಣಾಮೃತವ ಕುಡಿಸೆನ್ನಂ ॥

**ಪದ— (೧-೩೪) ಸಂಚಾರದಲ್ಲಿ ಮೂವರು ಕಷ್ಟಕ್ಕೊಳಗಾದದ್ದು.**

ಬಿರುಸಾಗಿ ಬೀಸುವ ಬಿರುಗಾಳಿಯಿಂದ ಗಿಡಮರಗಳು ಉರುಳುರುಳಿ ಬೀಳ ಹತ್ತಿದವು. ಗುಡುಗು ಸಿಡಿಲುಗಳಾರ್ಭಟಕ್ಕೆ ಎದೆಗುಂಡಿಗೆ ಸಿಡಿದಂತಾಗುತ್ತಿತ್ತು. ಅದರೊಂದಿಗೆ ಆಣೆಕಲ್ಲು ಸುರಿಯ ಹತ್ತಿದವು ಮೂವರೂ ತೋಯಿಸಿಕೊಂಡು ನಡುಗುತ್ತ ಮರದಡಿಯಲ್ಲಿ ನಿಂತರು. ಅಷ್ಟರಲ್ಲಿ ಗಾಳಿ ಮಳೆ ನಿಲ್ಲಲು ದಿನಪನು ಕಂಡನು. ಕೂಡಲೇ ಕಣಿವೆ ಮಾರ್ಗದಿಂದ ಬಲೆಗಳನ್ನು ಒಡ್ಡುತ್ತ ಬೇಡರು ವಿನೋದದಿಂದ ಕೋಲಾಹಲ ಎಬ್ಬಿಸಿದರು. ಅವರ ಧ್ವನಿ ಆ ಅಡವಿಯನ್ನೆಲ್ಲ ವ್ಯಾಪಿಸಿತು. ಅದರ ಸದ್ದಿಗೆ ಎಲ್ಲಿ ನೋಡಿದಲ್ಲಿ ಹುಲಿ, ಸಿಂಹಗಳ ಗರ್ಜನೆ, ಚೀರ್ಕ, ಮೃಗಗಳ ಅಬ್ಬರವು ಕೇಳ ಬರಹತ್ತಿತ್ತು. ಕಾಡಹಂದಿ, ಕಾಡಕೋಣ, ಕಾಡಾಕಳುಗಳು ಪಲಾಯನ ಮಾಡಹತ್ತಿದವು. ಕರಡಿ, ತೋಳ, ಮೊದಲಾದ ಪ್ರಾಣಿಗಳು ತಮ್ಮ ಪ್ರಾಣಕ್ಕೆ ಅಂಜಿ ಒದರುತ್ತ ಜೀವದ ಹಂಗುದೊರೆದು ಓಡಹತ್ತಿದವು. ಬೇಡರೆಲ್ಲರೂ ಸುತ್ತುವರೆದು ಮೃಗಗಳ ಶಿರಗಳನ್ನು ಕತ್ತರಿಸಿ ಕೆಡಹಿದರು. ಬೇಟೆಯ ನಾಯಿಗಳು ಅವುಗಳ ನೆತ್ತರ ಕುಡಿದು ತೇಗಿದವು. ಈ ಪ್ರಕಾರ ಬೇಡರ ಕೋಲಾಹಲ, ಮೃಗಗಳ ಗರ್ಜನೆ ಮತ್ತು ಶುನಕಗಳ ರಭಸದಿಂದ ಅಡವಿಯು ಘೋರ್ಗರೆಯುತ್ತಿತ್ತು. ಇದೆಲ್ಲ ಭಯಾನಕ ದೃಶ್ಯಗಳನ್ನು ಕಂಡು ಸೋಮ ಭೀಮರು ಭೀತಿಗೊಂಡು, "ಸಿದ್ಧಾ ನಾವು ಮನೆಬಿಟ್ಟು ಬಂದದ್ದು ಮರಣ ಹುಡುಕುವದಕ್ಕಲ್ಲದೆ ಸದ್ಗುರು ಶೋಧನಕ್ಕಲ್ಲ" ಎಂದು ಅಳಹತ್ತಿದರು. ಅಷ್ಟರಲ್ಲಿ ಪಶ್ಚಿಮಾದ್ರಿಗೆ ಪಯಣ ಬೆಳೆಸಿದ ಸೂರ್ಯನು ದಣಿದು ವಿಶ್ರಾಂತಿ ಹೊಂದಿದನು. ಆಗ ಸುತ್ತಲೂ ಕತ್ತಲೊಡ್ಡಲು ಸೋಮ ಭೀಮರು

ಅಂಜುತ್ತ ಹಾದಿತಪ್ಪಿಕಾಡುಸೇರಿ ಮನೆಯ ನೆನೆಯುತ್ತ ನಡದಿರಲು, ಸೋಮನು ಮುಳ್ಳುಗೊನೆಯ ಮೇಲೆ ಕಾಲಿಟ್ಟನು "ಅಕಟಕಟ" ಎನ್ನುತ್ತ ಕುಳಿತು ರೋಧಿಸಹತ್ತಿದನು.

ಆಗ ಸಿದ್ಧನು ಹೇಳುತಾನೆ, "ಮಹಾದೇವನನ್ನು ಮರೆತು ಮನೆಯನ್ನು ನೆನೆದರೆ ನಿಮ್ಮನ್ನು ಪೊರೆವುದು ಶಿವನೋ. ಆ ಸದನವೋ? ವಿಚಾರಿಸಿರಿ ಪರಮ ಪದವಿಕೊಡುವ ಆ ಶಿವನು ಎಲ್ಲಿಗೊಯ್ಯುವನೋ, ಅಲ್ಲಿಗೆ ಹೋಗೋಣ. ಅವನು ನಮ್ಮನ್ನು ಎಂದಿಗೂ ಕೈಬಿಡದೆ ಕರುಣದಿಂದ ಕಾಯುವನು. ನಡೆಯಿರಿ" ಎಂದನು ಆಗ ದಾರಿಗಾಣದೆ ಭೀಮನು ಕೆಸರಿನೊಳಗೆ ಕಾಲುಜಾರಿ ಬಿದ್ದನು, ಮೊಣಕಾಲ ಕೆತ್ತಿ ಅಳಹತ್ತಿದನು.

ಆಗ ಸಿದ್ಧನು ಅವರಿಗೆ ಸಮಾಧಾನಮಾಡುತ್ತ ಹೇಳುತ್ತಾನೆ, "ತಂದೆ-ತಾಯಿ ಎಂದು ಹೇಳಿಸಿಕೊಂಡ ಆ ಪರಶಿವನ ಚಿಂತೆದೊರೆದು ನೀವು ತನುವಿನ ಚಿಂತೆಯನ್ನು ಮಾಡುವದರಿಂದ ನಿಮಗೆ ಈ ಕಂಗಾಲ ಸ್ಥಿತಿ ಬಂದಿರುವದು. ಈ ತೊಂದರೆಯನ್ನು ಗುರು ತಂದೆಯೇ ನಮ್ಮ ಅಧಿಕಾರ ಪರೀಕ್ಷಿಸಲು ತಂದಿರುವನು. ಇದು ನಿಜವೆಂದು ನಂಬಿರಿ. ಈ ಜಡದೇಹವೇ ನಾನೆಂಬ ಭಾವವು ನಿಮ್ಮ ಚಿತ್ತದಲ್ಲಿ ಎಲ್ಲಿಯವರೆಗೆ ಇರುವದೋ, ಅಲ್ಲಿಯವರೆಗೆ ಸತ್ತುಹುಟ್ಟುವ ಬಾಧೆ ತಪ್ಪದು. ಕತ್ತೆಗೆ ಹೊರೆ ಹೇರಿ ಮನೆಗೂ-ಅಡವಿಗೂ ತಿರುಗಿಸುವಂತೆ ಜಡವಾದ ಅಸಂಖ್ಯಾತ ಇಂಥ ತನುಗಳನ್ನು ಹೊತ್ತು ಇಹಪರಕೆ ತಿರುತಿರುಗಿ ಕಡುಕಷ್ಟಪಡಬೇಕಾಗುವದು. ಈ ದೇಹಾಭಿಮಾನವೇ ಜನ್ಮಜನ್ಮಂಗಳಲ್ಲಿ ಮಾಡುತ್ತಿರುವ ಕರ್ಮಸಂಸ್ಕಾರಗಳನ್ನು ಹುಟ್ಟಿಸುವದು. ಮತ್ತು ದುಃಖವೇ ಸುಖವೆಂಬ ಭಾವವನ್ನು ತೊರೆಯುವದು ಬಹಳಕಷ್ಟ. ಈ ಕಷ್ಟವು ನಷ್ಟವಾಗುವದಕ್ಕೆ ವಿವೇಕಾದಿ ಸಾಧನಚತುಷ್ಟಿಗಳೇ ಮುಖ್ಯ ಸಾಧನವೆಂದು ಶ್ರುತಿ ಸಾರುವದು, ಹೀಗಿರಲು ನಾವು ಮುಕ್ತಿಯ ಚಿಂತನದಿಂದ ಯಾವ ಗುರುಗಳನ್ನು ಶೋಧಿಸುತ್ತಿರುವೆವೋ ಆ ಗುರುದೇವನೇ ಕರುಣೆಯಿಂದ ನಿಜವಾಗಿ ನಮ್ಮ ಹೃದಯದಲ್ಲಿ ಅಂತರ್ಯಾಮಿಯಾಗಿ ನಿಂತು ನಮಗೆ ದೃಢ ವೈರಾಗ್ಯಾದಿಗಳನ್ನು ಹುಟ್ಟಿಸುವನು. ಅದುಕಾರಣ ಈಗ ಒದಗಿರುವ ಖೇದಾದಿ ಭಯಗಳನ್ನು ಸಹಿಸುತ್ತ ಹೋಗುವದು ಒಳಿತು," ಎಂದು ಸಿದ್ಧನು ಉಪದೇಶಿಸಿದನು.

ಆಗ ಸೋಮ-ಭೀಮರೀರ್ವರು, "ಆದದ್ದಾಯಿತು. ಮೊದಲು ನಮ್ಮನ್ನು ಹಾದಿಗೊಯ್ದು ಊರು ತೋರಿಸು. ಸಿದ್ಧಾ, ಸಾಧನಗಳನ್ನು ಹಿಂದಿನಿಂದ ನೋಡೋಣವಂತೆ" ಎಂದು ಹೇಳಿದರು. ಪುನಃ ಸಿದ್ಧನು "ಊರು ನಿಮಗೆ ಪರಮ ಗುರುವೋ ? ಊರೇ, ಗುರುವಾಗಿದ್ದರೆ ಆ ನಿಮ್ಮೂರು ಏನೊಂದು ಪ್ರಯತ್ನವಿಲ್ಲದೆ, ಮೊದಲಿಗೆ ಪ್ರಾಪ್ತವಾಗಿಯೇ, ಇತ್ತಲ್ಲಾ ! ಅದನ್ನು ಬಿಟ್ಟು ನೀವೇಕೆ ಬಂದಿರಿ ? ಉರುತರ ಕಷ್ಟವಿಲ್ಲದೆ ವರಗುರುವು ದೊರೆಯುನು ತದೆ-ತಾಯ್ಗಳನ್ನು ಪಡೆಯಬಹುದು, ಸತಿ-ಸುತರನ್ನು ಪಡೆಯಬಹುದು ಒಂದು ವೇಳೆ ದೇವಲೋಕ ದೇವರು ಆಶ್ರಯವನ್ನೂ ಹೊಂದಬಹುದು, ಆದರೆ ಮೊದಲು ಗುರುಚಿಂತನೆ ಬಲು ಕಷ್ಟ, ಗುರುದರುಶನ ಅದಕ್ಕೂ ಕಠಿಣ. ಗುರು ಸೇವೆ ಅದಕ್ಕೂ ದುರ್ಲಭ, ಗುರು ಕರುಣೆ ಪಡೆಯುವದಂತೂ ಕಡುಕಷ್ಟ, ಆತ್ಮಬೋಧೆಗಾಗಿ ಶ್ರೀಗುರುಮೂರ್ತಿ ಸಿಗುವದಂತೂ ಪರಮ ದುಸ್ತರವು. ರೋಗಿಯಾದವನು ಔಷಧ ಕಹಿ ಇರುವದೆಂದು ಬಿಡಬಹುದೇ ? ಅದರಂತೆ ದೇಹತಾಪವ ಲಕ್ಷಿಸಿ ಗುರು ಶೋಧನೆ ಬಿಡಬಹುದೇ ? ಗ್ರಾಮವೇ ಸೌಖ್ಯವೆಂಬ ನಂಬುಗೆ ನಮಗಿದ್ದರೆ ಆಗೋ ನೋಡಿರಿ ನಿಮ್ಮ ಗ್ರಾಮವೆಂದು, ಸಿದ್ಧನು ಬೆಳಕು ತೋರಿಸಿದನು.

ಬಳಿಕ ಮೂವರೂ ಊರೊಳಗೆ ಹೋಗಲು ಹಳೆಯ ದೇವಾಲಯ ಒಂದನ್ನು ಕಂಡರು. ಅಲ್ಲಿಗೆ ಹೋಗಿ ಕುಳಿತುಕೊಳ್ಳುವಷ್ಟರಲ್ಲಿ ಮಳೆಗೆ ನೆನೆದ ಅದರದೊಂದು ಗೋಡೆಯು ಧಡಂ ಎಂದು ಕೆಳಗೆ ಬಿದ್ದಿತು. ಕೂಡಲೆ ಸೋಮ ಭೀಮರ ಎದೆ ಝಲ್ಲೆಂದು "ಅಯ್ಯೋ ಸತ್ತೆವು ! ಸಿದ್ಧಾ ನಮಗೆ ಉತ್ತಮ ಗುರು ದೊರೆಯುವದು ಸತ್ತ ಬಳಿಕೋ ? ಜೀವವಿರುವಾಗಲೋ ? ನಿನ್ನ ಬೋಧೆ ಸಾಕು ವೆವದಲು ನಮ್ಮ ಹಸಿವೆಗೆ ಏನು" ಹೇಳೆಂದರು.

"ಗೆಳೆಯರೇ ಹೇಗಾದರೂ ನಿಮ್ಮ ಚಿತ್ತಕ್ಕೆ ತೃಪ್ತಿಯೇ ಇಲ್ಲ. ಮೊದಲು ಊರು ತೋರಿಸು, ಸುಖವಾಗುವದೆಂದಿರಿ. ಈಗ ಊರು ಸೇರಿದರೆ ಮತ್ತೆ ಅನ್ನಕ್ಕೆ ಇಚ್ಛಿಸುವಿರಿ, ಬಯಕೆಗೆ ಕೊನೆಯೆಂಬುದಿಲ್ಲ. ಅದು ಕಾರಣ ಅದನ್ನು ಜಯಿಸುವ ಸಾಧನೆ ಬಿಟ್ಟು ನೀವು ಈಗ ಅನ್ನಕ್ಕಾಗಿ ಯತ್ನಿಸಿದರೆ ಈ ರಾತ್ರಿ ಸಮಯದಲ್ಲಿ ನಿಮಗೆ ಕೇಡು ತಪ್ಪದು," ಎಂದು ಸಿದ್ಧನು ಅವರಿಗೆ ಸಂತೈಸಿ ಮಲಗಿದನು.

ಇತ್ತ ಸೋಮ-ಭೀಮರು ಕ್ಷುಧಾ ಬಾಧೆ ತಡೆಯದೆ ಭಿಕ್ಷೆಗಾಗಿ ಒಂದು ಬೀದಿ ಹಿಡಿದು ನಡೆದರು. ಕೂಡಲೆ ಅವರನ್ನು ನಾಯಿಗಳು ಕಂಡು ಬೊಗಳುತ್ತ ಅವರ ಮೈಮೇಲೆ ಏರಿ ಬಂದವು, ಆಗ ಅವರು ಅಂಜಿಕೊಂಡು ಒಂದು ಕಡ್ಡಿಯ ಮರೆಗೆ ಅಡಗಿಕೊಂಡರು. ನಾಯಿಗಳ ಒದರುವಿಕೆಗೆ ಆ ಮನೆಯ ಯಜಮಾನನು ಬಾಗಿಲ ತೆರೆದು ಹೊರಗೆ ಬಂದನು. ಇವರನ್ನು ಕಂಡು ಕೋಪಗೊಂಡು, ಭಂಡ ಮುಂಡೇ ಮಕ್ಕಳೆ, ಹಿಂದಕ್ಕೆ ನಮ್ಮ ಎಮ್ಮೆ ಕದ್ದವರು ನೀವೇ ಅಲ್ಲವೇ ? ಈಗ ಮತ್ತೆ ಯಾರ ಮನೆ ಹಾಳು ಮಾಡಲು ಬಂದಿರುವಿರಿ," ಎಂದನು. "ತಂದೆ, ನಾವು ಕಳ್ಳರಲ್ಲ. ನಿಜವಾಗಿ ಭಿಕ್ಷಕ್ಕೆ ಬಂದಿರುವರು, ಹಸುವೆಗೆ ಸ್ವಲ್ಪ ಅನ್ನ ಹಾಕಿರಿ" ಎಂದರು.

"ಮಳ್ಳ ಸುಳೀ ಮಕ್ಕಳೆ; ಬಿಕ್ಕೆ ಬೇಕೋ ? ನಿಲ್ಲಿರಿ. ನಿಮಗೆ ಸಲ್ಲತಕ್ಕ ಬಿಕ್ಕೆಯನ್ನು ಇಕ್ಕುವೆನು" ಎಂದು ಮನೆಯವನು ಒಳಗೆ ಕೋಲು ತರಲು ಹೋದನು. ಕೂಡಲೇ ಈರ್ವ ಬಾಲಕರು ಭಯಗೊಂಡು ದಿಕ್ಕೆಟ್ಟು ಓಡಿ ನಡು ಬೀದಿಗೆ ಬರಲು, ಗಸ್ತಿಗಾವುಲರ ಕೈವಶರಾದರು. ಅವರು "ಹೇ ಕತ್ತೆ ಮಕ್ಕಳೇ, ನಿಮ್ಮವರೆಲ್ಲಿ ಅಡಗಿರುವರು ? ನೀವು ಈಗ ಯಾರ ಮನೆಯನ್ನು ಗೊತ್ತು ಹಚ್ಚಿ ನಿಮ್ಮವರನ್ನು ಕರೆತಂದು ಕನ್ನ ಇಕ್ಕಿಸುವಿರಿ ?" ಎಂದು ಗದ್ದರಿಸಿದರು.

ಆಗ ಬಾಲಕರು, "ನಾವು ಇಂದು ಬರುವಾಗ್ಗೆ ದಾರಿಯಲ್ಲಿ ಮಳೆಯಲ್ಲಿ ಸಿಕ್ಕು ತಡವಾಗಿ ರಾತ್ರಿಯಾಗಿ ಬಂದೆವು. ತಂದೆಗಳೆ ! ನಾವು ನಿಜವಾಗಿ ಭಿಕ್ಷೆಗೆ ಬಂದವರು, ಕಳ್ಳರಲ್ಲ" ಎಂದು ಪರಿಪರಿಯಾಗಿ ದೈನ್ಯದಿಂದ ಬೇಡಿಕೊಂಡರು. 'ಹಾಗಾದರೆ ನಿಮಗೆ ಇಂಥ ಅಪರಾತ್ರಿಯಲ್ಲಿ ಯಾರು ಕರೆದು ಭಿಕ್ಷೆನೀಡುವರು. ನೀವು ಈಗ ಯಾರ ಮನೆಗೂ ಹೋಗದೆ ಆ ದೇವಾಲಯಕ್ಕೆ ಹೋಗಿ ಹೊತ್ತು ಹೊರಡುವವರೆಗೆ ಮಲಗಿಕೊಳ್ಳಿರಿ. ಉದಯಕ್ಕೆ ಎದ್ದು ಭಿಕ್ಷೆಮಾಡಿಕೊಳ್ಳಿರಿ," ಎಂದು ಕಳುಹಿದರು. ಅವರನ್ನು ಬಿಟ್ಟದ್ದೊಂದೇ ತಡ ಸೋಮ ಭೀಮರು ಕಾವಲುಗಾರರಿಗೆ ನಮಿಸುತ್ತ ತಟ್ಟನೆ ಗುಡಿಗೆಬಂದು ಸಿದ್ಧನಿಗೆ ತಮ್ಮ ಎಲ್ಲ ಕಷ್ಟಗಳನ್ನು ಹೇಳಿಕೊಂಡರು.

ಆಗ ಸಿದ್ಧನು, ಎಷ್ಟು ಹೇಳಿದರೂ ನೀವು ಕೇಳದೆ ಹೋದಿರಿ. ಇದರಿಂದ ನಿಮಗೆ ತಿಲಮಾತ್ರವೂ ಫಲ ಪ್ರಾಪ್ತಿಯಾಗದೆ ಕಷ್ಟಮಾತ್ರ ಬಹಳ

ವಾಯಿತು. ನೋಡಿರಿ, ನಾನು ಏಕ ಚಿತ್ತದಿಂದ ಶಿವಧ್ಯಾನ ತತ್ಪರನಾಗಿ ಕುಳಿತಿದ್ದೆನು. ಅಷ್ಟರಲ್ಲಿ ಅರ್ಚಕನು ಪರಮಾನ್ನದ ಎಡೆಯನ್ನು ತಂದು ದೇವರಿಗೆ ದೀವಿಗೆ ಹಚ್ಚಿ ಪೂಜಿಸಿ ನೈವೇದ್ಯ ತೋರಿಸಿ ಅದನ್ನು ನನಗಿರಿಸಿ ನೀರು ಸಹ ತಂಬಿಟ್ಟು ಹೋದನು. ಕಲ್ಲೊಳಗೆ ಪುಟ್ಟಿ ತಾನಿಪ್ಪ ಕಪ್ಪೆಗೆ ಅಲ್ಲಲ್ಲಿ ಅನ್ನವನಿತ್ತು ಸಲಹುವವರಾರು ? ಕೈಕಾಲು ಕಣ್ಣುಗಳಿಲ್ಲದೆ ತಲ್ಲಣಿ ಸುತ್ತಿರುವ ಜೀವರುಗಳಿಗೆ ಮುದದಿ ಅನ್ನವನ್ನು ಕೊಡುವ ದೇವನು ನಮಗೆ ಕೊಡನೇ ? ಯಾವ ದೇವನು ಶ್ರುತಿಗಳನ್ನು ರಚಿಸಿ ಕಾಯ್ದನೋ ಸಗ್ಗದ ಸುರರನ್ನು ಕಾಯ್ವನೋ, ಮಾರ್ಕಂಡೇಯನನ್ನೂ ಪ್ರಲ್ಹಾದನನ್ನೂ ಕಾಯ್ದನೋ, ಯಾವನು ನಿಖಿಲವನ್ನು ರಚಿಸಿ ಅದರಲ್ಲಿ ತಾನೇ ಅಂತ ರ್ಯಾಮಿ ರೂಪದಿಂದ ಪ್ರವೇಶಿಸಿ ಚೇತರಿಸುವನೋ, ಅವನೇ ನಮ್ಮನ್ನು ಕಾಯ್ವನು," ಎಂದನು.

ಅವರಿಬ್ಬರು, "ನೀನು ಹೇಳಿದಂತೆ ಕೇಳಿದ್ದಕ್ಕೆ ನಮಗಿಂದು ಇಂಥ ಕಷ್ಟ ಪ್ರಾಪ್ತವಾಯಿತು. ನಮ್ಮದೇ ತಪ್ಪು ಎಂದರು. ಆಗ ಸಿದ್ಧನು ಪರಮಾನ್ನದ ಎಡೆಯನ್ನು ಅವರ ಮುಂದಿಟ್ಟು, ಮೂವರು ಕೂಡಿ ಊಟಮಾಡಿ ಮಲ ಗಿದರು.

ಮರುದಿನ ಬೆಳಗಿನೊಳು ಸೋಮ ಭೀಮರೆದ್ದು, ಸಿದ್ಧಾ ಸಾಕಿನ್ನು ಸದ್ಗುರು ಪಾದ ! ನಿನ್ನ ಪರಮ ಮುಕ್ತಿಯೂ ಬೇಡ. ನಮಗೆ ನಮ್ಮ ತಂದೆ ತಾಯ್ಗಳ ನೆನಪಾಗಿ ಜೀವ ತಳಮಳಿಸುತ್ತದೆ. ನಮಗೆ ಇನ್ನು ಊರಿಗೆ ಹೋಗಲು ಅಪ್ಪಣೆ ಕೊಡು," ಎಂದು ಕೇಳಿದರು. ಅದಕ್ಕೆ ಸಿದ್ಧನು, "ಕೋಮ ಲಾಂಗರೆ, ನೀವು ನಿಮ್ಮ ಸದನದೊಳಿದ್ದು ಸೋಮಧರನನ್ನು ಬಿಡದೆ ಧ್ಯಾನಿ ಸಿರಿ. ಶ್ರೀಗುರು ಅಲ್ಲಿಗೆ ಐತಂದು ನಿಮ್ಮಿಷ್ಟಾರ್ಥ ಪೂರ್ತಿಮಾಡಿ ಕಾಪಾಡು ವನು ಎಂದು ಹರಸಿ ಅವರನ್ನು ಮನ್ನಿಸಿ ಕಳುಹಿಸಿಕೊಟ್ಟನು.

ಮಂಗಲ:— ಮುಕುತಿ ಕಾಂತಾಮಣಿಯ ರಮಣನೆ ।
ಸುಖದ ಸುಗ್ಗಿಯ ಸೂರಗೊಂಡನೆ ।
ನಿಖಿಲ ಶೃತಿ ಸಂಸಾರದರ್ಥನೆ ಪರಮಪಾವನನೆ ॥

ನಿಕಟ ಶಿಷ್ಯ ಸುಹೃತ್ಕಮಲವಂ |
ವಿಕಸಿಸುವ ವರಜ್ಞಾನ ದಿನಪನೆ |
ಸುಕರಮಣಿ ಶ್ರೀ ಸಿದ್ಧನೆ ನಿನಗಾನುನತನಪ್ಪ ||

ಇತಿ ಶ್ರೀಮಚ್ಛಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ
—ಲೀಲಾಚರಿತ್ರ ಕಲ್ಪದ್ರುಮದೊಳು ಅನಧಿಕಾರಿ ತ್ಯಾಗವೆಂಬ—
ಆರನೆಯ ಅಧ್ಯಯ ಸಮಾಪ್ತಿ

---

|| ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ||



# ಗುರುಶೋಧನಾ ಕಾಂಡ

## ಅಧ್ಯಾಯ ೭

|| ಓಂ ತತ್ಸತ್ ||

**ಶ್ರೀಗುರು ಸಿದ್ಧಾರೂಢಾಯ ನಮೋನಮಃ**

ಈ ಅಧ್ಯಾಯದಲ್ಲಿ ಸಿದ್ಧನು ಶ್ರೀಶೈಲದ ಸೂರ್ಯ ಸಿಂಹಾಸನ ಮಠದ ಸ್ವಾಮಿಗಳಿಗೆ ತನ್ನ ಮುಮುಕ್ಷುವಿನ ಅಧಿಕಾರವನ್ನು ತಿಳಿಸಿ ಅವರಿಂದ ಆಶೀರ್ವಾದಗೊಂಡದ್ದು ಮತ್ತು ಗುರು ಸನ್ನಿಧಿಯನ್ನು ಸೇರಿ ಸೇವೆಗೆ ನಿಂತ ವಿಷಯವಿರುವದು.

ಮಂಗಲ— ಶ್ರೀಗುರುವೆ ಸದ್ರೂಪ ಶುಭಖಣಿ ।
ಶ್ರೀಗುರುವೆ ಚಿದ್ರೂಪ ದಿನಮಣಿ ।
ಶ್ರೀಗುರುವೆ ಯಾನಂದ ಘನತಣಿ ನಿತ್ಯ ಜ್ಞಾನಧನಿ ॥
ಶ್ರೀಗುರುವೆ ಪರಿಪೂರ್ಣ ಸುಕರುಣಿ ।
ಶ್ರೀಗುರುವೆ ಶಿಷ್ಯರ್ಗೆ ನಿಂ ಪೊಣಿ ।
ಶ್ರೀಗುರುವೆ ನೀಂ ಸಗುಣಿ ನಿನಗಾಂ ನಮಿಪೆ ಮಣಿಮಣಿದು ॥

(ಪದ.-- ೧-೧೭) **ಸಿದ್ಧನು ಅಧಿಕಾರಿ ಲಕ್ಷಣಗಳನ್ನು ತಿಳಿಸಿದ್ದು**

ಸಿದ್ಧನು ಈ ರೀತಿ ಶ್ರೀಗುರುವರನನ್ನು ಸ್ಮರಿಸುತ್ತ ಮನಸ್ಸು ಗಾಸಿ ಹೊಂದದೆ ದೇಶಗಳನ್ನು ತಿರುಗುತ್ತ ಹೈದ್ರಾಬಾದಕ್ಕೆ ಬಂದು ಮುಟ್ಟಿದನು. ಅಲ್ಲಿಂದ ಗೋವಳಕೊಂಡವನ್ನು ಕಂಡು ಅಲ್ಲಿರುವ ತಿರುವಲಂಕನ ಹಳ್ಳಿಯು ದೊಂದು ಗವಿಯೊಳಗೆ ಧ್ಯಾನಸ್ಥನಾಗಿ ಕುಳಿತು ದಿವ್ಯದೃಷ್ಟಿ ಪಡೆದನು. ಆಗ ಅವನಿಗೆ ದಕ್ಷಿಣದಿಕ್ಕಿಗೆ ಸಾಗಿದರೆ ಸದ್ಗುರುವು ಸುಲಭವಾಗಿ ದೊರೆಯುವನು' ಎಂಬ ಭಾಸವಾಯಿತು. ಮುಂದೆ ಅಲ್ಲಿಂದ ಹೊರಟು ಶ್ರೀಶೈಲಕ್ಕೆ ಬಂದನು. ಅಲ್ಲಿ ಸುಂದರವಾದ ಒಂದು ಸೂರ್ಯಸಿಂಹಾಸನ ಮಠವನ್ನು ಕಂಡನು. ಅಲ್ಲಿರುವ ನಿರ್ಮಲ ಹೃದಯದ ಸ್ವಾಮಿಗಳ ದರ್ಶನ ಮಾಡಿಕೊಂಡನು. ಸ್ವಾಮಿಗಳು ಸಿದ್ಧನನ್ನು ನಿರೀಕ್ಷಿಸಿ 'ಕಂದಾ ನೀನಾರು ? ಇಷ್ಟು ಚಿಕ್ಕ ವಯಸ್ಸಿನಲ್ಲಿ ಎಲ್ಲಿಗೆ ಹೋಗುತ್ತಿರುವಿ ?" ಎಂದು ಕೇಳಿದರು. ಅದಕ್ಕೆ ಸಿದ್ಧನು, "ಪೂಜ್ಯರೇ, ನಾನು ಬಿದರಿಕೋಟೆಯಲ್ಲಿರುವ ಗುರುಶಾಂತಪ್ಪನ ಮಗನು. ನನಗೆ ಸಿದ್ಧನೆಂದು ಕರೆಯುವರು. ಈಗ ಗುರುಶೋಧನಕ್ಕಾಗಿ ಹೊರಟಿರುವೆನು," ಎಂದು ಹೇಳಿದನು. ಅದನ್ನು ಕೇಳಿ ಸ್ವಾಮಿಗಳು, ಹಾಗಾದರೆ ಸದ್ಗುರುವರನ ಕೃಪಾ ಪಡೆಯುವದಕ್ಕೆ ಸಾಧನಗಳು ಯಾವವು ಹೇಳು, ಎಂದರು.

ಆಗ ಸಿದ್ಧನು, 'ಸತ್ಪುರುಷರೆ' ವಿವೇಕಾದಿ ನಾಲ್ಕು ಸಾಧನಗಳಿಂದ ಈ ಭವರೂಪ ಸಂಸಾರವು ದುಃಖಮಯವೆಂದು ತಿಳಿದು ಜಾರಣಿಯಾದವಳು ಯಾವಾಗಲೂ ತನ್ನ ವಿಟಪುರುಷನ ಮೇಲೆ ತನ್ನ ದಿಟವಾದ ಮನಸ್ಸನ್ನಿಟ್ಟಿರು ವಂತೆ ಪರತರ ಸುಖವನ್ನು ಇಚ್ಛಿಸುವವನೇ ಮೋಕ್ಷಾಪೇಕ್ಷೆಯುಳ್ಳವನೆಂದು

ಹೇಳಿಸಿಕೊಳ್ಳುವನು. ಇನ್ನು ಅಹಂಕಾರವೆಂದರೆ, ಸರ್ವವನ್ನೂ ನಾನೇ ಅರಿಯುವವನೆಂಬ ಚೇತನ ಅಭಾಸವು. ಮಮಕಾರವೆಂದರೆ, ತನಗಿದಿರಿಟ್ಟು ತೋರುವ ಘಟ ಮೊದಲಾದ ಸಕಲ ವಸ್ತುಗಳಲ್ಲಿ ನನ್ನದೆಂಬ ಭಾವವು. ಹೀಗೆ ವಿಚಾರ ಮೂಲಕ ಜಡ ಮತ್ತು ಚೇತನ ಇವುಗಳನ್ನು ಬೇರ್ಪಡಿಸಿ, ತಿಳಿಯುವದೇ ಆತ್ಮಾನಾತ್ಮ ವಿವೇಕವು. ಇಂಥ ವಿಚಾರದಿಂದ ತನಗೆ ಅನ್ಯವಾದ ಇಹಲೋಕ ಮತ್ತು ಪರಲೋಕದೊಳಗಿನ ಎಲ್ಲ ವಿಷಯ ಭೋಗಭಾಗ್ಯಂಗಳು ದುಃಖಮಯವೆಂದು ನಿಶ್ಚಯಿಸಿ, ತಾನು ಅವುಗಳನ್ನು ಇಚ್ಛಿಸದೆ, ಅವೆಲ್ಲ ತೃಣ ಸಮಾನವೆಂದು ತಿರಸ್ಕರಿಸಿ ಬಿಡುವುದೇ ಶ್ರೇಷ್ಠತರವಾದ ವೈರಾಗ್ಯವು. ಮತ್ತು ಕಪಿಯಂತೆ ಚಪಲತೆಯಿಂದ ವಿಷಯದಿಂದ ವಿಷಯಕ್ಕೆ ಹಾರಾಡುತ್ತಿರುವ ಮನಸ್ಸನ್ನು ತಡೆಗಟ್ಟುವದೇ ಶಮೆ. ಇದು ಅಲ್ಲದೆ ಬಾಹ್ಯವಿಷಯಂಗಳಿಗೆ ಭರದಿಂದ ಹರಿದಾಡುವ ಜ್ಞಾನೇಂದ್ರಿಯಗಳನ್ನು ತಡೆಹಿಡಿಯುವದೇ ದಮೆ. ಗುರುಗಳಲ್ಲಿಯೂ, ವೇದಶಾಸ್ತ್ರಗಳಲ್ಲಿಯೂ ಸಲೆ ವಿಶ್ವಾಸವನ್ನಿಡುವದೇ ನಿಜವಾದ ಶ್ರದ್ಧೆ ಇಂಥೆ. ಶ್ರದ್ಧೆಯಿಂದೊಡಗೂಡಿ, ನಿತ್ಯ ನೇಮಾದಿಗಳನ್ನೂ ಉಪಾಸವಾದಿಗಳನ್ನೂ ಮಾಡುತ್ತ, ಮನದೊಳುದಿಸುವ ಪರತರದ ಸಂಕಲ್ಪ ವಿಕ್ಷೇಪಾದಿ ದೋಷಗಳನ್ನು ದೂರೀಕರಿಸಿ ಚಿತ್ತವನ್ನು ಸ್ಥೈರ್ಯದಿಂದ ಇರಿಸುವದೇ ಸಮಾಧಾನ, ಈ ಪ್ರಕಾರ ವೈರಾಗ್ಯದಿಂದ ಸ್ಥಿರವಾಗಿರುವ ಮನಸ್ಸನ್ನು ಪುನಃ ವಿಷಯಕ್ಕೆ ಹರಿಯಗೊಡದೆ ಮತ್ತು ಅವುಗಳನ್ನು ಸ್ಮರಣಕ್ಕೆ ತಾರದಿರುವದೇ ಉಪರತಿಯು. ಶ್ರವಣಾದಿ ಸಾಧನಗಳನ್ನು ಸಾಧಿಸುವ ಕಾಲಕ್ಕೆ ಶರೀರಕ್ಕೆ ಬಿಡದೆ ಕಾಡುತ್ತಿರುವ ಶೀತೋಷ್ಣಾದಿ ದ್ವಂದ್ವ ದುಃಖಗಳನ್ನು ಸಹಿಸಿಕೊಳ್ಳುವದೇ, ತಿತೀಕ್ಷೆ ಎನಿಸುವದು. ಹೀಗೆ ಶಮೆ, ದಮೆ, ಉಪರತಿ, ತಿತೀಕ್ಷೆ ಶ್ರದ್ಧಾ ಮತ್ತು ಸಮಾಧಾನಇವಾರಕ್ಕೂ ಶಮಾದಿ ಷಟ್ಸಂಪತ್ತೆಂದು ಹೇಳುವರು.

ಆಗ ಸ್ವಾಮಿಗಳು ಈ ಮುದ್ದು ಬಾಲಕನ ಮುದ್ದು ಮುಖದಿಂದ ಮುತ್ತಿನಂತೆ ಸುರಿಯುತ್ತಿರುವ ತತ್ವ ವಚನಗಳನ್ನು ಕೇಳಿ ಆನಂದ ಪರವಶರಾದರು, ಅವನನ್ನು ತಬ್ಬಿಕೊಂಡು ಮುದ್ದಾಡಿದರು. ಮತ್ತು ಸ್ವಾಮಿಗಳು ತಮ್ಮಲ್ಲಿಯೇ ಆಲೋಚಿಸುತ್ತ, “ಇವನು ಮೊದಲು ಜನ್ಮ ಜನ್ಮಾಂತರಗಳಲ್ಲಿ ಅನಂತ ತಪಸ್ಸು ಮಾಡಿದ ತಪೋಭ್ರಷ್ಟನೋ ? ಅಥವಾ ಭವಿಗಳ ಭಯಗಳನ್ನು ಸದೆಬಡಿಯಬಂದ ಶಂಕರನೋ ? ಇವನು ಶಂಕರನೇ ಅಹುದು” ಎಂದು

ನಿಶ್ಚಯಿಸಿ ಸಿದ್ಧನನ್ನು ಪುನಃ ಬಿಗಿದಪ್ಪಿ ಸಂತೈಸಿದರು. ಬಳಿಕ ಸ್ವಾಮಿಗಳು ಸಿದ್ಧನಿಗೆ, "ಬಾಳಾ ನಿನಗೆ ಶ್ರೀ ಸದ್ಗುರುವರನು ಶೀಘ್ರದಲ್ಲಿ ಸಿಗುವನು. ಅವರಿಂದ ಜ್ಞಾನ ಪಡೆದು, ಜಗದೊಳಗೆ ಸರ್ವಜ್ಞನೆನಿಸುತ್ತ ಸರ್ವ ಜೀವರುಗಳ ಜ್ಞಾನಶಕ್ತಿಯನ್ನು ಬೆಳೆಸು. ಜಗತ್ತಿನಲ್ಲಿ ನಿನ್ನ ಕೀರ್ತಿಯು ಪ್ರಖ್ಯಾತವಾಗಿ ಬೆಳಗಲಿ," ಎಂದು ಆಶೀರ್ವದಿಸಿ ಬಿಟ್ಟುಕೊಟ್ಟರು.

ಬಳಿಕ ಸಿದ್ಧನು ಸ್ವಾಮಿಗಳವರ ಆಶೀರ್ವಾದ ಪಡೆದು ಹೊರಟು ಬಂದು ಮುಂದೆ ರಾಯಚೂಟಿ ವೀರಭದ್ರನ ದರುಷನ ಮಾಡಿಕೊಂಡು ಅಲ್ಲಿಂದ ಮುಂದೆ ಸಾಗಿದನು. ಹಾಗೆಯೆ ನವನಂದಿ ಮೊದಲಾದ ಅಂದ ಚಂದ ಕ್ಷೇತ್ರಗಳನ್ನು ಚರಿಸುತ್ತ, ಸಂಚಾರದಲ್ಲಿ ತನಗೆ ಒದಗಿಬಂದ, ಸಂಕಷ್ಟಗಳನ್ನು, ತನ್ನಲ್ಲಿ ನೆಲೆಸಿರುವ ಶಮಾದಿ ಷಟ್ಸಂಪತ್ತಿನ ಬಲದಿಂದ, ಸಹಿಸಿಕೊಳ್ಳುತ್ತಿದ್ದನು. ಹೀಗೆ ಕಾಡು, ಗುಡ್ಡ, ಕಂದರ, ನದಿ, ಹಳ್ಳ–ಕೊಳ್ಳಗಳನ್ನು ತಿರುಗುತ್ತ, ಸುರಪುರಕ್ಕೆ ಬಂದು ಮುಟ್ಟಿದನು. ಅಲ್ಲಿ ಒಂದು ಕಬ್ಬಿಣ ಮುಳ್ಳಗಸಿ ಇದ್ದು, ಅದರ ಸಮೀಪಕ್ಕೆ ಬಂದನು. ಅಲ್ಲಿ ಒಂದು ಶಿವದೇವಾಲಯವನ್ನು ಕಂಡು ಅಲ್ಲಿಗೆ ಹೋದನು. ಅಲ್ಲಿ ಗಾಂಜಿ ಸೇದುವ ಸಾಧುಗಳನ್ನು ಕುರಿತು, ಪಾರಮಾರ್ಥ ಬಲ್ಲ ಸದ್ಗುರು ಎಲ್ಲಿರುವನು," ಎಂದು ಕೇಳಿದನು. ಆಗ ಅವರೊಳಗೊರ್ವ ಸಾಧು "ಕುಶಲಮತಿಯೇ, ಗುಡಗುಂಟಿ ಎಂಬ ಪುರದಲ್ಲಿ ಅಮರಗುಂಡದ ಮಲ್ಲಿಕಾರ್ಜುನನ ಸ್ಫಟಿಕ ದೇವಾಲಯದ ಕಟ್ಟೇಮಠದ ಪಟ್ಟದ ಸ್ವಾಮಿಗಳೆಂದು ಪ್ರಖ್ಯಾತರಾದ ಶ್ರೀ ಗಜದಂಡ ಮಹಾಸ್ವಾಮಿಗಳಿರುವರು," ಎಂದು ಹೇಳಿದನು. ಆಗ ಸಿದ್ಧನು ಕಾಡುಬಿದ್ದು ಅಡವಿ ಅಡವಿ ತಿರುಗುತ್ತ ಮೂರು ದಿನ ನಿದ್ರಾ ಆಹಾರಾದಿಗಳ ಪರಿವೆಯಿಲ್ಲದೆ ಶುದ್ಧಮನದಿಂದ ಗುರುಸ್ಮರಣೆಯಲ್ಲಿ ಮಗ್ನನಾಗಿ ದಾರಿ ನಡೆಯುತ್ತ ಗುಡಗುಂಟಿಗೆ ಬಂದನು.

## (ಪದ:— ೧೭–೧೮) ಸಿದ್ಧನು ಗುರುಸನ್ನಿಧಿಯನ್ನು ಸೇರಿ ಸೇವೆಗೆ ನಿಂತದ್ದು

ಆಗ ಊರೊಳಗಿಂದ ಹಣ್ಣು–ಕಾಯಿಗಳನ್ನು ಕೊಂಡು ತಂದು ಮಲ್ಲಿಕಾರ್ಜುನ ಲಿಂಗನ ದರುಶನ ಮಾಡಿಕೊಂಡು ಮಠಕ್ಕೆ ಬಂದನು. ನಕ್ಷತ್ರಗಳ ಮಧ್ಯದಲ್ಲಿ ಪೂರ್ಣಚಂದ್ರನು ಹೊಳೆದು ಶೋಭಿಸುತ್ತಿರುವಂತೆ ಎಲ್ಲ ಶಿಷ್ಯರ

ಸಮೂಹದಲ್ಲಿ ಪ್ರಕಾಶಿಸುತ್ತಿರುವ ಗಜದಂಡ ಗುರುಗಳ ದರುಶನ ಮಾಡಿಕೊಂಡನು. ಆಗ ಹೃದಯುಗೆದರಿ ಅರಳಿದ ಮುಖ ಕಮಲದೊಂದಿಗೆ ಬಾಲ ಸಿದ್ಧನು ಹರುಷೋದ್ಗಾರದಿಂದ "ಶ್ರೀಗುರು ಮಹಾರಾಜಕೀ ಜೈ" ಎಂದು ಘೋಷಣೆ ಮಾಡಿದನು. ತಂದ ಫಲಪುಷ್ಪಗಳನ್ನು ಸದ್ಗುರುಗಳ ಮುಂದಿರಿಸಿ ಅಷ್ಟಾಂಗಗಳು ನೆಲಸೋಂಕುವಂತೆ ಸಾಷ್ಟಾಂಗದಿಂ ನಮಿಸಿ ಮತ್ತು ಎದ್ದು ವಿನಯಾದಿ ಭಯಭಕ್ತಿಯಿಂದ ಕೈ ಜೋಡಿಸಿ ಮಂತ್ರಾಷ್ಟಕ ನುಡಿದು "ನನ್ನನ್ನು ಕಾಪಾಡು ತಂದೆ" ಎಂದು ಕಣ್ಣು ಮುಚ್ಚಿ ಶಿರಬಾಗಿದನು.

ಆಗ ಸದ್ಗುರುಗಳು ಸಿದ್ಧನನ್ನು ತೀಕ್ಷ್ಣತೆಯಿಂದ ಈಕ್ಷಿಸಿ, ಬಾಲಕಾ, ನೀನಾರ ಮಗನು ? ಎಲ್ಲಿಂದ ಬಂದೆ ? ಇಲ್ಲಿಗೆ ಬರಲಿಕ್ಕೆ ಕಾರಣವೇನು" ? ಎಂದು ಕೇಳಿದರು. ಕೂಡಲೇ ಸಿದ್ಧನು, "ನಾನು ಬಿದರೀಕೋಟೆಯಿಂದ ಬಂದೆನು, ನನ್ನ ತಂದೆ ಗುರುಶಾಂತಪ್ಪನು. ದುಃಖ ನಿವೃತ್ತಿ ಪರಮಾನಂದ ಪ್ರಾಪ್ತಿಗಾಗಿ ನಾನು ಇಲ್ಲಿಗೆ ಬಂದಿರುವೆನು. ಸಿದ್ಧನೆಂಬ ನಾಮವು ನನಗಿರುವದು, ಗುರುನಾಥಾ," ಎಂದು ಕೈಜೋಡಿಸಿ ತಲೆ ಬಗ್ಗಿಸಿನಿಂತನು.

ಗುರುಗಳು ಇವನ ಅಧಿಕಾರ ಪರೀಕ್ಷಿಸಿ ತಿಳಿಯಬೇಕೆಂದು ಮನಸ್ಸು ಮಾಡಿ "ಹಾಗಾದರೆ ನೀನು ಇಲ್ಲಿಯೇ ಸೇವೆ ಮಾಡುತ್ತ ಇರು," ಎಂದು ಹೇಳಿದರು. ಮತ್ತು ಬಳಲುವ ಅತೀ ಹೀನ ಸೇವೆಯಲ್ಲಿ ಸಿದ್ಧನನ್ನು ಬಹು ದಿವಸಗಳವರೆಗೆ ಇರಿಸಿದರು. ಸಿದ್ಧನು ಸದ್ಗುರುವಿನ ಮಠದ ಸೇವೆಗಾಗಿ ತನು ಮನಗಳ ಪರಿವೆಯಿಲ್ಲದೆ, ಹಗಲು ರಾತ್ರಿಯೆನ್ನದೆ, ಕುದುರೆ ಚಾಕರಿ ಮಾಡುವದು, ಅದರ ಲದ್ದಿ ಬಳೆಯುವದು, ರಾಜಾಂಗಳ ಕಸ ತೆಗೆಯುವದು, ಮುಸುರೆ ಪಾತ್ರೆ ತಿಕ್ಕುವದು ಮೊದಲಾದ ಎಲ್ಲ ಸೇವೆಯನ್ನು ಉಚ್ಚ–ನೀಚ ವೆನ್ನದೆ ಅತಿ ಹರುಷದಿಂದ ಮಾಡುತ್ತಿದ್ದನು. ಗುರುಗಳನ್ನು ಕಂಡಾಕ್ಷಣವೇ, ಶಿರಬಾಗಿ ನಮಿಸುತ್ತ ಸದ್ಭಾವದಿಂದ ಗುರುವರನನ್ನು ನೆನೆಯುತ್ತಿದ್ದನು. ಹೀಗೆ ಹನ್ನೆರಡು ವರುಷ ಪರಿಯಂತ ಅಹೋರಾತ್ರಿ ಗುರುಸೇವಾ ತತ್ಪರನಾಗಿದ್ದನು. ಇದೆಲ್ಲವನ್ನು ಸದ್ಗುರುಗಳು ಕಂಡು ಇವನು ಅಧಿಕಾರಿ ಇರುವನೆಂದು ಮನಗಂಡರು. ಮತ್ತು ಅವನು ಮಾಡುವ ಸೇವೆಯನ್ನು ಬಿಡಿಸಿ, "ಇನ್ನು ನೀನು ಶಾಸ್ತ್ರದಲ್ಲಿ ಪ್ರವೃತ್ತನಾಗು," ಎಂದು ಅವನಿಗೆ ಅಪ್ಪಣೆ ಕೊಡಿಸಿದರು. ಆ ಬಳಿಕ ಸಿದ್ಧನು ಸದ್ಗುರುಗಳ ಅಪ್ಪಣೆಯ ಮೇರೆಗೆ ಶಾಸ್ತ್ರದಲ್ಲಿ ನಿರತನಾದನು ಎಂಬಲ್ಲಿಗೆ ಮಂಗಲ.

ಶ್ರೀ ಗುರುವಿಗೆ ಚಿತ್ಕಾಂತ ಮಮಹೃದ ।
ಯಾಗಸದೆ ಕರುಣಾಸುರವಿತಾ ।
ಮೀಗಳುದಿಸುತ್ತ ನೆಲಸಿದವಿದ್ಯೆ ಕತ್ತಲೆಯ ॥
ನೀಗಿ ಕರುಣಿಸೆ ನಿಂದು ನೀಂ ಹೊಣೆ ।
ಯಾಗುತೆನ್ನಂ ಸರ್ವವರಿತವ ।
ನಾಗಿರುವ ನಿಜಯೋಗಿಯೆನಿಸೈ ಯೋಗಿಜನವಂದ್ಯಾ ।

ಇತಿ ಶ್ರೀಮಚ್ಚಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ ಲೀಲಾಚರಿತ್ರ ಕಲ್ಪದ್ರುಮದೊಳು ಗುರುಸಾನಿಧ್ಯ ಪ್ರಾಪ್ತಿ ಎಂಬಲ್ಲಿಗೆ ಏಳನೆಯ ಅಧ್ಯಾಯ ಸಂಪೂರ್ಣ.

---

॥ ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ॥



## ಸಂಚಾರಸಂಭ್ರಮ ಕಾಂಡ

### ಅಧ್ಯಾಯ ೭

॥ ಓಂ ತತ್ಸತ್ ॥

ಈ ಅಧ್ಯಾಯದಲ್ಲಿ ಪದ— ೧-೨೯ ಸುರಪುರದ ಆಸ್ಥಾನ ಪಂಡಿತ ಸುಬ್ಬಯ್ಯ ಶಾಸ್ತ್ರಿಗೆ ಉಪನಿಷತ್ ಶಬ್ದಾರ್ಥವನ್ನು ಪೇಳಿದ್ದು. ಮತ್ತು ಬ್ರಾಹ್ಮಣರಾರೆಂಬ ಬಗ್ಗೆ ವಜ್ರಸೂಚಿ ಉಪನಿಷತ್ ಪೇಳಿದ್ದು.

ಮಂಗಲ— ಶ್ರೀ ಮಹಾಬಲ ಭೀಮ ಬಹು ನಿ |
ಷ್ಕಾಮ ಪರಮತ ಮದಗಜಾಂಕುಶ |
ತಾಮಸ ಜ್ಞಾನ ಪ್ರಭಾಕರ ಸತ್ಯಸನ್ನಾಮಿ ||
ಶ್ರೀಮರುದ್ಮುನಿವಂದ್ಯ ಶ್ರುತಿಮತ |
ಪ್ರೇಮ ಸದಯಾ ಮಂಗಲಾತ್ಮ |

ರಾಮಶಿಷ್ಯ ಸುಹೃತ್ಕುಮುದ ಶಶಿ ನಿನ್ನ ನಾಂ ನಮಿಪೆ ||

ಒಂದು ದಿನ ಸುರಪುರದ ಆಸ್ಥಾನ ಪಂಡಿತನಾದ ಸುಬ್ಬಯ್ಯ ಶಾಸ್ತ್ರಿ ಎಂಬವನು ವಿದ್ಯಾ ಮದದಿಂದ ತನ್ನ ಹೃದಯದಲ್ಲಿ ಮಾತ್ಸರ್ಯ ತುಂಬಿ ಕೊಂಡು ಶ್ರೀ ಗಜದಂಡ ಸ್ವಾಮಿಗಳನ್ನು ನಿಂದಿಸಬೇಕೆಂದು ಅಲ್ಲಿಗೆ ಬಂದನು ಮತ್ತು ಸೂರ್ಯನೆದುರಿಗೆ ಚಿಮಣಿ ಇಟ್ಟಂತೆ ಅವರ ಮುಂದೆ ಕುಳಿತನು.

ಆವಾಗ್ಗೆ ಸದ್ಗುರುಗಳು ತಮ್ಮ ಶಿಷ್ಯವೃಂದಕ್ಕೆ ಶಾಸ್ತ್ರ ಶ್ರವಣ ಮಾಡಿ ಸುತ್ತಿದ್ದರು. ಆಗ ಶಾಸ್ತ್ರಿಯು, ಗಜದಂಡ ಗುರುಗಳನ್ನು ಕುರಿತು, "ನಿಮ್ಮ ಶಿಷ್ಯರಿಗೆ ಯಾವ ಶಾಸ್ತ್ರ ಬೋಧಿಸುತ್ತೀರಿ ?" ಎಂದು ಕೇಳಿದನು. ಅದಕ್ಕೆ ಗುರುಗಳು, "ಅಯ್ಯಾ ಇಂದು ಉಪನಿಷತ್ತಿನ ಅರ್ಥವನ್ನು ಬೋಧಿಸಲಾಗು ವದು" ಎಂದು ಹೇಳಿದರು.

ಅದನ್ನು ಕೇಳಿ ಸುಬ್ಬಯ್ಯಶಾಸ್ತ್ರಿಯು, ಮಂದಹಾಸದಿಂದ ನಕ್ಕು, "ಸ್ವಾಮೀ ! ಉಪನಿಷತ್ತನ್ನು ಹೇಳುವ-ಕೇಳುವ ಅಧಿಕಾರವು ಬ್ರಾಹ್ಮಣರಿ ಗಷ್ಟೇ ಇರುವದಲ್ಲದೆ, ಅನ್ಯರಿಗೆ ಇರುವದಿಲ್ಲ. ಆ ಉಪನಿಷತ್ತಿನ ಮೂಲ ಶಬ್ದಾರ್ಥವೇ ನಿಮಗೆ ತಿಳಿಯದು. ಹೀಗಿದ್ದು ನಾವು ಬಲ್ಲವರು ಎಂದು ಹೇಳಿಸಿಕೊಳ್ಳುವದಕ್ಕಾಗಿ ನೀವು ಶಾಸ್ತ್ರವನ್ನು ಹೇಳುತ್ತಿರಬಹುದು ಅಲ್ಲವೇ ?" ಎಂದನು.

ಹೀಗೆ ಶಾಸ್ತ್ರಿಯು ನುಡಿದಾಕ್ಷಣವೇ ಬಾಲ ಸಿದ್ಧನು ದಿಗ್ಗನೆ ಎದ್ದು ಗುರುಗಳ ಪಾದಕ್ಕೆ ಬಿದ್ದು, "ತಂದೆಯೇ ! ತ್ವರೆಯಿಂದ ತಾವು ಅಪ್ಪಣೆ ಕೊಡಿ ಸಿದ್ದಾದರೆ ತಾವೇ ಪ್ರೇರಿಸಿದಂತೆ ನಾನು ಇವನ ಜೊತೆಗೆ ಚಂದವಾಗಿ ಒಂದೆರಡು ಮಾತುಗಳನ್ನಾಡುವೆನು" ಎಂದು ವಿಜ್ಞಾಪಿಸಿಕೊಂಡನು.

## ಉಪನಿಷತ್ ಶಬ್ದಾರ್ಥ ವಿವರಣೆ

ಆಗ ಗುರುಗಳು ಅಪ್ಪಣೆ ಮಾಡಲು ಸಿದ್ಧನು ಶಾಸ್ತ್ರಿಗಳನ್ನು ಕುರಿತು, "ಶಾಸ್ತ್ರಿಗಳೇ ಕೇಳಿರಿ. ನಿತ್ಯ ಬ್ರಹ್ಮಾತ್ಮೈಕ್ಯ ಬೋಧಕ ಬ್ರಹ್ಮವಿದ್ಯೆಯೇ ಉಪನಿಷನಿತ್ತಿನ ಸತ್ಯವಾದ ಅರ್ಥವೆಂದು ತಿಳಿಯಿರಿ" ಎಂದನು. ಆಗ ಶಾಸ್ತ್ರಿಯು "ಇದಕ್ಕೆ ವಿದ್ಯೆಯೆಂದು ಅರ್ಥವನ್ನು ಹೇಗೆ ಮಾಡುತ್ತೀ ?" ಎಂದು ಕೇಳಿದನು. ಅದಕ್ಕೆ ಸಿದ್ಧನು, ಶಾಸ್ತ್ರಿಗಳೇ ಮೊದಲು ನಾನು ರಾಧೆಯ ಮಗನೆಂದು ಕರ್ಣನಿಗೆ ದೃಢವಾಗಿತ್ತು. ಆದರೆ ಶ್ರೀಕೃಷ್ಣ ಪರಮಾತ್ಮನು ನೀನು ರಾಧೆಯ ಪುತ್ರನಲ್ಲ, ಕುಂತಿಯ ಪುತ್ರನೇ ನೀನಿರುತ್ತೀ," ಎಂದು ಹೇಳಲು ಕರ್ಣನಿಗೆ ತನಗೆ ಮುನ್ನಿದ್ದ ಭ್ರಮಜ್ಞಾನವು ಅಡಗಿ ನಿಜಜ್ಞಾನವು ಆಯಿತು. ಅದರಂತೆ ಈ ಬ್ರಹ್ಮವಿದ್ಯೆಯು ಶಿಷ್ಯನ ಹೃದಯದಲ್ಲಿರುವ ಅಜ್ಞಾನವನ್ನು ಹೋಗಲಾಡಿಸಲು ಕಾರಣವಾಗಿದೆ. ಉಪನಿಷತ್ತಿನಲ್ಲಿ ಮೂರು ಪದಗಳಿವೆ. ಅವುಗಳ ಅರ್ಥವನ್ನು ಸಾವಧಾನದಿಂದ ಕೇಳು" ಎಂದು ಕಂದನಾದ ಕರುಣಾಳು ಸಿದ್ಧನು ಸೇಳತೊಡಗಿದನು. ಚದುರ ಪಾಣಿನಿಯ "ಸದಲೃಗತ್ಯವಸರಣಸಾಧನೆಯೋಃ" ಎಂಬ ಸೂತ್ರದಲ್ಲಿ ಇವರು ಸದಲೃ ಧಾತುವಿಗೆ ಗತಿ ಅವಸರಣ ಸಾಧನವೆಂಬ ಎರಡು ಅರ್ಥಗಳಿರುತ್ತವೆ. ಉಪ-ನಿಷತ್ ಈ ಶಬ್ದದಲ್ಲಿ ಉಪ, ನಿ ಎಂಬ ಎರಡು ಉಪಸರ್ಗಗಳು. ಸದ ಧಾತುವಿಗೆ ಕ್ವಿಪ್ ಪ್ರತ್ಯಯ ಬರಲು ಅದು ಎರಡು ಅರ್ಥಗಳನ್ನು ಸೂಚಿಸುವದು. ಅದನ್ನು ನಿನಗೆ ಚನ್ನಾಗಿ ತಿಳಿಸುತ್ತೇ, ಲಕ್ಷ್ಯಗೊಡು. ಮಂದ ಜಿಜ್ಞಾಸುಗಳನ್ನು ದುಃಖದಲ್ಲಿ ಕೆಡುವ ಗರ್ಭ, ಜನಿ, ಜರೆಗಳನ್ನು "ಉಪನಿಷಾದ-ಯತಿ" ಅಂದರೆ ಶಿಥಿಲ ಮಾಡುವದು, ಎಂಬ ಅರ್ಥವು. ಜಿಜ್ಞಾಸು ಅಥವಾ ಮುಮುಕ್ಷುಗಳನ್ನು ಉಪ ಅಂದರೆ (ಬ್ರಹ್ಮನ) ಸಮೀಪಕ್ಕೆ ನಿಷೀದಯತಿ ಎಂದರೆ ತೀವ್ರ ಒಯ್ದು ನಿಲ್ಲಿಸುವದು. ಇದು ಎರಡನೆಯ ಅರ್ಥವು. ಮತ್ತು ಗರ್ಭಿತವಾದ ಪ್ರೌಢ ತತ್ವವು, ದುಃಖಕ್ಕೆ ಕಾರಣವಾದ ಅವಿದ್ಯೆಯನ್ನು ಹೊಡದೋಡಿಸುವದರಿಂದ ಅವಸಾಧನವೆಂಬುದೇ ಮೂರನೇ ಅರ್ಥವು. ಮೂಢನೇ ಕೇಳು, ಉಪನಿಷತ್ ಎಂದರೆ ಭೇದರಹಿತ ಜ್ಞಾನವೆಂದು ತಿಳಿ ಇದರ ಅರ್ಥವು ವೇದ ಗರ್ಭಶೋಧಿಸಿದ ಶಿವಯೋಗಿಗೆ ಆಗುತ್ತದೆ. ಅದು

ಕಾರಣ ಆ ಉಪನಿಷತ್ತು ಭೇದರಹಿತ ಜ್ಞಾನ ಮಾಡಿಕೊಂಡಿರುವದರಿಂದ ಇದು ಏಕಾರ್ಥವಾಗಿರುವದು.

## ಬ್ರಾಹ್ಮಣರು ಯಾರು ?

ಜಗತ್ತಿನಲ್ಲಿ ಇಂಥ ಜ್ಞಾನಕ್ಕೆ ಸಾಧಕರು ಅಸಂಖ್ಯಾತರುಂಟು. ಇದೆಲ್ಲ-ವನ್ನು ಅರಿಯದೆ ತಿಳಿಗೇಡಿತನದಿಂದ ಹೀಗೆ ಬೊಗಳುವದು ನಿಮಗೆ ಉಚಿತವಲ್ಲ. ಇನ್ನು ನೀನು ಬ್ರಾಹ್ಮಣರೇ ಬ್ರಹ್ಮವಿದ್ಯೆಗೆ ಯೋಗ್ಯರಾದ ಅಧಿಕಾರಿಗಳು, ಅನ್ಯರಲ್ಲಾ ಎಂದು ಹೇಳುವದಾದರೆ, ನಿನ್ನ ಗೋತ್ರ ವಿಚಾರ ಮಾಡುತ್ತಿರಲಿಕ್ಕೆ ಮೊದಲು ನೀನೇ ಬ್ರಾಹ್ಮಣನಲ್ಲ. ಏಕೆಂದರೆ ವಜ್ರಸೂಚಿ ಎಂಬ ಗ್ರಂಥದಲ್ಲಿ ಹೇಳಿರುವ ಆರು ಪ್ರಶ್ನೆಗಳನ್ನು, ವಿಚಾರಿಸಿದರೆ ನಿನ್ನ ಬ್ರಾಹ್ಮಣತ್ವವೇ ಸಿದ್ಧಿಸುವದಿಲ್ಲ. ಅದು ಹೇಗೆಂದರೆ—

ಬ್ರಾಹ್ಮಣನೆಂಬುವದು ಈ ತೋರ ತನುವೋ, ಜೀವನೋ, ಜಾತಿಯೋ, ಕರ್ಮವೋ, ದಾನವೋ ಇಲ್ಲವೆ ಜ್ಞಾನವೋ ? ಈ ಆರರಲ್ಲಿ ಯಾವುದಕ್ಕೆ ಬ್ರಾಹ್ಮಣನೆಂದು ಹೇಳುತ್ತೀ ? ನೀನು ಜೀವನಿಗೆ ಬ್ರಾಹ್ಮಣನು ಎಂದು ಹೇಳಿದರೆ, ಜನ್ಮ ಜನ್ಮಾಂತರದಲ್ಲಿ ಕರ್ಮವನ್ನು ಮಾಡಿ ಅದರ ಫಲಗಳನ್ನು ಉಣ್ಣುವದಕ್ಕಾಗಿ ದೇವತೆಗಳೇ ಮೊದಲುಗೊಂಡು ಕ್ರಿಮಿಕೀಟಗಳೇ ಕಡೆಯಾಗಿ ಜನ್ಮ ತಾಳುತ್ತ ಎಲ್ಲ ಶರೀರಗಳಲ್ಲಿ ಅನೇಕ ಹೆಸರುಗಳನ್ನು ಪಡೆಯುವ ಜೀವನು, ಬ್ರಾಹ್ಮಣನಲ್ಲ. ಇನ್ನು ನೀನು ಶರೀರಕ್ಕೆ ಬ್ರಾಹ್ಮಣನೆಂದದ್ದಾ-ದರೆ ಅನಂತಕೋಟಿ ಶರೀರಗಳು ಹುಟ್ಟುತ್ತಿರುವವು. ಅವೆಲ್ಲ ಶರೀರಗಳು ಬ್ರಾಹ್ಮಣನಾಗಬೇಕಾಯಿತು. ಮತ್ತು ತನುವಿಮೋಚನ ಕಾಲದಲ್ಲಿ ಆ ಶರೀರ ವನ್ನು ದಹಿಸಬೇಕಾಗುವದು. ಆಗ ನೀನು ಬ್ರಹ್ಮಹತ್ಯದೋಷಕ್ಕೆ ಸಮ್ಮತಿಸಿ ದಂತಾಗುವದು. ತಿಳಿಯಿತೇ ತಿಳಿಗೇಡಿ ! ಮತ್ತು ನೀನು ಜಾತಿಗೆ ಬ್ರಾಹ್ಮಣ ನೆಂದು ಹೇಳಿದರೆ ಕೇಳು. ಮಾನವ, ಪಶು, ಪಕ್ಷಿ ಮೊದಲಾದವುಗಳಲ್ಲಿ ಋಷಿವರರು ನೀತಿ ಯುತರಾಗಿ ಜನಿಸುವರು, ಅವರು ಯಾರೆಂದರೆ, ಊರ್ವಶಿ ಯಿಂದ ವಸಿಷ್ಠರು, ಕೈವರ್ತಕಿಯಿಂದ ವ್ಯಾಸರು, ಹುಟ್ಟಿದರು. ಜಂಬೂಕದಿಂದ ಜಾಂಬುಕ ಋಷಿಯು, ಅಂಬಿ ಎಂಬ ಹರಣಿಗೆ ಶೃಂಗನು, ಮತ್ತು ಹುತ್ತಿನಿಂದ

ವಾಲ್ಮೀಕಿ ಋಷಿವರನು, ಕುಂಭದಿಂದ ಅಗಸ್ತ್ಯಮುನಿ ಜನಿಸಲಿಲ್ಲವೇ ? ಮತ್ತು ಕೆಂಪು ಜಡೆಯಿಂದ ಕೌಶಿಕನು, ದರ್ಭದಿಂದ ಬುಧನು, ಮೊಲದಿಂದ ಗೌತು-ಮನು ಜನಿಸಿದರು. ಈ ಪ್ರಕಾರ ಋಷಿಗಳು ಬೇರೆ ಬೇರೆ ಜಾತಿಗಳಲ್ಲಿ ಜನ್ಮವೆತ್ತಿ, ವೇದಾಂತದ ಬ್ರಹ್ಮಜ್ಞಾನದಿಂದ ಭ್ರಾಂತಿಮಯ ಈ ಜಾತ್ಯಾದಿಗಳೆಲ್ಲವನ್ನು ತೊರೆದು ಪೂಜ್ಯರೆನಿಸುತ್ತ ಸತತ ಸುಖದಿಂದ ಇರುತ್ತಿರಲಾಗಿ ಜಾತಿಗೆ ಬ್ರಾಹ್ಮಣತ್ವ ಎಂತಾಗುವದು ? ನೀನೇ ವಿಚಾರಿಸು.

ಇದು ಅಲ್ಲದೆ ನೀನು ಜ್ಞಾನಕ್ಕೆ ಬ್ರಾಹ್ಮಣನೆಂದರೆ ಜ್ಞಾನವೆಂಬುದು ಎಲ್ಲ ಪ್ರಾಣಿಗಳಲ್ಲಿ ನ್ಯೂನವಿಲ್ಲದೆ ಸಮಾನವಾಗಿ ಇದ್ದೇ ಇರುವದು. ಬಳಿಕ ನೀನು ಪಾರಮಾರ್ಥಿಕ ಜ್ಞಾನಕ್ಕೆ ಬ್ರಾಹ್ಮಣನೆಂದರೆ ಎಲ್ಲ ವರ್ಣದವರಲ್ಲಿ ಬ್ರಹ್ಮಜ್ಞಾನಿಗಳು ಆಗಿರುವರು. ಅವರೆಲ್ಲರೂ ಬ್ರಾಹ್ಮಣರೇನು ? ಹೀಗಿರಲು ಜ್ಞಾನವು ಕೂಡಾ ಬ್ರಾಹ್ಮಣನಾಗಲಾರದು. ಇನ್ನು ಕರ್ಮವು ಬ್ರಾಹ್ಮಣ-ನೆಂದು ಹೇಳಿದ್ದಾದರೆ ನಿಯತ ಪ್ರಾರಬ್ಧ, ಸಂಚಿತಾದಿ ಕರ್ಮಗಳು ಎಲ್ಲರಿಗೂ ಇರುತ್ತಿರಲಾಗಿ ಇವರಲ್ಲಿ ಬ್ರಾಹ್ಮಣನಾರು ? ನೀನು ಒಂದು ವೇಳೆ ಷಟ್ಕರ್ಮವೇ ಬ್ರಾಹ್ಮಣನು ಎಂದು ಹೇಳಿದ್ದಾದರೆ ಮುನಿಗಳು ಅವೆಲ್ಲ ಕರ್ಮಗಳನ್ನು ತೊರೆದು ತಾವು ನಿರ್ಮಲರಾಗಿರುವರು. ಕರ್ಮ ಬಿಟ್ಟರೂ ಮೊದಲಿಗಿದ್ದ ಅವರ ಬ್ರಾಹ್ಮಣತ್ವವು ಹೋಗದಿರಲಾಗಿ ಅವರು ಜಗತ್ತಿನಲ್ಲಿ ಪರಮ ಪೂಜ್ಯರಾದರು ಆದಕಾರಣ ಕಡುಬಹಿರ್ಮುಖಿಯಾದ ಶಾಸ್ತ್ರಿಯೇ, ಕರ್ಮಕ್ಕೆ ಮನ್ನಣೆ-ಕೊಟ್ಟು ಮನಸೋತವನಿಗೆ ಬ್ರಾಹ್ಮಣನೆನ್ನಬಾರದು, ತಿಳಿಯಿತೆ ? ಮುಂಕೆ ! ಇನ್ನು ನೀನು ದಾನಕ್ಕೆ ಬ್ರಾಹ್ಮಣನೆಂದರೆ, ಕ್ಷತ್ರಿಯರು, ವೈಶ್ಯರು ಸಂತೋಷದಿಂದ ಬೇಕಾದಷ್ಟು ಬೆಳ್ಳಿ, ಬಂಗಾರ, ಮುತ್ತು, ರತ್ನಗಳನ್ನು ದಾನ ಮಾಡುವರು. ಅವರೆಲ್ಲರೂ ದಾನದಿಂದ ಬ್ರಾಹ್ಮಣರೇನು ? ಅಂದಮೇಲೆ ದಾನವು ಬ್ರಾಹ್ಮಣನಾಗಲಿಲ್ಲ. ಹಾಗಾದರೆ ಬ್ರಾಹ್ಮಣನಾರು ? ಎಂಬುದನ್ನು ಹೇಳುತ್ತೇನೆ ಕೇಳು.

ಪರಮನು, ಏಕನು, ಜಾತಿರಹಿತನು, ಅಗುಣನು, ಕ್ರಿಯಾತೀತನು ಷಡೂರ್ಮಿ-ಷಡ್ಭಾವರಹಿತನು ಮತ್ತು ಅರಿವು ರೂಪನಾದ ಬ್ರಹ್ಮವನು ಅರಿತು ನಿರ್ಮಲಾತ್ಮ ಸ್ವರೂಪನಾದ **ಪರಮ ಹಂಸನೇ ಬ್ರಾಹ್ಮಣನು.**

"ಬ್ರಹ್ಮಜ್ಞಾನಾತೀತ" ಅಂದರೆ ಬ್ರಹ್ಮವನ್ನು ಅರಿತವನು ಬ್ರಾಹ್ಮಣನು ಎಂದು ವೇದವು ಜಾತಿಯನ್ನು ನಿರಾಕರಿಸಿ ಬ್ರಹ್ಮವಿದ್ಯೆಯನ್ನು ಸ್ಥಾಪಿಸಿದೆ. ಹೀಗಿರಲು ಬ್ರಾಹ್ಮಣತ್ವ ಅದೆಂತಹುದಯ್ಯಾ ? ನಿಜ ಬ್ರಾಹ್ಮಣನು ನೀನು ಅಹುದೇ ನಯ್ಯಾ ? ಎಂದು ಸಿದ್ಧನು ಆ ಶಾಸ್ತ್ರಿಯ ಮುಖಭಂಗಮಾಡಿದನು.

ಬಾಲಸಿದ್ಧನ ಮುಖದಿಂದ ಹೊರಡುವ ವೇದಗರ್ಭಿತ ವಾಕ್ಯಗಳನ್ನು ಕೇಳಿ ಶಾಸ್ತ್ರಿಯು ತಣ್ಣಗಾದನು. ಮತ್ತು ತನ್ನ ಮನದೊಳು "ಈ ಬಾಲಕನು ಯೋಗ ಭ್ರಷ್ಟನೋ ? ಇಲ್ಲವೆ ಇಂದುಧರನ ಅವತಾರವೋ ? ಅಥವಾ ಕಂದ ರೂಪದಿಂದ ಬಂದ ವಿದ್ಯಾಮೂರ್ತಿಯೋ ? ಯಾವನಿರಬಹುದು ? ಎಂದು ವಿಚಾರಿಸುತ್ತ ಇವನು ವಿದ್ಯಾಮೂರ್ತಿಯೇ ಹೌದು" ಎಂದು ನಿಶ್ಚಯಿಸಿ ಸಿದ್ಧನ ಸ್ತುತಿಯನ್ನು ಮಾಡುತ್ತ ಮುಖ ತಗ್ಗಿಸಿಕೊಂಡು ಹೊರಟು ಹೋದನು ಎಂಬಲ್ಲಿಗೆ——

ಮಂಗಲ— ವಂದನೆಗೆ ಬಹು ಯೋಗ್ಯವಾದರ ।
ವಿಂದಗಳೆರಡು ಭಯವೀಯುವ ।
ಸಂದಕಮಲಗಳೆರಡು ಮಂಗಲವನ್ನು ತಾನೀವ ॥
ಒಂದು ಕಮಲವದರೊಳು ಕರುಣಾ ।
ನಂದಾಮೃತವು ಪರಿಯು ವೀಕ್ಷಣೆ ।
ಪೊಂದಿ ಬೆಳಗುವ ಪದವು ಮೂರಿಹದೇವಗೊಂದಿಪೆನು ॥

ಇತಿ ಶ್ರೀಮಚ್ಛಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ ಲೀಲಾ-ಚರಿತ್ರ ಕಲ್ಪದ್ರುಮದೊಳು ಸುಬ್ಬೇಶಾಸ್ತ್ರಿಯ ಮುಖಭಂಗವೆಂಬ ಎಂಟನೇ ಅಧ್ಯಾಯ ಸಂಪೂರ್ಣಂ.

————

|| ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ||



# ಗುರುಶೋಧನಾ ಕಾಂಡ

## ಅಧ್ಯಾಯ ೬.

|| ಓಂ ತತ್ಸತ್ ||

ಈ ಅಧ್ಯಾಯದಲ್ಲಿ ಗಜದಂಡ ಗುರುಗಳು ಸಿದ್ಧನಿಗೆ ಮಂತ್ರೋಪದೇಶ ಮಾಡಿ ಅವನ ಸರ್ವಸಂಶಯಗಳನ್ನು ಕಳೆಯಲು ಲಿಂಗವನ್ನು ಗುರುಪಾದಕ್ಕೆ ಅರ್ಪಿಸಿದ್ದು ಗುರುಗಳು ಲಿಂಗವನ್ನು ತ್ಯಜಿಸಬಾರದು ಎಂದು ಹೇಳಲು ಸಿದ್ಧನು ತನ್ನ ಸತ್ಯ ಅನುಭವವನ್ನು ಹೇಳಲು ಅವನಿಗೆ ಶ್ರೀ ಸಿದ್ಧಾರೂಢ ಭಾರತಿ ಎಂಬ ನಾಮಕರಣ ಮಾಡಿದ್ದು.

ಸ್ತೋತ್ರ— ಉನ್ನತದ ಸಾಮ್ರಾಜ್ಯ ಸಂಪದ |
ವನ್ನು ನಿಖಿಲರಿಗಿತ್ತು ಪತ್ನಿಯ |
ರನ್ನಿರಿಸಲಿಕೆ ಸದನ ಮಿಲ್ಲದೆ ಯಂಕಶಿರಗಳನು ||
ಸನ್ನುತದ ಮನೆ ಮಾಡಿ ಯಿರಿಸು
ತ್ತನ್ನ ಮಿಲ್ಲವೆ ಕುಡಿದು ವಿಷಮಂ |
ಬನ್ನವಿಲ್ಲದೆ ಗಿರಿಯಸೇರಿದ ನಾದಿಗೊಂದಿಪೆನು ||

ಪದ-೧-೧೨ **ಗುರುಗಳು ಸಿದ್ಧನಿಗೆ ಮಂತ್ರೋಪದೇಶ ಮಾಡಿ ಅವನ ಸರ್ವಸಂಶಯಗಳನ್ನು ಕಳೆಯಲು ಲಿಂಗವನ್ನು ಗುರುಪಾದಕ್ಕೆ ಅರ್ಪಿಸಿದ್ದು.**

ಸಿದ್ಧನು ಸುಬ್ಬಯ್ಯಶಾಸ್ತ್ರಿಯು ಸಂವಾದರೂಪ ತರ್ಕ ಮಾಡಿದ್ದನ್ನು ಗುರುಗಳು ಕೇಳಿ ಆಶ್ಚರ್ಯಚಕಿತರಾಗಿ ಸಂತೋಷಪಟ್ಟರು. ಇವನು ಅಧಿಕಾರಿ ಇರುವನೆಂದು ತಿಳಿದು ಅವನನ್ನು ತಮ್ಮ ಪಕ್ಕದಲ್ಲಿ ಕುಳ್ಳಿರಿಸಿ ಕೊಂಡರು. ಕರುಣೆಯಿಂದ ಅವನ ಮಸ್ತಕದ ಮೇಲೆ ತಮ್ಮ ಅಭಯ ಹಸ್ತ ವನ್ನಿಟ್ಟರು. ಬಲಗಿವಿಯಲ್ಲಿ ಪರಮ ತಾರಕ ಮಂತ್ರೋಪದೇಶ ಮಾಡಿ "ನೀನು ನರನಲ್ಲ; ಪರಮನೇ ಇರುವಿ" ಎಂದು ಅರುಹಿದರು ಆಗ ಸಿದ್ಧನು ಆನಂದಾಶ್ರುಗಳನ್ನು ಸದ್ಗುರು ಪಾದಕಮಲಗಳಿಗೆ ಪ್ರೋಕ್ಷಣೆ ಮಾಡಿ ನಮಸ್ಕರಿಸಿದನು. ಮತ್ತು ನಮ್ರನಾಗಿ, "ದಯಾಸಾಗರ ಗುರುವೇ ! ಶಾಸ್ತ್ರದ ಮರ್ಮ ಫಲಿಸಿತೆಂಬುದಕ್ಕೆ ಗುರುತೇನು ?" ಎಂದು ಪ್ರಶ್ನೆ ಮಾಡಿದನು. ಗುರುಗಳು 'ಸಂಶಯ, ಅಸಂಭಾವನ, ವಿಪರೀತ ಭಾವಗಳು ಅಡಗಿ ಪರ–ಮಾತ್ಮನೇ ನಾನೆಂಬ ಭಾವವು ನೆಲೆಯಾಗಿ ನಿಂತದ್ದೇ ಶಾಸ್ತ್ರದ್ವಾರ ಜ್ಞಾನವು ಫಲಿಸಿರುವದೆಂಬುದಕ್ಕೆ ಕುರುಹು, ಎಂದರು.

ಮತ್ತೆ ಸಿದ್ಧನು, 'ತಂದೆಯೇ, ಚಿತ್ತೈಸು ಜೀವನು ಬ್ರಹ್ಮನಲ್ಲಿ ಐಕ್ಯ ಹೇಗಾಗುವನು ?.

ಗುರುಗಳು ಸಿದ್ಧನ ಪ್ರಶ್ನೆಗೆ ಪ್ರಸನ್ನರಾಗಿ, 'ಕುವರನೆ ಮೊದಲೇ ಕೊಡದೊಳಗಿರುವ ಬಯಲು ಕೊಡವನ್ನು ದಂಡದಿಂದ ಒಡೆದ ಕೂಡಲೆ ಅದು ಮಹಾ ಬಯಲೊಳಗೆ ಐಕ್ಯವಾದಂತೆ ಜೀವಭಾವವಳಿದು ಪರಬ್ರಹ್ಮಭಾವ ದೃಢಗೊಂಡದ್ದಾದರೆ ಬ್ರಹ್ಮನಲ್ಲಿ ಜೀವನು ಐಕ್ಯಹೊಂದುವನು' ಎಂದರು. ಪುನಃ ಸಿದ್ಧನು, "ಪ್ರಭುವೇ, ಈ ಪ್ರಪಂಚವು ನಿರಂತರ ಇದಿರಿಟ್ಟು ತೋರು ತ್ತಿರುವದರಿಂದ ಇದನ್ನು ಸುಳ್ಳೆಂದು ಹೇಗೆ ತಿಳಿಯಬೇಕು ?"

ಗುರುಗಳು "ವತ್ಸಾ ಯೋಗ್ಯಪ್ರಶ್ನೆ ಮಾಡಿದೆ. ಶಾಂತ ಮನಸಿನಿಂದ ಶ್ರವಣ ಮಾಡು. ನಿನಗೆ ಬಂದಿರುವ ಎಲ್ಲ ಸಂಶಯಗಳು ಪರಿಹಾರವಾಗು ವಂತೆ ತಿಳಿಸುತ್ತೇನೆ, ಕೇಳು ನಿನಗೆ ತೋರುವ ಈ ತೋರಿಕೆಯು ಇಂದ್ರಿಯಗಳ

ವ್ಯಾಪ್ತಿ (ತಿಳುವಳಿಕೆ)ಯೋ? ಹರಿದಾಡುವ ಮನೋವ್ಯಾಪ್ತಿಯೋ ? ಅಥವಾ ಚೈತನ್ಯವ್ಯಾಪ್ತಿಯೆಂದು ಹೇಳುವಿಯೋ ? ನೀನು ಪ್ರಥಮ ಪಕ್ಷಕ್ಕೆ ಅಂದರೆ ಇಂದ್ರಿಯಗಳು ಅರಿಯುತ್ತವೆ, ಎಂದು ಹೇಳಿದರೆ ಅದು ಒಪ್ಪುವ ಮಾತಲ್ಲ. ಯಾಕೆಂದರೆ ಒಂದು ಜಡವಸ್ತುವು ಇನ್ನೊಂದು ಜಡವಾದ ವಸ್ತುವನ್ನು ಎಂದಿಗೂ ಅರಿಯಲಾರದು, ನೀನು ಒಂದು ಪಕ್ಷಕ್ಕೆ ಇಂದ್ರಿಯಗಳು ತಮ್ಮ ಸ್ವಭಾವಕ್ಕನುಸರಿಸಿ ತಮ್ಮ ತಮ್ಮ ವಿಷಯಗಳನ್ನು ಅರಿಯುವದು ನೇಮ ವಾಗಿರುವದು, ಎಂದು ಹೇಳಿದರೆ ಆ ಇಂದ್ರಿಯಗಳ ದ್ವಾರ ವಿಷಯಗಳನ್ನು ಅರಿತದ್ದು ಚೈತನ್ಯವಲ್ಲದೆ ಇಂದ್ರಿಯಗಳಲ್ಲ. ಅದು ಹೇಗಂದರೆ ಸ್ವಯಂ ಪ್ರಕಾಶವುಳ್ಳ ಸೂರ್ಯನೆದುರಿಗೆ ಹಿಡಿಯಲ್ಪಟ್ಟ ಕನ್ನಡಿಯಲ್ಲಿ ಪ್ರತಿಬಿಂಬಿತ ಪ್ರಕಾಶವು, ಕತ್ತಲೆಯಲ್ಲಿರುವ ವಸ್ತುಗಳನ್ನು ಬೆಳಗಿದರೂ, ಅದು ಸೂರ್ಯನ ಬೆಳಕೆಲ್ಲದೆ ಕನ್ನಡಿಯ ಬೆಳಕಲ್ಲ. ಕನ್ನಡಿಯು ಪರಾವರ್ತಕ ಮಾತ್ರ, ಅದ ರಂತೆ ಜ್ಞಾನೇಂದ್ರಿಯಗಳದ್ವಾರ ಆಯಾ ವಿಷಯಗಳದ್ವಾರ ಅರಿತದ್ದು ಚೈತನ್ಯ ವಲ್ಲದೆ ಇಂದ್ರಿಯಗಳು ಅರಿಯಲಾರವು ಒಂದು ವೇಳೆ ಇಂದ್ರಿಯಗಳು ಅರಿಯುತ್ತವೆ. ಎಂದು ನೀನು ಹೇಳಿದರೆ ಆ ಶ್ರೋತ್ರಾದಿ ಜ್ಞಾನೇಂದ್ರಿಯಗಳು ಆಕಾಶಾದಿ ಭೂತಗಳ ಸತ್ವಗುಣಗಳಿಂದ ಜನಿಸಿದ್ದರಿಂದ ಚೈತನ್ಯವನ್ನು ಪ್ರತಿ ಬಿಂಬಿಸುವದಕ್ಕೆ ಪಾತ್ರತೆ ವಹಿಸಿಕೊಂಡಿವೆ. ಆದರೂ ಅವು ಕೇವಲ ಜಡ ವಾಗಿರುವವು. ಜಡವಾದ ಇಂದ್ರಿಯಗಳು ಚೈತನ್ಯದ ಹೊರತು ವಿಷಯ ಗಳನ್ನು ಹೇಗೆ ಅರಿಯಬಲ್ಲವು ? ಒಂದು ಮಣ್ಣಿನ ಗಡಿಗೆಯ ಮೇಲೆ ಸುಣ್ಣ ಬಳಿದರೆ ಅದು ಬೆಳ್ಳಗಿದ್ದರೂ ಅದಕ್ಕೆ ಆ ಗಡಿಗೆಯ ಜ್ಞಾನವಾಗಬಹುದೋ ? ಎಂದಿಗೂ ಆಗಲಾರದು. ಅವಿವೇಕದ ಹಟದಿಂದ ಇಂದ್ರಿಯಗಳೇ ಅರಿಯುತ್ತ ವೆಂದು ನೀನು ಹೇಳಿದರೆ, ಆ ಇಂದ್ರಿಯಗಳು ಇಲ್ಲದಿರುವ ಸಪ್ನದಲ್ಲಿ ಸ್ವಪ್ನ ಕಲ್ಪಿತವಸ್ತುವಿನ ಜ್ಞಾನವು ತನಗೆ ಆಗಬಾರದಾಗಿತ್ತು. ಇಲ್ಲಿ ಇಂದ್ರಿಯಗಳು ಇರದಿದ್ದರೂ ಜ್ಞಾನವಾಗುತ್ತಿರುವದರಿಂದ ಸ್ವಪ್ನಜ್ಞಾನವು ಇಂದ್ರಿಯವ್ಯಾಪ್ತಿ ಯಲ್ಲವೆಂದು ತಿಳಿಯಬೇಕು."

ಸ್ವಪ್ನದಲ್ಲಿ ಇಂದ್ರಿಯಗಳು ಅಭಾವವಾಗಿದ್ದರೂ ಅಲ್ಲಿ ಮನಸ್ಸು ಒಂದೇ ಇರುವದರಿಂದ, ಮನೋವ್ಯಾಪ್ತಿ ಎಂದು ಏಕೆ ಹೇಳಬಾರದು ? 'ಎಂದು ಸಿದ್ಧನ ಪ್ರಶ್ನೆ

ಅದಕ್ಕೆ ಗುರುಗಳು, "ಪುತ್ರಾ, ಆಲಿಸು, ಆ ಮನಸ್ಸಾದರೂ ಆಕಾಶ ಮತ್ತು ವಾಯುಗಳ ಸತ್ವಾಂಶದಿಂದ ಹುಟ್ಟಿದೆ. ಇಂದ್ರಿಯಗಳಿಗಿಂತ ಅದು ಆತ್ಮನಿಗೆ ಸ್ವಲ್ಪ ಸಮೀಪವಿದೆ. ಆದುದರಿಂದ ಅದಕ್ಕೆ ಏನಾದರೂ ಸಂಕಲ್ಪ ಮಾಡುವ ಶಕ್ತಿಯು ಬಂದೀತೆ ಹೊರತು ಅರಿಯುವತನ ಅದಕ್ಕೆ ಎಲ್ಲಿಂದ ಬರಬೇಕು ? ಮನಸ್ಸಿನ ದ್ವಾರಾ ಸ್ವಪ್ನ ವಿಷಯುಗಳನ್ನು ಅರಿತದ್ದು ಚೈತನ್ಯವಲ್ಲದೆ ಮನಸ್ಸಲ್ಲ, ಒಂದು ವೇಳೆ ಮನಸ್ಸೇ ಆ ವಿಷಯುಗಳನ್ನು ಅರಿಯುವದು ಎಂಬ ನಿನ್ನ ಹಟವು ಅನುವಕ್ಕೆ ವಿರುದ್ಧವಾಗುವದು ಹೇಗಂದರೆ ಮನಸ್ಸು ಇಲ್ಲದ ನಿದ್ರೆಯಲ್ಲಿ ಕಾರಣ ಶರೀರರೂಪ ಅಜ್ಞಾನ ಮತ್ತು ಪ್ರತಿ ಬಿಂಬರೂಪ ಆನಂದ ಇವುಗಳ ಅರಿವು ತನಗೆ ಆಗಬಾರದಾಗಿತ್ತು. ಅಲ್ಲಿ ಮನಸ್ಸು ಇರದಿದ್ದರೂ ನಿದ್ರಾನಂದ ಮತ್ತು ಅಜ್ಞಾನದ ಅರಿವು ಆಗುತ್ತದೆಂದ ಮೇಲೆ ಆ ಅರಿವು ಮನೋವೃತ್ತಿ ವ್ಯಾಪ್ತಿ ಅಲ್ಲವೆಂಬ ಸಿದ್ಧವಾಯಿತು. "ಹಾಗಾದರೆ ಚೈತನ್ಯವು ಕಾರಣ ಶರೀರದಲ್ಲಿ ಅವಿದ್ಯೆಯನ್ನು ಆಶ್ರಯಿಸಿಕೊಳ್ಳುವದರಿಂದ ಆ ಚೈತ್ಯಕ್ಕೆ ಅರಿಯುವ ತನವು ಬರುತ್ತದೇನು" 'ಎಂದು ಪುನಃ ಸಿದ್ಧನ ಪ್ರಶ್ನೆ.

ಗುರುಗಳು. "ಹೀಗೆ ಹೇಳುವದು ಯೋಗ್ಯವಲ್ಲ. ಸೂರ್ಯನು ಕತ್ತಲೆಯನ್ನು ಆಶ್ರಯ ಮಾಡಿಕೊಂಡು ಅದರ ಸಹಾಯದಿಂದ ಸರ್ವವನ್ನೂ ಬೆಳಗುವನು ಎಂದು ಹೇಳಿದಂತಾಗುವದು ನೀನು ಹೇಳಿದಂತೆ ಕಾರಣ ದೇಹದ ಆಶ್ರಯದಿಂದ ಅರಿಯುವದಾದರೆ ಆ ಕಾರಣ ದೇಹವು ಅಭಾವವಿದ್ದ ಮಹಾಕಾರಣ ದೇಹದಲ್ಲಿ ಸಚ್ಚಿದಾನಂದ ಸ್ವರೂಪವೇ, ನಾನೆಂಬ ಸ್ವಸ್ವರೂಪ ಜ್ಞಾನವು ಆಗಬಾರದಾಗಿತ್ತು. ಆದರೆ ಅಲ್ಲಿ ತನಗೆ ತುರ್ಯಾವಸ್ಥೆಯ ಜ್ಞಾನವಾಗುತ್ತದೆ. ಅಂದ ಮೇಲೆ ಕಾರಣ ದೇಹರೂಪ ಅಜ್ಞಾನವನ್ನು ಆಶ್ರಯಿಸಿ ಚೈತನ್ಯವು ಅರಿಯುತ್ತದೆಂಬುವದು ನಿನಗೆ ಹೇಗೆ ಸಮ್ಮತವಾಗುವದು ?

ಪ್ರಶ್ನೆ, "ಗುರುದೇವಾ, ಕಾರಣ ದೇಹವನ್ನು ಆಶ್ರಯಿಸದೆ ಚೈತನ್ಯವು ಸ್ವಪ್ರಕಾಶದಿಂದ ತಾನೇ ಪ್ರಕಾಶಿಸುವದು ಎಂದು ತಾವು ಹೇಳಿದಂತಾಯಿತು. ಹಾಗಾದರೆ ತುರ್ಯಾವಸ್ಥೆಯ ಜ್ಞಾನ ಮಾಡಿಕೊಳ್ಳುವದರಿಂದ ಸ್ವರೂಪ ಪ್ರಾಪ್ತಿಯು ಆಗುವದೇನು "?

ಉತ್ತರ, "ಸೂಕ್ಷ್ಮಮತಿಯೇ ಕೇಳು, ತೂರ್ಯಜ್ಞಾನದಿಂದ ಆತ್ಮಸಿದ್ಧಿ ಯಾಗಬೇಕಾದರೆ, ಸ್ವರೂಪದ ಅನುಸಂಧಾನವಡಗಿದ ಕೇವಲ ಆನಂದದ ಅನುಭವರೂಪ ತೂರ್ಯತೀತಾವಸ್ಥೆಯಲ್ಲಿ ಆನಂದ್ಞಾನ ಭಾವವು ಆಗಬಾರದಾಗಿತ್ತು, ಅಲ್ಲಿ ಅನಂದದ ಅನುಭವ, ಆಗುತ್ತದೆಂದಮೇಲೆ ಸ್ವರೂಪವು ಚೈತನ್ಯವ್ಯಾಪ್ತಿಯಲ್ಲ''.

ಪ್ರಶ್ನೆ 'ಹೇ ಕೃಪಾಸಿಂಧುವೆ,ಹಾಗಾದರೆ ತೂರ್ಯಾತೀತಾವಸ್ಥೆಯು ಕೂಡ ಸ್ವರೂಪಾನಂದಕ್ಕೆ ಸಾಧನವಾದಂತಾಯಿತಲ್ಲವೇ' ?

ಉತ್ತರ, 'ಹೌದು ಶುದ್ಧಾಂತಃಕರುಣನೇ ಕೇಳು, ಅತೀತ ಅವಸ್ಥೆಯಲ್ಲಿ ಆನಂದದ ಅನುಭವ, ಅಲ್ಲಿಯ ಅನುಭವಿ, ಮತ್ತು ಆನಂದ ಈ ಸೂಕ್ಷ್ಮರೂಪ ತ್ರಿಪುಟಿಗಳನ್ನು ಕಳೆದುಳಿದು ಸ್ವಯಮಿತರಜ್ಞಪ್ತಿ ಇರದೆ ತಾನೇ ತಾನಾಗಿರುವೆನೆಂಬ ಅರುವಿನ ಕುರುಹುದೋರದೆ ಸ್ವಯಂ ಪ್ರಕಾಶದಿಂದ ಸಹಜ ಸಿದ್ಧನಾಗಿ ಉಳಿವುದೇ ಪೂರ್ಣಾನಂದಸ್ವರೂಪವು. ಅದುವೇ ನೀನಾಗಿರುವಿ. ಈಗ ಪ್ರಪಂಚ ಮಿಥಾತ್ವದ ಪೂರ್ಣ ಅನುಭವ ನಿನಗಾಯಿತಲ್ಲವೆ ? ಬಂಗಾರದಲ್ಲಿ ತೋರುವ ತೊಡವಿನಂತೆ ಈ ಜಗವು ಅಧ್ಯಾಸರೂಪವೆಂದು ತಿಳಿ," ಎಂದು ಬೋಧಿಸಿದರು.

ಪದ–೧೩–೩೩ ರ ವರೆಗೆ ಗುರುಗಳು ಲಿಂಗ ತ್ಯಜಿಸಬೇಡ ಎಂದು ಹೇಳಲು ಸಿದ್ಧನು ತನ್ನ ಸ್ವಾನುಭವ ಹೇಳಿದ್ದು.

ಸಿದ್ಧನು, 'ಆಶ್ರಿತಜನ ಅಜ್ಞಾನತವಸ್ಸೂರ್ಯನೇ, ಈ ಪ್ರಪಂಚವು ಚೈತನ್ಯವ್ಯಾಪ್ತಿಯಲ್ಲ. ಇದು ತೋರುತ್ತಿದ್ದರೂ. ಆ ತೋರಿಕೆಯು ಪ್ರತ್ಯಕ್ಷವಾಗಿ ತಾನಿದ್ದೆ ಬಾಧಿಸಿಕೊಳ್ಳುವದು, ನನ್ನ ಅನುಭವಕ್ಕೆ ಬಂದುದನ್ನೇ ಈಗ ತಮ್ಮ ಸನ್ನಿಧಿಗೆ ಅರ್ಪಿಸುತ್ತೇನೆ, ಬಾಲತ್ವದ ತೋರಿಕೆಯು ಯೌವನದ ತೋರಿಕೆಯು ಬರಲು ಅಳಿಯುವದು. ಮುಪ್ಪಿನ ತೋರಿಕೆಯು, ಯೌವನ ತೋರಿಕೆಯನ್ನು ಕಾಲನುತೆ ನಾಶಮಾಡುವದು. ಪೂರ್ವದ ಸುಳ್ಳು ತೋರಿಕೆಯನ್ನು ತಾನು ಹೊಂದದೆ ಉತ್ತರ ತೋರಿಕೆಯು ಅದನ್ನು ಹೇಗೆ ಬಾಧಿಸುವದೋ, ಹಾಗೆ ಭಂಗವಿಲ್ಲದ ಸ್ವರೂಪಜ್ಞಾನವೆಂಬುದು, ಅದು ಪೂರ್ವದ ತೋರಿಕೆಯೆನಿಸಿದ ಕರ್ಮರೂಪ ಲಿಂಗಧಾರಣೆಯನ್ನು ಬಾಧಿಸುವದು

ಅದುಕಾರಣ ಸದ್ಗುರುವೇ, ನಿಮ್ಮ ಪೂರ್ವದ ಲಿಂಗವನ್ನು ನೀವು ತೆಗೆದು ಕೊಳ್ಳಿರಿ,'' ಎಂದು ಸಿದ್ಧನು ತನ್ನ ಕಂಠದಲ್ಲಿದ್ದ ಲಿಂಗವನ್ನು ಬಿಚ್ಚಿಕೊಟ್ಟನು ಅದನ್ನು ಕಂಡು ಗುರುಗಳು 'ಓಹೋ! ಮೊದಲು ಗುರುಗಳು ನಿನಗಿತ್ತ ಲಿಂಗ ವನ್ನು ನೀನು ನಿರಾಕರಿಸಿದರೆ; ಅದು ಧರ್ಮವಿರೋಧವಾಗುವದು,', ಎಂದು ಹೇಳಿದರು.

ಬಾಲಸಿದ್ಧನು, 'ಲಿಂಗ ಮಧ್ಯೆ ಜಗತ್ಸರ್ವಂ ವೇಣ್ ಲಿಂಗಮಯತಾಂ' ಎಂದು ಆಗಮ ಶಾಸ್ತ್ರದ ವಾಕ್ಯವಿರುವದು ಪರಮ ಚಿನ್ಮಯ ನಾನೆಂಬ ಜ್ಞಾನದೀಕ್ಷೆಗೆ ಫಲರೂಪವಾದ ಅದ್ವೈತ ಭಾವವು ನನ್ನಲ್ಲಿ ಪೂರ್ಣಸಿದ್ಧಿ ಸಿದೆ. ಒಬ್ಬ ಪುರುಷನಿಗೆ ಏಕಕಾಲಕ್ಕೆ ದಾರಿ ನಡೆಯುವ ಮತ್ತು ಕೂತು ಕೊಳ್ಳುವ ಎರಡೂ ಕೆಲಸಗಳು ಹೇಗೆ ಸಂಭವಿಸಲಾರವೋ, ಅದರಂತೆ ಜ್ಞಾನಿ ಪುರುಷನಿಗೆ ಕರ್ಮ, ಜ್ಞಾನಗಳೆರಡು ಎಂದಿಗೂ ಸಂಬಂಧವಾಗಲಾರವು. ಐತರೇಯ ಉಪನಿಷತ್ತಿನ ಪ್ರಥಮ ಕಾಂಡದಲ್ಲಿ ಭಾಷ್ಯಕಾರರು ಕರ್ಮದ ಖಂಡನೆಯನ್ನು ಮಾಡಿರುವರು ಬ್ರಹ್ಮಜ್ಞಾನದ ನಂತರ ನಡೆಯುವ ಕರ್ಮವು ವಂಧ್ಯಾ ಸತಿಯ ಭೋಗದಂತೆ ಫಲಕಾರಿಯಾಗದು. ಅದು ಕಾರಣ ಜ್ಞಾನಿಗೆ ಯಾವ ವರ್ಣ, ಆಶ್ರಮ, ಕುಲ, ಗೋತ್ರ ಮತ್ತು ದೇಹ ಮೊದಲಾದವು ಗಳಿಲ್ಲ. ನಿರಂತರ ಆತ್ಮಾಕಾರದಲ್ಲಿರುವ ಬ್ರಹ್ಮಜ್ಞಾನಿಗೆ ಕರ್ಮವನ್ನು ವಿಧಿಸುವ ದೆಂತು ?

ತಂದೇ ಚಿತ್ತೈಸು ಈ ಕರ್ಮದ ಚಿನ್ಹವು (ಲಿಂಗವು) ಯಾರಿಗೆಂದರೆ ದ್ವೈತಭಾವವುಳ್ಳಮಂದಮತಿಗಳಿಗೆ ಮಾತ್ರ. ಇದು ನನ್ನ ದೇಹವು ಈಗ ನಾನು ಮಾಡಿದ ಕರ್ಮದ ಫಲವು ಮುಂದೆ ನನಗೆ ಪ್ರಾಪ್ತಿಯಾಗುವದೆಂದು ಇಚ್ಛಿಸಿ ನಿತ್ಯಾದಿ ಕರ್ಮಗಳನ್ನಾಚರಿಸುವವನಿಗೆ, ಆ ಕರ್ಮವು ರೋಗಾದಿಗ ಳಿಂದ ನಿಂತು ಹೋದರೆ ಪ್ರಾಯಶ್ಚಿತ್ತ ಹೊಂದುತ್ತ, ನಾನು ಇಂಥ ಗೋತ್ರ ಅಥವಾ ಇಂಥ ಜಾತಿಯೊಳಗೆ ಹುಟ್ಟಿರುವೆನು, ಕರ್ಮವನ್ನು ಮಾಡುವದೇ ನನ್ನ ಧರ್ಮವೆಂದು ಕರ್ಮದ ಮರ್ಮವನ್ನರಿಯದೆ ದೇಹ ಭಾವದಲ್ಲಿ ಕೊಳೆಯು ವನು. ತಾವು ಕರ್ಮದ ಕಟ್ಟಳೆಯನ್ನು ಇಂಥ ಬುದ್ಧಿಗೇಡಿಗಳಿಗೆ ಹಾಕುವದು ಯೋಗ್ಯವು. ಜ್ಞಾನಿ ಕರ್ಮವನ್ನು ವಿಧಿಸಲಾಗದು, ಎಂದನು.

## ಗುರುಗಳು ಸಿದ್ಧನಿಗೆ ನಾಮಕರಣ ಮಾಡಿದ್ದು

ಕಂದ ಸಿದ್ಧನ ಇಂಥತತ್ವಗರ್ಭಿತ ವಾಕ್ಯಗಳನ್ನು ಕೇಳಿ ಗುರುಗಳು ತಮ್ಮ ಜ್ಞಾನದೃಷ್ಟಿಯಿಂದ ಎಚ್ಚತ್ತು, ಅಚ್ಚರಿಗೊಂಡರು. "ಅಹಾ! ಇವನು ಇಂಥ ಧರ, ಶಾರದೆ ಇವರ ಅಂಶಗಳಿಂದ ಅವತರಿಸಿ ಬಂದ ಕಂದನೇ ಸಿದ್ಧವು. ಅದಕ್ಕಾಗಿ ಇವನಿಗೆ ಸಿದ್ಧನೆಂಬ ನಾಮವು ಸಲ್ಲುವದು.

ಮೂಲ ಬ್ರಹ್ಮದಲ್ಲಿ ಇವನ ವೃತ್ತಿಯು ಮೊದಲನಿಂದಲೂ ಅರೂಢ-ವಾಗಿರಲು ನಾನೀಗ ಕರುಣಿಸುವ **ಆರೂಢನಾಮವು** ಸರಿಹೋಗುವದು. ಇವನು ಓದು ಬರಹ ಇಲ್ಲದೆ ವೇದಗಳನ್ನು ಅರಿಯಬಲ್ಲ ವಿದ್ಯಾಮೂರ್ತಿ ಇರುವದರಿಂದ 'ಭಾರತಿ' ಎಂಬ ನಾಮವು ಒಪ್ಪುವದು' ಹೀಗೆ ಗಜದಂಡ ಗುರುಗಳು ಸಂತೋಷದಿಂದ ಮನದಲ್ಲಿ ನಿಶ್ಚಯಿಸಿ ಶಿಷ್ಯನಾದ ಸಿದ್ಧನಿಗೆ ಮಂಗಲ ಸ್ನಾನ ಮಾಡಿಸಿ ಶಾಸ್ತ್ರೋಕ್ತ ವಿಧಿಪೂರ್ವಕವಾಗಿ ಅವನಿಗೆ ಅವಧೂ-ತಾಶ್ರಮಕೊಟ್ಟು **'ಸಿದ್ಧಾರೂಢಭಾರತಿ'** ಎಂದು ಹೆಸರಿಟ್ಟರು. ಈ ನಾಮವು ನಿಮಗೆ ಜಗತ್ತಿನಲ್ಲಿ ಯೋಗ್ಯವಾಗಿರುವದು. ನೀನು ಪರಮ ಪಾವನ ದಿವ್ಯಮೂರ್ತಿಯಾಗಿ ಪ್ರಕಾಶಿಸು. ಮತ್ತು ಕಲಿಯುಗದಲ್ಲಿ ಅಧರ್ಮವು ಅಧಿಕ ವಾಗಿ ಬೆಳೆಯಹತ್ತಿ ಮನುಜರು ಭಕ್ತಿ, ಧರ್ಮಗಳನ್ನು ಮರೆತು ಮನಸ್ಸಿಗೆ ಬಂದಂತೆ ವರ್ತಿಸುತ್ತ, ಪರರಿಗೆ ನಿಂದೆಯನ್ನೂ, ಹಿಂಸಾದಿಗಳನ್ನೂ ಮಾಡುತ್ತ ತಮ್ಮನ್ನು ತಾವೇ ಮರೆತು ನರಕದಲ್ಲಿ ಬಿದ್ದು ಕೊಳೆಯುತ್ತಿರುವರು. ಆದಕಾರಣ ನೀನು ಮೊದಲು ಧರೆಯೊಳಿರುವ ಪುಣ್ಯ ತೀರ್ಥಕ್ಷೇತ್ರಾದಿಗಳನ್ನು ಸಂಚರಿ-ಸುತ್ತ ಅಲ್ಲಿಯ ಜನಂಗಳಿಗೆ ಭಕ್ತಿಭಾವ ಹುಟ್ಟಿಸುತ್ತ ಅದರಿಂದ ಪರಮ ಪಂಚಾಕ್ಷರಿ ಮಂತ್ರವನ್ನು ನುಡಿಸುತ್ತ ಅಧಿಕಾರಿ ಜನರಿಗೆ ತತ್ವವನ್ನು ಬೋಧಿ-ಸುತ್ತ ಉದ್ಧರಿಸುವ ಕಾರ್ಯವನ್ನು ಕೈಕೊಳ್ಳು", 'ನಿನ್ನ ಮತಿಗೆ ಹರಿ, ಗುರು, ವೇದ ಮತ್ತು ಅಂತಃಕರಣ ಇವರ ಕೃಪೆಯು ಪೂರ್ಣವಿರಲಿ ಶ್ರೀ ಅಮರ ಗುಂಡ ಮಲಿಕಾರ್ಜುನ ದೇವರು ನಿನಗೆ ದೀರ್ಘಾಯುಷ್ಯವನ್ನು ಕೊಡಲಿ ! ಪ್ರಾರಬ್ಧರೂಪ ಸುಖ ದುಃಖಗಳನ್ನು ಸಮಭಾವದಿಂದ ಭೋಗಿಸುತ್ತ ಯೋಗಿ ವರನಾಗು ಎಂದು ಶ್ರೀಗಜದಂಡಗುರುಗಳು ಅಂತಃಕರಣ ಪೂರ್ವಕ ಆಶೀರ್ವದಿಸಿದರು.

ಆಗ ಬಾಲ ಸಿದ್ಧಾರೂಢ ಭಾರತಿಯು ಸದ್ಗುರುವರನಿಂದ ಪೂರ್ಣ ಆಶೀರ್ವಾದ ಪಡೆದು ಧನ್ಯನಾದೆನೆಂದು ಆನಂದ ಸಾಗರದಲ್ಲಿ ಲೋಲಾಡಿದನು. ಶ್ರೀಗುರು ಕರುಣೆಯನ್ನು ನೆನೆದು ಕಡೆ ಗಣ್ಣುಗಳಿಂದ ಆನಂದಾಶ್ರುಗಳನ್ನು ಸುರಿಸುತ್ತ ಹೀಗೆ ಕೊಂಡಾಡುತ್ತಾನೆ,

ಜೀವಕೊಲ್ಲುವ ಜಾತಿಗೆಡಿಸುವ ।
ಭಾವ ಬ್ರಹ್ಮದಿ ನೆಲೆಯುಗೊಳಿಸುವ ।
ಕೇವಲಾನ್ಮಾರಾಮ ನೀಂ ನಿಜವೆಂದು ಬೋಧಿಸುವ ॥
ಪಾವನಕೆ ಪಾವನನೆ ಮೇಣ್ ಬಹು ।
ಕೋವಿದರ್ಗಂ ಕೋವಿದನೆ ಸ ।
ದ್ಭಾವರೊಳ್ ಸದ್ಭಾವನೆ ಗುರುವರನೆ ನತನಪ್ಪೆ ॥

ಹೀಗೆ ಸದ್ಗುರುವರನನ್ನು ಸ್ತುತಿಸಿ, "ಸಚ್ಚಿದಾನಂದ ಪರಬ್ರಹ್ಮನೇ ನರನಾಗಿ ಅವತರಿಸಿ ಬಂದ ಶ್ರೀಗುರುವೇ, ನಿನಗೆ ಜಯವಾಗಲಿ ! ನೀನು ಕರುಣೆಯಿಂದ ಬೋಧಿಸಿದ ಸುಬೋಧ ಸಾರವನ್ನು ಅಂಗಕ್ಕೆ ಅಳವಡಿಸಿ ಕೊಂಡು ಧನ್ಯನಾದೆನು. ನಿನ್ನ ಕೃಪೆಯಿಂದ ಯಾವ ಪಾಶವಿಲ್ಲದ ಪರಬ್ರಹ್ಮ ನಾದೆನು. ನಿನ್ನ ಕರುಣಾಜಲವು ನನ್ನ ಮನದ ಮಾಲಿನ್ಯವನ್ನು ತೊಳೆದು ನಿರ್ಮಲವನ್ನಾಗಿ ಮಾಡಿತು. ನಿನ್ನ ಪಾದಧೂಳಿಯಿಂದ ನನ್ನಲ್ಲಿದ್ದ ಅಜ್ಞಾ ನವು ಪೂರ್ಣ ನಶಿಸಿತು. ನಿನ್ನ ಪಾದಸಂಗದಿಂದ ನನ್ನಲ್ಲಿದ್ದ ಎಲ್ಲ ದುರ್ವಾಸನೆ ಯನ್ನು ದೂರ ಮಾಡಿತು. ನಿನ್ನ ಪಾದಸಂಗದಿಂದ ತ್ರಿಗುಣಗಳು ಪರಿಶುದ್ಧ ವಾದವು ನಿನ್ನ ಮಂಗಳಾತ್ಮಕ ಸಂಗದಿಂದ ಕರಣಗಳ ಮರವೆಯುಡಗಿ ಸೂರ್ಯನ ಮುಂದಿರವ ಕುದುರೆಗಳಂತೆ ನಿರ್ಭಯವಾದವು. ನಿನ್ನ ವಚನ ಸುಧೆಯನ್ನು ಪಾನಮಾಡಿ ನಾನು ಅಮೃತಮಯನಾದೆನು. ಮತ್ತು ಪಾಪ ಪುಣ್ಯಗಳ ಆರೋಪಕ್ಕೆ ಗುರಿಯಾಗದೆ ಪರಬ್ರಹ್ಮನಾದೆನು, ಈಗ ನನ್ನ ದೃಷ್ಟಿಯಲ್ಲಿ ಸ್ನೇಹ ಅಥವಾ ವೈರಭಾವವು ಇಲ್ಲದಾಯಿತು. ನನಗೆ ಅನ್ಯ ವಾಗಿ ಏನೊಂದು ತೋರದೆ ನಾನೇ ನಾನಾಗಿ ಪೂರ್ಣಭಾವ ನೆಲೆಗೊಂಡಿತು ಎಂದು ಮರುವಿನ ಕೊಂಡಾಡುತ್ತ ಪ್ರದಕ್ಷಣೆ ಹಾಕಿ, ಸಾಷ್ಟಾಂಗದಿಂ ನಮಿಸಿ, ಗುರುಪಾದ ತೊರೆದು ಹೇಗೆ ಹೋಗಲಿ ? ಎಂದು ಚಿಂತಿಸುತ್ತ ಮನದಲ್ಲಿ-

ಓಂ ನಮೋ ಸದ್ರೂಪ ವಸ್ತುವೆ ।
ಓಂ ನಮೋ ಚಿದ್ರೂಪ ವಸ್ತುವೇ ।
ಓಂ ನಮೋ ಸುಖರೂಪ ವಸ್ತುವೇ ಶುದ್ಧ ಚೈತನ್ಯಾ ॥
ಓಂ ನಮೋ ಶ್ರೀ ನಿತ್ಯ ವಸ್ತುವೆ ।
ಓಂ ನಮೋ ಪರಿಪೂರ್ಣ ವಸ್ತುವೆ ।
ಓಂ ನಮೋ ಪರಬ್ರಹ್ಮನೆನಿಸುವ ಗುರುವೆನತನಪ್ಪೆ ॥

ಎಂದು ಮಂಗಲ ಪಾಡಿ ಗುರುವಿನಾಜ್ಞೆ ಶಿರಸಾ ವಹಿಸಿ ಅಲ್ಲಿಂದ ಪಯಣ ಬೆಳೆಸಿದನು, ಎಂಬಲ್ಲಿಗೆ ಶ್ರೀಮಚ್ಛಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ ಲೀಲಾಚರಿತ್ರ ಕಲ್ಪದುಮದೊಳು' ಗುರು ಬೋಧೆ ಎಂಬ,

— ೯ ನೇ ಅಧ್ಯಾಯ ಸಮಾಪ್ತಿ —



॥ ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ॥



# ಸಂಚಾರಸಂಭ್ರಮಕಾಂಡ

## ಅಧ್ಯಾಯ ೧೦

॥ ಓಂ ತತ್ಸತ್ ॥

ಈ ಅಧ್ಯಾಯದಲ್ಲಿ (ಪದ-೧-೬೩ ವರೆಗೆ) ಸಿದ್ಧನು ಅನೇಕ ದೇಶಗಳನ್ನು ಸಂಚರಿಸುತ್ತ ಆನೆಗುಂದಿಯ ಬಹು ಶೃಂಗಾರಮಯವಾದ ವನ,

, ಪಟ್ಟಣ, ಗುಡಿಗಳನ್ನು ನೋಡುತ್ತ ರಾಜಸಭೆಗೆ ಪ್ರವೇಶಿಸಿ ವಾದಕ್ಕೋ-
ರ ಚಿಂತಾಮಣಿ ಆಶ್ರಮಕ್ಕೆ ಹೋದದ್ದು.

ತ್ರಾತ್ರ— ಹರನು ಶಕ್ತಿಯು ರವಿಯು ಬುದ್ಧನು ।
ಹರಿಯು ಶೂನ್ಯವು ವಿಧಿಯು ಕ್ರಿಸ್ತನು ।
ಸರಸತಿಯುು ಗಣಪತಿಯು ಪ್ರಕೃತಿಯು ಸುಪರಬೊಮ್ಮವದು ॥
ಪರವು ನಮ್ಮಯ ದೇವರೆಂಬೆ ।
ಲ್ಲರ ಸುಲಕ್ಷವದೊಂದೆ ಯಾತರೊ ।
ಳಿರುವದೋ ಆ ವಸ್ತುವಿನ ಲಕ್ಷಾರ್ಥಕಾಂ ನಮಿಪೆ ।

ಹೀಗೆ ಮಂಗಲಮಾಡಿ ಸಿದ್ಧನು ಶ್ರೀ ಗುರುಗಳ ಆಶೀರ್ವಾದ ಪಡೆದು
ಅದಿಂದ ಹೊರಟು ದೇಶ, ಕೋಶ, ಕ್ಷೇತ್ರಗಳನ್ನು ಸಂಚರಿಸುತ್ತ ಎಲ್ಲೆಲ್ಲಿ
ಋಷಿಪುಂಗವರಿರುವರೋ, ಅಲ್ಲಲ್ಲಿಗೆ ಹೋಗಿ ಅವರ ದರುಶನಗೊಂಡು ಜಿಜ್ಞಾ-
ಸಗಳು ಕಂಡರೆ, ಅವರ ಜೊತೆಗೆ ವರ ಸಂವಾದಗೈಯುತ್ತ ಎಲ್ಲ ಆಶ್ರಮ
ಗಳನ್ನು ಬಳಿಸಿ ಸಮಾಧಿಗೋಸ್ಕರ ಕಿಷ್ಕಿಂಧ ಎಂಬ ಹಳೇ ಹಂಪೀಪಟ್ಟಣಕ್ಕೆ
ಂದನು. ಅಲ್ಲಿರುವ ವಿರೂಪಾಕ್ಷಲಿಂಗ ಮೊದಲಾದ ಎಲ್ಲ ಮೂರ್ತಿಗಳನ್ನು
ಂಡು ಹೇಮಕೂಟದ ಮೇಲೇರಿದನು. ಅಲ್ಲಿ ಶೋಭಿಸುತ್ತಿರುವ ನಾಗಲಿಂಗ
ವಿಯಲ್ಲಿ ಸಗುಣವೆಂಬ ಸವಿಕಲ್ಪ ಸಮಾಧಿಯನ್ನು ಸಾಧಿಸಿ ಅದರ ಸಾಧನ
ಂದ ನಿರ್ವಿಕಲ್ಪ ಸಮಾಧಿಯನ್ನು ಹೊಂದಿದ ಓರ್ವ ಯೋಗಿವರನ ದರುಶನ
ಗೊಂಡು ಅಲ್ಲಿರುವ ವಶಿಷ್ಠಾಶ್ರಮಕ್ಕೆ ಬಂದನು.

ಅಲ್ಲಿ ಮೂರು ದಿನಗಳ ವರೆಗೆ ಅಖಂಡ ಬ್ರಹ್ಮಾನಂದದಲ್ಲಿದ್ದು, ಅಲ್ಲಿಂದ
ರಿವರ ಗಂಧಮಾಧನಕ್ಕೆ ಬಂದನು. ಅಲ್ಲಿ ವಿಸ್ತಾರದಿಂದ ಒಪ್ಪುತ್ತಿರುವ
ಮಾತಂಗ ಆಶ್ರಮವನ್ನು ಕಂಡನು. ಅಲ್ಲಿ ಏನೊಂದು ಎಡರುತೊಡರುಗ
ಲ್ಲದೆ ಸ್ಫಟಿಕ ಶಿಲೆಗಳಿಂದ ಮೆರೆಯುವ ಈ ಕ್ಷೇತ್ರವು ತಪೋಭೂಮಿ ಇರು
ದು, ಸತ್ಯವೋ ? ಅಥವಾ ಮಿಥ್ಯವೋ, ಪರೀಕ್ಷಿಸಿ ನೋಡಬೇಕು ಎಂದು
ಂತೋಷದಿಂದ ಒಂಭತ್ತು ದಿನಗಳ ವರೆಗೆ ಅನ್ನ ನೀರುಗಳಿಲ್ಲದೆ ಉಪೋ-
ಣೆ ಮಾಡಿದನು. ಆದಾಗ್ಯೂ ಹಸಿವೆ ತೃಷೆಗಳ ಬಾಧೆಗಳು ತನಗೆ ಬಾಧಿಸದೆ
ಮನಸ್ಸಿನಲ್ಲಿ ಸಂಶಯ ವಿಪರೀತಾಗಿ ಭಾವನೆಗಳೇನೂ ತೋರದೆ, ಯೋಗಕ್ಕೆ

ವಿಘ್ನಗಳಾದ ವಿಕ್ಷೇಪಾದಿಗಳಿಲ್ಲದೆ ಅಖಂಡ ಬ್ರಹ್ಮಾಕಾರ ವೃತ್ತಿಯು ಸಹ ವಾಗಿ ನೆಲೆಯಾಗಿ ನಿಂತಿತು. ಆಗ ಇದು ತಪೋಭೂಮಿ ಅಹುದು ಎಂ ನಿರ್ಧರಿಸಿದನು.

ಬಳಿಕ ಅಲ್ಲಿಂದ ತಿಳಿನೀರಿನ ಪಂಪಾಸರೋವರಕ್ಕೆ ಬಂದನು. ಅಲ್ಲಿ ಮಾನಸ ಸರೋವರದಲ್ಲಿ ಸ್ನಾನಮಾಡಿ, ರಾಮ ಮೂರ್ತಿ ದರ್ಶನ ಮಾಡಿಕೊಂಡು ಅಲ್ಲಿಯೇ ವಿಶ್ರಾಂತಿ ಹೊಂದಿದನು. ನಂತರ "ವಾಲೀ ಭಾಂಡಾರ" ನೋಡಿಕೊಂಡು ಪುನಃ ಅಲ್ಲಿಂದ ಸಿದ್ಧನು ಭರದಿಂದ ಕಾಡು, ಗುಡ್ಡ, ಹಳ್ಳಕೊಳ್ಳಗಳನ್ನು ತುಳಿಯುತ್ತ, ಗುಡಿ ಗವಿ ಗಳನ್ನು ಕಾಣುತ್ತ, ಮುಂದೆ ಸಾಗಿದನು. ಹೀಗೆ ಮಾರ್ಗಸಂಚರಿಸುತ್ತಿರುವಾಗ ಹಸಿವು ತೃಷೆಗಳಿಗೆ ಬಳಲದೆ, ಶೀತೋಷ್ಣ ಕಂಜದೆ, ಬ್ರಹ್ಮಾನಂದದಲ್ಲಿ ಮದ ವೇರಿದ ಮದ್ದಾನೆಯಂತೆ ಬರುತ್ತಿದ್ದನು. ಆಗ ಆನೆಗುಂದಿಯು ಕಾಣಿಸಿ ಕೊಂಡಿತು. ಸಂತೋಷದಿಂದ ಅಲ್ಲಿಗೆ ಬಂದನು.

**ಆನೆಗುಂದಿಯ ಹತ್ತಿರ ವನ, ನದಿ ಪಟ್ಟಣಗಳ ವರ್ಣನೆ**

ಅಷ್ಟರಲ್ಲಿ ಕಗ್ಗತ್ತಲೆಯಾಗಿ ಮೇಘಗಳು ಪರ್ವತಗಳಂತೆ ಸಾಲು ಸಾಲಾಗಿ ಬರಹತ್ತಿದವು. ಅದನ್ನು ದೇವೇಂದ್ರನು ಕಂಡು ತನ್ನ ವೈರಿಗಳ ಬರುತ್ತವೆಂದು ಭರದಿಂದ ಆರ್ಭಟಿಸುತ್ತ ತನ್ನ ವಜ್ರಾಯುಧವನ್ನು ಕೈಯಲ್ಲಿ ಧರಿಸಿ ಠೇಂಕಾರದಿಂದ ಅವುಗಳಿಗೆ ತಾಗಿಸಿದನು. ಆಗ ಅವನೆಂತು ಬಣ್ಣಿ ವುದು ? ಇದು ಇಂದ್ರನ ವಜ್ರಖಡ್ಗದ ಝಣತ್ಕಾರವೋ ? ಕೋಲ್ಮಿಂಚೋ ಏನು ಮಳೆಹನಿಗಳೋ ? ಅಥವಾ ವರುಣನ ಬಾಣಗಳ ಸುರಿಮಳೆಯೋ ಇಲ್ಲವೆ ಗುಡುಗಿನ ಗರ್ಜನೆಯೋ ? ದಳಭಟರ ಆರ್ಭಟವೋ ? ಇಂದ್ರ ವಜ್ರಾಯುಧದಿಂದ ಪಕ್ಕಗಳನ್ನು ಕಡಿಸಿಕೊಂಡು ಭೂಮಿಗೆ ಬಿದ್ದ ಪರ್ವ ಗಳೋ, ಯಾವುದು ತಿಳಿಯದಾಯಿತು.

ದೇವೇಂದ್ರನು ನಮ್ಮ ಪಟ್ಟಣಕ್ಕೆ ಮುತ್ತಿ ಹಾಕುವನೆಂದು ತಿಳಿ ತುಂಗಭದ್ರೆಯು ಅವನ ಮಾರ್ಗವನ್ನು ತಡೆಗಟ್ಟಿದಳೆಂಬಂತೆ ನದಿಯು ಮೇ ದಪ್ಪಿ ಬಂದು ಧರಣಿಯನ್ನು ಜಲಮಯ ಮಾಡುವದಕ್ಕೆ ಅಬ್ಬರಿಸಿ ಹರಿದ ಬಂದಳು ಎಂಬಂತೆ ಕಾಣಿಸಿಕೊಂಡಳು. ಈ ಪ್ರಕಾರ ಅಬ್ಬರದಿಂದ ಮಳೆಯ

ಸುರಿಯ ಹತ್ತಲು ಆದರ ಆರ್ಭಟವನ್ನು ಮಾರುತನು ಸಹಿಸದೆ ಬಿರುಗಾಳಿ ಯನ್ನೆಬ್ಬಿಸಲು ಮೋಡಗಳೆಲ್ಲ ಚದರಿ ಮಾಯವಾದವು. ಆಗ ಮೋಡಗಳು ಒಟ್ಟಿ ಬಯಲಾಗಿ ಅಂಬರವು ನಿರ್ಮಲವಾಯಿತು. ತಾವರೆಗಳ ಮಿತ್ರನು ತನ್ನ ಗೆಳೆಯರ ಕೊರತೆಯನ್ನು ದೂರ ಮಾಡಲು ಮೂಡಣ ದಿಕ್ಕಿಗೆ ಮೂಡಿ ಬಂದನು. ಕೂಡಲೆ ಸರೋವರದೊಳಗಿನ ಕಮಲಗಳ ಮೊಗ್ಗೆಗಳು ಹಿಗ್ಗುತ್ತ ಅರಳಹತ್ತಿದವು. ಭ್ರಮರಗಳು ಭರದಿಂದ ಝೇಂಕರಿಸುತ್ತ ಕಮಲ ಗಳಿಗೆರಗಿ, ಮಧು ಪಾನದಿಂದ ವಿಲಾಸಗೊಳ್ಳಹತ್ತಿದವು. ಮತ್ತು ಶುಕ, ಪಿಕ, ಚಾತಕ, ಮೈನಾಕ ಮೊದಲಾದ ಪಕ್ಷಿಗಳ ಸುಸ್ವರವು ಕೇಳಬರಹತ್ತಿತ್ತು.

ಗಗನ ಚುಂಬಿತ ವೃಕ್ಷಗಳ ವನದಲ್ಲಿ ತೆಂಗು, ಕದಳಿ ಪನಸು [ಹಲಸು] ನಾರಂಗಿ [ಕಂಚಿ ಕಿತ್ತಳೆ] ದಾಡಿಮ [ದಾಳಿಂಬರ] ಚೂತ [ಮಾವು] ನೆಲ್ಲಿ, ಜಂಬೀರ [ಲಿಂಬಿ] ಜಂಬು [ನೀರಲ] ಕಾರಿ, ಬೋರಿ, ಕೋರಿ ಮೊದಲಾದ ಗಿಡ-ಗಂಟಿ-ವೃಕ್ಷಗಳು ಫಲ ಭಾರದಿಂದ ಬಾಗಿ, ಮುನಿಗಳಿಗೆ ಮಂದಗಮನೆಯರು ಮಂದಹಾಸದಿಂದ ತಮ್ಮ ನಿಡುದೋಳು ಮುಂದುಮಾಡಿ ಫಲಗಳನ್ನು ಕೊಡ ಬಂದರೆಂಬಂತೆ, ತುಂಗಭದ್ರೆಯ ದಡದಲ್ಲಿ ಕಂಗೊಳಿಸುತ್ತಿದ್ದವು.

ಸಲ್ಲಿ ಮನಾನಂದವನ್ನುಂಟು ಮಾಡುವ ತರತರದ [ಮಲ್ಲಿಗೆ, ಶೇವಂತಿಗೆ ಇರುವಂತಿಗೆ, ಬಕುಳ, ಸಂಪಿಗೆ, ನಾಗಸಂಪಿಗೆ ಮೊದಲಾದ ಕುಸುಮಗಳ ಸಮೂಹವು ತಾವು ತುಂಬಿಟ್ಟುಕೊಂಡಿದ್ದ ಮಧುವನ್ನು ಭ್ರಮರಾದಿಗಳಿಗೆ ಪಾನಮಾಡಿಸಲು ಆಮಂತ್ರಣ ಕೊಡುವುದಕ್ಕೆ ಸುತ್ತಲೂ ತಮ್ಮ ಸುವಾಸನೆ ಬೀರುತ್ತಿದ್ದವು. ಕೂಡಲೆ ಭ್ರಮರ, ಪತಂಗಾದಿಗಳು ನಾಮುಂದೆ ನೀಮುಂದೆ ಎಂದು ಹಾರಿ ಬಂದು ಕುಸುಮಗಳ ಮೇಲೆ ಕೂಡ್ರಲು ಅವು ಕುಂದಣದಂತೆ ರಂಜಿಸುತ್ತಿದ್ದವು. ಮರದಿಂದ ಮರಕ್ಕೆ ಹಾರುತ್ತಿರುವ ಮಂಗಗಳ ಸಮೂಹವು ಫಲಗಳನ್ನು ಕಡಿಕಡಿದು ಚೆಲ್ಲುತ್ತಿದ್ದವು ಮತ್ತು ಪುರದ ಸ್ತ್ರೀ, ಬಾಲಕ-ಬಾಲಕಿಯರನ್ನು ಕಂಡು, ಹಾಸ್ಯದಿಂದ ಹಲ್ಲುಕಿಸಿದು ಅಣಕಿಸುತ್ತಿದ್ದವು. ಈ ಚೇಷ್ಟೆಯನ್ನು ಸಿದ್ಧನು ನೋಡುತ್ತ ನಗುತ್ತ ನಡೆದು, ಒಂದು ದೇವಾಲಯಕ್ಕೆ ಬಂದು ಕುಳಿತುಕೊಂಡನು.

ಅಷ್ಟರಲ್ಲಿ ಗೋಪಾಲಕರು ಹಸಿದ ದನ-ಕರುಗಳನ್ನು ಅಡವಿಯಲ್ಲಿ ಮೇಯಬಿಟ್ಟು, ಹೊಳೆಯ ದಂಡೆಗೆ ಬಂದು ಊಟಕ್ಕೆ ಕುಳಿತರು. ಸಿದ್ಧನು ಅವರ ಕಡೆಗೆ ಓಡಿ ಬಂದು ಬಿಕ್ಕೆ ಬೇಡಿ, ಊಟ ಮಾಡಿ ತೃಪ್ತನಾದನು. ಅಲ್ಲಿಂದ ಮುಂದೆ ನಡೆದು ಸಮಚಿತ್ತದಿಂದ, ಊರೊಳಗೆ ಬಂದನು. ಅಲ್ಲಿ ಕಸ್ತೂರಿ, ಪುನಗು, ಹೀನಾ, ಅತ್ತರ, ಜಂವಾದಿ ಸುಗಂಧ ದ್ರವ್ಯಗಳನ್ನು ಮಾರುವ ಅಂಗಡಿಗಳಿಂದ ಪರಿಮಳವು ದಶ ದಿಕ್ಕುಗಳಲ್ಲಿ ಪಸರಿಸಿ, ಘಮ-ಘಮಿಸುತ್ತ ಜನರಿಗೆ ಕೊಳ್ಳಬೇಕೆಂಬ ಭಾವನೆಯನ್ನು ಹುಟ್ಟಿಸುತ್ತಿತ್ತು. ಮುಂದಕ್ಕೆ ಬರಲು ಚಂದ್ರಕಾಂತ ಶಿಲೆಗಳಿಂದ ಮನೋಹರವಾಗಿ ಕಟ್ಟಲ್ಪಟ್ಟ ಕೋಟಿ ಕೊತ್ತಲಗಳು ಪರಶಿವ-ಪಾರ್ವತಿಯರು ವಾಸಿಸುತ್ತಿರುವ, ರಜತಗಿರಿ ಎಂಬ ಅರಮನೆಯನ್ನು ಹಳಿಯುವದಕ್ಕಾಗಿ, ಎದ್ದು ನಿಂತಿರುವವೋ ಏನೋ ! ಎಂಬಂತೆ ತೋರುತ್ತಿದ್ದವು. ನೀಲವರ್ಣದ ಶಿಲೆಗಳಿಂದ ತಯಾರಿಸಲ್ಪಟ್ಟ ಉನ್ನತ ಮಹಾದ್ವಾರವು, ಸೌಂದರ್ಯದಿಂದ ರಂಜಿಸುತ್ತಿತ್ತು. ಅದರ ಮೇಲೆ ಹೊನ್ನಿನ ಕಳಸವು ಮತ್ತು ಹಸಿರು ಕೆಂಪು ಮೊದಲಾದ ತರತರದ ಬಣ್ಣಗಳಿಂದ ಒಪ್ಪುತ್ತಿರುವ ರತ್ನಗಳ ತೋರಣಗಳೂ, ಗೊಂಚಲಗಳೂ ತೂಗಾಡುತ್ತಿದ್ದವು. ಆ ದ್ವಾರ ಬಾಗಿಲಕ್ಕೆ ಚಿನ್ನದಿಂದ ಕೆತ್ತಲ್ಪಟ್ಟ ಕುಶಲ ಕಲಾ ಚಿತ್ರಗಳಿದ್ದು ಕೀಲಿ ಹಾಕುವ ಪೊನ್ನಿನ ಚಿಲಕೆ ಕೊಂಡಿಗಳು ಥಳಥಳನೆ ಹೊಳೆಯುತ್ತಿದ್ದವು.

ಸಿದ್ಧಭಾರತಿ ಇದೆಲ್ಲವನ್ನು ನೋಡುತ್ತ ಸಂತೋಷದಿಂದ ಮುಂದಕ್ಕೆ ಸಾಗಿ ದ್ವಾರ ಬಾಗಿಲಕ್ಕೆ ಬಂದನು. ಬಾಗಿಲೊಳಗೆ ಕಾಲಿಡಲು ಹಾಲು-ಮೊಸರುಗಳಲ್ಲಿ ಮುಳುಗಿದ ಶ್ರೀಲಕ್ಷ್ಮೀಕಾಂತನು ದ್ವಾರಕಾವತಿಯನ್ನು ಬಿಟ್ಟು ಅಲ್ಲಿಂದ ಇಲ್ಲಿಗೆ ಎದ್ದು ಬಂದಿರುವನು, ಎಂಬಂತೆ ಮಹದೈಶ್ವರ್ಯದಿಂದ ಮಾರ್ಗಗಳು ಒಪ್ಪುತ್ತಿರುವದನ್ನು ಕಂಡನು. ಬೀದಿಗಳ ಎಡಬಲದಲ್ಲಿ ಪೂಮಾಲೆ ಮಾರುವ ಶೃಂಗಾರದ ಅಂಗಡಿಗಳಲ್ಲಿ ಪ್ರೌಢೆಯರಾದ ತರುಣಿಯರು ಹೂಮಾಲೆಗಳನ್ನು ಕೊಳ್ಳುತ್ತಿದ್ದರು. ಹಾಗೆಯೇ ಮುಂದೆ ನಡೆದು ಬರುತ್ತಿರಲು ಅಲ್ಲಿ ಕಡಗ, ಕಂಕಣ, ಕಟಕ, ಮುಕುಟ, ಮುಕುರ. ನಡುವಿನೊಡ್ಯಾಣ ಮೊದಲಾದ ಚಿನ್ನ, ಮುತ್ತು, ರತ್ನಗಳ ಆಭರಣಗಳನ್ನು ಮಾರುವ ಚಿನಿವಾಲರ ಅಂಗಡಿಗಳ ಸಾಲುಗಳನ್ನು ದಾಟಿ ಸಡಗರದ ನಡು ಪೇಟೆಗೆ ಬಂದನು. ಅಲ್ಲಿ ಅರಸರ

ಕುಲದೇವತೆಯಾದ ಮೃಡನ ಗುಡಿಯನ್ನು ಕಂಡನು. ಆ ದೇವಾಲಯುಲದ ಸಡಗರವನ್ನು ವರ್ಣಿಸಲು ಬಾರದು. ಆದರೂ ಸ್ವಲ್ಪ ತಿಳಿದಮಟ್ಟಿಗೆ ವರ್ಣಿಸುವೆನೆಂದು ಗ್ರಂಥಕರ್ತರು ಹೀಗೆ ಬಣ್ಣಿಸಿದ್ದಾರೆ.

ಆ ದೇಗುಲಕ್ಕೆ ಚಿನ್ನದ ಮಹಾದ್ವಾರವಿದ್ದು, ಅದರ ಗೋಪುರಕ್ಕೆ ನವರತ್ನ ಕುಶಲಗಳನ್ನು ಮತ್ತು ಮೌಕ್ತಿಕದ ಗೊಂಡೆಗಳನ್ನು ಸಾಲುಗಟ್ಟಿದ್ದರು. ಗೋಡೆಯ ತೊಲೆ ಕಂಬಗಳಲ್ಲಿ ನಿರ್ಮಿಸಿರುವ ಗೃಹಗಳ ಕಲಾ ಕೌಶಲ್ಯವನ್ನು ನೋಡಿದವರಿಗೆ ಇದನ್ನು ಇಂದ್ರಲೋಕದ ಶಿಲ್ಪಿಗನು ಬಂದು ರಚಿಸಿರಬಹುದು, ಎಂದು ಅನುಮಾನವಾಗುತ್ತಿತ್ತು. ಆ ಗುಡಿಯ ಸುತ್ತಲೂ ವಿಸ್ತರಿಸಿದ ಪೌಳಿಯ ಗೋಡೆಯು, ಸಂಗಮವರಿಯ ಸುಂದರ ಶಿಲೆಗಳಿಂದ ಅಂದವಾಗಿ ರಚಿತವಾಗಿತ್ತು. ಪೌಳಿಯ ಸುತ್ತಲೂ ಉತ್ತಮ ಸುಗಂಧ ಪುತ್ರಿ-ಪುಷ್ಪಗಳ ಗಿಡ-ಬಳ್ಳಿಗಳ ಮಂಟಪಗಳು, ಪರಿಮಳವನ್ನು ಬೀರುತ್ತ ಜನರಿಗೆ ಆನಂದವನ್ನುಂಟು ಮಾಡುತ್ತಿದ್ಧವು. ಅವುಗಳ ಮಧ್ಯದಲ್ಲಿ ಏಳು ಬಣ್ಣಗಳಿಂದ ನೀರಿನ ಕಾರಂಜಿಗಳು, ಅನೇಕ ಪ್ರಕಾರವಾಗಿ ಪುಟಿಯುತ್ತಿದ್ದವು. ಅದರ ಸೌಂದರ್ಯವು, ನೋಡುವವರ ಹಸಿವು-ನೀರಡಿಕೆ ಹಿಂಗಿಸುತ್ತಿತ್ತು. ಅವುಗಳ ಮಧ್ಯದಲ್ಲಿ ಶೋಭಾಯಮಾನವಾಗಿರುವ “ ಪಂಪಾವತಿಯ ” ಗುಡಿಯು, ನವರತ್ನ ಖಚಿತ ಚಿನ್ನದ ಗೋಡೆ, ಗೋಪುರ ಬಾಗಿಲುಗಳು ಹವಳ, ಮುತ್ತು-ರತ್ನಗಳ ವಿಚಿತ್ರ ನಕ್ಷತ್ರಗಳಿಂದ ಎದ್ದು ತೋರುತ್ತಿತ್ತು. ಗೋಪುರ [ದ್ವಾರಬಾಗಿಲ]ದ ಮೇಲಿರುವ ಕಳಸವು, ವಜ್ರ, ವೈಡೂರ್ಯಗಳನ್ನು ತುಂಬಿಕೊಂಡು ಹಗಲು-ರಾತ್ರಿಗಳಲ್ಲಿ ಸೂರ್ಯ-ಚಂದ್ರರಂತೆ ಪ್ರಕಾಶ ಬೀರುತ್ತಿದ್ದವು ಬಾಗಿಲು-ರೆಡಿಕೆಗಳ ಲೋವೆಗೆ ತೋರುಮುತ್ತಿನ ಗೊಂಚಲಗಳು ತೂಗುಬಿದ್ದು ಜೋತಾಡುತ್ತಿದ್ದವು. ಮೇಲೆ ತೊಲೆ-ಜಂತೆಗಳಿಗೆ ತೂಗುಬಿಟ್ಟ ಜರತಾರಿ ಮುತ್ತಿನ ಜಾಲರಿಗಳು, ಆಕಾಶದಲ್ಲಿರುವ ನಕ್ಷತ್ರಗಳಂತೆ ಥಳಥಳಿಸುತ್ತಿದ್ದವು.

ಆ ದೇವಾಲಯದೊಳಗೆ ಸ್ಫಟಿಕದ ಪೀಠದ ಮಧ್ಯದಲ್ಲಿ ಮೆರೆಯುತ್ತಿ-ರುವ ಶಿವಲಿಂಗಕ್ಕೂ, ಮುಂದಿರುವ ನಂದೀಶ್ವರನಿಗೂ, ಜರಿಯ ಅಂಚಿನ ರೇಶಿಮೆಯ ಕವಚಗಳನ್ನು ತೊಡಿಸಿ, ನವರತ್ನ ಖಚಿತ ಚಿನ್ನದ ಮುಕುಟ-

ಗಳಿಂದ ಶೃಂಗರಿಸಿ, ಪರಿಮಳ ಲೇಪಿಸಿ, ಪತ್ರಿ-ಪುಷ್ಪಗಳನ್ನೇರಿಸಿ, ಶ್ರೀಗಂಧದ ದಶಾಂಗ ಧೂಪ ದೀಪದೊಂದಿಗೆ ಪೂಜಿಸಹತ್ತಿದರು. ಆವಾಗ್ಗೆ ಭೇರಿ, ಘಂಟೆ, ಶಹಳೆ, ನಪೂರಿ, ನಗಾರಿ, ಮೃದಂಗ, ಸಾರಂಗ, ತಮ್ಮಟೆ, ತಾಳ, ಮದ್ದಳೆ, ಶೊಂಬು, ಕೊಳಲು ಮೊದಲಾದ ಅನೇಕ ವಾದ್ಯಗಳಿಂದೊಡಗೂಡಿ, ಕೈಲಾಸ ದೊಳಗಣ ಶಂಕರನ ಸಡಗರದ ಪೂಜೆ ಇಲ್ಲಿಯೇ ನಡೆಯುತ್ತದೆಂಬಂತೆ ತೋರುತ್ತಿತ್ತು. ಬಳಿಕ ಸೂಕ್ತ ಮಂತ್ರಗಳನ್ನು ವಿಪ್ರರು ಉಚ್ಚರಿಸಿದ ಕೂಡಲೆ ಅರ್ಚಕರು ನೈವೇದ್ಯ ಮಾಡಿದರು.

ಆಗ ಬಳಕುವ ಬಡನಡುವಿನ ಬಾಲೆಯರು ಮಿಸುನಿ ವರ್ಣದ ಮೈ, ಕೆಂದುಟಿ, ದಾಳಿಂಬರ ಬೀಜದಂತೆ ತೋರುವ ದಂತ-ಪಂಕ್ತಿ, ತಾವರೆ ಕಣ್ಣು, ಶಶಿ ಮುಖ, ಕನ್ನಡಿ ಸದೃಶ ಕಪೋಲ, ಮುಂದೆಲೆಯ ಸುಳಿ ಗುರುಳು, ಶಂಕಗ್ರೀವ [ಕಂಠ] ಕುಂಭ ಕುಚಗಳುಳ್ಳ, ಮಂದಗಮನೆಯರಾದ ತರುಣಿಯರು ತರತರದ ಪಿತಾಂಬರವನ್ನುಟ್ಟು ಜರದ ಕುಪ್ಪಸ ತೊಟ್ಟು, ನವರತ್ನಗಳಿಂದ ಕೆತ್ತಲ್ಪಟ್ಟ ಚಿನ್ನದ ಆಭರಣಗಳನ್ನಿಟ್ಟು, ಮುತ್ತು ರತ್ನಗಳ ಕಂಠಾಭರಣಗಳನ್ನು ಕೊರಳಲ್ಲಿ ಧರಿಸಿ, ತೋರ ಮುತ್ತಿನ ಮುಕುರ ಮೂಗಿನಲ್ಲಿಟ್ಟು, ನೊಸಲ-ಕಪೋಲಗಳಿಗೆ ಕುಂಕುಮ ಅರಿಷಣ ಧರಿಸಿ, ಮುಡಿಗೆ ಕೇತಕಿ ಮಲ್ಲಿಗೆ ಮುಡಿದು, ನಡುದುಂಬಿಗೆ ವಜ್ರ ಖಚಿತ ಸುವರ್ಣ ನಾಗಪದ್ಮ ತಿರುವಿಕೊಂಡು, ವಿಜ್ರಂಭಣೆಯಿಂದ ಹೊನ್ನಿನ ತಟ್ಟೆಯಲ್ಲಿ ತರತರದ ಫಲ, ಪುಷ್ಪ, ಗಂಧ, ಅಕ್ಷತೆ, ಅರಿಷಣ, ಕುಂಕುಮ, ಹೂಬತ್ತಿ ನೀಲಾಂಜನ, ಕಾಯಿ, ಕರ್ಪೂರ, ಊದಬತ್ತಿ ಮೊದಲಾದ ಪೂಜಾ ಸಾಮುಗ್ರಿ ಗಳನ್ನು ತುಂಬಿಕೊಂಡು ಮಕ್ಕಳನ್ನು ಕಂಕುಳದಲ್ಲಿ ಎತ್ತಿಕೊಂಡು ಕಂತುಹರನ ವೈಭವದ ಪೂಜೆಗೋಸುಗ ಸಂಭ್ರಮದಿಂದ ಗುಡಿಗೆ ಬಂದರು.

ಅವರು ಬಿಡದಲೆ ಗುಡಿಯ ಸುತ್ತಲು ಪ್ರದಕ್ಷಿಣೆ ಹಾಕಿ ನಮಿಸಿದರು. ಮನದಲ್ಲಿ ಪರಮಾತ್ಮನ ಧ್ಯಾನ ಮಾಡಹತ್ತಿದರು. ಬಳಿಕ ತಾವು ತಂದ ಫಲ ಪುಷ್ಪಾದಿಗಳನ್ನು ದೇವರಿಗೆ ಅರ್ಪಿಸಿ ದೀಪ ಹಚ್ಚಿ ಬೆಳಗಿದರು. ನಂತರ ತಂದ ನೈವೇದ್ಯವನ್ನು ಅರ್ಚಕರಿಗೆ ಅರ್ಪಿಸಿ ಅವರಿಂದ ಪ್ರಸಾದ ಪಡೆದು ನಮಿಸುತ್ತ ಮನೆಗೆ ಗಮನಿಸಹತ್ತಿದರು.

ಇಂತಿದೆಲ್ಲವನ್ನು ಸಿದ್ಧಭಾರತಿಯು ಕಣ್ಣಾರೆಕಂಡು, ಸಂತೋಷಗೊಂಡು ಗುಡಿಯೊಳಗೆ ಪ್ರವೇಶ ಮಾಡಹತ್ತಿದನು. ಆಗ ಬಾಗಿಲಲ್ಲಿ ನಿಂತಿರುವ ಪೂಜಾರಿಯು ಆರ್ಭಟಿಸಿ, "ಎಲೋ ಹುಡುಗಾ! ನೀನಾರು? ಶೂದ್ರನೋ, ಅಂತ್ಯಜನೋ, ಏನು ಮುಸುಲನೋ? ಯಾವನಿರುವಿ? ಹೇಳಕೇಳದೆ ಗುಡಿಯೊಳಗೆ ಹೋಗುವಿಯಾ? ಛೀ, ಹೀನ ಕುಲಜನೆ ನಡೆ ಹೊರಗೆ" ಎಂದು ಗದ್ದರಿಸಿದನು.

ಆಗ ಸಿದ್ಧಭಾರತಿಯು, "ವಿಪ್ರನೇ ಕೇಳು. ಹೀನವೆಂಬುದು ಸ್ಥೂಲ ತನುವೋ? ಸೂಕ್ಷ್ಮತನುವೋ? ಅಥವಾ ಕಾರಣ ಶರೀರವೋ? ಹೀನ ಒಳಿತೆಂಬುವದು, ಈ ತನುವಿನೊಳಗಿಸರವ ಜ್ಞಾನರೂಪ ಆತ್ಮನೋ? ಯಾವುದಕ್ಕೆ ನೀನು ಹೀನವೆನ್ನುತ್ತೀ? ಹೇಳು ನೋಡುವಾ, ನಿನ್ನ ವಿಪ್ರತ್ವವನ್ನು" ಎಂದನು. "ನೀನು ಪ್ರಥಮ ಪಕ್ಷಕ್ಕೆ ಒಪ್ಪಿದ್ದಾದರೆ ಎಲ್ಲರ ಸ್ಥೂಲ ತನುಗಳು ಹೀನ ಸ್ಥಾನದಿಂದಲೇ ಜನಿಸಿರುವವು. ಸರ್ವರೂ ಹೀನವಾದ ಮೊಲೆ ರಸ ಅನ್ನದಿಂದ ಬೆಳೆದಿರುವರು. ಅಂದ ಮೇಲೆ ಅವರೊಳಹೀನರಾರು? ಶ್ರೇಷ್ಠರಾರು? ಇನ್ನು ಎರಡನೇ ಪಕ್ಷಕ್ಕೆ ಒಪ್ಪಿದ್ದಾದರೆ ಲಿಂಗ ತನುವು ಭಂಗವಾಗುತ್ತಿರುವ ಅನಂತ ತನುಗಳನ್ನೂ, ಮತ್ತು ಹೀನಕರವಾದ ಅಮಂಗಳ ಕನಸುಗಳನ್ನೂ, ರಚಿಸುತ್ತ ಎಲ್ಲರ ಶರೀರಗಳಲ್ಲಿರುತ್ತಿರಲು, ಇವರೊಳಗೆ ಹೀನ ಶ್ರೇಷ್ಠರಾರು? ನಿನಗೆ ಹೇಳಲಿಕ್ಕೆ ಬರುವದೇ? ಇನ್ನು ಕಾರಣ ಶರೀರಕ್ಕೆ ನೀನು ಹೀನತ್ವವನು ಹೇಳಿದರೂ, ಅದೂ ಸರಿಹೋಗುವದಿಲ್ಲ. ಹೇಗಂದರೆ ಸುಷ್ಪ್ತಿಯ ಸುಖವು ಸರ್ವರಿಗೂ ಒಂದೇ ಬಗೆಯಾಗಿ ತೋರುವದು. ಇದರಲ್ಲಿ ಬ್ರಾಹ್ಮಣರಾರು? ಶೂದ್ರರಾರು? ನೀನೆ ಚೆನ್ನಾಗಿ ವಿಚಾರ ಮಾಡಿ ಹೇಳು. ಇದು ಅಲ್ಲದೆ ನೀನು ಆತ್ಮನಿಗೆ ಹೀನ ಶ್ರೇಷ್ಠತ್ವವನ್ನು ಕಲ್ಪಿಸುವದಾದರೆ, ತ್ರಿಕಾಲದಲ್ಲಿಯೂ ಆತ್ಮನು ಸರ್ವರಲ್ಲಿದ್ದು ಮೂರು ಅವಸ್ಥೆಗಳನ್ನು ಎದಿರಿಟ್ಟು ಅರಿಯುತ್ತ ಚಿನ್ಮಾತ್ರ ಸ್ವರೂಪನಾಗಿ ಪೂರ್ಣತ್ವದಿಂದಿರುವನು. ಅಂದ ಮೇಲೆ ಹೀನ ಶ್ರೇಷ್ಠರಾರು? ಹೇ ಬ್ರಾಹ್ಮಣನೇ ಕೇಳು. ಕುಲದ ಅಭಿಮಾನದಿಂದ ಎಲ್ಲರ ಸಂಗಡ ಮತ್ಸರ ಮಾಡುತ್ತ, ಎಲ್ಲರನ್ನೂ ನಿಂದಿಸುತ್ತ, ಎಲ್ಲರಕ್ಕಿಂತಲೂ ನಾವೇ ಶ್ರೇಷ್ಠರೆನ್ನುತ್ತ, ಸ್ವಾರ್ಥಿಗಳಾದವರು ಅವರೆಂಥ

ಶ್ರೇಷ್ಠರು ? ಸರ್ವರಲ್ಲಿ ಸಮಭಾವದಿಂದಿರುವ ಬ್ರಹ್ಮಜ್ಞಾನಿಯೇ ಬ್ರಾಹ್ಮಣನು. ಪರರ ನಿಂದಕರೇ ಅಂತ್ಯಜರು ನೋಡು," ಎಂದನು.

ಸಿದ್ಧಭಾರತಿಯ ಸರಸವಾದ ಶ್ರುತಿ ಸಮ್ಮತ ಈ ನುಡಿಗಳನ್ನು ವಿಪ್ರನು ಕೇಳಿ, ಇವನು ಪರಮ ಬ್ರಹ್ಮಜ್ಞಾನಿಯೇ ನಿಜವೆಂದು ತಿಳಿದು, ಇವನ ಸಂಗತಿಯನ್ನು ನಮ್ಮ ಧರಣಿಪತಿಗೆ ಅರುಹಬೇಕು, ಎಂದು ಸಂತೋಷದಿಂದ ಅರಮನೆಗೆ ಓಡುತ್ತ ಬಂದನು. ಅಲ್ಲಿ ಅರಸನಿಗೆ ಮಣಿದು, ಗುಡಿಯೊಳಗೆ ನಡೆದ ಎಲ್ಲ ವಿವಿಯವನ್ನು ಅರಿಕೆ ಮಾಡಿಕೊಂಡನು. ಇದೆಲ್ಲವನ್ನು ನೃಪತಿಯು ಕೇಳಿ, ತನ್ನ ದೂತರನ್ನು ಕರೆಯಿಸಿ, "ನೀವು ಬೇಗ ಹೊಸರಥವನ್ನು ತಕ್ಕೊಂಡು ಗುಡಿಗೆ ಹೋಗಿರಿ. ಆ ಗುಡಿಗೆ ಬಂದಿರುವ ಬಾಲನಾದ ವೈರಾಗ್ಯ ಮೂರ್ತಿಯನ್ನು ಇಲ್ಲಿಗೆ ತೀರ್ವ ಕರೆದುಕೊಂಡು ಬನ್ನಿರಿ," ಎಂದು ಆಜ್ಞಾಪಿಸಿದನು.

ರಾಜನಾಜ್ಞಾನುಸಾರ ದೂತರು ಗುಡಿಗೆ ರಥವನ್ನು ತಂದು ನಿಲ್ಲಿಸಿ ಸಿದ್ಧನಿಗೆ ನಮಿಸಿದರು. ಮತ್ತು "ಪರಮ ಪೂಜ್ಯರೇ, ಇಂದು ತಾವು ಅರಮನೆಗೆ ದಯವಿಟ್ಟು ಬರಲಿಕ್ಕೆ ಅರಸರು ಬಿನ್ನೈಸಿ ಕೊಂಡಿರುವರು. ತಾವು ತೀವ್ರ ರಥವನ್ನು ಅಲಂಕರಿಸಬೇಕು," ಎಂದು ಕೈ ಜೋಡಿಸಿ ನಿಂತುಕೊಂಡರು.

ಆಗ ಸಿದ್ಧಭಾರತಿಯು ಅವರಿಗೆ, "ಈ ಜಡ ಶರೀರವೆಂಬ ರಥಕ್ಕೆ ಇಂದ್ರಿಯಗಳೇ ಕುದುರೆಗಳು, ಮನಸ್ಸೆಂಬುವದೇ ಕಡಿವಾಣ, ಬುದ್ಧಿಯೇ ಸಾರಥಿಯು, ಮತ್ತು ಆತ್ಮನೇ ರಥಿಕನು [ಯಜಮಾನನು]. ಇಂಥ ರಥವಿರಲು ಪ್ರತಿ ರಥವು ನಮ್ಮಂಥ ನಿಷ್ಕಲ ಬ್ರಹ್ಮಚಾರಿಗೆ ಯೋಗ್ಯವಲ್ಲ. ಮತ್ತು ನಿಮ್ಮ ರಾಜನಿಗೆ ನಾನು ಬಂದು ಮಾಡುವದೇನು ?" ಎಂದು ದೂತರಿಗೆ ಕೇಳಿದನು.

ಆಗ ದೂತರು, "ನಮ್ಮರಸರು ಸನ್ಮತಿಯಾದ ಮಂತ್ರಿಯೊಡನೆ ಸರ್ವ ಪ್ರಜರನ್ನು ತಮ್ಮ ಮಕ್ಕಳಂತೆ ಪ್ರೀತಿಸುತ್ತ ಧರ್ಮದಿಂದ ರಾಜ್ಯಪರಿಪಾಲನೆ ಮಾಡುವರು. ಇದು ಅಲ್ಲದೆ ಮೋಕ್ಷಾಪೇಕ್ಷೆಯಿಂದ ಸುತ್ತಲಿನ ದೇಶಗಳಿಂದ ಗುಹಾ ವಿದ್ವಾನ್ನರನ್ನು ಆಮಂತ್ರಿಸಿ ಬರಮಾಡಿಕೊಂಡು ಜಿಜ್ಞಾಸ ನಡೆಸಿರುವರು. ಅವರಲ್ಲಿ ಯಾರ ಮತವು ಶ್ರೇಷ್ಠವೋ ಅದನ್ನು ಸ್ವಸಮ್ಮತದಿಂದ ಸ್ವೀಕರಿಸು

ವರು. ಈಗ ತಾವು ಬಂದ ವಾರ್ತೆಯನ್ನು ಕೇಳಿ ಪರಮ ಸಂತೋಷವುಳ್ಳವರಾಗಿ, ಇಂದು ಪರಮ ಪಂಪಾಪತಿಯೇ ನರರೂಪದಿಂದ ಬಂದಿರುವನು, ಎಂದು ಅರಿತು, ತಮ್ಮನ್ನು ಕರೆಯಿಸಿಕೊಳ್ಳುವದಕ್ಕಾಗಿ, ಕಳುಹಿಸಿ ಕೊಟ್ಟರುವರು. ತಾವು ದಯವಿಟ್ಟು ತೀವ್ರ ರಥಕ್ಕೆ ಶೋಭೆಯನ್ನು ತರಬೇಕು, ದೇವಾ," ಎಂದು ಪ್ರಾರ್ಥಿಸಿಕೊಂಡರು.

ಆಗ ಸಿದ್ಧಭಾರತಿಯು ರಥವನ್ನೇರಿ ಕುಳಿತನು. ರಥವು ಮುಂದೆ ಸಾಗಿ ಬರಲು ಎಡ-ಬಲಕ್ಕೆ ಬಿಳಿಯ ಸಂಗಮವರಿ ಶಿಲೆಗಳಿಂದ ಭದ್ರವಾಗಿ ಕಟ್ಟಲ್ಪಟ್ಟ ಎರಡು-ಮೂರು ಅಂತಸ್ತುಗಳ ಮನೆಗಳು ಸಾಲಾಗಿ ನಿಂತಿದ್ದವು. ಅವುಗಳ ಬಾಗಿಲು ಕಿಡಿಕೆಗಳು ರಂಗುರಂಗಿನ ಚಿತ್ರವಿಚಿತ್ರ ಕಾಜುಗಳು ರಮ್ಯವಾಗಿ ಕಂಗೊಳಿಸುತ್ತಿದ್ದವು. ಅದಕ್ಕೂ ಸ್ವಲ್ಪ ಮುಂದೆ ಬರಲು ಒಂದು ಪಕ್ಕಕ್ಕೆ ಗಜಗಳ ಸಾಲೆಗಳೂ, ಮತ್ತೊಂದು ಪಕ್ಕದಲ್ಲಿ ಒಂಟೆ, ಕುದುರೆ, ರಥ, ಮೇಣೆ ಮೊದಲಾದ ಶಾಲೆಗಳೂ ತೋರಿದವು. ಅವುಗಳ ಸಮೀಪದಲ್ಲಿ ಸಸ್ತ್ರಾಸ್ತ್ರಗಳ ಆಲಯಗಳು ಶೋಭಿಸುತ್ತಿದ್ದವು. ಅದಕ್ಕೂ ದೂರದಲ್ಲಿ ಮದ್ದು ಗುಂಡುಗಳ ದೊಡ್ಡ ದೊಡ್ಡ ಕೊಠಡಿಗಳು ಭದ್ರವಾಗಿದ್ದು ಬಾಗಿಲಗಳು ಮುದ್ರೆಯಿಂದ ಮುಚ್ಚಲ್ಪಟ್ಟಿದ್ದವು. ಅವುಗಳ ಸುತ್ತಲೂ ಕಾವಲುಗಾರರು ಬಿಚ್ಚುಗತ್ತಿ ಹಿಡಿದು ಪಹರೆ ತಿರುಗುತ್ತಿದ್ದರು.

ಸಿದ್ಧಭಾರತಿಯು ರಥದಲ್ಲಿ ಕುಳಿತು ಎಡ-ಬಲ ಬೀದಿಗಳಲ್ಲಿ ಹಾಲು ಕರೆಯುವ ಗೋವು-ಮಹಿಷಿಗಳ ಕಟ್ಟುವ ಕೊಟ್ಟಡಿಗಳೂ, ಗುಡಿ-ಗೋಪುರಗಳೂ, ಕಾರಂಜಿಗಳೂ, ರಥ, ಆನೆ, ಕುದುರೆ, ಒಂಟಿ ಮತ್ತು ಕಾಲಾಳುಗಳಿಂದ ಪಟ್ಟಣ ಶೋಭಾಯಮಾನವಾಗಿ ಕಂಗೊಳಿಸುತ್ತಿರುವುದನ್ನು ಕಂಡನು. ಇದೆಲ್ಲವನ್ನು ಈಕ್ಷಿಸುತ್ತಿರಲು ರಥವು ಮುಂದೆ ಸಾಗಿತು, ಆಗ ಮುಂದೆ ಸುರಪನ ಅರಮನೆಯಂತೆ ಶೋಭಿಸುತ್ತಿರುವ ರಾಜನ ಅರಮನೆಯ ಮಹಾದ್ವಾರದ ಮುಂದೆ ರಥವು ಬಂದು ನಿಂತಿತು. ಆಗ ಅಚ್ಚುಕಟ್ಟಾಗಿ ಸಮವಸ್ತ್ರದಿಂದ ಸಾಲಾಗಿ ನಿಂತ ಸಿಪಾಯಿಗಳು ರಾಜಪದ್ಧತಿಯಂತೆ ತುತೂರಿ ಮೊದಲಾದ ವಾದ್ಯಗಳಿಂದ ಸಿದ್ಧಭಾರತಿಯನ್ನು ಎದುರುಗೊಂಡು ನಮ್ರಭಾವದಿಂದ ನೆಲಮುಟ್ಟಿ ನಮಸ್ಕರಿಸಿದರು. ಸಿದ್ಧರು ಸಂತೋಷವುಳ್ಳವರಾಗಿ

ಅವರನು ಕೃಪಾದೃಷ್ಟಿಯಿಂದ ನೋಡಿದರು. ಒಳಗೆ ರಾಜಸಭೆಯು, ರತ್ನ
ಪಚ್ಚದ ತೊಲೆ, ಬೋದು ಕಂಬಗಳಿಂದ ಬಹು ಸುಂದರವಾಗಿ ಶೋಭಿಸು
ತ್ತಿತ್ತು. ಹೊನ್ನಿನ ಗಿಲಾಯದಿಂದೊಪ್ಪುವ ಗೋಡೆಯು ಮತ್ತು ಗೋಮೇ
ಧಿಕದಿಂದ ಕೊರೆದು ಮಾಡಿದ ಬಾಗಿಲು ಕಿಡಿಕೆಗಳು ಬಹು ರಮ್ಯವಾಗಿ
ಪ್ರಕಾಶಿಸುತ್ತಿದ್ದವು. ಅರಸನ ಸಿಂಹಾಸನವು ತರತರದ ಮುತ್ತು, ರತ್ನ,
ವಜ್ರ, ವೈಡೂರ್ಯಗಳಿಂದ ಕೆಚ್ಚಲ್ಪಟ್ಟಿತ್ತು. ಕಾಂತಿಯುಳ್ಳ ನವರತ್ನ ಖಚಿತ
ವಾದ (ಹೊನ್ನಿನ ಅಷ್ಟಪೈಲಿನಿಂದ ಸ್ಪಷ್ಟವಾಗಿ ಕಂಗೊಳಿಸುತ್ತಿರುವ) ಸ್ತಂಭ
ಗಳು ಸಿಂಹಾಸನದ ಮಂಟಪದ ಸುತ್ತಲೂ ವೈಭವದಿಂದ ಶೋಭಿಸುತ್ತ
ನಿಂತಿದ್ದವು. ಗೋಪುರದ ಮೇಲಿರುವ ಹೊನ್ನಿನ ಕಳಸವು ಥಳಥಳಿಸುತ್ತಿತ್ತು.
ಸಾಲಾಗಿ ಒಪ್ಪುತ್ತಿರುವ ಬೋದುಗಳಿಗೆ ಜೋಲುಬಿದ್ದ ಸರಸ (ಚಲಪು)
ಮುತ್ತಿನ ಸರಗಳು ತಾರೆಗಳಂತೆ ಮಿನುಗುತ್ತಿದ್ದವು. ಇಂಗಡಲ (ಕ್ಷೀರ
ಸಾಗರದ) ಬಿಳಿ ನೊರೆಯಂತೆ ಎತ್ತರದ ಮೇಲೆ ಒಪ್ಪುತ್ತಿರುವ ಬಿಳಿ ರೇಶಿ
ಮೆಯ ಮೇಲ್ಗಟ್ಟು, ಅದರ ಕೆಳಗೆ ಜೋಲು ಬಿದ್ದು ರಂಜಿಸುವ ಜರದಂಚಿಗೆ
ಮೆಗೆ ರಂಗುಗೊಳಿಸುವ ತೋಮುತ್ತಿನ ಗೊಂಡೆಗಳು ತೂಗಾಡುತ್ತಿದ್ದವು.
ಇವುಗಳ ಮಧ್ಯದಲ್ಲಿರುವ ನವರತ್ನಗಳಿಂದ ಒಪ್ಪುತ್ತಿರುವ ಸಿಂಹಾಸನದ ಮೇಲೆ
ಮೃದುವಾದ ಹಂಸತೂಲಿಕಾತಲ್ಪವು ಹಾಸಲ್ಪಟ್ಟಿತ್ತು. ಅದರ ಮೇಲೆ
ಮಂಡಲೇಶನು, ನವರತ್ನ ಖಚಿತ ಮುಕುಟ, ಕೇಯೂರ (ತೋಳಿನ ಕೆಳಗೆ
ಧರಿಸುವ ಒಂದು ಆಭರಣ) ರಾಜಮುದ್ರೆ, ಛತ್ರ-ಚಾಮರಾದಿಗಳಿಂದ ವಿರಾಜಿ
ಸುತ್ತಿದ್ದನು. ಇಂದ್ರ ನೀಲದ ನೆಲಗಟ್ಟಿನ ಮೇಲೆ ಬಿದ್ದಿರುವ ರಾಜನ ಪ್ರತಿ-
ಬಿಂಬವು, ಭೂದೇವಿಯು ತನ್ನರಸನಾದ ಹರಿಯನ್ನು ತನ್ನ ಹೃದಯದಲ್ಲಿ,
ಪ್ರೇಮದಿಂದ ಬಿಗಿದಪ್ಪಿರಿಸಿಕೊಂಡಿರುವಳೇನೋ ! ಎಂಬಂತೆ ತೋರುತ್ತಿತ್ತು.

ದೊರೆಯ ಎಡ-ಬಲಕ್ಕೆ ಹೊನ್ನಿನ ವೈಬಣ್ಣದಿಂದೊಪ್ಪುತ್ತಿರುವ ತರುಣಿ
ಯರೀರ್ವರು ತರತರದ ಉಡುಗರೆ ಉಟ್ಟು ಕೈಯಲ್ಲಿ ಚಿನ್ನದ ಹಿಡಿಕೆಗಳ
ಚವರಿಗಳನ್ನು ಹಿಡಿದು ತಮ್ಮ ಸಡಗರದ ನಿಡಿದೋಳುಗಳನ್ನೆತ್ತಿ ಮೆಲ್ಲಗೆ ಗಾಳಿ
ಹಾಕುತ್ತಿದ್ದರು. ಗಾಯಕರು, ಕವಿಗಳು, ಕಲಾವಿದರು, ಪಂಡಿತರು, ಸುಭಾ
ಷಿತರು, ಸುಮಂಗಲೆಯರು, ನರ್ತಕನರ್ತಕಿಯರು, ಪ್ರಜರು, ಮಾಂಡಲಿಕ

ಅರಸರು ಮತ್ತು ಸುಜ್ಞಾನಿಗಳು ಮೊದಲಾದ ಸಮೂಹಗಳಿಂದ ಆ ರಾಜ ಸಭೆಯು ಇಂದ್ರನ ಸಭೆಯಂತೆ ಶೋಭಾಯಮಾನವಾಗಿತ್ತು. ಆ ಸಮಯಕ್ಕೆ ದೂತನು ಧರಣಿಪನ ಸನ್ನಿಧಿಗೆ ಐತಂದು ನೆಲಮುಟ್ಟಿ ಮಣಿದೆದ್ದು, "ದೊರೆಯೇ, ಚಿತ್ತೈಸಬೇಕು. ತಮ್ಮ ಅಪ್ಪಣೆಯಂತೆ ಹೊಸ ರಥದ ಮೇಲೆ ಬಾಲ ಭಾಸ್ಕರನಂಥ ಮುನಿವರರನ್ನು ಕರೆದು ತಂದಿರುವೆವು," ಎಂದು ಅರಿಕೆ ಮಾಡಿಕೊಂಡರು.

ತಕ್ಷಣವೇ ರಾಜನು ಸಿಂಹಾಸನ ಬಿಟ್ಟು ಎದ್ದು ಮುಂದೆ ಬಂದು, ಮುನಿ ಪುಂಗವಗೆ ವಂದಿಸಿ ಕೈ ಹಿಡಿದು ಕರೆತಂದು, ರತ್ನಖಚಿತಉಚಿತವಾದ ಸಿಂಹಾ-ಸನದ ಮೇಲೆ ಕುಳ್ಳಿರಿಸಿ ನಮಿಸಿದನು. ಅದನ್ನು ಸಭೆಯ ಪಂಡಿತರು ಅಸಹನೆ-ಯಿಂದ, "ತಿರುಕನಾದ ಈ ಹುಡುಗನಿಗೆ, ಇಂಥ ರಾಜಪೀಠವನ್ನು ಕೊಟ್ಟದ್ದು ನಮ್ಮೆಲ್ಲರಿಗೂ ಅಪಮಾನಕರವು", ಎಂದು ತಮ್ಮ ತಮ್ಮೊಳಗೆ ಅಪಹಾಸ್ಯದ ಮಾತುಗಳನ್ನು ಆಡತೊಡಗಿದರು.

ಅದನ್ನು ಕೇಳಿ ಸಿದ್ಧಭಾರತಿಯು ರಾಜನಿಗೆ, "ಪ್ರಜಾರಕ್ಷಕನೆ, ನಿನ್ನ ಸಭೆಯು ಬಲು ಅಮಂಗಲವಾಗಿರುವದು. ಯಾಕಂದರೆ ಇಲ್ಲಿ ಬರೇ ಧನದ ಭಿಕ್ಷೆಗಾಗಿ ಕೈಯೊಡ್ಡುವ ತಿರುಕರೂ, ಮತ್ಸರರೂಪದ ನಾಯಿಗಳೂ, ನಿಂದಾ-ರೂಪ ಹಂದಿಗಳೂ ಸೇರಿ....ನಿನ್ನ ಸಭೆಗೂ, ನಿನಗೂ ಅಮಂಗಲತ್ವ ತಂದೊ-ಡ್ಡಿರುವರು," ಎಂದು ಹೇಳಿದನು.

ಬಳಿಕ ನೃಪತಿ ಆಜ್ಞಾನುಸಾರ ಎಲ್ಲರೂ ರಥವನ್ನೇರಿ ಸಾಲಾಗಿ ಚಿಂತಾ ಮಣಿ ಆಶ್ರಮಕ್ಕೆ ಬಂದರು. ಆಗ ಆ ಆಶ್ರಮದ ಅಧಿಪತಿಗಳಾದ ಶರಣ ಸ್ಥಲಾರ್ಯರು ಸಂತೋಷಹೊಂದಿ ಸಲುಗೆಯಿಂದ ಸರ್ವರಿಗೂ ಯೋಗ್ಯ ಆಸನಗಳನ್ನಿತ್ತು ಉಪಚರಿಸಿದರು ಎಂಬಲ್ಲಿಗೆ ಮಂಗಲಂ

ಶ್ರೀಮಂಗಲ ದೇವ ನಿನ್ನಯ ।
ಲೇಸು ಗೊಡುತಿಹನೆಂಬ ಬಿರುದಿಗೆ ।
ಆಶೆ ಬಡುತಂ ಮೋಸ ಬಹುಜನ ಪೋದರದರಿಂದ ॥

ಈಶನೇ ನೀ ಕೊಡವೆನೆಂಬುವ ।
ಕಾಶೆಯಿಂ ನಾಂ ಗೊಳ್ವೆನೆಂಬುವೆನು ॥
ಹೇಸಿಗುಣ ವೀರ್ವರೊಳು ಬೇಡ್ವೈ ಬೇಡಿಕೊಂಬುವೆನು ॥

ಇತಿ ಶ್ರೀಮಚ್ಛಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ ಲೀಲಾ ಚರಿತ್ರ ಕಲ್ಪದ್ರುಮದೊಳು ಆನೆಗಂದಿಯ ವರ್ಣನೆ ಚಿಂತಾಮಣಿ ಆಶ್ರಮ ಪ್ರವೇಶ ಎಂಬಲ್ಲಿಗೆ ಹತ್ತನೇ ಅಧ್ಯಾಯ ಸಮಾಪ್ತಿ.

---

॥ ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ॥



## ಸಂಚಾರ ಸಂಭ್ರಮ ಕಾಂಡ

### ಅಧ್ಯಾಯ ೧೧

॥ ಓಂ ತತ್ಸತ್ ॥

ಈ ಅಧ್ಯಾಯದಲ್ಲಿ ಸಿದ್ಧಭಾರತಿಯು ಚಿಂತಾಮಣಿ ಆಶ್ರಮದಲ್ಲಿ ಷಣ್ಮತ ವಾದಿಗಳನ್ನು ಜಯಿಸಿ ಅರಮನೆಗೆ ಹೋದ ವಿಷಯವಿರುವದು.

ಮಂಗಲ— ಶ್ರೀ ಮಹಾದೇವಿ ತ್ರಿಲೋಚನ ।
ಸೋಮಧರ ಕಾಲಾರಿ ಶಾಶ್ವತ ।
ಭೀಮ ಪಶುಪತಿ ಸುರಗಣಾರ್ಚಿತ ಶೂಲಿ ವೇದಾಂಗ ॥

ವಾಮದೇವ ಮಹೇಶ ಶಂಕರ |
ಕಾಮಹರ ಕೈಲಾಸ ಮಂದಿರ |
ಶ್ಯಾಮ ಕಂದರ ಭಕ್ತಲೋಲನೆ ಪೊರೆಯೊ ನತನಪ್ಪೆ ||

## ಪದ— ೧–೮೧ಸಿದ್ಧನು ಷಣ್ಮತವಾದಿಗಳ ಖಂಡನಮಾಡಿ ರಾಜನ ಅರಮನೆಗೆ ಹೋದದ್ದು

ಬಳಿಕ ಚಿಂತಾಮಣಿ ಆಶ್ರಮದ ಸ್ವಾಮಿಗಳು ಛಲದಿಂದ ವಾದಕ್ಕೆ ನಿಂತ ಷಣ್ಮತ ವಾದಿಗಳನ್ನು ಕುರಿತು, "ನೀವೆಲ್ಲರೂ ಕ್ರಮದಿಂದ ಒಬ್ಬೊಬ್ಬರೇ ಬಂದು ನಿಮ್ಮ ಅಭಿಮತ ಏನಿರುವದನ್ನು ತಿಳಿಸಿರಿ," ಎಂದರು.

ಆಗ ಆರು ಮತ ವಾದಿಗಳಲ್ಲಿ ಚಾರ್ವಾಕ ಪಂಡಿತನು ಮುಂದೆ ಬಂದು ಹೇಳುತ್ತಾನೆ. "ಎಲ್ಲರಲ್ಲಿಯೂ ನಾನೆಂಬ ಬುದ್ಧಿಯು ಯಾವ ದೇಹದಲ್ಲಿ ನೆಲೆಯಾಗಿರುವದೋ, ಅದುವೇ ಆತ್ಮವು. ಅದು ಹೇಗೆಂದರೆ 'ನಾನು ಬ್ರಾಹ್ಮಣನು, ನಾನು ಕ್ಷತ್ರಿಯನು, ನಾನು ಬಾಲಕನು, ನಾನು ಸುಂದರನು, ನಾನು ಮಲ್ಲನು, ನಾನು ಸ್ತ್ರೀಯಳು, ನಾನು ಪುರುಷನು' ಎಂದು ಅನ್ನುವ ಎಲ್ಲರ ಮತವು ಶರೀರವನ್ನೇ ಲಕ್ಷಿಸಿ ಇರುತ್ತಿರಲು ಆ ಶರೀರವೇ ಆತ್ಮವು. ವನಿತೆ, ಸುತ, ಧನ, ಧಾನ್ಯ, ವಸ್ತ್ರ, ವಾಹನ, ಗೃಹ, ಪಶು ಮತ್ತು ಆಭರಣಾದಿಗಳನ್ನು ಶರೀರದಿಂದಲೇ ಭೋಗಿಸಬೇಕಾಗುವದು. ಶರೀರ ಸುಖವೇ ಸ್ವರ್ಗಸುಖವು. ಅದನ್ನು ದುಃಖದಿಂದ ಬಳಲಿಸುವದೇ ನರಕವು ಮರಣವೇ ಮುಕ್ತಿ. ನಾವು ಇದಿರಿಟ್ಟು ತೋರುವ ಜಗತ್ತನ್ನು ಸತ್ಯವಾಗಿ ಪ್ರತ್ಯಕ್ಷ ಪ್ರಮಾಣದಿಂದ ಅರಿಯುತ್ತೇವೆ. ದೇಹ ಬಿಟ್ಟು ಪಾಪ, ಪುಣ್ಯ, ಸ್ವರ್ಗ, ನರಕಾದಿಗಳು ಇಲ್ಲವೇ ಇಲ್ಲ. ಇದ್ದರೆ ಅವು ಪ್ರತ್ಯಕ್ಷವಾಗಿ ಯಾರಿಗೂ ಗೋಚರಿಸಿಲ್ಲ. ಅದು ಕಾರಣ ಈ ದೇಹದ ವಿಲಾಸಕ್ಕಾಗಿ ಭೋಗ–ಭಾಗ್ಯಗಳನ್ನು ಯಾವ ರೀತಿಯಿಂದಲಾದರೂ, ಸಂಪಾದಿಸಿ ದೇಹ ಸುಖಪಡಿಸುವದೇ ಪರಮ ಪುರುಷಾರ್ಥವು. ಇದಕ್ಕಿಂತಲೂ ಹೆಚ್ಚಿನ ಪುರುಷಾರ್ಥವೇ.... ಇಲ್ಲ. ಅದುಕಾರಣವು ಶರೀರವೇ ಆತ್ಮವೆಂದು ನಾನು ಪ್ರತಿಜ್ಞಾಪೂರ್ವಕ ಹೇಳುತ್ತೇನೆ" ಎಂದನು.

## ನೈಯಾಯಿಕ ಮತ

ಬಳಿಕ ಇಂದ್ರಿಯಗಳೇ ಆತ್ಮನೆಂಬ ವಾದಿಯು ಮುಂದೆ ಬಂದು "ಇಂದ್ರಿಯಗಳು ನಾನು ಹೋಗುತ್ತೇನೆ, ಬರುತ್ತೇನೆ, ಕೊಡುತ್ತೇನೆ, ನುಡಿಯುತ್ತೇನೆ, ಮೂಸುವೆನು, ಮುಟ್ಟುವೆನು, ಮತ್ತು ಕೇಳುವೆನು. ಹೀಗೆ ತಮ್ಮ ತಮ್ಮ ಕಾಯಕಗಳನ್ನು ಮಾಡುತ್ತಿರಲಾಗಿ, ತನುವು ಆತ್ಮನಲ್ಲವು, ಚೇತನವುಳ್ಳ ಇಂದ್ರಿಯಗಳೇ ಆತ್ಮವು. ಯಾಕಂದರೆ ಸಕಲ ಊ "ನನ್ನ ಶರೀರ" ಅನ್ನುವರಲ್ಲದೆ ನಾನು ಶರೀರವೆಂದು ನುಡಿಯಲಾರರು. ಮತ್ತು ಈ ದೇಹವು ಒಂದು ಕೊಡದಂತೆ ಜಡವಾಗಿರುವದು. ಹೀಗಿದ್ದರೂ ಈ ಶರೀರವು ಆತ್ಮನೆಂದು ನೀನು ಹೇಗೆ ಹೇಳುತ್ತೀ ? ವಿಷಯಗಳಿಂದ ತನುವಿಗೆ ಸುಖವಾಗುತ್ತಿರಲಾಗಿ, ತನುವೇ ಆತ್ಮನೆಂದು ಹೇಳಿದ್ದು ಶುದ್ಧ ತಪ್ಪು. ಯಾಕೆಂದರೆ ಜ್ಞಾನೇಂದ್ರಿಯಂಗಳು ವಿಷಯಗಳನ್ನು ಉಪಭೋಗಿಸುವ ಕಾಲಕ್ಕೆ ಆಗುವ ಆನಂದವು ಇಂದ್ರಿಯಗಳಿಗೆ ಆಗುವದಲ್ಲದೆ, ದೇಹಕ್ಕಾಗುವದಿಲ್ಲ. ಈ ಅನುಭವ ಮೇಲಿಂದ ಇಂದ್ರಿಯಗಳೇ, ನಿಜವಾಗಿ ಆತ್ಮವು. ನೀನು ಶರೀವನ್ನು ಸುಖವಾಗಿಟ್ಟು ಪೋಷಿಸುವದೇ, ಜಗತ್ತಿನಲ್ಲಿ ಪರಮ ಪುರುಷಾರ್ಥವೆಂದು ಹೇಳಿದ್ದು ನಿನ್ನ ಅವಿವೇಕದ ಮಾತಾಗಿದೆ. ತನ್ನ ಮನಸ್ಸಿನ ಪ್ರೀತಿಗೆ ಯಾವುದು ತೀವ್ರ ವಿಷಯವಾಗುವದೋ, ಅದುವೇ ಪರಮ ಪುರುಷಾರ್ಥಕವು. ಶರೀರವೇ ಆತ್ಮನೆಂಬುವದಕ್ಕೆ ಪ್ರತ್ಯಕ್ಷಪ್ರಮಾಣವು.. ಒಂದೇ ನೈಜವೆಂದು ನೀನು ಒಳ್ಳೇ ಧೈರ್ಯದಿಂದ ಹೇಳಿದ್ದು, ಪೂರ್ಣ ಸುಳ್ಳು. ಏಕೆಂದರೆ ಹಾಲಿನೊಳಗಿರುವ ಬೆಣ್ಣೆಯು ಪ್ರತ್ಯಕ್ಷ ಪ್ರಮಾಣಕ್ಕೆ ಗೋಚರಿಸದಿದ್ದರೂ, ಅನುಮಾನ, ಪ್ರಮಾಣದಿಂದ ಅದು ಇರುವದೆಂದೇ ಹೇಳಬೇಕು. ಪ್ರತ್ಯಕ್ಷ ಪ್ರಮಾಣದೊಂದಿಗೆ ಅನುಮಾನ ಪ್ರಮಾಣವನ್ನು ತಕ್ಕೊಂಡು, ಹೇಳಿದರೆ ಸಿದ್ಧೋಷವಾಗುವದು" ಎಂದು ಹೇಳಿ ದೇಹವೇ ಆತ್ಮನೆಂದು ಹೇಳುವ ಮತವಾದಿಯನ್ನು ಖಂಡಿಸಿ, ಇಂದ್ರಿಯಗಳೇ ಆತ್ಮವೆಂದು, ತನ್ನ ಮತವನ್ನು ಸಿದ್ಧಪಡಿಸಿದನು.

## ಪ್ರಾಣವೇ ಆತ್ಮ

ಬಳಿಕ ಪ್ರಾಣವೇ ಆತ್ಮನೆಂಬ ಮತವಾದಿಯು ತಾನು ಕುಳಿತ ಸ್ಥಳದಿಂದ ಮುಂದಕ್ಕೆ ಸರಿದು ಬಂದು, ನಗುತ್ತ ಹೇಳುತ್ತಾನೆ. "ತ್ರಿಕಾಲದಲ್ಲಿಯೂ,

ದೇಹದಲ್ಲಿ ಎಡಬಿಡದೆ ಎಡೆಯಾಡುತ್ತ ಮೂರು ಅವಸ್ಥೆಗಳಲ್ಲಿದ್ದುಕೊಂಡು, ಈ ದೇಹವನ್ನು ಯಾವದು ರಕ್ಷಣ ಮಾಡುವದೋ, ಆ ಪ್ರಾಣವೇ ಆತ್ಮವು ಯಾಕಂದರೆ ಒಂದು ಸಮಯದಲ್ಲಿ ಪ್ರಾಣ ಮತ್ತು ಇಂದ್ರಿಯಗಳು, ನಾನು ಹೆಚ್ಚು, ನಾವು ಹೆಚ್ಚು, ಎಂದು ಕಲಹ ಮಾಡುತ್ತ ಅದರ ನಿರ್ಣಯಕ್ಕಾಗಿ ಬ್ರಹ್ಮನ ಬಳಿಗೆ ಹೋದವು. ಆಗ ಕಮಲಜನು, 'ಪ್ರಾಣವೇ ಶ್ರೇಷ್ಠವೆಂದು ಸಂತೋಷದಿಂದ ಪ್ರಾಣಕ್ಕೆ ಮುಖ್ಯತ್ವವನ್ನು ಕೊಟ್ಟಿರುವನೆಂದು, ಪ್ರಶ್ನೋಪನಿಷತ್ತು ಹೇಳಿರುವದು. ಅದು ಕಾರಣ ದೇಹೇಂದ್ರಿಯಾದಿಗಳಿಗೆಲ್ಲಕ್ಕೂ ಪ್ರಾಣವೇ ಒಡೆಯನಾದ್ದರಿಂದ ದೇಹೇಂದ್ರಿಯಾದಿಗಳ ವ್ಯವಹಾರವು ಸುಗಮವಾಗಿ ಸಾಗಿರುವವು. ತನುವಿನೊಳಗಿನ ಪ್ರಾಣವು ಹಾರಿ ಹೋಯಿತೆಂದರೆ ಆ ಕ್ಷಣವೇ ಮರಣವು ಪ್ರಾಪ್ತವಾಗುವದು. ಆಗ ನಿನ್ನ ಇಂದ್ರಿಯಗಳು ಏನು ಮಾಡಬಲ್ಲವು ? ಮತ್ತು ಸರ್ವರೂ ನನ್ನ ಇಂದ್ರಿಯಗಳು ಅನ್ನುವರಲ್ಲದೇ ನಾನು ಇಂದ್ರಿಯಗಳು ಅನ್ನುವದಿಲ್ಲ. ತನ್ನ ವಸ್ತು ತಾನು ಎಂದೂ ಆಗಲಾರನು. ಮತ್ತು ತನಗೆ ಎದುರಿಟ್ಟು ತೋರುವ ವಸ್ತುವು ತಾನಾಗಲಾರದು, ಇದು ಸಿದ್ಧಾಂತವು. ಇವುಗಳ ಮೇಲಿಂದ ವಿಚಾರಿಸಿ ನೋಡಲಾಗಿ ಇಂದ್ರಿಯಗಳಿಗೆ ಆತ್ಮತ್ವವಲ್ಲ. ಮೊದಲು ನೀನು ಇಂದ್ರಿಯಗಳಿಗೆ ಚೇತನತ್ವ ಹೇಳಿರುವಿ. ಆದರೆ ನಿನ್ನನ್ನೇ ಕೇಳುವೆನು. ಎಲ್ಲ ಇಂದ್ರಿಯಗಳಲ್ಲಿ ಒಂದು ಚೇತನವೋ ? ಅಥವಾ ತಾವೆಲ್ಲವೂ ಕೂಡಿ ದೇಹದಲ್ಲಿ ಒಂದು ಚೇತನವೋ ? ಇಲ್ಲವೆ ಒಂದೊಂದು ಇಂದ್ರಿಯಗಳಿಗೆ ಒಂದೊಂದು ಚೈತನ್ಯವು ಬೇರೆ ಬೇರಾಗಿರುವದೋ ? ಹೇಳು.

ನೀನು ಪ್ರಥಮ ಪಕ್ಷಕ್ಕೆ ಒಪ್ಪಿದರೆ ಆ ಚೇತನವು ಯಾವ ಇಂದ್ರಿಯದಲ್ಲಿರುವದು ? ನೀನು ಯಾವುದಾದರೊಂದು ಇಂದ್ರಿಯದಲ್ಲಿ ಇರುವದೆಂದು ಹೇಳಿದರೆ ಅದು ಸರಿಯಲ್ಲ. ಯಾಕಂದರೆ ಜ್ಞಾನವುಳ್ಳ ಜೀವನು ಅನ್ಯ ಇಂದ್ರಿಯಗಳ ವ್ಯವಹಾರವನ್ನು ತಿಳಿಯುವದರಿಂದ ಒಂದು ಇಂದ್ರಿಯದಲ್ಲಿ ಚೇತನ ಇರುವದೆಂದು ಹೇಳುವ ನಿನ್ನ ಪೂರ್ವಪಕ್ಷ ಸಿದ್ಧವಾಗಲಿಲ್ಲ. ಇನ್ನು ನೀನು ಎರಡನೆಯ ಪಕ್ಷಕ್ಕೆ ಒಪ್ಪಿದ್ದಾದರೆ ನೀನು ಹೇಳುವ ಇಂದ್ರಿಯಗಳಲ್ಲಿ ಯಾವದಾದ–

ರೊಂದು ಇಂದ್ರಿಯವು ಮೃತಪಟ್ಟರೆ ಎಲ್ಲ ಇಂದ್ರಿಯಗಳು ನಾಶವಾಗ-ಬೇಕಾಯ್ತು. ಮತ್ತು ಇಂದ್ರಿಯದೊಡನೆ ಜೀವ, ಜ್ಞಾನವೂ ಕೂಡ ನಾಶ ವಾಗಿ ಹೋಗಬೇಕು. ಆದರೆ ಒಂದು ಇಂದ್ರಿಯ ಚೇತನವು ನಾಶವಾದರೂ ಉಳಿದ ಇಂದ್ರಿಯಗಳು ಹಾಗೆ ಇರುವವು. ಇದರಿಂದ ನಿನ್ನ ಎರಡನೇ ಪಕ್ಷವು ಸಿದ್ಧಿಸಲಿಲ್ಲ. ಮೂರನೇ ಪಕ್ಷಕ್ಕೆ ಒಪ್ಪಿದ್ದಾದರೆ ದೇಹದಲ್ಲಿ ಬೇರೆ ಬೇರೆಯಾಗಿ ತೋರುವ, ಹತ್ತು ಇಂದ್ರಿಯಗಳಲ್ಲಿ ಹತ್ತು ಆತ್ಮರಿದ್ದ ಮೇಲೆ ಒಂದೊಂದು ಇಂದ್ರಿಯ ಇಚ್ಛೆಯು ಒಂದೊಂದು ಪ್ರಕಾರ ವಾಗಿ ಇರುವದು. ಹೇಗೆ ಒಂದು ಕದಳಿಗೆ ಹತ್ತು ಆನೆಗಳನ್ನು ಕಟ್ಟಿದರೆ ಅವು ತಮ್ಮ ತಮ್ಮ ದಿಕ್ಕಿಗೆ ಜಗ್ಗುತ್ತಿರಲು ಆ ಬಾಳೆಯ ಗಿಡಕ್ಕೆ ಎಂತು ನಾಶತ್ವವೋ, ಅಂತೆ ಬಂಧುರವಾದ ಶರೀರವು ನಾಶವಾಗುವದು. ಅದು ಕಾರಣ ಸರ್ವ ಇಂದ್ರಿಯಗಳಿಗೂ, ಪ್ರಾಣವು ಒಂದೇ ಮುಖ್ಯವಾಗಿದ್ದು ಅದ ರಿಂದ ಎಲ್ಲ ಕಾರ್ಯಗಳು ಸುರಳಿತವಾಗಿ ನಡೆಯುವವು. ದಶೇಂದ್ರಿಯಗಳಿಂದ ನಡೆಯಲಾರವು. ಅದು ಕಾರಣ ಇಂದ್ರಿಯಗಳು ಆತ್ಮವಲ್ಲ. ಪ್ರಾಣವೇ ಆತ್ಮವು ಇದು ಸತ್ಯವೆಂದನು.

## ಮನವೇ ಆತ್ಮ

ಅದನ್ನು ಕೇಳಿ ಮನವೇ ಆತ್ಮನೆಂಬ ವಾದಿಯು ಎದ್ದು ಬಂದು "ನಿನ್ನ ಪ್ರಾಣವು ವಾಯುವಿನಂತೆ ಚಲನವುಳ್ಳದ್ದಾದ ಕಾರಣ, ಅದು ಆತ್ಮ ವಲ್ಲ. ಪ್ರಾಣವು ಇರದಿದ್ದರೆ ಶರೀರೇಂದ್ರಿಯಾದಿಗಳು ಜೀವಿಸಿಕೊಂಡು ಇರ ಲಾರವು," ಎಂದು ನೀನು ನುಡಿದ ನುಡಿಯು ಅಸತ್ಯವಿರುವದು. ಹೇಗೆಂದರೆ ಒಬ್ಬ ಪುರುಷನು ಮೂರ್ಛೆ ಹೊಂದಿದರೆ ಅವನು ಮೃತಪಟ್ಟನು, ಎಂದು ಯಾರೂ ಅನ್ನುವದಿಲ್ಲ. ಮತ್ತು ಯೋಗಸಿದ್ಧರು ರೇಚಕ, ಪೂರಕ, ಕುಂಭಕ ದಿಂದ ಪ್ರಾಣವನ್ನು ಶಿಖಾಚಕ್ರಕ್ಕೆ ಒಯ್ದು ನಿಲ್ಲಿಸಿ, ಸಹಸ್ರಾರರು ವರುಷ ಬದುಕಿಕೊಂಡು ಇರುವರು. ಅಂದ ಮೇಲೆ ಪ್ರಾಣವು ಆತ್ಮವಲ್ಲ. ಇಷ್ಟೇ ಅಲ್ಲ, ನಿದ್ರೆಹತ್ತಿದ ಸ್ತ್ರೀಯಳ ಮೂಗಿನಲ್ಲಿರುವ ಮುಕುರವನ್ನು ಕಳ್ಳನು

ಕೆತ್ತರಿಸಿಕೊಳ್ಳುವಾಗ ಅಲ್ಲಿಯೇ ನಾಸಿಕದಲ್ಲಿ ಎಡೆಯಾಡುವ ಶ್ವಾಸವು ಅದನ್ನೇಕೆ ತಿಳಿಯಲಿಲ್ಲ ? ಅದು ಕಾರಣ ಅಸುವು ಜಡವು 'ನೀನು ಹಿಂದೆ ಪ್ರಾಣ, ಇಂದ್ರಿಯಗಳು ಕಲಹಮಾಡಿ ಬ್ರಹ್ಮನಲ್ಲಿಗೆ ಹೋದವು. ಅವನು ಪ್ರಾಣಕ್ಕೆ ಶ್ರೇಷ್ಠತ್ವವನ್ನು ಕೊಟ್ಟದು, ಅವರು ಕಲಹ ತ್ಯಾಗಕ್ಕಲ್ಲದೆ ಆತ್ಮ ನಿರ್ಣಯಕ್ಕಲ್ಲ; ತಿಳಿಯಿತೇ ? ಅದುಕಾರಣ ಇಚ್ಛಾರೂಪ ಚೇತನವಾದ ಮನಸ್ಸೇ ನಿಜವಾದ ಆತ್ಮವು. ಅದು ಜಡವಾದ ಇಂದ್ರಿಯಗಳಿಗೆ ಸಂಬಂಧ ವಾಗಲು ಎಲ್ಲ ವ್ಯವಹಾರ ನಡೆಯುವವು. 'ಇಂದ್ರಿಯಾಣಾಂ ಮನೋನಾಥ' ಎಂಬ ಪ್ರಮಾಣವಿರುವದರಿಂದ ಹತ್ತು ಇಂದ್ರಿಯಗಳಿಗೆ ಒಡೆಯನಾದ ಮನಸ್ಸೇ ಆತ್ಮವು. ವಿಷಯಾಸಕ್ತ ಮನವೇ ಜೀವನೆಂದು, ನಿರ್ವಿಷಯ ಮನವೇ ಆತ್ಮನೆಂದು ನನ್ನ ಪ್ರಾಮಾಣಿಕವಾದ ಮತವು ನೋಡಿರೆಂದನು.

## ಬೌದ್ಧಮತ

ಆ ಮೇಲೆ ಬುದ್ಧಿಯೇ ಆತ್ಮನೆಂಬ ಬೌದ್ಧನು ಎದ್ದು ಬಂದು ಹೇಳುತ್ತಾನೆ. "ನಿನ್ನಮನೋಮಯ ಕೋಶವು ಆತ್ಮನಲ್ಲ. ಯಾಕಂದರೆ ಕಾಮ ಕ್ರೋಧಾದಿ ರೂಪಗಳಿಂದಲೂ, ಸಂಕಲ್ಪ-ವಿಕಲ್ಪಾದಿ ರೂಪಗಳಿಂದಲೂ, ತನಗೆ ವೇದ್ಯವಾಗಿರುವದರಿಂದ ಜಡವಾಗಿರುವದು. ಬೆಲ್ಲದಲ್ಲಿರುವ ಮಧುರವನ್ನು ಬೇರ್ಪಡಿಸಿದರೆ, ಆ ಬೆಲ್ಲವು ಇಲ್ಲದಾಗುವಂತೆ, ಸರ್ವವಿಷಯರೂಪವಾದ ಮನಸ್ಸನ್ನು ವಿಷಯಗಳಿಂದ ಬೇರ್ಪಡಿಸಿದರೆ, ಮನಸ್ಸು ನಾಶಹೊಂದುವದು. ಹೇಗಂದರೆ ಯೋಗಿಗಳು ವಿಷಯದಿಂದ ದುಃಖವಾಗುವದೆಂದು ತಿಳಿದು, ಧ್ಯಾನಾದಿಗಳಿಂದ ಮನಸ್ಸನ್ನು ಬುದ್ಧಿಯಲ್ಲಿ ಲಯ ಮಾಡುವರು. ಇಂತು ಲಯಾತ್ಮಕವಾದ ಮನಸ್ಸು ಆತ್ಮವೆಂತಾದೀತು ? ಎಂದೂ ಆಗಲಾರದು. ಹೇಗಂದರೆ ಪೂರ್ವದಿಕ್ಕಿನಲ್ಲಿ ಸೂರ್ಯನು ಉದಯವಾದರೆ, ಅವನ ಕಿರಣಗಳು ಪಶ್ಚಿಮ ಸಮುದ್ರದ ವರೆಗೂ ಪ್ರಕಾಶ ಬೀರುತ್ತವೆ. ಕೆರೆಯೊಳಗೆ ನೀರು ಇದ್ದರೆ, ಕಾಲುವೆಯು ಹರಿಯುತ್ತದೆ, ನೇತ್ರವಿದ್ದರೆ, ದೃಷ್ಟಿಯು ಹರಿಯುತ್ತದೆ. ಅದರಂತೆ ಹಿಂದೆ ವಿಜ್ಞಾನರೂಪ ಬುದ್ಧಿಯು ಇದ್ದರೆ ಮುಂದೆ ಮನಸ್ಸಿನ ಕಾರ್ಯವು ನಡೆಯುತ್ತದೆ. ಅದುಕಾರಣ ಬುದ್ಧಿಯು ಮನಸ್ಸಿಗೆ ಒಡೆಯನಾಗಿದೆ, ಅಗ್ನಿಯು ಬತ್ತಿಗೆ ಹತ್ತಲು ಬತ್ತಿ ಉರಿಯುತ್ತದೆ. ಎಂಬಂತೆ

ಬುದ್ಧಿಯಿಂದ ಮನಸ್ಸು ಬೆಳಗುವದು ಈ ಬುದ್ಧಿಯು ಎಲ್ಲ ವಿಷಯ ಜ್ಞಾನಕ್ಕೆ ಆಶ್ರಯವಾಗಿರುವದರಿಂದ, ಬುದ್ಧಿಯೇ ಆತ್ಮನು; ಇದು ಸಿದ್ಧವು" ನೋಡಿರೆಂದನು.

### ಜಡಚೇತನಾತ್ಮಕ ಆನಂದಮಯ ಕೋಶವೇ ಆತ್ಮನು

ಇದೆಲ್ಲವನ್ನು ಕೇಳಿ ವಾರ್ತಿಕಕಾರ ಭಟ್ಟನು ಮುಂದೆ ಬಂದು ತನ್ನ ಮತವನ್ನು ಸಿದ್ಧಪಡಿಸುವನು. "ಬುದ್ಧಿವಾದಿಯೆ, ಕೇಳು, ನಿನ್ನ ಮತವು ಸಿದ್ಧವಾಗುವದಿಲ್ಲ, ಏಕೆಂದರೆ ಅಗ್ನಿಯಿಂದ ಕಾಯಲ್ಪಟ್ಟ ಕಬ್ಬಿಣದ ಗುಂಡು ತನ್ನಲ್ಲಿ ಅಗ್ನಿಯ ಶಕ್ತಿ ಇರುವ ವರೆಗೂ ಕತ್ತಲೆಯನ್ನು ಪ್ರಕಾಶಿಸುವದು. ಅದರಂತೆ ಸ್ವಯಂ ಪ್ರಕಾಶವಿಲ್ಲದ ಬುದ್ಧಿಯು ಆತ್ಮನಿಂದ ಪ್ರಕಾಶವನ್ನು ಪಡೆದು ವಿಷಯಗಳನ್ನು ಬೆಳಗಿದರೂ ಮಿಂಚುಹುಳುವಿನಂತೆ ಕ್ಷಣಕ್ಷಣಕ್ಕೆ ತೋರಿ ಅಡಗುವದು. ಮತ್ತು ಒಬ್ಬ ವೇಷಧಾರಿಯು ವೇಷಭೂಷಣಗಳಿಂದ ಹೇಗೆ ಅನೇಕ ಪ್ರಕಾರವಾಗಿ ಗೋಚರಿಸುವನೋ ಅದರಂತೆ ಈ ವಿಜ್ಞಾನ. ಮಯ ಕೋಶ ಬುದ್ಧಿಯು, 'ಅಹಂಕರ್ತಾ' ಅಹಂ ಭೋಕ್ತಾ, ಅಹಂ ಸುಖಿ ಅಹಂ ದುಃಖಿ, ಅಹಂ ಪಂಡಿತ, ಅಹಂ ಮೂರ್ಖ ಹೀಗೆ ಅನೇಕ ಗುಣಗಳಿಂದ ಸಾಕ್ಷಿ ಚೈತನ್ಯಕ್ಕೆ ವಿಷಯವಾಗುವದು. ಮತ್ತು ನಿದ್ರಾದಿ ಅವಸ್ಥೆಗಳಲ್ಲಿ ಲಯ ಉತ್ಪತ್ತಿ ಉಳ್ಳದ್ದು. ಇದು ಅಲ್ಲದೆ ಅರಿವೆ–ಮರೆವೆ ಉಳ್ಳದ್ದಾಗಿದೆ. ಅದು ಹೇಗಂದರೆ ಹಿಂದಿನದನ್ನು ಇಂದು ಹೇಳುತ್ತಾನೆ ಇಂದು ಕೊಟ್ಟ ಸಾಲವನ್ನು ಮುಂದೆ ಕೇಳುತ್ತಾನೆ ಹೀಗೆ ಹಿಂದಿನ ಅನುಭವವನ್ನು ಸ್ಮರಣೆಗೆ ತಂದುಕೊಂಡು ಎಲ್ಲರೂ ವ್ಯವಹರಿಸುವರು. ಆದ್ದರಿಂದ ಆತ್ಮನು ಕ್ಷಣಿಕನಲ್ಲ ಕೂಲಂಕುಶವಾಗಿ ವಿಚಾರಿಸಲು ಪೂರ್ವಸ್ಮರಣೆಯು ನಾಶವಾದರೆ ಸಾರ್ವಭೌಮನು, ಮಾತಾ-ಪಿತರು, ಸರ್ವ ಜಾಳ್ವಿಯು, ಮೋಕ್ಷಸಾಧನ ಮೊದಲಾದವುಗಳನ್ನು ತಿಳಿಯದೆ ಬಿಡಬೇಕಾಯಿತು. ಇದರಿಂದ ಜಗತ್ತಿನಲ್ಲಿ ಸರ್ವರಿಗೂ ಅನವಸ್ಥೆ ದೋಷ ಬರುವದು, ಆದ್ದರಿಂದ ನೀನು ಬುದ್ಧಿಯೇ ಆತ್ಮನೆಂದು ಹೇಳುವದು ಹಾಸ್ಯಕರವು. ಆದರೆ ನನ್ನ ಮತದಲ್ಲಿ ಆತ್ಮನು ಜಡ–ಚೇತನ ದಿಂದಿರುವನು. ಏಕೆಂದರೆ ನಿದ್ರೆಯಿಂದೆದ್ದವನೆ ನಾನು ಏನೂ ಅರಿಯದೆ ಸುಖದಿಂದ ಮಲಗಿದ್ದೆನೆಂದು ಹೇಳುವದರಿಂದ ಜಡಾಜಡ ಸ್ವಭಾವವುಳ್ಳ ಆನಂದ

ಮಯ ಕೋಶವೇ ಆತ್ಮನು, ಏನು ಅರಿಯದೆ ಅನ್ನುವದೇ ಜಡವು. ಆ ಜಡವನ್ನು ಅರಿತು ಹೇಳುವದೇ ಚೇತನವು,; ಆದಕಾರಣ ಜಡ-ಚೇತನ ರುಂಡಿರುವುದೇ ಆತ್ಮವು, ನೋಡೆಂದನು.

## ಶೂನ್ಯ ಮತ

ಕೂಡಲೇ ಶೂನ್ಯವಾದಿಯು ಎದ್ದುಬಂದು, "ಆಕಾಶದಂತೆ ನಿರವಯವನಾದ ಆತ್ಮನಿಗೆ ಬೆಳಕು ಕತ್ತಲೆಯಂತೆ ಜಡ ಮತ್ತು ಚೇತನವನ್ನು ಹೇಳುವದು ಅಸಂಗತವು, ಹೀಗೆ ಹೇಳಿದರೆ ಆತ್ಮನು ಘಟದಂತೆ ಉತ್ಪತ್ತಿನಾಶವುಳ್ಳವನೆಂದು ಒಪ್ಪ ಬೇಕಾಗುವದು. ಲಯೋದಯ ಉಳ್ಳದ್ದು ಯಾವುದಿರುವದೋ ಅದು ಉತ್ಪತ್ತಿ ಪೂರ್ವದಲ್ಲಿ, ಮತ್ತು ನಾಶದಂತ್ಯದಲ್ಲಿ, ಇಲ್ಲದ್ದಾಗಿರುವದು. ಯಾವದು ಆದಿ ಅಂತ್ಯಗಳಲ್ಲಿ ಇರುವದಿಲ್ಲವೋ, ಅದು ಮಧ್ಯದಲ್ಲಿರಲಾರದು. ಅದುಕಾರಣ ಶೂನ್ಯವೇ ಆತ್ಮವು. ಇದಕ್ಕೆ ಅನ್ಯವಾಗಿ ತೋರುವದೆಲ್ಲವೂ, ಅನಾತ್ಮವು. ನಿತ್ಯ ಸದ್ರೂಪವಾಗಿರುವ ಶೂನ್ಯವೇ ಆತ್ಮವು. ಇದುವೇ ಪರತತ್ವವು,' ನೋಡೆಂದನು.

## ಪ್ರಭಾಕರ ಮತ

ಆ ಮೇಲೆ ನೈಯಾಯಿಕರಲ್ಲಿ ಪ್ರಭಾಕರನೆಂಬವನು, ತನ್ನ ಮತವನ್ನು ಹೇಳಲಾರಂಭಿಸಿದನು, "ನೀನು ಹೇಳುವ ಶೂನ್ಯವು, ಆತ್ಮವಲ್ಲಾ. ಯಾಕೆಂದರೆ ಶೂನ್ಯ ಅನ್ನುವದನ್ನು ನೀನು ಅರಿತು ಹೇಳುವಿಯೋ ? ಅರಿಯದಲೆ ಹೇಳುವಿಯೋ ? ಅದನ್ನು ಅರಿತಿಲ್ಲವೆಂದು ಹೇಳಿದರೆ ಶೂನ್ಯವು ಇಲ್ಲದಂತಾಯಿತು, ಅರಿತು ಹೇಳುತ್ತೇನೆ. ಎಂದು ಹೇಳಿದರೆ, ನೀನು ಯಾವ ಅರಿವಿನಿಂದ ಆ ಶೂನ್ಯವನ್ನು ಅರಿತು ಹೇಳುವಿಯೋ, ಆ **ಅರಿವೇ ಆತ್ಮವು.** ಶೂನ್ಯವು ಅರುಹಿಸಿಕೊಳ್ಳುವದು. ಆ ಶೂನ್ಯಕ್ಕೆ ಬೇರಾಗಿ ಅರಿಯುತ್ತ ತನಗೆ ಹಾನಿ ಇನಿತಿಲ್ಲದೆ ಇರುವ ಆತ್ಮನಲ್ಲಿ, ಮನಸ್ಸು ಸಂಯೋಗವಾಗಲು ಅಲ್ಲಿ ಜ್ಞಾನವುಟ್ಟುವದು. ಈ ಜ್ಞಾನ ಗುಣದಿಂದ ಆತ್ಮನು ಚೇತನ ಉಳ್ಳವನಾಗಿ ಬುದ್ಧಿ, ಸುಖ, ದುಃಖ, ರಾಗ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ ಮತ್ತು ಭಾವನೆಗಳೆಂಬ ಒಂಭತ್ತು ಗುಣಗಳಿಂದ ಕಾಣಿಸಿಕೊಳ್ಳುವನು, ಆದ್ದರಿಂದ

ಆತ್ಮನು ಗುಣಮಯನು, ಮತ್ತು ಆನಂದಮಯನು, ಇವುವೆ ಸತ್ಯವೆಂದು ನಂಬಿರಿ ? ಎಂದನು.

## ಷಣ್ಮತಗಳ ಪರಾಭವ

ಈ ಪ್ರಕಾರ ಷಣ್ಮತ ವಾದಿಗಳ ತತ್ವಗಳನ್ನು ಸಿದ್ಧಭಾರತಿಯು ಕೇಳಿ ಸಮ್ಮತಿಸದೆ, "ಇವರು ವಾದಿಸುವ ವಾದಗಳಲ್ಲಿ ಸ್ವಲ್ಪವಾದರೂ ಪ್ರಯೋಜನ, ವಿಲ್ಲ. ಇದರಿಂದ ಇವರಿಗೆ ಖೇದವೇ ಹೊರತು ಪರಾನಂದದ ಪ್ರಾಪ್ತಿ ಇಲ್ಲ,' ಎಂದು ಅಂದುಕೊಂಡು, ಮನದಲ್ಲಿ ತನ್ನ ತಂದೆಯಾದ ಸದ್ಗುರುವರನನ್ನು ಸ್ಮರಿಸಿ, ಆನೆಗುಂದಿಯ ಅರಸನನ್ನು ಕುರಿತು "ಪ್ರಜಾ ರಕ್ಷಕನೆ, ಕುರುಡರು ಒಂದು ದೊಡ್ಡ ಆನೆಯ ಒಂದೊಂದು ಅವಯವಗಳನ್ನು ಮುಟ್ಟುತ್ತ ಇದು ಕಂಬ, ವಣಿಕೆ, ನಗಾರಿ, ಚವರಿ, ಮರ, ಕಾಳಿ, ಎಂದು ವಾದಿಸುತ್ತಿರುವದನ್ನು, ಕಣ್ಣಿನಿಂದ ಆನೆಯನ್ನು ಕಂಡವರು, ಅವರ ವಾದಕ್ಕೆ ಸಮ್ಮತಿಸದೆ ನಗದೆ ಬಿಟ್ಟಾರೆ ? ಆತ್ಮನು ನಿತ್ಯವಾಗಿ ತಮ್ಮಲ್ಲಿಯೇ ವ್ಯಾಪಕನಿದ್ದರೂ, ಜ್ಞಾನ ಹೀನರು ಅದನ್ನು ತಿಳಿಯದೆ ಏಕದೇಶದಲ್ಲಿ ಉತ್ಪತ್ತಿ ನಾಶ ಹೊಂದುತ್ತಿರುವ ಅನ್ನಮಯಾದಿ ಪಂಚಕೋಶಗಳಲ್ಲಿ ಒಬ್ಬೊಬ್ಬರು ಒಂದೊಂದು ಕೋಶಕ್ಕೆ ಒಳ್ಳೊಳ್ಳೆ ಹೆಮ್ಮೆಯಿಂದ ಆತ್ಮನೆಂಬುವರು. ಇದನ್ನು ಭೂಮಂಡಲದ ಕಡು ಮರುಳರಲ್ಲಿ ಓರ್ವನಾದರೂ ಒಪ್ಪಬಹುದೇ ? ಎಂದೂ ಒಪ್ಪಲಾರನು. ಅಂದ ಮೇಲೆ ಜ್ಞಾನ ನೇತ್ರವುಳ್ಳ ಮಹಾತ್ಮರು ಇವರ ಮತಕ್ಕೆ ಎಂದಾದರೂ ಒಪ್ಪಬಹುದೇ ?

ಹಾಗಾದರೆ ಆತ್ಮನು ಹೇಗಿರುವನೆಂದರೆ ಕೇಳು. ಗಾಢನಿದ್ರೆಯಿಂದೆದ್ದ-ವನು "ನಾನು ಏನೂ ಅರಿಯದೆ ಸುಖದಿಂದ ಮಲಗಿದ್ದೆನು" ಎಂದು ತನ್ನ ಅನುಭವದಿಂದ ಹೇಳುವದರಿಂದ ಆತ್ಮನು ಸಚ್ಚಿದ್ರೂಪನು. ಅದು ಹೇಗೆಂದರೆ ನಿದ್ರೆಯಲ್ಲಿ ಜಾಗ್ರ-ಸ್ವಪ್ನಗಳ ವಿಷಯಗಳು ಏನೊಂದು ಇಲ್ಲದ ಮೂಲಕ ಅವುಗಳ ಅಭಾವವನ್ನು ಅರಿತು ಹೇಳುವನು, ಅದು ಕಾರಣ ಚಿದ್ರೂಪನು. ಸುಖವಾಗಿ ಅನ್ನುವದರಿಂದ ಆನಂದ ಸ್ವರೂಪನು. ಇದ್ದೆನು ಅನ್ನುವದರಿಂದ ಸದ್ರೂಪನು. ಹೀಗೆ ತನ್ನಸ್ವರೂಪವಾದ ಸತ್, ಚಿತ್, ಆನಂದದ ಅನುಭವ ವನ್ನು ಸ್ಮರಿಸಿಕೊಂಡು ಹೇಳುವದರಿಂದ ತಾನು ಸಚ್ಚಿದಾನಂದ ಸ್ವರೂಪನೇ

ಇರುತ್ತಾನೆ. ಇಂಥ ಅಜಡ ಆತ್ಮನನ್ನು ಅರಿಯದಲೆ, ಇವರೆಲ್ಲರು ವಾದಿಸುತ್ತಿರುವರು. ತನ್ನಿಂದ ಆರಿಸಿಕೊಳ್ಳುವ ಸಕಲವಸ್ತುಗಳು, ತನಗೆ ಬೇರಾಗಿ ಇದಿರಿಟ್ಟು, ಕಾಣಿಸಿಕೊಳ್ಳುವದರಿಂದ, ಅವೆಲ್ಲವುಗಳು ಜಡಗಳಾಗಿರುವವು ಹೀಗೆ ಜಡವಾದ ಪಂಚ–ಕೋಶಗಳನ್ನು ನಿತ್ಯ ಅರಿಯುವ ಆತ್ಮನು ಅವುಗಳಿಗೆ ಭಿನ್ನವಾಗಿರುವದರಿಂದ ಅವೆಲ್ಲವೂ, ಅನಾತ್ಮವೆನಿಸಿ ಕೊಳ್ಳುವವು. ಹೀಗಿದ್ದು ಇವುಗಳಿಗೆ ಆತ್ಮನೆಂದರೆ ಶಮೆ, ದಮೆ, ಮೊದಲಾದ ಮೋಕ್ಷಸಾಧನಗಳೆಲ್ಲವೂ ವ್ಯರ್ಥವಾಗಬೇಕಾದೀತು ? ಜ್ಞಾನಿಗಳ ಅಂತರಂಗವನ್ನರಿಯದೆ, ಗುರು ವೇದಾಂತ ಶಾಸ್ತ್ರಗಳಲ್ಲಿ ವಿಶ್ವಾಸವಿಡದೆ, ಭ್ರಾಂತಿಯಿಂದ ಕೋಶಗಳ ಆತ್ಮನೆಂದು ಬಿಡಿದಾಡುವ ಅಜ್ಞಾನಿಗಳಿಗೆ ಎಂದಿಗೂ ಭವಹಿಂಗಲಾರದು, ರವಿಗೆ ಮೇಘ ಮುಚ್ಚಿದಂತೆ ಆತ್ಮನಿಗೆ ಈ ಐದು ಕೋಶಗಳು ಮುಚ್ಚಿರುವವು ಅದರಿಂದ ಇವುಗಳಿಗೆ ಕೋಶಗಳೆಂಬ ನಾಮವು ಬಂದಿರುವದು. ಹೇ ರಾಜನೇ, ಕೇಳು. ಜೀವನ ಕೋಶಗಳು ಪರಮ ಸಾಕ್ಷಿ ಚೈತನ್ಯಕ್ಕೆ ಮುಸುಕಿರುವಂತೆ, ಈಶನ ಕೋಶಗಳಾದ ಪಂಚ ಭೂತಗಳು, ಜೀವನವನ್ನು ಮುಸುಕಿರುವವು ಆದರೆ ಜೀವನ ದೃಷ್ಟಿಗೆ ಪಂಚ ಕೋಶಗಳು ಆವರಿಸಿಕೊಂಡಂತೆ, ಅದಿದೇವನ ಸತ್ಯರೂಪಕ್ಕೆ ಅವು ಆಚ್ಛಾದಿಸಲಾರವು. ಯಾಕಂದರೆ ಪರಮನು ಸಾಕ್ಷಿಕನೂ, ಸರ್ವ ವ್ಯಾಪಕನೂ, ನಿರುತರ ಮಾಯಾತೀತನೂ ಮತ್ತು ಆವರಣರಹಿತ-ನಾಗಿರುವನು.

ಇಂಥ ಪರಬ್ರಹ್ಮರೂಪಕ್ಕೆ, ಅನೇಕ ಉಪಾಸಕರು, ತತ್-ಪದದ ವಾಚ್ಯಾರ್ಥಗಳಿಗೆ ಪರಮನೆಂದೂ, ಹಿರಣ್ಯಗರ್ಭನೆಂದೂ, ಹರಿ, ಶಕ್ತಿ, ರವಿ, ವೈಶ್ವಾನರ ಮೊದಲಾದ ಹೆಸರುಗಳನ್ನಿಟ್ಟುಕೊಂಡು ಅವೇ ಮೂರ್ತಿಗಳನ್ನು ಪೂಜಿಸುತ್ತ ನಿಜಮರ್ಮವನ್ನು ಅರಿಯಡಲೇ ಅನೇಕ ಸಕಾಮ ಕರ್ಮಗಳನ್ನು ಮಾಡುತ್ತ ಅವುಗಳ ಫಲವನ್ನು ಅನುಭವಿಸದಕ್ಕಾಗಿ ಅನೇಕ ಜನ್ಮಗಳನ್ನು ಎತ್ತುತ್ತ "ಭವದೊಳಗೆ ಬರಿಸಿ ಮೋಸಗೊಳಿಸುವ ಇಂಥ-ಫಲವೇ ನಿಜ ಮೋಕ್ಷವು". ಎಂಬ ಸುಖದ ಭ್ರಮೆಯಿಂದ ಬಹುಕ್ಲೇಶ ಪಡುವರು. ಅದು ಕಾರಣ ದೋಷವಿಲ್ಲದ ಬ್ರಹ್ಮವಿದ್ಯೆಯೊಂದರಿಂದಲೇ ಲೇಸೆನಿಸುವ ಮುಕ್ತಿ ಘಟಿಸುವವಲ್ಲದೆ ಘಾಸಿಪಡಿಸುವಂಥ ಬೇರೆ ಸಾಧನಗಳಿಂದ ಮುಕ್ತಿ ಸಾಧ್ಯ

ವಾಗಲಾರದು. ಇದಕ್ಕೆ 'ಜ್ಞಾನಾದೇವತು ಕೈವಲ್ಯಂ । ನಾನ್ಯಃ ಪಂತ ॥ ವಿದ್ಯತೆ ಅಯನಾಯ ಎಂಬ ಶೃತಿಯುಂಟು.

'ಹೇ ಭೂಪತಿಯೇ, ಕೇಳು. ಅತ್ಯಂತದುಃಖ ನಿವೃತ್ತಿ ಪರಮಾನಂದ ಪ್ರಾಪ್ತಿಯೇ ಸತ್ಯವಾದ ಮುಕ್ತಿಯೆಂದು ಹೇಳಿಸಿಕೊಳ್ಳುವದು. ಮುಮುಕ್ಷು ಆದವನು ಚಿತ್ತದೊಳಗೆ ಎಲ್ಲಕೋಶಗಳನ್ನು ಚನ್ನಾಗಿ ತಿಳಿಯುತ್ತ, ಅವುಗಳನ್ನು ಒಂದೊಂದಾಗಿ ಬೇರ್ಪಡಿಸುತ್ತ, ಕಡೆಯಲ್ಲಿ ಬೇರ್ಪಡಿಸಲಿಕ್ಕೆ ಬಾರದಿರುವ ಉಳುಮೆಯೇ ತನ್ನ ನಿಜ ಸ್ವರೂಪವೆಂದು ತಿಳಿದುಕೊಳ್ಳಬೇಕು.

ಸಿದ್ಧಸದ್ಗುರುಗಳ ಇಂಥ ಬೋಧಪರ ವಾಕ್ಯಗಳನ್ನು ಕೇಳಿ ಅವರೆಲ್ಲರ ಅಜ್ಞಾನದ ಕತ್ತಲೆ ಹರಿದು, ಅವರೆಲ್ಲರಿಗೆ ಜ್ಞಾನ-ಉದಯವಾಯಿತು. ಆಗ ಅವರೆಲ್ಲರು, "ನಿಜವಾಗಿ ಇವನು ನರನಲ್ಲ, ಕೇವಲ ಕಂತುಹರನೇ ಹೌದು,' ಎಂದು ನುತಿಸುತ್ತ ನಮಿಸಹತ್ತಿದರು. ಬಳಿಕ ಆಶ್ರಮದ ಶಾಂತಾನಂದ ಸ್ವಾಮಿಗಳು, 'ನೀನು ವೇದಾಂತ ಕೇಸರಿ,' ಎಂದು ನಮಿಸಿದರು. ಅಲ್ಲಿಂದ ಎಲ್ಲರೂ ರಾಜಾಜ್ಞೆಯಂತೆ ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋದರು.

ಬಳಿಕ ರಾಜನು, ಸಿದ್ಧಭಾರತಿಗಾಗಿ ಸಿದ್ಧಪಡಿಸಿದ ರಥದಲ್ಲಿ ಅವರನ್ನು ಆದರಿಂದ ಕುಳ್ಳಿರಿಸಿ ಅರಮನೆಗೆ ಕರೆತಂದನು. ನಂತರ ಅವರಿಗೆ ಅಭ್ಯಂಗ ಸ್ನಾನ ಮಾಡಿಸಿ, ದಿವ್ಯ ಸಿಂಹಾಸನದ ಮೇಲೆ ಕುಳ್ಳಿರಿಸಿ ಭಕ್ತಿಯಿಂದೊಡ ಗೂಡಿ, ಶೋಡಶೋಪಚಾರಗಳಿಂದ ಪೂಜಿಸಿದನು. ನಂತರ ಷಡ್ರಸಾನ್ನ ಪಕ್ವಾನ್ನಗಳಿಂದ ಉಣಬಡಿಸಿ, ತಾನೂ ಊಟ ಮಾಡಿದನು.

## ರಾಜನಿಗೆಜ್ಞಾನೋಪದೇಶ

ನಂತರ ರಾಜನು ಸಿದ್ಧಸದ್ಗುರುಗಳಿಗೆ ಬಾಗಿ ನಮಿಸುತ್ತ "ಪರಮ ಗುರುವೇ, ನಾನಾರೆಂಬುದನ್ನು ಈಗಲೇ ಅರುಹಿ ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕು ದೇವಾ,' ಎಂದು ಪ್ರಾರ್ಥಿಸಿಕೊಂಡನು.

ಆಗ ಸದ್ಗುರುಗಳ ರಾಜನ ತೀವ್ರ ಮುಮುಕ್ಷುತ್ವಕ್ಕೆ ಪ್ರಸನ್ನರಾಗಿ ವೇದ ಶ್ರುತಿ ಆಧಾರದಿಂದ ಜ್ಞಾನಮಾಡಿ ಕೊಡುತ್ತಾರೆ.

"ನೇತಿ ನೇತಿ ನೇತೀತಿ । ಶೇಷಿತಂ ಯತ್ಪರಮಂ ಪದಂ ॥
ನಿರಾಕರ್ತುಮಶಕ್ಯತ್ವಾತ್ತದಸ್ಮಿತಿ ಸುಖೀ ಭವ ॥"

ಅಂದರೆ ಇದು ನೀನಲ್ಲ, ಇದು ನೀನಲ್ಲ, ಇದು ನೀನಲ್ಲ ಹೀಗೆ ತನಗೆ ಇದಿರಿಟ್ಟು ತೋರುವ ಪ್ರತಿಯೊಂದನ್ನು ನಿರಾಕರಿಸುತ್ತ ಕಡೆಗೆ ನಿರಾಕರಿಸಲಿಕ್ಕೆ ಬಾರ-ದಿರುವ ಯಾವ ಪರಮ ಪದವು ಉಳಿಯುವದೋ, ಆ ಉಳಿಮೆಯೇ ನಾನೆಂದು ತಿಳಿದು ಸುಖಿಯಾಗು. ಅದುವೇ ಭ್ರಾಂತಿಯಿಲ್ಲದ ಅನಂತ ಸಚ್ಚಿತ್ಸುಖ ಸ್ವರೂಪವು. ಅದುವೇ ನಿನ್ನ ಆತ್ಮಸ್ವರೂಪವಾಗಿರುವದು. ಅದುವೇ ನಾನೆಂದು ನಿರ್ಧರಿಸಿ ತಿಳಿದುಕೋ.

"ತತ್ತ್ವಮಸಿ" ಮಹಾವಾಕ್ಯದಲ್ಲಿ ತತ್, ತ್ವಂ, ಅಸಿ ಹೀಗೆ ಮೂರು ಪದಗಳುಂಟು. ಅವುಗಳಲ್ಲಿ ಶುದ್ಧ ಸತ್ವಗುಣ ಪ್ರಧಾನ ಮಾಯೆ ಯಲ್ಲಿ ಹೊಳೆದ ಚೈತನ್ಯ. ಮತ್ತು ಬಿಂಬರೂಪ್ಪ ಬ್ರಹ್ಮ, ಇವುಗಳು ಕೂಡಿ ಸರ್ವಜ್ಞತ್ವಾದಿ ಗುಣಗಳಿಂದ ಹೊಗಳಿಸಿಕೊಳ್ಳಲ್ಪಡುವ ಈಶ್ವರನ ತತ್ಪದದ ವಾಚ್ಯಾರ್ಥವು, ಎಂದು ಹೇಳಿಸಿಕೊಳ್ಳುವದು. ಮತ್ತು ಮಲಿನ ಸತ್ವಗುಣ ಅವಿದ್ಯೆಯಲ್ಲಿ ಹೊಳೆದ ಚೈತನ್ಯ, ಅದಕ್ಕೆ ಬಿಂಬಿರೂಪನಾದ ಕೂಟಸ್ಥ, ಇವುಗಳು ಕೂಡಿ ಕರ್ಮಫಲಗಳೊಡನೆ ಎಡೆಯಾಡುತ್ತಿರುವ ಜೀವನು ತ್ವಂ ಪದಕೆ ವಾಚ್ಯಾ-ರ್ಥನು ಈಶನ ಉಪಾಧಿಯಾದ ಮಾಯೆಯನ್ನೂ, ಮತ್ತು ಜೀವನ ಉಪಾಧಿಯಾದ ಅವಿದ್ಯೆಯನ್ನೂ ಕಳೆದುಳಿದ ತತ್ತ್ವಂ ಪದಗಳ ಲಕ್ಷ್ಯಾರ್ಥ ವಾದ ಎರಡೂ ಚೈತನ್ಯಗಳು ಒಂದೇ ಎಂದು ಹೇಳುವದೇ. ಅಸಿಪದವೆಂದು ತಿಳಿ. ಇದು ಎಲ್ಲ ಅನುಭವಿಗಳ ಅಭಿಮತವಾಗಿದೆ ಸರಧಿಯೊಳಗೆ ಉದಿಸುವ ತೆರೆ, ನೊರೆಗಳು ನೀರಲ್ಲದೆ ಬೇರುಂಟೇ ? ಅದರಂತೆ ಯಾವಾಗಲೂ ನನ್ನಲ್ಲಿ ತೋರುವ ಎಚ್ಚರ, ಕನಸು, ನಿದ್ರೆ ಮೊದಲಾದ ಎಲ್ಲ ಕಾರ್ಯಗಳು ನಿನಗೆ ಬೇರಲ್ಲವು. ಬೆಲ್ಲದಿಂದ ಮಾಡಲ್ಪಟ್ಟ, ಬೊಂಬೆಗಳಲ್ಲಿ ಸ್ತ್ರೀ, ಪುರುಷ, ಮೃಗ, ಪಕ್ಷಿ ಮೊದಲಾದವುಗಳ ಮುಖ, ಕಪೋಲ, ಗುದ, ಗುಹ್ಯ ಇವೆಲ್ಲವುಗಳಲ್ಲಿ ಭ್ರಾಂತಿಯಿಂದ ಹೀನ, ಒಳಿದೆಂದು ಹೀಗೆ ಕಂಡುಬಂದರೂ, ಅವೆಲ್ಲವೂ ಬೆಲ್ಲವೇ ಇರುವಂತೆ ಜಗತ್ತು. ನೀನು, ನಾನು ಇವೆಲ್ಲವೂ ಏಕಾತ್ಮವೆಂದು ದೃಢಪಡಿಸಿಕೊಳ್ಳಬೇಕು," ಎಂದು ಬೋಧಿಸಿದರು.

ಆಗ ನೃಪನು, "ಪ್ರಭು ವೇ, ನಿನ್ನ ಬೋಧೆಯಿಂದ ನನ್ನಲ್ಲಿರುವ ಭ್ರಾಂತಿ ಅಳಿದು, ಕುಂತಿಯ ಪುತ್ರನೇ ತಾನೆಂದು ನಿಶ್ಚಯವಾಗಿ ತಿಳಿದ ಕರ್ಣನಂತೆ

ಧನ್ಯನಾದೆನು" ಎಂದು ಎಲ್ಲ ಚಿಂತೆಗಳನ್ನು ಬದಿಗೊತ್ತಿ ಆನಂದಾಶ್ರುಗಳನ್ನು ಸುರಿಸುತ್ತ ಪರಮ ಪ್ರೇಮಾಂಬುಧಿಯಲ್ಲಿ ಸ್ನಾನಮಾಡಿ, ವಿರತಿಯೆಂಬ ಮಡಿಯನ್ನುಟ್ಟು, ಸದ್ಗುರುವಿನ ಚರಣಗಳನ್ನು ತನ್ನ ಆನಂದಶ್ರುಗಳಿಂದ ತೊಳೆದು, ಪರಭಕ್ತಿಯೆಂಬ ಗಂಧವನ್ನೇ ತೀಡಿ, ಶಿರವನ್ನೇ ಕಮಲವನ್ನಾಗಿರಿಸಿ ಜ್ಞಾನದೀಪಹಚ್ಚಿ, ಪರಮನೇ ನಾನೆಂಬ ಸದ್ವಾಸನೆಯುಳ್ಳ ಧೂಪವನ್ನಾಕಿ ಸದ್ಗುರುವಿನ ಸ್ತುತಿ ಈ ರೀತಿ ಪಾಡಿದನು.

ಜಯತು ದೇವನೆ ಜನ್ಮರಹಿತನೆ।
ಜಯತು ಮುಕ್ತಾಂಗನೆಯ ರಮಣನೆ।
ಜಯತು ಶೂಲಿಯೆ ಸಚ್ಚಿದಾನಂದ ಲಕ್ಷಿತನೆ।
ಜಯತು ಪರತರ ಮಂಗಲಾತ್ಮನೆ।
ಜಯತು ನಿಶ್ಚಲ ಬ್ರಹ್ಮರೂಪನೇ।
ಜಯತು ಸಿದ್ಧಾರೂಢ ಸದ್ಗುರು ಸ್ವಾಮಿಯೇ ಜಯತು ॥

ಮಂಗಲಂ ಜಯ ಮಂಗಲೆನ್ನುತ
ಲಿಂಗಮಯ ಗುರು ಸಂಗದಿಂ ನಾ।
ಸಂಗಿ ಭಾವವ ನುಂಗಿ ಬೆಳಗುವೆ ಮಂಗಳಾರುತಿಯ ॥
ತುಂಗ ಮಂತ್ರದ ರಂಗಿನಿಂ ಮಿಗೆ।
ಹಿಂಗಿಯದು ಇದು ಲಿಂಗನಾಗುತ।
ವೆಂಗ ಭವವಂ ಪಿಂಗಿ ಬೆಳಗುವೆ ಮಂಗಳಾರತಿಯ ॥

ಈ ಪ್ರಕಾರ ರಾಜನು ತನಗಾದ ಅನುಭವವನ್ನು ಪೇಳಲು ಗುರುಗಳು ಆನಂದಉಳ್ಳವರಾದರು. ತಾನು ಬೋಧಿಸಿದ ಎಲ್ಲ ವಿಷಯವು, ರಾಜನಿಗೆ ಮನನವಾಗಲೆಂದು ಕೆಲವು ದಿನಗಳ ವರೆಗೆ ಅಲ್ಲಿಯೇ ಇದ್ದು, ಅವನಿಗೆ ಆಶೀರ್ವಾದ ಮಾಡಿ, ನಂತರ ಅಲ್ಲಿಂದ ಹೊರಟು ಪುನಃಚಿಂತಾಮಣಿ ಆಶ್ರಮಕ್ಕೆ ಬಂದರು.

ಮಂಗಲಃ—ಮಣ್ಣು ತಿನ್ನುವ ಸಣ್ಣಬಾಲಗೆ। ಹಣ್ಣುಗೊಟ್ಟಾ ಮಣ್ಣು ಚಲ್ಲಿಸುವಣ್ಣನಂದದಿ ಕಣ್ಣಿಗಂ ಬಹು ಬಣ್ಣದಿಂ ತೋರ್ಪ ॥

ಹೆಣ್ಣು ಮೊದಲಹ ಮಣ್ಣು ಚಲ್ಲಿಸು ।
ವಣ್ಣನಹ ಮುಕ್ಕಣ್ಣ ಬೋಧದ ।
ಹಣ್ಣು ತಿನಿಸುವ ಚನ್ನ ಗುರುವಂ ಬಣ್ಣಿಸುತ ನಮಿಪೆ ||

ಇತಿ ಶ್ರೀ ಸಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ ಲೀಲಾ ಚರಿತ್ರ ಕಲ್ಪದ್ರುಮದೊಳು ಷಣ್ಮತ ಖಂಡನವು. ಗುರುಪದೇಶವೆಂಬ ಏಕಾದಶೋಧ್ಯಾಯ ಸಂಪೂರ್ಣಂ.

ಶ್ರೀ ಜಡಿ ಸಿದ್ಧ ಗುರುವೇ ನಮೋ ನಮಃ

————

|| ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ||



## ಸಂಚಾರಸಂಭ್ರಮು ಕಾಂಡ

### ಅಧ್ಯಾಯ ೧೧

|| ಓಂ ತತ್ಸತ್ ||

ಈ ಅಧ್ಯಾಯದಲ್ಲಿ ಸಿದ್ಧ ಭಾರತಿಯು ಚಿಂತಾಮಣಿಯ, ಆಶ್ರಮಕ್ಕೆ ಬಂದು ಅಲ್ಲಿರುವ ಸ್ವಾಮಿಗಳ ಶಿಷ್ಯ ಬ್ರಹ್ಮಾನಂದ ಎಂಬವನ, ಗರ್ವವನ್ನು ರಸಾಯನಶಾಸ್ತ್ರ ವಾಕ್ಯಗಳಿಂದ ಖಂಡಿಸಲು, ಅವನು ಪಶ್ಚಾತ್ತಾಪ ಪಟ್ಟದ್ದು,

ಆ ಆಶ್ರಮದ ಸ್ವಾಮಿಗಳ ಭಕ್ತನೋರ್ವನು ಸಿದ್ಧನನ್ನು ಶ್ರೀಶೈಲಕ್ಕೆ ಕರೆದೊಯ್ಯಲು, ಅಲ್ಲಿ ಸಂಗಡಿಗರಾದ ಜಂಗಮರು, ಲಿಂಗವಿಲ್ಲದ ಭವಿಯೆಂದು ಸಿದ್ಧನನ್ನು ಹೊರದೂಡಿದ್ದು.

ಆ ಜಂಗಮರು, ತಮ್ಮ ಲಿಂಗವನ್ನು ಕಳಕೊಂಡು ಪಶ್ಚಾತ್ತಾಪ ಪಡುತ್ತ ಕಾಡೊಳಗೆ ಸಿದ್ಧನನ್ನು ಹುಡುಕುತ್ತಿರಲಾಗಿ, ನವಗ್ರಹ ಮಠದಲ್ಲಿ ಹುಲಿಯನ್ನೇರಿದ ಸಿದ್ಧಭಾರತಿಯನ್ನು ಕಂಡು ದೈನ್ಯದಿಂದ ಬೇಡಿಕೊಂಡು ಲಿಂಗವನ್ನು ಪಡೆದು, ತಾವಿರುವ ಸ್ಥಳಕ್ಕೆ ಅವನನ್ನು ಕರೆತಂದು, ಅವನಿಗೆ ಆದರ ಸತ್ಕಾರ ಮಾಡಿಸುತ್ತಿದ್ದ ವಿಷಯವಿರುವದು.

ಸ್ತೋತ್ರ— ಪರಮ ಗುರುವೇ ನಿನ್ನ ಕರುಣಾ ।
ಸುರಸ ಪೂರಿತ ಚಂದ್ರ ನಯನದ ।
ಮೆರೆಯುತಿಹ ಕಡೆನೋಟದಿಂದಂ ನೀನು ಮಿಗೆ ನೋಡಿ ॥
ಪರತರ ನಿಜಾನಂದ ಮೆನಿಸುವ ।
ಶರದಿಯಂ ಪೊರೆ ಚಲ್ಲಿಸುತ್ತಂ ।
ಸರುವ ಜನಕೆಂ ಸುಖ ನೀಯ್ಯೆ ಯಾನು ನತುನಪ್ಪೆ ॥

(ಪದ ೧ ರಿಂದ ೪೯ ರ ವರೆಗೆ) ಅಲ್ಲಿಂದ ಸಿದ್ಧಭಾತಿರಯು, ಮನದಲ್ಲಿ ಸದ್ಗುರುವರನನ್ನು ನೆನೆಯುತ್ತ, ಮರಳಿ ಚಿಂತಾಮಣಿ ಆಶ್ರಮಕ್ಕೆ ಬಂದನು. ಆಶ್ರಮದ ಸ್ವಾಮಿಗಳು, ಸಿದ್ಧನನ್ನು ಸತ್ಕರಿಸಿ ಕುಳ್ಳಿರಿಸಿದರು. ಆಗ ಸರ್ವ ಶಿಷ್ಯರು ನಮಿಸ ತ್ತ, ತಮ್ಮ ತಮ್ಮ ಸ್ಥಾನದಲ್ಲಿ ಕುಳಿತರು. ಬಳಿಕ ಬ್ರಹ್ಮಾನಂದ ನೆಂಬುವನು, "ಸಿದ್ಧರನ್ನು ಕುರಿತು ಬ್ರಹ್ಮಸೂತ್ರದಲ್ಲಿ"

"ಅಥಾತೋ ಬ್ರಹ್ಮ ಜಿಜ್ಞಾಸಾ ಎಂಬ ಮೊದಲನೆಯ ಲಲಿತ ಸೂತ್ರವಿದ್ದು, ಇದರ ಅರ್ಥವನ್ನು ತಿಳಿಸಬೇಕು." ಎಂದು ಕೇಳಿಕೊಂಡನು

ಆಗ ಸಿದ್ಧ ಸದ್ಗುರುಗಳು, ಚದುರನೆ ಅಥಾತೊ ಬ್ರಹ್ಮ ಜಿಜ್ಞಾಸಾ ಎಂಬ ಸೂತ್ರದಲ್ಲಿರುವ ಅಥ; ಅತಃ ಬ್ರಹ್ಮ ಜಿಜ್ಞಾಸಾ ಈ ಪದಗಳ ಅರ್ಥವನ್ನು ತಿಳಿಯಬೇಕಾದರೆ ಮೊದಲು ನಿಷ್ಕಾಮದಿಂದ ಕರ್ಮೋಪಾಸನಾದಿಗಳನ್ನು ಮಾಡಿ ಅಂತಃಕರಣದಲ್ಲಿರುವ ಮಲ ವಿಕ್ಷೇಪ ದೋಷಗಳನ್ನು ಕಳೆದುಕೊಂಡು, ಸುಖೇಚ್ಛೆಯುಳ್ಳವನಾಗಬೇಕು. ಇದರ ಮೊದಲನೆಯದಾದ

ಅಥ ಎಂಬ ಪದವು ಮಂಗಲವನ್ನು ಸೂಚಿಸುತ್ತದೆ. ಎರಡನೆಯದಾದ ಅತಃ ಎಂಬ ಪದವು ಸಾಧನ ಚತುಷ್ಟಯ ಸಂಪತ್ತ್ಯನಂತರಂ (ಅಂತರಾರ್ಥ) ವನ್ನು ಪ್ರತಿಪಾದಿಸುತ್ತದೆ. ಇನ್ನು ಜಿಜ್ಞಾಸಾ ಎಂಬ ಪದಕ್ಕೆ ಅರ್ಥವೇನೆಂದರೆ (ಜ್ಞಾತುಮಿಚ್ಛಾ) ತಿಳಿಯುವ ಇಚ್ಛೆ. (ಇಲ್ಲಿ ಇಚ್ಛಾರ್ಥದಲ್ಲಿ ಸನ್ ಪ್ರತ್ಯಯ ವಾಗಿರುವದು). ಬ್ರಹ್ಮನನ್ನು ತಿಳಿಯುವ ಇಚ್ಛೆಗೆ ಬ್ರಹ್ಮಜಿಜ್ಞಾಸಾ ಎನ್ನುತ್ತಾರೆ.

ಮೇಲೆ ಹೇಳಿರುವ ಸಾಧನಗಳಿಂದ ತಾನು ಎಡಬಿಡದ ಬ್ರಹ್ಮಜ್ಞಾನ ಪಡೆಯುವ ಇಚ್ಛೆಯುಳ್ಳವನಾಗಬೇಕೆಂಬುದೇ ಈ ಪ್ರಥಮ ಸೂತ್ರದ ಅರ್ಥವು ಎಂದು ತಿಳಿಸಿದರು. ಆಗ ಬ್ರಹ್ಮಾನಂದನು ಸಿದ್ಧರ ಬೋಧವನ್ನು ಕೇಳಿ ಉದಾಸೀನದಿಂದ ಇಷ್ಟೆಯೋ ? ಎಂದು ನುಡಿದನು. ಆಗ ಅಲ್ಲಿಯೇ ಕುಳಿತ ಓರ್ವ ಶ್ರದ್ಧಾಳು ಸಿಟ್ಟಿನಿಂದ, "ನೀನು ಹೀಗೆ ನುಡಿಯುವದು ಚಂದವೇ ?" ಎಂದು ಗದ್ದರಿಸಿದನು.

## ರಸಾಯನ ಶಾಸ್ತ್ರವಾಕ್ಯಗಳಿಂದ ಬೋಧ

ಕೂಡಲೇ ಸಿದ್ಧನು, ಇಲ್ಲಿ ಕೇಳಿರಿ. ತನು ಮೊದಲುಗೊಂಡು ಸರ್ವ ಜಗತ್ತು ರಸಾಯನ ಕ್ರಿಯೆಯಿಂದ ಉಂಟಾದುದು. ಮೊದಲು ಸಾಮಾನ್ಯ ಚೈತನ್ಯದೊಡನೆ ಅಣುಪರಮಾಣುಗಳ ರಾಸಾಯನಿಕ ವ್ಯಾಪಾರ ನಡೆಯುವದು. ಅದರಲ್ಲಿ ಅವಿರೋಧಾಂಶಗಳು ಪಿಂಡೀಕರಣವಾಗಲು, ಅದಕ್ಕೆ ಉತ್ಪತ್ತಿ ಸ್ನೇಹಾಕರ್ಷಣವೆಂದು ಹೇಳುವರು. ಇದಕ್ಕೆ ಬ್ರಹ್ಮನು ಅಧಿಪತಿಯು ಇದನ್ನು ಕೆಡಿಸುವ ವಿರೋಧಾಂಶವನ್ನು ತಡೆಗಟ್ಟಿ ಕಾಯುವದೇ ಸ್ಥಿತ್ಯ ಸ್ನೇಹಾಕರ್ಷಣವು. ಇದಕ್ಕೆ ಅಧಿಪತಿಯು ವಿಷ್ಣುವು. ಶರೀರವನ್ನು ನಾಶಿಸುವಂಥ ಅಂಶಗಳೆಲ್ಲವೂ ಕೂಡುವದಕ್ಕೆ ನಾಶ ಸ್ನೇಹಾಕರ್ಷಣವೆನ್ನುವರು. ಇದಕ್ಕೆ ಅಧಿಪತಿ ರುದ್ರನು. ಆ ಬಳಿಕ ಸಾತ್ವಿಕ ತನುಗಳಲ್ಲಿ ಪುಣ್ಯ ವಿಶೇಷ ಚೇತನವುಳವರೇ, ದೇವತೆಗಳೆನಿಸುವರು. ಮತ್ತೆ ರಾಜಸ ತನುಗಳನ್ನೆತ್ತಲು, ಪುಣ್ಯಪಾಪ ಮಿಶ್ರಿತ ಚೇತನವುಳ್ಳವರೇ ಮಾನವರು. ಈ ಜಡ ತನುಗಳು ಆ ಮೂಲ ಚೈತನ್ಯದೊಡನೆ ಕೂಡಲು, ಚಿತ್ತ ಮೊದಲಾದ ಕಣಗಳಲ್ಲಿ ರಾಸಾಯನಿಕ ವ್ಯಾಪಾರ ನಡೆಯುವದು. ಅದು ಹೇಗೆಂದರೆ—

ಇಂದ್ರಿಯಗಳು ತಮ್ಮ ತಮ್ಮ ವಿಷಯಗಳೊಡನೆ ಸಂಯೋಗವಾಗುವದೇ ಸ್ನೇಹಾಕರ್ಷಣವೆನಿಸುವದು. ಉದಾಹರಣಾರ್ಥ, ಕಿವಿಗೆ ಶಬ್ದ ಸ್ನೇಹಾಕರ್ಷಣವು. ಗಾಳಿಯು ತನ್ನ ಗಮನದಿಂದ ಸುವಾಸನೆ, ದುರ್ವಾಸನೆಗಳನ್ನು ತುಂಬಿಕೊಂಡು ಬರುವಂತೆ, ವೈಖರಿ ವಾಣಿಯು, ಶುದ್ಧಾಶುದ್ಧ ಅಣು-ಪರಮಾಣುರೂಪ ಶಬ್ದಗಳನ್ನು, ತುಂಬಿತಂದು ಕರಣೇಂದ್ರಿಯಕ್ಕೆ ಸೋಂಕಿಸುವದು. ಆಗ ಅದನ್ನು ಕೇಳಿದವರಿಗೆ ಶಬ್ದದ ಜ್ಞಾನವಾಗುವದು. ಬಳಿಕ ಅದು ಮತಿಯಿಂದ ಬೆಳಗಿಸಿಕೊಳ್ಳುತ್ತ, ಪರರ ಇಂಗಿತವನ್ನು ಜೀವನಿಗೆ ತಿಳುಹಿಸಿ, ಅವನ ವೃತ್ತಿಯನ್ನು ತದಾಕಾರ ಮಾಡುವದು. ಈ ವಿಷಯಾಕಾರ ವೃತ್ತಿಯು ಇಹ – ಪರಗಳಲ್ಲಿ ಸಾಧಕ – ಬಾಧಕಗಳೆನಿಸುತ್ತ, ಸುಖ – ದುಃಖಗಳನ್ನು ಕೊಡುವದು.

ದಯಾರಸ ಪೂರಿತ ಸದ್ಗುರುವಿನ ಮುಖದಿಂದ ಹೊರಡುವ ವಾಕ್ಯವು ಪರಿಶುದ್ಧಾಂತಃಕರಣಮುಳ್ಳ, ಪರಮ ಶಿಷ್ಯನ ಕರಣಗಳಲ್ಲಿ ಬೇಧಿಸಲು, ಆತನು ಆತ್ಮಾಕಾರ ವೃತ್ತಿಯಿಂದ ಸಂತಸಗೊಳ್ಳುವನು. ಆದರೆ ನೀನು ಇಂಥ ಸುಬೋಧ ಕಾಲದಲ್ಲಿ, ಇಂಥ ಗರ್ವಿಷ್ಟ ವಾಕ್ಯಗಳನ್ನು ನುಡಿಯುವಿಯೆಂದರೆ, ಚನ್ನಾಗಿ ಕಾದಿರ್ಪ ಹಾಲಿಗೆ ಹೆಪ್ಪುಗೊಡುವ ಸಮಯಕ್ಕೆ ಉಪ್ಪು ಹಾಕಿದಂತೆ ! ಗುರುಶಿಷ್ಯರಲ್ಲಿ ಶಬ್ದ ರಾಸಾಯಿನ ಕೃತಿ ಸರಿಯಾಗಿ ನಡೆದಾಗ, ಇಂಥ ಕ್ಷೋಭಯುಕ್ತ ಶಬ್ದವು ಸಂಬೋಧೆಯನ್ನು ಕೆಡಿಸುವದು. ಇದನ್ನು ತಿಳಿದುನೋಡು.

"ನಿನಗೆ ನಾನು ಯೋಗಸಿದ್ಧನೆಂಬ ಈ ಗರ್ವವು ಸಲ್ಲುವದೇ ? ಏಕಂದರೆ ಶುಕನ ವಿರಾಗ, ನೃಪ ಜನಕನ ಆತ್ಮವಿಚಾರ, ವೇದವ್ಯಾಸ ಮುನಿಗಳ ಅನುಪಮ ವೇದಾರ್ಥ ಶೋಧನೆ ಮತ್ತು ಘನಪರಾಕ್ರಮಿ ಮಾರುತಿಯ ಗುರುಭಕ್ತಿ ಇವುಗಳಲ್ಲಿ ಒಂದಾದರೂ, ನಿನಗೆ ಸಿದ್ಧಿಸಿರುವದೇ ? ಮರುಳೆ," ಎಂದು ಸಿದ್ಧಭಾರತಿಯು ನುಡಿದನು. ಆಗ ಬ್ರಹ್ಮಾನಂದ ಶ್ರೀ ಸದ್ಗುರುವಿನ ಸಮ್ಮುಖದಲ್ಲಿ ಕೈ ಜೋಡಿಸಿ ನಿಂತು, "ಸ್ವಾಮಿ, ನಾನು ತಮ್ಮ ಬಳಿಯಲ್ಲಿ ಇಂದು ಮಹಾ ತಪ್ಪು ಮಾಡಿದೆನು. ನನ್ನ ಬುದ್ಧಿಯು ಹೋಯಿತು. ತಂದೆಯೇ, ನನ್ನ ಅಪರಾಧವನ್ನು ಮನ್ನಿಸಬೇಕು ಎಂದು ಅವರ ಅಡಿದಾವರೆ

ಗಳಿಗೆ ಎರಗಿ ವಿನಯದಿಂದ ಬೇಡಿಕೊಂಡನು. ಆಗ ಸದ್ಗುರುಗಳು "ಇವನ ಪಶ್ಚಾತ್ತಾಪವೇ, ಇವನಿಗೆ ಪ್ರಾಯಶ್ಚಿತ್ತವಾಯಿತು," ಎಂದು ಅವನನ್ನು ಮನ್ನಿಸಿದರು.

## ಪದ–೨೮–೨೯ ವರೆಗೆ ಸಿದ್ಧನು ಶ್ರೀಶೈಲಕ್ಕೆ ಪ್ರಯಾಣ ಮಾಡಿದ್ದು ಮತ್ತು ಜಂಗಮರಿಂದ ಲಿಂಗವಿಲ್ಲದ ಭವಿಯೆಂದು ದೂಡಿಸಿಕೊಂಡಿದ್ದು

ಅಷ್ಟರಲ್ಲಿ ಆ ಮಠದ ಸದ್ಭಕ್ತನಾದ ಒಬ್ಬ ಧನಿಕನು, ಗುರುಗಳಿಗೆ ನಮಿಸಿ ಅವರೆಲ್ಲರಿಗೂ ಭೋಜನದಿಂದ ತೃಪ್ತಿಪಡಿಸಿದನು. ನಂತರ ತನ್ನ ಗುರುಗಳನ್ನು ಕುರಿತು, ಪ್ರಾರ್ಥನೆ ಮಾಡಿಕೊಂಡಿದ್ದೇನಂದರೆ, "ನಾನು ಶ್ರೀಶೈಲ ಕ್ಷೇತ್ರದ ಮಂಗಳಾತ್ಮಕ ಮಲ್ಲಿಕಾರ್ಜುನನ ಲಿಂಗಪೂಜೆ, ಮತ್ತು ಜಂಗಮಾರ್ಚನೆಯನ್ನು ಮಾಡಿಸಲು ಹೊರಟಿರುವೆನು. ತಮ್ಮ ಸಂಗದೊಳಗಿರುವ ಒಬ್ಬಿಬ್ಬರನ್ನು ಕಳುಹಿಸಿಕೊಡಬೇಕು," ಎಂದು ಬೇಡಿಕೊಂಡನು.

ಆಗ ಗುರುಗಳು ಒಬ್ಬ ಶಿಷ್ಯನನ್ನು ಕರೆದು "ನೀನು ಈ ಸಿದ್ಧರನ್ನು ಕರೆದುಕೊಂಡು ಅವರ ಸಂಗಡ ಹೋಗು" ಎಂದು ಅಪ್ಪಣೆ ಕೊಡಿಸಿದರು. ಕೂಡಲೇ ಅವರಿರ್ವರೂ ಶೆಟ್ಟಿಯ ಆಲಯಕ್ಕೆ ಹೋದರು. ಅಲ್ಲಿಂದ ಶೆಟ್ಟಿಯು, ಎಲ್ಲ ಜನರನ್ನು ಕೂಡಿಕೊಂಡು ಹೊರಟನು. ಮಾರ್ಗದಲ್ಲಿ ಅಲ್ಲಲ್ಲಿಗೆ ವಸ್ತಿ ಮಾಡುತ್ತ, ಬಡಜನರಿಗೆ ಅನ್ನಸಂತರ್ಪಣೆ ಮಾಡುತ್ತ ದಿನ ದಿನಕ್ಕೆ ಪಯಣ ಬೆಳೆಸುತ್ತ, ನಾಗಲೂಟಿಯನ್ನು ಎಲ್ಲರೂ ದಾಟುತ್ತ, ಭೀಮನ ಕೊಳಕ್ಕೆ ಬಂದು ಮುಟ್ಟಿದರು. ಅಲ್ಲಿ ಸ್ನಾನ ಪೂಜಾದಿಗಳನ್ನು ಮುಗಿಸಿ ಊಟ ತೀರಿಸಿಕೊಂಡು ಕೈಲಾಸ ಬಾಗಿಲದಿಂದ ದೇವಾಲಯಕ್ಕೆ ಬಂದರು. ಅಲ್ಲಿಂದ ಎಲ್ಲರೂ ಶ್ರೀಮಲ್ಲಿಕಾರ್ಜುನ ದೇವರ ದರ್ಶನ ಮಾಡಿಕೊಂಡು ಒಂದು ಸುಂದರ ಶಿಲಾ ಮಂಟಪದಲ್ಲಿ ಇಳಿದುಕೊಂಡರು.

ಮರುದಿವಸ ಮೃಡನ ಹರಿಕೆಯನ್ನು ತೀರಿಸುವದಕ್ಕಾಗಿ, ತಾವು ಇಳಿದುಕೊಂಡಿರುವ ಸ್ಥಳವನ್ನು ಸಾರಣಿಹಾಕಿ ಮಡಿಮಾಡಿದರು. ಕೆಲವರು ಮಾವಿನ ಎಲೆ ತಂದು ತೋರಣ ಕಟ್ಟಿದರು, ಕೆಲವರು ಮಂಟಪ ರಚಿಸಿದರು. ಬಾಲಕಿ

ಯರು ರಂಗೋಲಿ ಹಾಕಿದರು. ಸ್ತ್ರೀ–ಪುರುಷರು ಸ್ನಾನಮಾಡಿ ಪಕ್ಕಾ ಮಡಿಯಿಂದ ನೀರು ತಂದು ಅಡಿಗೆ ಮಾಡುವದಕ್ಕೆ ಪ್ರಾರಂಭಿಸಿದರು. ಆ ಸಮಯದಲ್ಲಿ ಸಿದ್ಧಭಾರತಿಯು, ಈ ಜಂಗಮರ ಡಾಂಭಿಕ ಆಚರಣೆಗಳನ್ನು ಕಂಡು, ಇವರ ಗರ್ವಹರಣ ಮಾಡಬೇಕೆಂದು ಅವರು ಅಡಿಗೆ ಮಾಡುವಲ್ಲಿಗೆ ಹೋದನು. ಅವನನ್ನು ಜಂಗಮರು ಕಂಡು, "ಲಿಂಗವಿಲ್ಲದ ಹೀನ ಭವಿಯನ್ನು ನಾವು ಕಣ್ಣಿನಿಂದ ಸಹ ನೋಡಬಾರದು. ಹೀಗಿದ್ದು ನೀನು ನಿರ್ಭಯದಿಂದ ಒಳಗೆ ಬಂದಿಯಾ ? ಎಲೆ ಸಂಗಾ, ಇವನ ಕತ್ತುಹಿಡಿದು ಹೊರಗೆ ದೂಡು," ಎಂದರು.

ನನಗೆ ಪರಮ ಗುರುವಿತ್ತ ದೃಢ ಅಪರೋಕ್ಷವಾದ ಅರುವು ರೂಪ, ಆತ್ಮಲಿಂಗವಿರುತ್ತಿರಲು, ನಾನು ಭವಿಯೆಂತು ? ನಿಮ್ಮ ಕೊರಳ ಲಿಂಗವೇ ನಿಮಗೆ ಕರ್ಮವೆಸಗುವದಕ್ಕೆ ಕಾರಣವಾಗಿರುವದು. ನಿಜ ಲಿಂಗಾಂಗ ಸಮರಸವನ್ನು ಅರಿಯದಿರುವ, ಕೂಳಭಾಕರಾದ ನೀವೆಂಥ ಜಂಗಮರು ? ನೀವೇ ಭವಿಗಳು," ಎಂದನು.

ಕೂಡಲೇ ಅಭಿಮಾನಿ ಜಂಗಮರು, ತುಡುಕಿ ಗುಡಗುಡಿಸುತ್ತ, "ಹೇ ದುರಾತ್ಮಾ ! ನಮಗೆ ಕೂಳುಭಾಕರು, ಭವಿಗಳೆಂದು ನುಡಿದೆಯಾ ?" ಎಂದು ಗದ್ದರಿಸಿ ಸಿದ್ಧನನ್ನು ಗುದ್ದಹತ್ತಿದರು. ಕೂಡಲೇ ಅವರೊಳಗೋರ್ವನು, ಸಿದ್ಧನನ್ನು ಬಿಡಿಸಿಕೊಂಡು, "ತಮ್ಮಾ, ನೀನು ಇಲ್ಲಿ ಇರಬೇಡ ಹೋಗು," ಎಂದು ಕಳುಹಿಸಿಕೊಟ್ಟನು. ಸಿದ್ಧನು ಹರಹರಾ ! ನಾನು ಭವಿಯೇ ? ಪೋಗುವೆನು. ನೀವು ಇಲ್ಲಿದ್ದು ಮಾಡಿದ್ದು ಉಣ್ಣಿರಿ. ಉಭಯರನ್ನು ಮಲ್ಲಿಕಾರ್ಜುನನು ಅರಿಯನೇ" ? ಎನ್ನುತ್ತ ಅಲ್ಲ ಶೋಭಿಸುತ್ತಿರುವ ಒಂದು ನವಗ್ರಹ ಮಠವನ್ನು ಕಂಡು ಅದರೊಳಗೆ ಪ್ರವೇಶ ಮಾಡಿದನು.

ಪದ—೨೯-೬೨ ರ ವರೆಗೆ **ಜಂಗಮರು ಲಿಂಗಗಳನ್ನು ಕಳಕೊಂಡು ಪಶ್ಚಾತ್ತಾಪದಿಂದ ಕಾಡಿನೊಳಗೆ ಸಿದ್ಧರನ್ನು ಹುಡಿಕಿ, ಪುನಃ ಅವರಿಂದ ಲಿಂಗಗಳನ್ನು ಪಡೆದದ್ದು.**

ಇತ್ತ ಜಂಗಮರೆಲ್ಲರೂ, ಸ್ನಾನ ಮಾಡಿ ಮಡಿಯುನ್ನುಟ್ಟು ಲಿಂಗಾರ್ಚನೆಗೆ ಕುಳಿತರು. "ಶಿವಶಿವಾ" ಎನ್ನುತ್ತ, ತಮ್ಮ ಕತ್ತಿನೊಳ್ ಇರುವ ವಸ್ತ್ರ

ವನ್ನೆತ್ತಿ ಬಿಚ್ಚಿನೋಡಲ್ಕೆ ಅದರಲ್ಲಿದ್ದ ಲಿಂಗಗಳು, ಎಲ್ಲಿಯೋ ಮಾಯವಾಗಿ ದ್ದವು ! ಜಂಗಮರೆಲ್ಲರು ಬೆದರುತ್ತ, "ನಾವು ಇನ್ನು ಲಿಂಗವಿಲ್ಲದ ಭವಿಗ ಳಾದೆವು! ಅಕಟಕಟಾ! ನಾವು ನೆಟ್ಟೆವು. 'ಶಿವನೇ,' ಇನ್ನು ನಮ್ಮ ಗತಿ ಏನು? ನಾವು ಇನ್ನು ಅಸುವ ತುರಿಯುವ ಹೊತ್ತು ಬಂದೊಂದಗಿತು. ನಮ್ಮ ಅಹಂಕಾರವೇ ನಮಗೆ ಈ ಪಾಡನ್ನು ತಂದೊಡ್ಡಿತು," ಎಂದು ಗೋಳಾಡ ಹತ್ತಿದರು.

ಅಷ್ಟರಲ್ಲಿ ಹೊರಗೆ ಹೋಗಿದ್ದ ಧನಶೆಟ್ಟಿಯು, ಬಂದು ಇದೆಲ್ಲ ಸಂಗತಿ ಯನ್ನು ಕೇಳಿಕೊಂಡು, "ಆ ಬಾಲಯೋಗಿ ಸಿದ್ಧನು ನಿಜವಾಗಿ ಮಹಾತ್ಮ ನಿರುವನು. ನೀವೆಲ್ಲರೂ, ಇಂಥ ಘನಮಹಿಮನಾದ ಶಿವಯೋಗಿಗೆ ಭವಿ ಎನ್ನುತ್ತ ಅವನನ್ನು ಹೊರಗೆ ದೂಡಿ, ನೀವೆ ಲಿಂಗವಿಲ್ಲದ ಬಣಗು ಭವಿಗಳಾ ದಿರಿ. ಈಗ ನೀವೆಲ್ಲರೂ, ನಿಮ್ಮ ಅಹಂಕಾರ ತೊರೆದು, ಅವನನ್ನು ಹುಡುಕಿ ಅವನಿಗೆ ಶರಣುಹೋಗಿ, ನಿಮ್ಮ ನಿಮ್ಮ ಲಿಂಗಗಳನ್ನು ಪಡೆಯಿರಿ " ಎಂದು ಹೇಳಿದನು. ಅದನ್ನು ಕೇಳಿ ಎಲ್ಲ ಜಂಗಮರು, ಸಿದ್ಧಭಾರತಿಯನ್ನು ಹುಡು ಕುವದಕ್ಕೋಸ್ಕರ ಘೋರಾರಣ್ಯದಲ್ಲಿ ತಿರುಗಾಡಹತ್ತಿದರು. ಅವರು ಅಲ್ಲಿ ಕಲ್ಲು ಮುಳ್ಳುಗಳನ್ನು ತುಳಿಯುತ್ತ, ಮರುಗುತ್ತ ಬಿಸಿಲಿನಿಂದ ಬಾಯಾರಿ ಬಳಲುತ್ತ, ಹಸಿವೆಯಿಂದ ಸಂಕಟ ಪಡುತ್ತ, "ಸಿದ್ಧಾ ನಮಗೀ ಕಷ್ಟವನ್ನು ತರಬೇಡಪ್ಪಾ! ನಿನ್ನ ನಿಜವನ್ನರಿಯದೆ ನಮ್ಮ ನಾಲಿಗೆಯಿಂದ ನಿನ್ನನ್ನು ಮನಬಂದಂತೆ ದೂಷಿಸಿದೆವು ಅದರ ಪ್ರಾಯಶ್ಚಿತ್ತ ನಮಗಾಯಿತು," ಎಂದು ಎಲ್ಲರೂ ದುಃಖಿಸುತ್ತ ಹಾಗೆಯೇ ಮುಂದೆ ಸಾಗುತ್ತ, ತಂದೆಯೇ, ನಮ್ಮಿಂದ ಮಹಾಪರಾಧವಾಯಿತು. ಕೃಪಾಳುವೆ, ಕ್ಷಮಿಸಿ ಕಾಪಾಡು. ಮಕ್ಕಳಂತಿ ರುವ ಮಂದ ಮತಿಗಳಾದ ನಮ್ಮನ್ನು ಅಳಿಸುವದು, ನಿನಗೆ ಯೋಗ್ಯವೇ ?" ಎಂದು ಸಿದ್ಧನನ್ನು ನೆನೆಯುತ್ತ ಅರಣ್ಯದಲ್ಲಿ ಅವನನ್ನು ಹುಡುಕುತ್ತಿರಲು, ಒಂದು ಮಠವನ್ನು ಕಂಡರು ಅಲ್ಲಿಗೆ ಹೋಗಿ ನೋಡಲಾಗಿ ಹೇಳುವದೇನು ? ಸಿದ್ಧನು ವ್ಯಾಘ್ರಾರೂಢನಾಗಿ ಮೆರೆಯುತ್ತಿದ್ದನು. ಉರಗವು ಛತ್ರದಂತೆ ತನ್ನ ಹೆಡೆಯನ್ನೆತ್ತಿ ಆಡುತ್ತಿತ್ತು. ನವಿಲ ಗಳು ತಮ್ಮ ಗರಿಗದರಿ ಗಾಳಿಹಾಕುತ್ತ ಕುಣಿಯುತ್ತಿದ್ದವು. ಕಪಿಗಳು ಫಲಗಳನ್ನು ತಂದು ಕೊಡುತ್ತಿದ್ದವು. ಅವು

ಗಳನ್ನು ತಿನ್ನುತ್ತ ಸಿದ್ಧನು ನಲಿಯುತ್ತಿದ್ದನು. ಕೂಡಲೇ ಜಂಗಮರು ಅವನನ್ನು ಕಂಡರು. ಆಗ ವ್ಯಾಘ್ರವು ಅವರನ್ನು ಕಂಡು ಗರ್ಜಿಸಿತು. ಎಲ್ಲರೂ ಸತ್ತೆವಯ್ಯೋ" ! ಅನ್ನುತ್ತ ಚಟ್ಟನೇ ಚೀರಿ ಭೂಮಿಗೆ ಬಿದ್ದರು. ಅಲ್ಲಿಂದ ನಡಗುತ್ತ ಮೆಲ್ಲನೆ ಎದ್ದು ಸಾಷ್ಟಾಂಗ ಹಾಕಿ ನಮಿಸಿ, ಮೃಡನೇ, ನೀನು ಭವಿಯಲ್ಲ, ನಮ್ಮ ನುಡಿಯೇ ನಮಗೆ ಎರವಾಯ್ತು. ಕಡು ಪಾಪಾತ್ಮರಾದ ನಮ್ಮಗಳ ತಪ್ಪನ್ನು ಎಣಿಸದೆ ಕರುಣಿಸು" ಎಂದು ವಿನಯದಿಂದ ಮೊರೆಹೊಕ್ಕರು.

ಆಗ ಸಿದ್ಧನು ಜಂಗಮನಿಗೆ "ನೀವು ಬಾನುವಿನಂತೆ ಜಗತ್ತನ್ನು ಬೆಳಗುವ ಮಾನಯುತ ಜಂಗಮರು ಲಿಂಗಮುಳ್ಳವರು ! ಏನು ತಿಳಿಯದ ಭವಿ ಎನಿಸುವ ಈ ಹೀನನಲ್ಲಿಗೆ ಏಕೆ ಬಂದಿರಿ ? ದು:ಖ ಹೊಂದೀರಿ, ಬೇಗ ಹೋಗಿರೆಂದನು.

"ಹೇ ಕರುಣಿಯೇ, ನಮ್ಮ ಸ್ವರೂಪದ ಇರವು ಎಷ್ಟಿರುವುದೆಂಬದುನ್ನು ನೀನು ಪೂರ್ಣಬಲ್ಲಿ. ಹೀಗಿದ್ದು ನಮ್ಮನ್ನು ಸುಮ್ಮನೆ ಕಾಡಬೇಡ. ತೀವ್ರ ನಮ್ಮ ಲಿಂಗಗಳನ್ನಿತ್ತು ಕಳುಹಿಸು," ಎಂದು ಭಿನ್ನಯಿಸಿಕೊಂಡರು ಆಗ ಸಿದ್ಧಯೋಗಿಯು ಈ ಜಂಗಮರಿಗೆ ಪಶ್ಚಾತ್ತಾಪದಿಂದ, ಪ್ರಾಯಶ್ಚಿತ್ತಾಗಿದೆ, ಎಂದು ಅವರನ್ನು ತನ್ನ ಬಳಿಗೆ ಕರೆದನು. ಆಗ ಜಂಗಮರು, ನಿಮ್ಮ ಬಳಿಗೆ ಬರಲಿಕ್ಕೆ ನನಗೆ ಭಯವಾಗುತ್ತದೆ" ಎಂದರು. ವ್ಯಾಘ್ರಾರೂಢರಾದ ಸಿದ್ಧರು ಹುಲಿಯನ್ನಿಳಿದು ಅವರ ಹತ್ತಿರ ಬಂದು, "ನಿಮ್ಮ ಲಿಂಗಗಳು ಆ ಹರಿಯ ಮುಖದಲ್ಲಿರುವವು, ತಕ್ಕೊಳ್ಳಿರಿ" ಎಂದರು. ಅದಕ್ಕೆ ಜಂಗಮ "ಕರುಣಾ ನಿಧಿಯೇ ! ಸುಮ್ಮನೇ ನಮ್ಮನ್ನು ಕಾಡಬೇಡಯ್ಯಾ. ಈಗ ನಮ್ಮೆಲ್ಲರ ಗರ್ವವು ಹಾರಿಹೋಗಿದೆ. ಈ ಸಂಕಟದಲ್ಲಿ ನಮ್ಮನ್ನು ಪಾರುಮಾಡಿ ಪೊರೆಯಯ್ಯಾ" ಎಂದು ಅಂಗಲಾಚಿ ಬೇಡಿಕೊಂಡರು.

## ಕಳೆದುಕೊಂಡ ಲಿಂಗವನ್ನು ಪುನಃ ಪಡೆದದ್ದು

ಆಗ ಸದ್ಗುರು ಸಿದ್ಧನು, "ಹಾಗಾದರೆ ನೀವು ಮನೋಹರವಾದ ಶಿವ ಮಂತ್ರವನ್ನು ನುಡಿಯಿರಿ. ಆಗ ನಿಮ್ಮ ಲಿಂಗಗಳು ನಿಮ್ಮಲ್ಲಿಗೆ ಬಂದು ಸೇರುವವು," ಎಂದು ಹೇಳಿದರು. ಆಗ ಜಂಗಮರು, "ಶಿವಮಂತ್ರವನ್ನು ಬಾಯಿಂದ ಬಹಿರಂಗಕ್ಕೆ ಉಚ್ಚರಿಸಬಾರದು" ಎಂದು ನುಡಿದರು.

ಹೀಗೆ ನುಡಿದ ಈ ಹೀನರ ಮಾತುಗಳನ್ನು ಕೇಳಿ ಸಿದ್ಧಭಾರತಿಯು "ಶಿವಮಂತ್ರವನ್ನು ಬಿಡದೆ ನುಡಿದವರು, ತಾವು ಕೆಡುವರೋ ? ಮಂತ್ರ ಕೆಡುವದೋ ? ಏನು ಕೇಳಿದವರು ಕೆಡುವರೋ ? ಇಲ್ಲವೆ ನುಡಿಯ ಬೇಡ ವೆಂದು ಹೇಳುವವರು ಕೆಡುವರೋ ? ಹೇಳಿರಿ, ನುಡಿದವನೇ ಕೆಡುವ ನೆಂದರೆ, ಶ್ರೀ ನಿಜಗುಣ ಶಿವಯೋಗಿಗಳು ಹೇಳುತ್ತಾರೆ.

ಕಾಯವಿಡಿದಾತ್ಮ ರಾಶಿಗೆ ಪರತರ ಮುಕ್ತಿಗು |
ಪಾಯವಿದು ನಿಜ ಶಿವ ಮಂತ್ರವಣ್ಣಾ ||

ದೇಹಧರಿಸಿ ಬಂದ ಸರ್ವ ಜೀವಕೋಟಿಗೆ ಸಾಯುಜ್ಯ ಮೋಕ್ಷ ಹೊಂದು ವದಕ್ಕೆ ಭೇದರಹಿತ ಬೋಧಪರವಾದ ಮಂತ್ರಗಳಲ್ಲಿ ಪಂಚಾಕ್ಷರವು ಶ್ರೇಷ್ಠ ತರವಾದುದು.

"ನಮಃಶಿವಾಯ'' ಎಂಬಲ್ಲಿ 'ನಮಃ, ಶಬ್ದವು ಜೀವಬೋಧಕ ಪರ ವಾಗಿಯೂ, 'ಶಿವ' ಎಂಬ ಶಬ್ದವು ಪರಬ್ರಹ್ಮ ಬೋಧಕ ಪರವಾಗಿಯೂ, 'ಅಯಗತೌ' ಎಂಬ ಧಾತುವು ಐಕ್ಯಾರ್ಥ ಬೋಧಕ ಪರವಾಗಿಯೂ ಇರು ವವು. ಈ ಮಹಾಮಂತ್ರವು "ತತ್ವಮಸಿ'' ಎಂಬ ಮಹಾ ವಾಕ್ಯಕ್ಕೆ ಸಮ ವಾಗಿರುವದು. ಆದ್ದರಿಂದ ಇದು ಭವನಾಶಕ್ಕೆ ಕಾರಣವಾಗಿರುವದು. ಇದಕ್ಕೆ ಶ್ರುತಿವಾಕ್ಯ

ಸಕೃದುಚ್ಚಾರ ಮಾತ್ರೇಣ ಪಂಚಾಕ್ಷರ ಮಹಾಮನೋಃ |
ಸರ್ವೇಷಾ ಮಪಿ ಜಂತೂನಾಂ ಸರ್ವ ಪಾಪಕ್ಷಯೋ ಭವೇತ್ ||

ಈ ಪರಮ ಪವಿತ್ರವಾದ, ಶಿವ ಪಂಚಾಕ್ಷರಿಯನ್ನು ಜಗತ್ತಿನಲ್ಲಿ ಯಾವತ್ತು ಸರ್ವ ಜೀವಕೋಟಿಗಳಲ್ಲಿ, ಯಾರೇ ಆಗಲಿ, ಯಾವ ಕುಲದವರೇ ಇರಲಿ ಅವರು ಮರತಾದರು ಅರಿತಾದರು, ಮೊಸದೊಳಗಾದರೂ, ಒಮ್ಮೆ ಈ ಪಂಚಾಕ್ಷರವನ್ನು ನುಡಿದದ್ದಾದರೆ, ಬೆಂಕಿಯನ್ನು ಮರೆತು ಮುಟ್ಟಿದರೂ, ಸುಡುವದು. ಅರಿತು ಮುಟ್ಟಿದರೂ ಸುಡುವಂತೆ ಜನ್ಮಾಂತರಗಳಲ್ಲಿ ಮಾಡಿದ ಲೆಕ್ಕಕ್ಕೆ ಹತ್ತದಿರುವ ಪಾಪಗಳು ನಾಶವಾಗಿ, ಪುಣ್ಯ ಸ್ವರೂಪಿಯಾಗಿ ಸುಖಿ ಸುವನು, ಎಂದು ಶ್ರುತಿಯು ನುಡಿಯುವದರಿಂದ, ದೇಹಧಾರಿಗಳೆಲ್ಲರ ಮೋಕ್ಷಕ್ಕೆ ಇದು ಸುಲಭ ಉಪಾಯ ನೋಡಿರೆಂದನು.

ಶ್ರುತಿ—ಈಶ ಮಂತ್ರೋ ಮಹಾಶಕ್ತಿರೀಶ್ವರಃ ಪ್ರತಿಪಾದಕಃ ।
ಸಕ್ರದುಚ್ಚಾರ ಮಾತ್ರೇಣ ಸರ್ವಸಿದ್ಧಿ ಪ್ರದೋಭವೇತ್ ॥

ಎಂಬ ಶ್ರುತಿಯು, ದಿನದೊಳು ಒಂದು ವೇಳೆ ತಾನು ಜಪಿಸಿದ್ದಾದರೆ ತನಗೆ ಬೇಡಿದ ವರವನ್ನು ಕೊಡುವ ಶಕ್ತಿಯು, ಈ ಮಂತ್ರದಲ್ಲಿರುವದೆಂದು ಹೇಳಿರುವದು, ಚಿಕ್ಕ ಆಲದ ಬೀಜವು, ಘನತರವಾದ ವಟು ವೃಕ್ಷವನ್ನು ತನ್ನ ಗರ್ಭದಲ್ಲಿ ಇಟ್ಟುಕೊಂಡು, ಶೋಭಿಸುತ್ತಿರುವಂತೆ ಈ ಚಿಕ್ಕ ಪಂಚಾಕ್ಷರವು, ಆರು ವಿಕಾರ ರೂಪ ಜನನ–ಮರಣಗಳನ್ನು ದೂರಮಾಡಿ, ಮನ್ಮಥನನ್ನು ಸಂಹಾರ ಮಾಡಿದ ಶಿವನನ್ನು ನಿರ್ದೇಶಿಸುವದು. ಇದು ಸರ್ವ ಮಂತ್ರಗಳ ಪರಂಪರೆಗೆ ಮೂಲವು. ಈ ಮಂತ್ರವನ್ನು ಒಮ್ಮೆ ನುಡಿದದ್ದಾದರೆ ಮನದ ಎಲ್ಲ ಕಾಮಿತ ಫಲವು ಸಿದ್ಧಿಸಿ ತನಗೆ ಘನ ಸುಖ ಮಪ್ಪುದು. ಎಂದು ಶ್ರುತಿ ಹೇಳುವದು.

ಮತ್ತು ಶ್ರುತಿ

ವಶಿಷ್ಠ ವಾಮದೇವಾದ್ಯಾ ಮುನಯೋ ಮುಕ್ತ ಕಲ್ಮಿಷಾ ।
ಮಂತ್ರೇಣಾನೇನ ಸಂಸಿದ್ಧಾ ಮಹಾತೇಜಸ್ವಿನೋಽ ಭವನ್ ॥

ಎಂಬ ಶ್ರುತಿಯು, ವಶಿಷ್ಠ, ವಾಮದೇವ, ಗೌತುಮ, ನಾರದ, ಸನಕ ಶ್ವೇತ, ಜನಕ ಮೊದಲಾದ ಮುನೀಶ್ವರರೂ, ಋಷಿಗಳೂ, ಈ ಶಿವ ಮಂತ್ರವನ್ನು ಜಪಿಸುತ್ತ ಕಲ್ಮಿಷವಳಿದು, ತನುವಿನಿಂದ ಬೇರಾಗುತ್ತ, ಘನತರದ ಪದವಿ ಪಡೆದು ವಿಖ್ಯಾತರೆನಿಸಿದರು ಎಂದು ಸಾರುವದು.

ಮತ್ತು ಶ್ರುತಿ

ಬ್ರಹ್ಮಾದೀನಾಂಚ ದೇವಾನಾಂ ಜಗತ್ಸೃಷ್ಟ್ಯಾದಿ ಕರ್ಮಣಿ ।
ಮಂತ್ರಸ್ಯಾಸ್ಯೈವ ಮಹತ್ಮ್ಯಾತ್ಸಾ ಮರ್ಥ್ಯಮುಪಜಾಯತೆ ॥

ಆದಿಯಲ್ಲಿ ಹರಿ, ವಿಧಿ, ಸೂರ್ಯ, ಚಂದ್ರ, ದೇವೇಂದ್ರ ಮೊದಲಾದ ಮುಖ್ಯರೆನಿಸುವ ಸುರರೆಲ್ಲರೂ, ಶಿವ ಪಂಚಾಕ್ಷರಿ ಮಂತ್ರದ ಬಲದಿಂದ ಕೂಡಲೆ ಜಗದುದಯಾದಿ ಕಾರ್ಯಗಳನ್ನು ಅರಿತು ಮಾಡುವ ಸಿರಿ ಪಡೆದರು ಎಂಬ ಶ್ರುತಿ ಮತವಿರುವದು.

## ಪಂಚಾಕ್ಷರಿ ಮಂತ್ರದ ಮಹಿಮೆ

ಪುರಾಸಾನಂದ ಯೋಗೀಂದ್ರಃ ಶಿವಜ್ಞಾನಪರಾಯಣಃ ।
ಪಂಚಾಕ್ಷರಂ ಸಮುಚ್ಚಾರ್ಯನಾರಕಾನುದ ತಾರಯತ್ ॥

ಅಂದರೆ ಪೂರ್ವದಲ್ಲಿ ಪೂರ್ಣವಿತ್ತನೆಂಬ ಋಷಿಗೆ ಸಾನಂದನೆಂಬ ಮಗನು ಈಶ್ವರ ಪ್ರಸಾದದಿಂದ ಜನಿಸಿದನು. ಅವನು ಅನೇಕ ವಿದ್ಯಾ ವಿಶಾರದನಾಗಿ ಸತ್ಯ-ಶೀಲವಂತನಾಗಿದ್ದನು. ಒಂದು ದಿನ ಅವನು ಕೈಲಾಸಕ್ಕೆ ಹೋದಾಗ್ಗೆ ಅಲ್ಲಿ ಗರುಡ ಪುರಾಣ ನಡೆದಿತ್ತು. ಅದರಲ್ಲಿಯ ನರಕ ಯಾತನೆಯ ವರ್ಣನೆಯನ್ನು ಕೇಳಿ, ವ್ಯಸನವುಳ್ಳವನಾಗಿ, ನಾರಕಿಗಳ ನಿವೃತ್ತಿಗೋಸುಗ ಯಮನ ಪಟ್ಟಣಕ್ಕೆ ಹೋದನು. ಆಗ ಯಮಧರ್ಮನು ಸಾನಂದರನ್ನು ಅರ್ಘ್ಯಪಾದ್ಯಾದಿ ಉಪಚಾರಗಳಿಂದ ಸತ್ಕರಿಸಿ, ತಮ್ಮ ಆಗಮನದ ಉದ್ದೇಶವೇನು ? ಎಂದು ಕೇಳಿದನು. ಸಾನಂದರು ಯಮನೇ ! "ನಿನ್ನ ಪಟ್ಟಣದಲ್ಲಿರುವ ನಾರಕಿಗಳನ್ನು ನೋಡುವ ನಿಮಿತ್ತವಾಗಿ ಬಂದಿರುವೆನು,'' ತೋರಿಸಬೇಕೆಂದನು. ಯಮನು ''ಸ್ವಾಮಿ, ಅದನ್ನು ತಾವು ತಮ್ಮ ಕಣ್ಣಿನಿಂದ ನೋಡಬಾರದು'' ಎಂದು ಎಷ್ಟೋ ವಿನಯದಿಂದ ಹೇಳಿಕೊಂಡರೂ, ಅದನ್ನು ಕೇಳದೆ ಸಾನಂದರು ನೋಡಲು ಆಗ್ರಹ ಪಡಿಸಿದರು. ಯಮನು ನಿರುಪಾಯನಾಗಿ ತೋರಿಸುತ್ತ ಬರಹತ್ತಿದನು. ಸಾನಂದರು ಆ ಮಹಾ ಯಾತನೆಯನ್ನು ಹೊಂದುತ್ತಿರುವ, ನಾರಕಿಗಳನ್ನು ನೋಡಿ ದಯಹುಟ್ಟಿ ಅಲ್ಲಿದ್ದ ನರಕಿಗಳಿಗೆಲ್ಲಾ ಕೇಳುವಂತೆ, ಶಿವಪಂಚಾಕ್ಷರಿ ಮಂತ್ರವನ್ನು ನುಡಿದನು. ಕೂಡಲೆ ಅವರೆಲ್ಲರೂ ಅದನ್ನು ಕೇಳಿ ತಾವೂ ನುಡಿಯುತ್ತಾ, ನರಕದಿಂದ ಮುಕ್ತರಾಗಿ—ಶಿವನ ಸನ್ನಿಧಿಯನ್ನು ಹೊಂದಿದರು. ಅದು ಕಾರಣ ಸರ್ವರೂ ಈ ಮಂತ್ರವನ್ನು ನುಡಿಯುವದು ವಿಹಿತವು. ಇದಕ್ಕೆ ಇನ್ನೊಂದು ಪ್ರಮಾಣ, ಶ್ವೇತ ನೆಂಬವನು ಶತ ಕೋಟಿ ಪಾಪಗಳನ್ನಾಚರಿಸಿ ಶಿವನಿ ಎಂಬ ವೇಶ್ಯಯ ಸಂಗದಲ್ಲಿದ್ದನು. ಅವಳು ಅವನ ಎಲ್ಲ ಧನವನ್ನು ಸೆಳೆದುಕೊಂಡು ಹೊರದೂಡಿದಳು. ಆದರೂ ಶ್ವೇತನು ಅವಳ ಮೇಲಿನ ಮೋಹದಿಂದ ಅವಳನ್ನು ಬಿಟ್ಟಿರಲಾರದೆ ''ನಿನ್ನ ದಾಸನಾಗಿ ಸೇವೆ ಮಾಡುತ್ತ ಇರುವೆನು. ಹೊರದೂಡಬೇಡ'', ಎಂದು ಬೇಡಿಕೊಂಡನು. ಆಗ ಆ

ವೇಶ್ಯೆಯು, "ಹಾಗಾದರೆ ರಾಜನ ತೋಟದಲ್ಲಿ ದಿನಾಲು ಒಂದು ಕಮಲ ಅರಳುತ್ತದೆ. ಅದನ್ನು ಮುಡಿಯಲಿಕ್ಕೆ ನಿತ್ಯವೂ ನನಗೆ ತಂದು ಕೊಡಬೇಕು", ಎಂದು ಕಟ್ಟಪ್ಪಣೆ ಮಾಡಿದಳು. ಶ್ವೇತನು, ಅದೇ ಪ್ರಕಾರ ರಾಜನ ತೋಟಕ್ಕೆ ಹೋಗಿ, ಕಳ್ಳತನದಿಂದ ಕಮಲವನ್ನು ಕೊಯ್ದು ತಂದುಕೊಟ್ಟನು. ಅದನ್ನು ಅವಳು ಮುಡಿದುಕೊಂಡು ಸಂತೋಷಪಟ್ಟಳು.

ಇತ್ತ ರಾಜನು, ಪ್ರತಿನಿತ್ಯ ಅದೇ ಪುಷ್ಪವನ್ನು ಶಿವನಿಗೇರಿಸಿ, ಪೂಜಿಸುತ್ತಿದ್ದನು. ಅವತ್ತಿನ ದಿವಸ ತೋಟದ ಕಾವಲಗಾರರು, ಪುಷ್ಪತಾರದ್ದನ್ನು ಕಂಡು, ರಾಜನು ಅವರಿಗೆ ಶಿಕ್ಷೆಕೊಟ್ಟು, ಎಚ್ಚರಗೊಳಿಸಿದನು. ಮರುದಿವಸ ಕಾವಲಗಾರರು ಜಾಗ್ರತೆಯಿಂದಿದ್ದು ಶ್ವೇತನು ಹೂವುಕೊಯ್ದುಕೊಂಡು ಹೋಗುವಾಗ, ಅವನರುಂಡವನ್ನು ಹಾರಿಸಿದರು. ಆಗ ಶ್ವೇತನು. "ತನ್ನ ಕೈಯಲ್ಲಿದ್ದ ಈ ಹೂವು ನನ್ನ ಶಿವನಿಗೆ ಮುಟ್ಟಲಿ"! ಅನ್ನುತ್ತ, ಪ್ರಾಣ ಬಿಟ್ಟನು ಅಂತ್ಯಕಾಲದಲ್ಲಿ, ಒಂದು ಹೂವು ನನಗೆ ಮುಟ್ಟಲೆಂದು ನನ್ನ ನಾಮವನ್ನು ಉಚ್ಚರಿಸಿರುವನೆಂದು' ಶಿವನು ಅವನಿಗೆ ಗಣಪದವಿಯನ್ನು ಕೊಟ್ಟನು. ಜಂಗಮರೆ ಇದು ನಿಮಗೆ ತಿಳಿಯಿತ್ತೆ ?

ಇನ್ನು ಮಂತ್ರವು ಕೆಡುವುದೆಂದರೆ ಇಹದಲ್ಲಿಯೂ ಪರದಲ್ಲಿಯೂ ನೆಲೆಸಿರುವ ಸಪ್ತಕೋಟಿ ಮಂತ್ರಗಳಿಗೆ ಮಾತೆಯಾಗಿರುವ ಪಂಚಾಕ್ಷರಿಯು ಸುರ, ನರ, ಮುನಿಗಳೆಲ್ಲರಿಗೆ ಪರತರ ಮುಕ್ತಿಯನ್ನಿತ್ತು ರಕ್ಷಿಸುವ ಈ ಪರಮ ಪಂಚಾ-ಕ್ಷರಿಯು, ನುಡಿ ಮಾತ್ರದಿಂದ ಕೆಡುವ ಬಗೆ ಅದೆಂತು ಹೇಳಿರಿ ? ಮಂತ್ರವು ತಾನು ಕೆಡುವದಾದರೆ,—ಭವಸಾಗರದಿಂದ ಜನರನ್ನು ಕಡೆಹಾಯಿಸುವದೆಂತು? ಆದಕಾರಣ ಬಹು ಎಚ್ಚರಿಕೆ ! ಮೃಢನು ಕೋಪಿಸುತ್ತ ಈ ಮಂತ್ರ ನಿಂದಕರನ್ನು ನರಕದಲ್ಲಿ ಕೆಡುಹಿ ಯಮನಿಂದ ದಂಡಿಸುವನು. ಇದು ಮಂತ್ರ ದ್ರೋಹದ ಫಲವು", ತಿಳಿಯಿತೆ ಎಂದನು.

"ಚನ್ನಿಗರೆ ಇನ್ನು ಕೇಳುವವರು ಕೆಡವರು ಎಂದರೆ ಉತ್ನನದ ಶಿವ ಮಂತ್ರ ಕೀರ್ತನೆಯನ್ನು ಕೇಳುವ ಭಕ್ತ ಸಮೂಹಕ್ಕೆ ಸನ್ನುತ ಮುಕ್ತಿಯ-ಪ್ಪುದೆಂದು ವೇದ, ಗುರುಗಳ ನುಡಿ, ಇರುವದು. ಮತ್ತು ಸಾನಂದ ಯೋಗಿಯ ಮುಖದಿಂದ ಇದೇ ಶಿವಮಂತ್ರವನ್ನು ನರಕಿಗಳು ಚಿತ್ತೈಸಿ ಕೈಲಾಸವನ್ನು

ಹೊಂದಿದರು. ಹೀಗಿರಲಾಗಿ ಜಗದೊಳಗೆ ಈ ಮಂತ್ರವನ್ನು ಕೇಳಿ ಕೆಟ್ಟವರಿಲ್ಲ. ಇನ್ನು ಮಂತ್ರವನ್ನು ಬಹಿರಂಗವಾಗಿ ನುಡಿಯುವವರಿಗೆ, ಹಳಿದು ನುಡಿಯ ಬೇಡಿರಿ, ಅನ್ನುವವರು ಘಳಿಲನೆ ತಾವೇ ಘೋರ ನರಕದಲ್ಲಿ ಬೀಳುವರು. ಇದು ಸತ್ಯವು'', ನೋಡಿರೆಂದನು.

## ಲಿಂಗಾಯಿತ ಮತದ ಸ್ಪಷ್ಟೀಕರಣ

ಲಿಂಗ, ಮಂತ್ರ, ಆಗಮುಗಳೆಲ್ಲವನ್ನು ಲಿಂಗಾಯಿತರಾದ ನೀವು ನಮ್ಮ ವೆಂಬಿರಿ. ಮಂಗಲಕರ ಗಾಯಿತ್ರಿಮಂತ್ರ, ವೇದ ಇವೆಲ್ಲವುಗಳನ್ನು ಬ್ರಾಹ್ಮಣರು ನಮ್ಮವೆಂಬುವರು. ಉಳಿದವರಿಗೆ ಅವು ಹಿಂಗಿ ಹೋದವೇ ? ಮಂತ್ರ, ಶಾಸ್ತ್ರ, ದೇವತಾಕೃಪೆ ಅವರಿಗಿಲ್ಲವೇ ? ಜಗದೀಶ್ವರನು ಕರುಣೆಯಿಂದ ಅವರನ್ನು ಪುಟ್ಟಿಸಿಲ್ಲವೇ ? ವಿಚಾರಿಸಲು ನೀವೀರ್ವರೇ ಕೆಡಿಸಿದಿರಿ; ಈ ಜಗತ್ತೆಲ್ಲವನ್ನು, ಪರಬ್ರಹ್ಮದ ಮತ್ತು ಪರಶಿವನ ಇರುವನ್ನು ಅರಿಯದಲೆ ಪರರಗೆ ಶೂದ್ರರೆಂದು ಅಥವಾ ಭವಿ ಎಂದು ನಿಂದಿಸುತ್ತ ನರಕದಲ್ಲಿ ನೀವೇ ಬೀಳುವಿರಿ. 'ಲಿಂಗ' ವೆಂದರೇನು ಎಂಬ ಶ್ರುತಿವಾಕ್ಯವನ್ನು ಕೇಳಿರಿ.

ಲಿಂಗ ಮಧ್ಯೆ ಜಗತ್ಸರ್ವಂ ಸರ್ವಂ ಲಿಂಗಮಯಂ ಜಗತ್ |
ಲಿಂಗ ಬಾಹ್ಯಾತ್ಪರನ್ನಾಸ್ತಿತಸ್ಮಾಲ್ಲಿಂಗ ಮಹಂ ಸದಾ ||

ಇನ್ನು ಜಂಗಮ ನಾಮ ಶ್ರೇಷ್ಠವು. ಯಾಕೆಂದರೆ ಜಂಗಮನು ಯಾವಾಗಲೂ, ಬ್ರಾಹ್ಮಣ ಮೊದಲುಮಾಡಿ ಚಾಂಡಾಲನ ವರೆಗೆ, ಎಲ್ಲರಲ್ಲಿ ತಾನು ಸಮ ಭಾವದಿಂದಿರುವನು. ಆಶೆ ದೊರೆದು ಲಿಂಗ ಸಮರಸವನ್ನರಿತು ಜಗದ್ಭರಿತನೆನಿಸುವ ಲಿಂಗಾತ್ಮನೇ ಜಂಗಮನು,'' ಎಂದು ಸಿದ್ಧ ಭಾರತಿಯು ಬೋಧಿಸಿದನು.

ಆಗ ಜಂಗಮರೆಲ್ಲರೂ, ''ಇವನು ಸರ್ವರೊಳು ದೃಢವಾಗಿ ಸಮತಾ ಭಾವ ಕಾಣುವ ಜಂಗಮ ಸಮರ್ಥನಿರುವನು. ಇವನು ಮೃಢನೆ ಹೌದು ಎಂದು ಪಂಚಾಕ್ಷರಿ ಮಂತ್ರವನ್ನು ಬಹಿರಂಗವಾಗಿ ಬಿಡದೆ ನುಡಿದರು. ಕೂಡಲೆ ಅವರೆಲ್ಲರ ಲಿಂಗಗಳು ತಾವಾಗಿ ಸಿಡಿ-ಸಿಡಿದು ಅವರ ಕೈ ಬೊಗಸೆ ಯಲ್ಲಿ ಬಂದು ಸೇರಿದವು, ಆಗ ಅವರೆಲ್ಲರೂ ಪರಮ ಸಿದ್ಧರನ್ನು ಸ್ತುತಿಸುತ್ತ

ಅವರನ್ನು ಹರುಷದಿಂದ ದೇವಾಲಯಕ್ಕೆ ಕರೆತಂದರು. ಬಳಿಕ ಸರ್ವರೂ, ಪೂಜಿಸಿ ಭೋಜನ ಮಾಡಿದರು. ಮರುದಿವಸ ಸಿದ್ಧರಿಗೆ ನಮಿಸಿ.

ತ್ರಾಹಿ ಸಿದ್ಧನೆ ಜಯತು ಪರತರ |
ತ್ರಾಹಿ ಸಿದ್ಧನೆ ಜಯತು ಶುಭಕರ |
ತ್ರಾಹಿ ಸಿದ್ಧನೆ ಜಯತು ಭವಹರ ಜಯತು ಮಾರಹರಾ ||
ತ್ರಾಹಿ ಸಿದ್ಧನೆ ಜಯತು ಪುರಹರ |
ತ್ರಾಹಿ ಸಿದ್ಧನೆ ಜಯತು ವಿಷಧರ |
ತ್ರಾಹಿ ಸಿದ್ಧನೆ ಜಯತು ಶಂಕರ ಜಯತು ಧೀವರನೆ ||

ಈ ಪ್ರಕಾರ ಸರ್ವರೂ ಸ್ತೋತ್ರ....ಮಾಡಿ ಸಂತೋಷದಿಂದ ಸದ್ಗುರು ಸಿದ್ಧನೆ, ನಮ್ಮೆಲ್ಲರಿಗೂ ಪೂರ್ಣಕೃಪೆ ಮಾಡು, ಎಂದು ನಮಿಸುತ್ತ ಅವರಿಂದ ಅಪ್ಪಣೆ ಪಡೆದು ಹೊರಟರು ಎಂಬಲ್ಲಿಗೆ ಮಂಗಲ.

ಮಂಗಲಾಂಗನೆ ಮಲ್ಲಿಕಾರ್ಜುನ |
ಲಿಂಗರೂಪನೆ ಸಂಗಮೇಶನೆ |
ಜಂಗಮನೆ ಸುಜಗನ್ಮಯನೆ ನಿಸ್ಸಂಗನೆ ಹರನೇ ||
ಭಂಗರಹಿತನೆ ಮೂಲಪುರುಷನೆ |
ತುಂಗ ಶ್ರೀಗೋವಿಂದ ರೂಪನೆ |

ಪಿಂಗಿಸೈನೀಂ ಜನರ ಭವವಂ ಬೇಡಿಕೊಳ್ಳುವೆನು ||

ಇತಿ ಶ್ರೀಮತ್ ಸಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ
ಲೀಲಾಚರಿತ್ರ ಕಲ್ಪದ್ರುಮದೊಳು ಬ್ರಹ್ಮಾನಂದನ ಹಾಗೂ
ಜಂಗಮರ ಗರ್ವಭಂಗವೆಂಬ ಹನ್ನೆರಡನೇ ಅಧ್ಯಾಯ
ಸಮಾಪ್ತಿ

---

|| ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ||



# ಸಂಚಾರ ಸಂಭ್ರಮ ಕಾಂಡ

## ಅಧ್ಯಾಯ ೧೪

|| ಓಂ ತತ್ಸತ್ ||

ಈ ಅಧ್ಯಾಯದಲ್ಲಿ ಸಿದ್ಧಭಾರತಿಯು ಶ್ರೀಶೈಲದಿಂದ ತಿರುಪತಿ ಕಂಚಿ ಮೊದಲಾದ ದೇವಸ್ಥಾನಂಗಳನ್ನೆಲ್ಲ ನೋಡುತ್ತ. ಶ್ರೀ ವರದ ರಾಜನ ಕಾಣುತ್ತ, ಇಲ್ಲಿ ಓರ್ವ ಬ್ರಾಹ್ಮಣನಿಗೆ ಸಾಧುಗಳ ದರ್ಶನದಿಂದ ಸದ್ಯಸ್ಕಾಲದ ಫಲವನ್ನು ಹೇಳಿದ್ದು.

ಅಲ್ಲಿಂದ ಹೊರಟು ಅನೇಕ ದೇವಸ್ಥಾನಗಳನ್ನು ನೋಡುತ್ತ ಶ್ರೀರಂಗಕ್ಕೆ ಬಂದು ಅಲ್ಲಿಯ ದೇವರ್ಶನಗೊಂಡು ಹೊಳೆಯ ದಂಡೆಯಲ್ಲಿರುವ ಶಕ್ತಿಯ ಗುಡಿಯಲ್ಲಿ ವಾಮಮಾರ್ಗದ ನಿರಸನವನ್ನು ಮಾಡಲು ಆ ಜರರೆಲ್ಲರು ಈ ಸಿದ್ಧನಿಂದ ಜ್ಞಾನೋಪದೇಶವಂ ಪಡೆದು ಕೆಲದಿನ ಶಾಸ್ತ್ರ ಶ್ರವಣವನ್ನು ಮಾಡಿದ್ದು.

ಅಲ್ಲಿಂದ ಅನೇಕ ದೇವಸ್ಥಾನಗಳನ್ನು ನೋಡುತ್ತ ಮಧುರೆಗೆ ಬಂದು ಮೀನಾಕ್ಷಿದೇವಿಯ ದರ್ಶನಗೊಂಡನು. ಆಗ ಅಲ್ಲಿರುವ ಓರ್ವ ಅರ್ಚಕನು,

ಸಿದ್ಧರನ್ನು ಕಾಣುತ್ತ ನಾಲ್ಕು ಪ್ರಕಾರದ ಚಾಂಡಾಲ ನೀನಿದ್ದು ಗುಡಿಯೊಳಗೆ ಪ್ರವೇಶ ಮಾಡಿರುವೆಯಾ ? ಎನಲು ಅವನಿಗೆ ಆ ನಾಲ್ಕು ತರದ ಚಾಂಡಾ-ಲತ್ವವನ್ನು ಸಂಬಂಧಿಸಿ ಅಲ್ಲಿಂದ ಹೊರಟು ನದೀ ತೀರದ ಏಕಾಂತ ಸ್ಥಳದಲ್ಲಿರಲು, ಬ್ರಾಹ್ಮಣನು ಪಶ್ಚಾತ್ತಾಪದಿಂದ ಸಿದ್ಧರನ್ನು ಹುಡುಕಿ ವಿನಮಿತನಾಗಿ ತೃಪ್ತಿಯನ್ನು ಮಾಡಿದ ವಿಷಯವಿರುವದು

ಸ್ತುತಿ ಪದ—ಹರಗೆ ಕ್ರಿಸ್ತಗೆ ರವಿಗೆ ಶಕ್ತಿಗೆ
ಹರಿಗೆ ಅಲ್ಲಾನಿಗೆ ಗಣಪಗೆ ॥
ಸರಸತಿಗೆ ಬುದ್ಧನಿಗೆ ಶೂನ್ಯಕೆ ವಿಧಿಗೆ ಚಂದ್ರಮಗೆ||
ಧರೆಗೆ ಗಂಗೆಗೆ ಯಗ್ನಿದೇವಗೆ ।
ಮರುತಗಂ ಯೋಮಕ್ಕೆ ಮಾಯಿಗೆ ।
ಅರಿಗೆ ಮಿತ್ರಗೆ ಜೀವ ಕೋಟಿಗೆ ಜಡಕೆ ನತನಪ್ಪೆ ||

ಪದ—೧–೧೨ ರ ವರೆಗೆ ಸಿದ್ಧಭಾರತಿಯು ಶ್ರೀ ಶೈಲದಿಂದ ಹೊರಟು ತಿರುಪತಿ ಮೊದಲಾದ ದೇವಸ್ಥಾನ ತಿರುಗುತ್ತ ಶ್ರೀ ವರದ ರಾಜನ ದರುಶನಗೊಂಡು ಅಲ್ಲಿ ಓರ್ವ ಬ್ರಾಹ್ಮಣನಿಗೆ ಸಾಧುಗಳ ದರುಶನದಿಂದ ಸದ್ಯಸ್ಕಾಲದ ಫಲವನ್ನು ಹೇಳಿದ್ದು.

ಬಳಿಕ ಸಿದ್ಧಭಾರತಿಯು, ತಿರುಪತಿಗೆ ಬಂದು ಶ್ರೀ ವೆಂಕಟಪತಿಯ ದರುಶನ ಮಾಡಿಕೊಂಡು ಹಸಿವಿಗೆ ಅಳುಕದೆ ಶಿತೋಷ್ಣಕ್ಕೆ ಅಂಜದೆ ಹಳೆಯ ಹರಕ ವಸ್ತ್ರವನ್ನು ಧರಿಸಿ ಅಲೆಯುತ್ತಿದ್ದನು. ಅವನಿಗೆ ಧರಣಿಯೇ ಆಸನವು. ಆಕಾಶವೇ ಹೊದಿಕೆ, ಕರವೇ ಪಾತ್ರೆಯು, ಮಳೆ ಬಂದಾಗ್ಗೆ ಅವನ ಜಳಕವು, ತಿರಿದುದೇ ಪರಮಾನ್ನವು. ಇವನನ್ನು ಕಂಡು ಮಂದಮತಿಗಳು ಮೂರ್ಖ-ನೆಂದೂ, ಹುಚ್ಚನೆಂದೂ, ಹೊಡೆಯುತ್ತ, ಕಲ್ಲು ವಗೆಯುತ್ತ, ಬೈಯುತ್ತ ಪರಿಪರಿಯಿಂದ ಕಾಡುತ್ತಿದ್ದರು. ಸಜ್ಜನರಾದವರು ಬಿಡಿಸುತ್ತಿದ್ದರು.

ಅದರಲ್ಲಿ ಓರ್ವ ಸಜ್ಜನನು, ಇವನು ಸಾಧು ಇರುವನೆಂದು ತಿಳಿದು, ತನ್ನ ಮನೆಗೆ ಕರೆದೊಯ್ದನು. ಅವನನ್ನು ಪೂಜಿಸಿ, ಪಕ್ವಾನ್ನ ಉಣಬಡಿಸಿದನು. ಅದನ್ನು ಭಾರತಿಯು ಉಂಡು ತೃಪ್ತನಾಗಿ ಅಲ್ಲಿಂದ ಕಾಳಹಸ್ತಿಗೆ ಬಂದನು. ಅಲ್ಲಿ ತುಂಗ (ಶ್ರೇಷ್ಠ) ವಾಗಿರುವ ಲಿಂಗದರುಶನಗೊಂಡನು.

ಹಾಗೆಯೆ ಮುಂದೆಸಾಗಿ ಶಿವಕಂಚಿ ಕ್ಷೇತ್ರಕ್ಕೆ ಬಂದು ಮುಟ್ಟಿದನು. ಅಲ್ಲಿರುವ ಮಂಗಲಮಯ ಲಿಂಗವನ್ನು ಕಾಣುತ್ತ, ವಿಷ್ಣುಕಂಚಿಗೆ ಬಂದನು. ಬರುವಾಗ್ಗೆ ಮಧ್ಯದಲ್ಲಿ ಕಾಮಾಕ್ಷಿ ಗುಡಿಗೆ ಬಂದು, ಅಲ್ಲಿ ಒಳ್ಳೆ ಮಹಿಮೆಯನ್ನು ತೋರಿಸಿದನು. ಅಲ್ಲಿಂದ ಶ್ರೀ ವರದ ರಾಜನ, ದರುಶನಕ್ಕೆ ಹೋಗುವಾಗ್ಗೆ ಮಾರ್ಗದಲ್ಲಿ ಓರ್ವ ಬ್ರಾಹ್ಮಣನು, ಈ ವೈರಾಗ್ಯ ಮೂರ್ತಿಯನ್ನು ಕಂಡನು. ಇವನು ಪರಮಾತ್ಮನೇ ಇರುವದು ಸತ್ಯವೆನ್ನುತ್ತ ಅವನಿಗೆ ನಮಿಸಿ, ಕೈ ಹಿಡಿದು ತನ್ನ ಸದನಕ್ಕೆ ಕರೆತಂದನು. ಷೋಡಶೋಪಚಾರಗಳಿಂದ ಅವರನ್ನು ಪೂಜಿಸಿ ತೃಪ್ತಿಗೊಳಿಸಿದನು. ನಂತರ ಆ ವಿಪ್ರನು ಭಕ್ತಿಯುಕ್ತನಾಗಿ ಬಹು ವಿನಯದಿಂದ, "ಅಜ್ಞಾನಾಂಧಕಾರಕ್ಕೆ ಬಾಲ ಭಾಸ್ಕರನಾದ ಗುರುವೇ ! ಮುನಿದರುಶನ ಮತ್ತು ಅವರ ಪೂಜೆ ಮಾಡುವದರಿಂದ ಫಲವೇನು ?" ಎಂದು ಬಿನ್ನಯಿಸಿಕೊಂಡನು

## ಸಾಧುಗಳ ದರುಶನದಿಂದ ಪ್ರತ್ಯಕ್ಷ ಲಾಭೆ

ಆಗ ಸಿದ್ಧಯೋಗಿಯು, ನಿನ್ನ ಅನುಭವದಿಂದ ನೀನು ತಿಳಿದು ಹೇಳು. ನೀನಾರು ?" ಆಗ ವಿಪ್ರನು, "ದೇಹವೇ ನಾನು" ಎಂದನು. ಈ ಸಪ್ತ ಧಾತುಮಯ ದೇಹವನ್ನು ಪಂಚಭೂತಗಳಿಗೆ, ವಿಭಾಗಿಸಿ, ಹಂಚಲಾಗಿ ನಿನ್ನ ಪ್ರೀತಿಯ ದೇಹವು ಇಲ್ಲದಾಗುವದು. ಆಗ ನೀನಾರು ?" ಅದಕ್ಕೆ ವಿಪ್ರನು "ಪ್ರಾಣ ಇಂದ್ರಿಯಾದಿ ಬುದ್ಧಿ ಮೊದಲಾದವುಗಳೊಡನೆ, ಮುದುಡಿಕೊಂಡು ಬೇರೆ ಬೇರೆ ತನುಗಳನ್ನು ಧರಿಸುತ್ತ ಇಹಲೋಕ ಪರಲೋಕಗಳನ್ನು ಸಂಚರಿಸುವ ಸೂಕ್ಷ್ಮ ತನುವೇ ನಾನು" ಎಂದನು. ಆತನು ಸುಪ್ತಿಯಲ್ಲಿ ಇಲ್ಲದಾಗಲು ಬುದ್ಧಿವಂತನಾದ ನೀನು ಆಗ ಹೇಗಿರುವಿ? ವಿಪ್ರನು "ಆದರಾಚೆಗೆ ಏನಿರುವುದೆಂಬುದನ್ನು ನಾನರಿಯೇ, ಗುರುನಾಥಾ !" ಎಂದನು.

ಆಗ ಪರಮ ಸಿದ್ಧನು ದ್ವಿಜನಿಗೆ, "ನಾನರಿಯೆ ನೆಂಬುವ ನಿನ್ನ ಮರವೆಯನ್ನು ಅರಿಯುತ್ತಿರುವ ಜ್ಞಾನಸ್ವರೂಪವೇ ನೀನಿರುವಿ," ನೋಡು ಎಂದರು. ಬೋಧಪರವಾದ ಅಮರ ಅಮೃತ....ವಾಕ್ಯವನ್ನು ತನ್ನ ಅನುಭವಕ್ಕೆ ಅಳವಡಿಸಿಕೊಂಡು ಮುನಿವರನ ದರುಶನ ಪೂಜಾದಿಗಳಿಂದ, ಆತ್ಮ ಸಾಕ್ಷಾತ್ಕಾರವೇ, ಸಾಕ್ಷಾತ್ ಫಲವು. ಎನ್ನುತ್ತ ಹರುಷೋದ್ಗಾರದಿಂದ, "ಅಹಾ ! ಪರಮ

ದಯಾಳುವಾದ ಸದ್ಗುರುವೇ, ನಿನ್ನ ಬೋಧೆಯಿಂದ ನಿಜವು ನೆಲೆಗೊಂಡು ಮೈಮರೆದುದನ್ನು ಏನು ಹೇಳಲಿ ? ಅಂಥ ನಿಜವೇ ನಾನೆಂದು ಹೇಳುವ ಭಾವ ಕುಂಠಿತವಾದಲ್ಲಿ, ನುಡಿದು ಹೇಳುವ ದೂರೇ ಉಳಿಯಿತು. ನಿಮ್ಮಿಂದ ಧನ್ಯನಾದೆ," ಎನ್ನುತ್ತ ಪುನಃ ಪೂಜಿಸಿ ನಮಿಸಿ ಬೀಳ್ಕೊಟ್ಟನು.

ಅಲ್ಲಿಂದ ನವಮಾಸ ಪರಿಯಂತರ ಸಂಚರಿಸಿ ನಾಗ, ಸುರ, ನರರಿಂದ ನುತಿಸಲ್ಪಟ್ಟ, ಚಿದಂಬರ ಕ್ಷೇತ್ರಕ್ಕೆ ಬಂದನು. ಅಲ್ಲಿ ಚಿದಂಬರೇಶ್ವರನನ್ನು, ಯೋಗದೃಷ್ಟಿಯಿಂದ ನೋಡಿ, ಹಾಗೆಯೇ ಮುಂದೆ ಸಾಗುತ್ತ ದೇಶಕೋಶ ಗಳನ್ನು ತಿರುಗುವಾಗ್ಗೆ, ಜನಗಳಿಗೆ ಪಂಚಾಕ್ಷರಿಯು "ಧರ್ಮಾದಿ ನಾಲ್ಕು ಪುರುಷಾರ್ಥಕ್ಕೆ ಮುಖ್ಯ ಮಂತ್ರವು" ಎಂದು ಪರಿಪರಿಯಿಂದ ಬೋಧ ಮಾಡುತ್ತ, ಅವರಿಗೆ ಹರ ಭಜನೆಯಲ್ಲಿ ಭಕ್ತಿಯನ್ನು ಹುಟ್ಟಿಸುತ್ತ, ಮುಮು-ಕ್ಷುಗಳಿಗೆ, ಜ್ಞಾನಬೋಧೆಯನ್ನು ಮಾಡುತ್ತ ನಡೆದನು. ಇದು ಅಲ್ಲದೆ ಶ್ರುತಿ ಮತಕ್ಕೆ ವಿರುದ್ಧವಾದ, ಶೂನ್ಯ ಚಾರ್ವಾಕಾದಿ ಮತಗಳನ್ನು ಖಂಡಿಸಿ ಮಾನ್ಯ ರಿಂದ ಮನ್ನಣೆ ಹೊಂದುತ್ತ ಕುಂಭಕೋಣಕ್ಕೆ ಬಂದನು. ಅಲ್ಲಿ ಕುಂಭೇಶ್ವರನ ದರುಶನ ಮಾಡಿಕೊಂಡು, ಹಾಗೆಯೆ ತಂಜಾವರದ ಲಿಂಗವನ್ನು ಕಂಡು ಮುಂದೆ ಸಾಗಿದನು. ಅಲ್ಲಿಂದ ಶ್ರೀರಂಗ ಪಟ್ಟಣದ ಹತ್ತರ ಹೊಳಿಯ ತೀರ-ದಲ್ಲಿ ಹೊಳೆಯುತ್ತಿರುವ ಶ್ರೀ ಶಕ್ತಿಗುಡಿಗೆ ಬಂದು ಕುಳಿತನು.

### ಪದ:— ೧೩-ಳಳ ವರೆಗೆ ವಾಮ ಮಾರ್ಗ ನಿರಸನ ಮತ್ತು ಜ್ಞಾನೋಪದೇಶ ಮಾಡಿದ್ದು.

ಅಷ್ಟರಲ್ಲಿ ಶಕ್ತಿಯ ಉಪಾಸಕನಾದ ಓರ್ವ ವಿಪ್ರನು, ಅಲ್ಲಿಗೆ ಬಂದನು. ಕಾಂತಿಯುಕ್ತನಾದ ಸಿದ್ಧಮೂರ್ತಿಯನ್ನು ಕಂಡು, "ಇವನು ವೇದಾಂತಿ ಇರಬಹುದು" ಎಂದು ತಿಳಿದು "ನೀನಾರು ?" ಎಂದು ಕೇಳಿದನು. ಅದಕ್ಕೆ ಸಿದ್ಧನು, "ನಾ-ನೀನು ಎಂಬುವ ಸರ್ವದ್ವೈತವನ್ನು ತೊರೆದು, ಉಳಿದಂಥ ಸತ್ಯವಸ್ತುವೇ ನಾನು" ಎಂದನು.

ಆವಾಗ್ಗೆ ವಾಮ ತಂತ್ರವನ್ನು ಆಚರಿಸುವ ಆ ವಿಪ್ರನು, "ಸತ್ಯಾಸತ್ಯ ದ್ವೈತವನ್ನು ತೊರೆದು, ಶಕ್ತಿಯ ಪ್ರಸಾದಗೊಂಬುವದೇ ಅದ್ವೈತವು,"

ನೋಡೆಂದನು. ಹೀಗೆ ವಿಪ್ರನಿಗೂ, ಸಿದ್ಧನಿಗೂ ವಾದ ನಡೆದಿರಲು, ಆ ಪಟ್ಟಣದ ಪಂಡಿತರೆಲ್ಲರೂ ಅದನ್ನು ಕೇಳಿ ಬೇಗನೆ ಅಲ್ಲಿಗೆ ಬಂದರು.

ಆಗ ಸಿದ್ಧಭಾರತಿಯು, "ಸಭ್ಯರೇ, ಈಗ ನೀವು ವಾಮ ಮಾರ್ಗವನ್ನು ಕೇಳಿರಿ. ವೇದ ಶಾಸ್ತ್ರವನ್ನು ತೊರೆದು, ಹೇಯ ಪದಾರ್ಥ ತಿಂಬುವದೇ, ಮುಕ್ತಿ ಅಹುದಂತೆ ! ಇದಕ್ಕೆ ಅವರ ಕಾಲ ತಂತ್ರ ಹೀಗಿದೆ.

ಮದ್ಯಂ ಮಾಸಂಚ ಮೀನಾಂಚ ಮುದ್ರಾಮೈಥುನ ಮೇಚವ ।
ಏತೇ ಪಂಚಮಕಾರಾಃ ಸ್ಯುರ್ಮೋಕ್ಷದಾಯೀ ಯುಗೇ ಯುಗೇ ||

ಯಾವನು ಮುಟ್ಟಾಗಿರ್ದ ಹೋಂತೆಯ ಧ್ಯಾನದಲ್ಲಿ ದೀಕ್ಷೆ ಪಡೆದು ತಾನು ಶಿವನಂತೆ, ಅವಳು ಯೋಗಿಯಂತೆ, ಹೀಗೆ ಭಾವಿಸುವನು, ಅವನೇ ವಾಮ ಮಾರ್ಗಿಯು. ಮದ್ಯ ಮೊದಲಾದ ಪಂಚಮಕಾರಗಳಲ್ಲಿ, ಮದ್ಯಕ್ಕೆ ತೀರ್ಥವಂತೆ, ಮಾಂಸಕ್ಕೆ ಶುದ್ಧಿಯಂತೆ, ಮೀಸಕ್ಕೆ ಜಲಕುಸುಮವಂತೆ, ಮುದ್ರೆ ಚತುರ್ಥಿ ಮತ್ತು ಮೈಥುನಕ್ಕೆ ಪಂಚಮಿ ಹೆಸರಂತೆ, ಕೋಳಿಗೆ ತುಪ್ಪಕೀರವಂತೆ ಹೆಂಡಕ್ಕೆ ಯೋಮಪಾಲಂತೆ, ಹೀಗೆ ತಾವೇ ಹೆಸರಿಟ್ಟುಕೊಂಡಿರುವರು. ಹೀಗೆ ಏನೇನೋ ಅವರು ಆಚರಿಸುವ ಎಲ್ಲ ಸಂಗತಿಗಳನ್ನು ಬರೆದರೆ ಓದುಗರಿಗೂ, ಕೇಳುವವರಿಗೂ ಬಹಳ ಅಸಹ್ಯ ತಿರಸ್ಕಾರವುಂಟಾದೀತೆಂಬ ಭಯದಿಂದ ಬರೆಯುವದನ್ನು ಬಿಟ್ಟಿದ್ದಾಗಿದೆ.

ಈ ಪ್ರಕಾರ ಜನರಿಗೆ ತಮ್ಮ ಈ ಕುತಂತ್ರವನ್ನು ಬೋಧಿಸಿ, ಭ್ರಾಂತಿಗೊಳಿಸಿ, ತಮ್ಮ ಪಾಪಕೂಪದಲ್ಲಿ ಸೆಳೆದುಕೊಳ್ಳುವರು. ಇವರೇ ಯಮದೂತರು, ಇದು ಸತ್ಯವು.

## ವಾಮ ಮಾರ್ಗ ಹುಟ್ಟಿದ ಬಗೆ

ಈ ವಾಮ ಮಾರ್ಗವು ಜಗತ್ತಿನಲ್ಲಿ ಮೊದಲಿಗೆ ಹ್ಯಾಗೆ ಹುಟ್ಟಿತೆಂದರೆ ದ್ವಾಪರದಲ್ಲಿ ಓರ್ವ ಬ್ರಾಹ್ಮಣನು ತನ್ನ ಗುರುವಿನಲ್ಲಿ ಅಭ್ಯಾಸ ಮಾಡುವ ಕಾಲಕ್ಕೆ ರೂಪವತಿಯಾದ ತನ್ನ ಗುರು ಪುತ್ರಿಯನ್ನು ಮೋಹಿಸಿದನು. ಒಂದು ದಿವಸ ಅವನ ಗುರುಗಳು ಇವನು ಆಚರಿಸುವ ನೀಚ ಕೃತಿಯನ್ನು ಕಣ್ಣಾರೆ ಕಂಡು ಶಾಪಕೊಟ್ಟು ಹೊರದೂಡಿದರು.

ಗುರು ಶಾಪ ಹೊಂದಿದ ಆ ಶಿಷ್ಯನು ವಿರಹತಾಪದಿಂದ ಮತ್ತೋರ್ವ ಹೊಲತಿಯ ಕೈ ಹಿಡಿದು, ಮನಬಂದಂತೆ ರಮಿಸಹತ್ತಿದನು. ಮಾಂಸ, ಮದ ಮೊದಲಾದ ಹೇಯ ಪದಾರ್ಥವನ್ನು ಸೇವಿಸುತ್ತ ಅನಾಚಾರದಿಂದ ವರ್ತಿಸಿ ಲೋಕ ನಿಂದೆಗೊಳಗಾದನು. ಅವನು ತನ್ನ ಲೋಕ ಅಪವಾದವನ್ನು ಕಳೆದು ಕೊಳ್ಳುವದಕ್ಕಾಗಿ, ಇದೊಂದು ನೂತನ ತಂತ್ರವನ್ನು, ತನ್ನ ಪಾಂಡಿತ್ಯದಿಂದ ರಚಿಸಿದನು. ಅದರಲ್ಲಿ, "ಇಂದುಮುಖಿ ಪಾರ್ವತಿ ಉವಾಚ ಮತ್ತು ಶಿವ ಉವಾಚ," ಎಂದು ತಾನು ಬರೆದ ಶಾಸ್ತ್ರದ ಹೆಸರನ್ನಿಟ್ಟನು ಮತ್ತು ನಾನು ಮುನಿವರನೆಂದು ಕಪಟವೇಷ ಧರಿಸಿ, ಎಲ್ಲ ಜನರಿಗೆ ತನ್ನ ಕೃತಕ ಮಂತ್ರವನ್ನು ಬೋಧಿಸುತ್ತ ನಡೆದನು. ಇದು ಅಲ್ಲದೆ ತನ್ನ ಮಾರ್ಗದಲ್ಲಿ ತನು, ಮನ, ಧನಾದಿಗಳನ್ನು ಸಲ್ಲಿಸುವ ಸ್ತ್ರೀ–ಪುರುಷರೆಲ್ಲರು ಮುಕ್ತರಾಗುತ್ತಾರೆ, ಎಂದು ಜನ ನ್ನು ಮೋಸಗೊಳಿಸಹತ್ತಿದನು. ಒಂದು ದಿನ ಓರ್ವ ಕುಲೀನ ಸ್ತ್ರೀಯ ಳನ್ನು ಒಲಿಸಿಕೊಳ್ಳುತ್ತಿರಲಿಕ್ಕೆ, ಓರ್ವನು ಅದನ್ನು ಕಂಡು ಚೆನ್ನಾಗಿ ಥಳಿಸಿ ದನು. ಬ್ರಾಹ್ಮಣನು, ಆ ವೇದನೆಯನ್ನು ತಾಳಲಾರದೆ, ಆ ಹೊಲತಿಯ ಮನೆಗೆ ಬಂದು ಆರೈಕೆ ಇಲ್ಲದೆ ನಿರ್ಯಾಣಹೊಂದಿದನು.

"ವಾಮ ಮಾರ್ಗವು ಹೆಚ್ಚಾಗಿ ಜಗತ್ತಿನಲ್ಲಿ ಅಸಂಖ್ಯಾತ ಜನರನ್ನು ಕೆಡಿಸುವದನ್ನು ಶ್ರೀ ಶಂಕರನು ಕಂಡು, ತಾನೆ ಶಂಕರಾಚಾರ್ಯನೆಂಬ ಹೆಸರಿನಿಂದ ಅವತರಿಸಿ ಈ ವಾಮ ಮಾರ್ಗವನ್ನು ಖಂಡಿಸಿ, ಸನ್ಮಾರ್ಗವನ್ನು ಬೋಧಿಸಿ, ಜಗತ್ತಿಗೆ ಶೋಭೆಯನ್ನುಂಟು ಮಾಡಿದನು.

ಮಾನವಂತರೇ, ವೇದದಲ್ಲಿ ಹೇಳಿದ ಶ್ರೇಷ್ಠತರವಾದ ಅದ್ವೈತದರ್ಥವನ್ನು ಕೇಳಿರಿ.

"ಪರಮ ಸಾತ್ವಿಕಾದಿ ಸಾಧನಗಳಲ್ಲಿ ನಿರತನಾದ ನಿಜ ಶಿಷ್ಯನನ್ನು ಕುರಿತು, ತತ್ವಮಸಿ ವಾಕ್ಯವನ್ನು ವೇದವು ಪೇಳಿರುವದು. ಅದನ್ನು ಭಕ್ತಿ ಪೂರ್ವಕವಾಗಿ ಶ್ರೀ ಗುರುವಿನ ಮುಖದಿಂದ ಅರಿತು, ಪ್ರವೃತ್ತಿಪರ ಜೀವ ಭಾವ ತೊರೆದು, ನಿವೃತ್ತಿಪರನಾಗಿ ತಾನು ಬ್ರಹ್ಮದೊಳು ನೆಲಸುವದೇ, ಮೋಕ್ಷ ವೆನಿಸುವದು. ಆದ್ದರಿಂದ ಈ ವಾಮ ಮಾರ್ಗ ತ್ಯಜಿಸಿ, ಮೋಕ್ಷದಾಯಕ ಜ್ಞಾನಮಾರ್ಗದಲ್ಲಿ ನಡೆಯಿರಿ," ಎಂದು ಬೋಧಿಸಿದನು.

ಅವರೆಲ್ಲರೂ ಸದ್ಗುರುವಿನ ಸಬೋಧೆಯನ್ನು ಕೇಳಿ, "ನಾವು ಬುದ್ಧಿಹೀನರಾಗಿ ಅಶುದ್ಧ ಮಾರ್ಗದಲ್ಲಿ ಬಿದ್ದು ಸುಮ್ಮನೆ ವ್ಯರ್ಥ ಕೆಟ್ಟೆವು. ಅಕಟಕಟಾ !" ಎನ್ನುತ್ತ ಎಲ್ಲರೂ ಸಿದ್ಧರ ಚರಣಕ್ಕೆ ಬಿದ್ದರು. ಮತ್ತು ಅವರೆಲ್ಲರೂ, ಸದ್ಗುರುವರನನ್ನು ತಮ್ಮ ತಮ್ಮ ಮನೆಗಳಿಗೆ ಕರೆದೊಯ್ದು, ಸಂಭ್ರಮದಿಂದ ಪೂಜಿಸುತ್ತ, ತಮಗೆ ಸಲ್ಲುವ ಭಿಕ್ಷೆಯನ್ನು ನೀಡಿದರು ಆಗ ಚದುರೆಯರಾದ ಚಲುವೆಯರು, ಭಕ್ತಿಯಿಂದ ಬಾಗಿ ನಮಿಸಿದರು. ಬಳಿಕ ಸಿದ್ಧಾರೂಢರನ್ನು ಏಳು ತಿಂಗಳು ತಮ್ಮಲ್ಲಿ ಇರಿಸಿಕೊಂಡ ಪ್ರೇಮದಿಂದ ಎಲ್ಲರೂ ಅವರ ಸೇವೆಯಲ್ಲಿ ತತ್ಪರರಾಗಿ, ನಿಜ ನಿಷ್ಠೆಯಿಂದ ವೇದಾಂತ ಶ್ರವಣ ಮಾಡಿಸಿಕೊಂಡರು. ಅಲ್ಲಿಂದ ಸಿದ್ಧನು, ಅವರೆಲ್ಲರ ಅಪ್ಪಣೆಗೊಂಡು ಹೊರಡುತ್ತಿರಲು, ಸಮಚಿತ್ತದಿಂದ ಸರ್ವರೂ

"ಭೂಮಿಗೊಡೆಯನೆ ಸೀಮಿಗೆಲೆದನೆ ।
ಕಾಮಧೇನುವೆ ಕಾಮರೂಪನೆ ।
ಕಾಮ ವೈರಿಯೆ ಸ್ವಾಮಿ ಸಿದ್ಧಗೆ ಜಯ ಜಯತು ॥

ಎಂದು ಸ್ತುತಿಸಿ ನಮಿಸಿ ಬೀಳ್ಕೊಟ್ಟರು.

## ಪದ— ೪೫–೫೪ ರ ವರೆಗೆ ಮೀನಾಕ್ಷಿ ದೇವಾಲಯದಲ್ಲಿ ಅರ್ಚಕನಿಗಾದ ಪಶ್ಚಾತ್ತಾಪ

ಬಳಿಕ ಸಿದ್ಧಭಾರತಿಯು, ಅಲ್ಲಿಂದ ಹೊರಟು ಹರುಷದಿಂದ ಶ್ರೀ ರಂಗನಾಥನ ದರುಶನ ಪಡೆದು, ಭರದಿಂದ ಜಂಬುಕೇಶ್ವರನನ್ನು ಕಾಣುತ್ತ, ಪಕ್ಷಿತೀರ್ಥಕ್ಕೆ ಬಂದನು. ಅದನ್ನು ನೋಡಿಕೊಂಡು ಮಧುರೆಗೆ ಬಂದು, ಅಲ್ಲಿ ಮೀನಾಕ್ಷಿ ದರುಶನಕ್ಕೋಸ್ಕರ ಗುಡಿಯೊಳಗೆ ಹೋದನು. ಅದನ್ನು ಓರ್ವ ಪೂಜಾರಿಯು ಕಂಡು, ಅಲ್ಲಿಗೆ ಓಡಿ ಬಂದು, "ನೀನು ಯಾರಯ್ಯಾ ?" ಎಂದು ಸಿದ್ಧನನ್ನು ತಡೆದು, ನೀನು ಭವಿ, ಕರ್ಮಭ್ರಷ್ಟನು, ಕಾಮುಕನಂತೆ ತೋರುವಿ. "ನೀನು ಗುಡಿಯೊಳಗೆ ಹೋಗಬೇಡ" ಎಂದನು.

ಆಗ ಸಿದ್ಧಯೋಗಿಯು, ಎಲೋ ವಿಪ್ರನೇ, ಕಾಲನಂದದಿ ಕೋಪವು ನಿನ್ನಲ್ಲಿ ಮನೆಮಾಡಿಕೊಂಡಿರಲಿಕ್ಕೆ ನೀನೇ ಭವಿಯು, ಚಾಂಡಾಲನು, ಕೂಳಿ

ಗಾಗಿ ಬಾಲಕನಂತೆ ಒಳಗೆ ಬಿಡಲಿಕ್ಕೆ ರೊಕ್ಕ ಬೇಡುವ ಆಶೆ ನಿನಗಿರಲು ನೀನೇ ಕಾಮುಕನು, ಶ್ವಪಚನು," ನೋಡೆಂದನು.

ಆಗ ಅರ್ಚಕನು ಇವನಲ್ಲಿ ಏನು ಸಿಗುವದಿಲ್ಲೆಂದು ತಿಳಿದು, "ನಿನ್ನ ವಾದವು ಸಾಕು. ನೀನು ಸುಮ್ಮನೆ ಹೊರಟು ಹೋಗು. ನನಗೆ ಸ್ನಾನಕ್ಕೆ ಹೊತ್ತಾಗುವದು," ಎಂದನು. ಸಿದ್ಧಭಾರತಿಯು, "ನೀನು ಅನ್ನಕ್ಕೆಚ್ಚಿಸಿ ಸನ್ಮಾರ್ಗವನ್ನು ತೊರೆದು ಪೋಗುತ್ತಿರುವ ಭ್ರಷ್ಟ ಮಾದಿಗತನವು ನಿನ್ನೊಳಿರುವ ಕಾರಣ ಅದರ ಪ್ರಾಯಶ್ಚಿತ್ತ ಮಾಡಿಕೋ" ಎಂದು ದಿಟ್ಟತನದಿಂದ ಗುಡಿಯೊಳಗೆ ಹೊಕ್ಕನು. ಅಲ್ಲಿ ಮೀನಾಕ್ಷಿದೇವಿಯ ಪೂಜೆಯನ್ನು ಕಂಡು ನಿಟಿಲ ನೇತ್ರವನ್ನು ಮನದಲ್ಲಿ ನೆನೆಯುತ್ತ ಪುರದೊಳು ಹೋಗಿ ಯಾಚಿಸಿ, ಕುಟಿಲ ಜನರನ್ನು ತ್ಯಜಿಸಿ, ನದಿಯ ತಡದ ಒಂದು ಏಕಾಂತ ಸ್ಥಾನದಲ್ಲಿ ತಿರಿದನ್ನವನ್ನು ಭುಂಜಿಸಿ ತೃಪ್ತನಾಗಿ ಶಯನ ಮಾಡಿದನು.

ಗುಡಿಯಲ್ಲಿ ಸಿದ್ಧನ ಕೂಡ ಜಗಳ ಮಾಡಿ, ಆ ಅರ್ಚಕ ಬ್ರಾಹ್ಮಣನು, ಸಿದ್ಧನನ್ನು ಹುಡುಕುತ್ತ ಅಲ್ಲಿಗೆ ಬಂದನು. ಸ್ವಚ್ಛಂದದಿಂದ ಮಲಗಿರುವ ಸಿದ್ಧನನ್ನು ಕಂಡು, "ಸ್ವಾಮಿ ಇಂದು ನಾನು ಕ್ಷುಲ್ಲಕತನದಿಂದ ತಮ್ಮನ್ನು ಬಿಟ್ಟು ನಾನೊಬ್ಬನೇ ಭೋಜನಕ್ಕೆ ಹೋದೆನು. ನನ್ನದು ತಪ್ಪಾಯಿತು. ಅದನ್ನು ಮನ್ನಿಸಿ ಕೃಪೆದೋರಿ ಊಟಕ್ಕೆ ಬರಬೇಕು," ಎಂದು ಬಿನ್ನೈಸಿಕೊಂಡನು. ಆಗ ಸಿದ್ಧಭಾರತಿಯು, "ನನ್ನನ್ನು ಮನೆಗೆ ಕರೆದೊಯ್ದು ಅನ್ನಬಡಿಸಿದರೆ ಎಷ್ಟು ಫಲ ಬರುವದೊ, ಮನ್ನಿಸಿ ಅನ್ನವನ್ನು ಇಲ್ಲಿಗೆ ತಂದು ಕೊಟ್ಟರೆ, ಅದರ ಶತಪಟ್ಟು ಫಲ ಬರುವದು" ಎಂದನು. ಆಗ ಬ್ರಾಹ್ಮಣನು, ಬೇಗನೇ ತನ್ನ ಗ್ರಹದಿಂದ ಮೃಷ್ಟಾನ್ನ ತಂದು ಉಣಬಡಿಸಿದನು. ಸಿದ್ಧನು ಅದನ್ನು ಉಂಡು ತೃಪ್ತನಾದನು. ಆಗ ಅರ್ಚಕನು, ಸಿದ್ಧಮುನಿಯ ಚರಣಕ್ಕೆರಗಿ," ರಾಗ ರಹಿತನೆ, ತಮ್ಮ ಕೃಪೆಯು ಸರ್ವದಾ ನನ್ನ ಮೇಲಿರಲಿ," ಎಂದು ಹೊರಟು ಹೋದನು.

ಮಂಗಲ— ಪಾರ್ವತೀಶಗೆ ಮೂಲ ಪುರುಷಗೆ ।
ಸರ್ವನೆನಿಪಗೆ ಶೋಮಧರನಿಗೆ ।
ಪರ್ವತೇಶಗೆ ಪುಲಿಯದೊಗಲನ್ನುಟ್ಟುಕೊಂಡವಗೆ ॥

ಸರ್ವ ಋಷಿಗುಣ ಮೇಣು ಸುರಗಂ ।
ಧರ್ವಕಿನ್ನರ ಯಕ್ಷ ವಂದ್ಯಗೆ ।
ಯುರ್ವಿನರರಿಂ ಸ್ತೋತ್ರಗೊಳ್ಳುವ ದೇವಗಾಂ ನಮಿಪೆ ||

ಇತಿ ಶ್ರೀ ಸಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ ಲೀಲಾ ಚರಿತ್ರ ಕಲ್ಪದ್ರುಮದೊಳು ಬ್ರಹ್ಮಜ್ಞಾನಿಗಳ ದರುಶನದ ಫಲ ಮತ್ತು ವಾಮ ಮಾರ್ಗದ ನಿರಸನವೆಂಬ ಹದಿಮೂರನೆಯ ಅಧ್ಯಾಯು ಸಮಾಪ್ತಿ.

————

|| ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ||



# ಸಂಚಾರ ಸಂಭ್ರಮ ಕಾಂಡ

## ಅಧ್ಯಾಯು ೧೪

|| ಓಂ ತತ್ಸತ್ ||

ಈ ಅಧ್ಯಾಯದಲ್ಲಿ ಸಿದ್ಧಭಾರತಿಯು ರಾಮದುರ್ಗಿಕೆಯಲ್ಲಿರುವ ಹಟ ಯೋಗಿಗೆ ನಾಲ್ಕು ಯೋಗಗಳನ್ನು ತಿಳುಹಿಸಿ ಬಳಿಕ ನಿರಸನದ್ವಾರಾ ಜ್ಞಾನ ಬೋಧಿಸಿದ್ದು.

ಸ್ತೋತ್ರ— ಪರಮ ಪೂರ್ಣಜ್ಞಾನ ಮೂರ್ತಿಯೇ |
ನಿರುತ ಶಿಷ್ಯೋದ್ಧಾರ ಕೀರ್ತನೆ |
ನಿರುತ ತಾಂ ಪೊಂಗೊಳಗೆ ಚರಿಸುವ ಪ್ರಾಣ ಮನಗಳನು ||
ಬರದಿ ಕುಂಭಿಸಿ ಬ್ರಹ್ಮರಂಧ್ರದೆ |
ಇರಿಸಿ ಬೆಳಕು ಸುನಾದ ಸುಖಗಳ |
ನರಿಸಿಕೊಡುವೀಯೋಗ ಸಾಕ್ಷಿಕ ಗುರುವೇ ನತನಪ್ಪೆ ||

ಪದ— ೧-೮೦ ರ ವರೆಗೆ

ಸಚ್ಚಿದಾನಂದ ಶ್ರೀ ಸಿದ್ಧ ಯತಿಯು, ಮಧುರೆಯನ್ನು ಬಿಟ್ಟು ಪುರ-ಪಟ್ಟಣಗಳನ್ನು ಸಂಚರಿಸುತ್ತ, ಶ್ರೀ ರಾಮನಾಥಪುರಕ್ಕೆ ಬಂದನು. ಅಲ್ಲಿ ಬ್ರಹ್ಮಾಕಾರ ವೃತ್ತಿಯುಳ್ಳ ಜ್ಞಾನಿಗಳನ್ನು ಕಾಣುತ್ತ, ಪಾಷಾಣಕ್ಕೆ ಬಂದನು. ಅಲ್ಲಿಂದ ಮುಂದೆ ಸಾಗಿ ಹರಬಲಾ ಆ ಖಾತವನ್ನು ದಾಟಿ ರಾಮೇಶ್ವರನ ದರುಶನ ಮಾಡಿಕೊಂಡು, ರಾಮಝುರಿಕಿಗೆ ಬಂದನು. ಅಲ್ಲಿ ಪ್ರಾಣಾಯಾಮ ಮಾಡುತ್ತಿರುವ, ಓರ್ವ ಹಠಯೋಗಿಯನ್ನು ಕಂಡನು.

ಆಗ ಸಿದ್ಧಭಾರತಿಯು, ತನ್ನ ಸ್ವಾನುಭವದಿಂದ ಮೂರು ವರುಷ ಕೃಷ್ಣಾತೀರದಲ್ಲಿ ಮೌನದಿಂದಿದ್ದು, ತನಗೆ ಏನೊಂದು ಬಾಧೆಯಿಲ್ಲದೆ ಪ್ರಾಣಾಯಾಮ ಮಾಡಿದ್ದು, ತನ್ನ ಸ್ಮರಣಕ್ಕೆ ಬಂದಿತು. ಆಗ ಸಿದ್ಧಭಾರತಿಯು, ಆ ಯತಿಯನ್ನು ಕುರಿತು, "ನೀನು ಎಡಬಿಡದೆ ಮಾಡುತ್ತಿರುವ ಪ್ರಾಣಾಯಾಮವು ಯಾವುದು ? ತರಸ ಗರ್ಭವೋ ? ಅಥವಾ ಅಗರ್ಭವೋ ?" ಹೇಳೆಂದನು. ಆಗ ಯತಿಯು, "ಪರಮ ಪೂಜ್ಯರೇ ಕೇಳಿರಿ. ನಾನು ಆಚರಿಸುವ — ಪ್ರಾಣಾಯಾಮ ವೈಕೃತ ವರಸ ಗರ್ಭವು. ಅದರಿಂದ ನನಗೆ ಆಸನವು ಸಿದ್ಧಿಸಿರುವದು" ಎಂದನು. "ಅದು ನಿನಗೆ ಹೇಗೆ ತಿಳಿಯಿತು ?" ಎಂದು ಸಿದ್ಧನು ಕೇಳಿದನು. ಯತಿಯು, "ದೇಹದ ಲಘುತ್ವವು, ನೇತ್ರದ ನಿರ್ಮಲತ್ವವು, ಮತ್ತು ಜಠರಾಗ್ನಿಯ ಪ್ರಜ್ವಲತ್ವವು, ಪ್ರಾಣಾಯಾಮದಿಂದ ಲಭಿಸಿರುವದು. ಇದರ ಮೇಲಿಂದ ಆಸನ ಸಿದ್ಧಿಸಿರುವದೆಂದು, ತಿಳಿದು ಕೊಂಡಿರುವೆನು" ಎಂದನು ಮತ್ತು ಸಿದ್ಧರಿಗೆ ನಮ್ರತೆಯಿಂದ ಎಲ್ಲ ಯೋಗಗಳ ರಹಸ್ಯವನ್ನು ಅರಿಯದ ನನಗೆ ತಾವು ಅರುಹಿ ಕೊಡಬೇಕೆಂದು ಬಿನ್ನಯಿಸಿ ಕೊಂಡನು.

ಆಗ ಯೋಗೀಶ್ವರನಾದ ಸಿದ್ಧನು ಹರುಷದಿಂದ ಆ ಯೋಗಸಾಧಕನಿಗೆ ೋಭಿಸುವ ರಾಜ, ಹಠ, ಲಯ ಮತ್ತು ಮಂತ್ರನೆಂಬ, ನಾಲ್ಕು ಯೋಗಗಳ ಹಸ್ಯವನ್ನೂ, ಮತ್ತು ಯಮ, ನೇಮಾದಿ ಎಂಟು ಅಂಗಗಳ ನಿಷ್ಠೆಯನ್ನೂ, ಂಪೂರ್ಣವಾಗಿ ತಿಳಿಸಿಕೊಟ್ಟನು. ಇದು ಅಲ್ಲದೆ "ಜ್ಞಾನ ಯೋಗದ ಕ್ರಮ ನ್ನು ಬಿಟ್ಟು, ಕಡು ಕಷ್ಟದ ಹಠಯೋಗಾದಿಗಳಿಂದ ನಿನಗೆ ಮುಕ್ತಿ ಘಟಿ- ದು. ಅದು ಕಾರಣ ಈ ಹಠಯೋಗಾದಿಗಳನ್ನು ತೊರೆದು, ಜ್ಞಾನಯೋಗ ಂದ ಮುಕ್ತನಾಗು," ಎಂದನು.

ಅದಕ್ಕೆ ಯತಿಯು, "ಹಠಯೋಗದಿಂದ ಮನಸ್ಸು ವಶವಾಗುವದು. ರಿ ಜ್ಞಾನದಿಂದ ವಶವಾಗಲಾರದು. ಮನಸ್ಸು ವಶವಾಗದಿದ್ದರೂ ಮುಕ್ತಿ ರಾಗುವದೆಂದು ನೀವು ಹೇಗೆ ಹೇಳುತ್ತೀರಿ ? ಎಂದು ಪ್ರಶ್ನೆ ಮಾಡಿದನು. ದಕ್ಕೆ ಭಾರತಿಯು, ಯೋಗಿಯೇ ಕೇಳು, ಸ್ವಾಭಾವಿಕವಾಗಿ ಬಾಗಿರುವ ುರದ ರೆಂಬೆಯನ್ನು ಬಲಾತ್ಕಾರದಿಂದ ಜಗ್ಗಿ ಹಿಡಿದಾಗ್ಗೆ ಮಾತ್ರ ಸರಳವಾಗಿ ುವದು. ಕೈ ಬಿಟ್ಟಕೂಡಲೇ ಅದು ಮೊದಲಿನ ತನ್ನ ಸ್ಥಿತಿಯಲ್ಲಿಯೇ ಇರು ದು. ಅದರಂತೆ ಯೋಗಕಾಲದಲ್ಲಿ ಮಾತ್ರ, ಮನಸ್ಸು ಚಲಿಸದೇ ಇರ- ಹುದು ! ಆದರೆ ಯೋಗದಿಂದ ಉತ್ಥಾನವಾಗಲು, ಮನವು ಮತ್ತೆ ಚಲಿ ುವದು. ಹಗ್ಗದಲ್ಲಿ ತೋರಿದ ಹಾವಿನ ಭೀತಿಯು, ಇದು ಹಗ್ಗವೆಂದು ಳಿದೊಡಲ್ಲದೆ, ಕೋಣೆಯನ್ನು ಹೊಕ್ಕರೂ ಬಿಡದು ಅದರಂತೆ ಪ್ರಾಣ ಚಿತ್ತ ರೋಧವು ಬ್ರಹ್ಮಾತ್ಮೈಕ್ಯ ಜ್ಞಾನವೆಂಬ ಯೋಗದಿಂದ ಸಾಧ್ಯವಲ್ಲದೆ, ಠಯೋಗದಿಂದ ಸಾಧ್ಯವಿಲ್ಲ. ಇನ್ನು ಕೆಲವರು ಯೋಗವೆಂಬುದೇ ನಿಜ ುಕ್ತಿ, ಎನ್ನುವರು. ಇದು ಸತ್ಯವಾದರೆ ಆ ಮುಕ್ತಿ ಸ್ವಾಭಾವಿಕವಾಗಿರ ೇಕು. ಹೀಗಿರದೆ ಅದು ಪ್ರಯತ್ನದಿಂದ ತೋರಿ, ನಂತರ ತನ್ನಲ್ಲಿಯೇ ಲಯ ಾಗುವದರಿಂದ, ಇಂಥ ಹಠಯೋಗವು ಸಾರವಿಲ್ಲದುದು. ಇದರಿಂದ ಮುಕ್ತಿ ಂತಾಗುವದು ? ಹೇಳು ಹೀಗೆ ತನ್ನೊಳು ಅನ್ಯವಾಗಿ ತೋರಿ ಅಡಗುವ ಾದ ಕಾರಣ, ಯೋಗವು ಸತ್ಯವಲ್ಲ. ಅದು ಕಾರಣ, ಹೀನ ಭವವನ್ನು ೀಗುವ ಜ್ಞಾನಯೋಗವನ್ನು ಸಾಧಿಸಿಕೊಳ್ಳು," ಎಂದು ಬೋಧಿಸಿದನು. ೀಗೆ ಸಿದ್ಧಭಾರತಿಯು, ಕಷ್ಟತರ ಹಠಯೋಗವನ್ನು ನಿರಸನಮಾಡಿ, ಆ

ಯೋಗಿಯ ಮನಸ್ಸನ್ನು ಜ್ಞಾನದಲ್ಲಿ ಸ್ಥಿರಗೊಳಿಸಿದನು. ಆಗ ಯೋಗಿಯು ನಿರ್ಯೋಗ ಸಿದ್ಧಗೆ ವಂದಿಸಿ, ''ನಿಮ್ಮ ಬೋಧವನ್ನು ಕೇಳಿ ಧನ್ಯನಾದೆನು. ನಿಮಗೆ ಜಯತು ಜಯತೆಂದು'' ನಮಿಸಿದನು.

ಇತ್ತ ಸಿದ್ಧಭಾರತಿಯು ಅಲ್ಲಿಂದ ಮುಂದೆ ಪಯಣ ಬೆಳೆಸಿ ಧನುಷ್ಕೋ-ಟಿಗೆ ಬಂದನು. ಅಲ್ಲಿ ಸ್ನಾನ ಮಾಡುತ್ತಿರುವ ಯಾತ್ರಿಕರನ್ನು ಕಂಡು, ಅವರೊಳಗೋರ್ವನನ್ನು ಕುರಿತು, ''ಈಗ ನೀನು ಶುಚಿ, ಅಶುಚಿ, ಎಂಬುದರಲ್ಲಿ ಯಾವುದನ್ನು ಅರಿತು ಸ್ನಾನವನ್ನು ಮಾಡುತ್ತಿರುವಿ ?'' ಎಂದು ಕೇಳಿದನು. ಆಗ ಅವನು, ''ಈ ಕಾರ್ಯವು ಅಶುದ್ಧವು, ಶುದ್ಧವಾಗುವದಕ್ಕಾಗಿ ಸ್ನಾನ ಮಾಡುತ್ತೇನೆ'' ಎಂದನು. ಆಗ ಸಿದ್ಧನು, ''ಇದಕ್ಕೆ ಶುದ್ಧವಲ್ಲವೆಂದು ನೀನು ಹೇಗೆ ತಿಳಿದುಕೊಂಡೆ'' ಎಂದು ಕೇಳಿದನು. ಶುದ್ಧವಾದ ಜಾತ ಕರ್ಮದ ಆಧಾರದ ಮೇಲಿಂದ ತಿಳಿದುಕೊಂಡೆನು,'' ಎಂದನು. ಭಾರತಿಯು ಅವನ ನುಡಿಯನ್ನು ಕೇಳಿ ಇವನು ಮೂರ್ಖನೆನ್ನುತ್ತ ಅಲ್ಲಿಂದ ಹೊರಟು ದರ್ಭಶಯನನ (ರಾಮೇಶ್ವರದ ಹತ್ತಿರಿರುವ ಒಂದು ಸ್ಥಳ) ಕ್ಷೇತ್ರವನ್ನು ಕಂಡು ಮುಂದೆ ತಿರ್ನಲ್ವೇಲಿಪುರಕ್ಕೆ ಆಗಮಿಸಿದನು. ಅಲ್ಲಿ ತೀರ್ನಲ್ ಸ್ವಾಮಿಯ ಸಡಗರದ ಪೂಜೆಯನ್ನು ಕಂಡು, ಸಂತೋಷದಿಂದ ಗುಡಿಯಲ್ಲಿಯೇ ಉಳಿದುಕೊಂಡನು ಎಂಬಲ್ಲಿಗೆ ಮಂಗಲ

ಗಿರಿಸುತೆಯ ಲೋಚನ ಚಕೋರಂ |
ಪೊರೆವವೋಲ್ ಭಕ್ತಾಳಿ ವರತನು |
ಸರಸಿ ಸುಹೃದಯ ಕುಮುದ ನಲಿಳ್ಚುವ ಪೋಲ್ ಜಗದ್ಭಾಗ್ಯ ||
ವರಜಲಧಿಯಂ ಪೆರ್ಚಿಸುವವೋಲ್ |
ಸುರಸ ಕುರುಣಾ ಕೌಮುದಿಯನುರೆ |
ಹರವುತಿಹ ಶಿವನಾಸ್ಯ ಚಂದ್ರನೆ ನಮಗೆ ಸುಖಮೀಯೈ ||

**ಇತಿ ಶ್ರೀ ಸಿದ್ಧಾರೂಢ** ಭಾರತಿ ಪರಿವ್ರಾಜಕಾಚಾರ್ಯಾವತಾರ ಲೀಲಾ ಚರಿತ್ರ ಕಲ್ಪದ್ರುಮದೊಳು ಹಠಯೋಗ ನಿರಸನ, ಜ್ಞಾನಯೋಗ ಪ್ರತಿಪಾದನವೆಂಬ ಹದಿನಾಲ್ಕನೆಯ ಅಧ್ಯಾಯ ಸಮಾಪ್ತಿ.



|| ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ||



# ಸಂಚಾರ ಸಂಭ್ರಮ ಕಾಂಡ

## ಅಧ್ಯಾಯ ೧೮

|| ಓಂ ತತ್ಸತ್ ||

ಈ ಅಧ್ಯಾಯದಲ್ಲಿ ಧ್ಯಾನ ಮತ್ತು ಕರ್ಮಯೋಗಿಗಳ ವಿಕ್ಷೇಪ ತಿಳಿ ...ದ್ದು. ಮುಮುಕ್ಷುತ್ವವು ಗುಣ, ಕರ್ಮಗಳಲ್ಲ. ಅದು ಅಭ್ಯಾಸ ಜನಿತವೆಂದು ...ಹೇಳಿದ್ದು ಮತ್ತು ಜಗದ ವ್ಯವಹಾರವು ಸತ್ಕರ್ಮದ ಆಶ್ರಯದಲ್ಲಿ ನಡೆಯು ...ವದು. ಸರ್ವಕ್ಕೂ ಆಶ್ರಯವು ಪರಮಾತ್ಮನೆಂದು ಅರುಹಿ, ಧರ್ಮವು ನರ ...ಸುರರಿಗೆ ಅನ್ಯೋನ್ಯ ಸುಖ ಕೊಡುವದು, ಎಂದು– ಹೇಳಿ ದೃಗ್ದೃಶ್ಯ ...ಂಚಾರವನ್ನು ತಿಳಿಸಿದ ವಿಷಯಗಳಿರುವವು.

ಸ್ತುತಿ— ಶ್ರೀಪತಿಯೇ ವರಶೇಷಶಾಯಿಯೆ |
ಭೂಪತಿಯೇ ಪರಶಾಮ ವರ್ಣನೆ |
ತಾಪ ಹರನೇ ಪುಂಡರೀಕ ಸುನೇತ್ರನೇ ಹರಿಯೇ ||
ಕಾಪಥಿಕ ದೈತ್ಯಾರಿಯೇಕಡು |
ದೀಪಿಸುವವರ ನೇತ್ರ ಕಮಲವ |
ನೊಪ್ಪಿ ಶಿವ ಪದಕಿಟ್ಟು ಯಜಿಸಿದ ಶೈವನೇ ನಮಿಪೆ ||

## ಪದ ೧—೧೫. ಧ್ಯಾನ ಮತ್ತು ಕರ್ಮದಿಂದಾಗತಕ್ಕ ವಿಕ್ಷೇಪ

ಬಳಿಕ ಭಾರತಿಯು, ತಿರ್ನಲ್ವೇಲಿ ಸ್ಥಳವನ್ನು ಬಿಟ್ಟು ಹೋಗುತ್ತಿರುವಾಗ್ಗೆ, ಅಲ್ಲಿ ಎರಡೂ ಕಣ್ಣುಗಳನ್ನು ಮುಚ್ಚಿ ಧ್ಯಾನಸ್ಥನಾಗಿ ಕುಳಿಗಿರುವ ಒಬ್ಬ ಉಪಾಸಕನನ್ನು ಕಂಡನು. ಸಂತೋಷದಿಂದ ಹೋಗಿ ಅವನ ಕಿವಿಯಲ್ಲಿ 'ಓಂ' ಎಂದು ದೊಡ್ಡ ಧ್ವನಿಯಿಂದ ಕೂಗಿದನು. ಆಗ ಉಪಾಸಕನು ಕಣ್ದೆರೆದನು. ಸಿದ್ಧಭಾರತಿಯು, "ನೀನು ಆಚರಿಸುವ ಉಪಾಸನವು ಜ್ಞಾತ ಮತ್ತು ಅಜ್ಞಾತ ಇವುಗಳಲ್ಲಿ ಯಾವದಿರುವದು ? ನೀನು ಜ್ಞಾತವೆಂದು ಹೇಳಿದರೆ ಅದು ಸರಿಯಾಗಲಾರದು. ಏಕಂದರೆ ಧ್ಯಾನ ಮಾಡತಕ್ಕ ಉಪಾಸ್ಯ ದೇವರು, ಉಪಾಸಕ ಮತ್ತು ಉಪಾಸನೆ ಈ ಭಾವಗಳಲ್ಲಿ ವಿಶಿಷ್ಟ ಚೈತನ್ಯರೂಪ ಧ್ಯಾತೃವೇ ಧ್ಯೇಯವಾದ ಮೇಲೆ ಧ್ಯಾನ ಅಡಗುವದು. ಧ್ಯಾನ (ವೃತ್ತಿರೂಪ ಜ್ಞಾನ) ವಡಗಲು ನಿನ್ನ ಉಪಾಸನೆಯು ಜ್ಞಾತ (ತಿಳಿದು) ವೆಂದು ಹೇಗೆ ಹೇಳುವಿ ? ಮತ್ತು ಅದು ಅಜ್ಞಾತವೆಂದು ಹೇಳಿದರೆ ಧ್ಯಾತೃ ಮತ್ತು ಧ್ಯೇಯ ಇವುಗಳ ನಿಜ ಜ್ಞಾನವಿಲ್ಲದೆ ಧ್ಯಾನ ಘಟಿಸದು. ಉದಾಹರಣೆ—"ನೀನು ಒಬ್ಬನಿಗೆ ಒಂದು ವಸ್ತುವನ್ನು ಅರ್ಪಿಸಬೇಕಾದರೆ, ಆ ವಸ್ತುವನ್ನು ಸ್ವೀಕರಿಸು ಆ ಪುರುಷನ ಪರಿಚಯವು, ನಿನಗೆ ಪೂರ್ಣವಿರಬೇಕು. ಅಂದರೆ ನೀನು ಕೊಡುವ ವಸ್ತುವು ಅವನಿಗೆ ಸಲ್ಲುವದು ಮೂಲತಃ ಅವನ ಪೂರ್ಣ ಪರಿಚಯುವಿಲ್ಲವೆಂದ ಮೇಲೆ ಅದನ್ನು ಮುಟ್ಟಿಸುವದು ಹೇಗೆ ? ಆದ್ದರಿಂದ ಧ್ಯಾನರೂಪ ಉಪಾಸನೆಯು ಮೋಕ್ಷಕ್ಕೆ ಫಲಕಾರಿಯಲ್ಲವು," ಹೀಗೆ ನುಡಿದ ಸಿದ್ಧರ ಉಪದೇಶ ವಾಕ್ಯಗಳನ್ನು ಕೇಳಿ ಆ ವಿಪ್ರನು "ಪರೋಕ್ಷ ಜ್ಞಾನವನ್ನು ಬೇರೆ ಬೇರೆ ಶಾಸ್ತ್ರಾಭ್ಯಾಸದಿಂದ ಮಾಡಿಕೊಳ್ಳುವೆನು," ಎಂದನು. "ಹಾಗಾದರೆ ಅದಕ್ಕೆ ಕಾರಣವಾವುದು ? ಎಂದು ಪ್ರಶ್ನೆ ಮಾಡಿದರು ವಿಪ್ರನು, ಮೊದಲಿಗೆ ಶ್ರದ್ಧೆಯೇ ಕಾರಣವು" ಎಂದು ಹೇಳಿದನು. ಸಿದ್ಧಭಾರತಿಯು, 'ಅದು ಹೇಗೆ" ಎಂದು ಕೇಳಲು, ಕೂಡಲೇ ವಿಪ್ರನು, "ಸ್ವಾಮೀಜಿ, ಜನರಿಗೆ ದೃಢವಾದ ನಂಬಿಗೆಯು ದೇವತೆಗಳಲ್ಲಿ ಇಲ್ಲದಿರಲು ಅವರು ಧ್ಯಾನಾದಿಗಳನ್ನು ಹೇಗೆ ಮಾಡುವರು ? ಹೀಗಾಗಿ ಅವರು ನಾಸ್ತಿಕರಾಗಿ ಕೆಡುವರು. ಅದು ಕಾರಣ ಉಪಾಸಕರಿಗೆ ಶ್ರದ್ಧೆಯೇ ಮುಖ್ಯ" ಎಂದು ಹೇಳಿದನು.

ಆಗ ಜ್ಞಾನಿಯಾದ ಸಿದ್ಧರು ದ್ವಿಜನ ಮಾತನ್ನು ಕೇಳಿ ಇವನು ಸಾಂಪ್ರದಾಯಕನಿರುವನೆಂದು ತಿಳಿದು ಅಲ್ಲಿಂದ ಹೊರಟು ಗುರುವಿನ ಉಪಕಾರ ಸ್ಮರಿಸುತ್ತ ತೋತಾದ್ರಿಗೆ ಬಂದರು. ಅಲ್ಲಿ ಭವ್ಯವಾದ ವಿಷ್ಣು ಮೂರ್ತಿಯನ್ನು ಅನುರಾಗದಿಂದ ಕಂಡರು. ಅಲ್ಲಿಂದ ಹಾಗೆಯೇ ತಿರುಕರಾಯನ ಸಂಭ್ರಮದ ಕೋಟೆಯಲ್ಲಿರುವ ಲಂಬನಾರಾಯಣನ ದರುಶನ ಪಡೆದು ಅಲ್ಲಿಯೇ ವಿಶ್ರಾಂತಿ ಹೊಂದಿದನು. ಅಷ್ಟರಲ್ಲಿ ಶಾಸ್ತ್ರಜ್ಞರಾದ ಬ್ರಾಹ್ಮಣರು ಭಕ್ತಿ ಭಾವದಿಂದ ನಾರಾಯಣ ದೇವರ ದರುಶನಕ್ಕೆ ಬಂದು ಕುಳಿತುಕೊಂಡರು.

## ಕರ್ಮಯೋಗದ ಅಸಾರ್ಥಕತೆ

ಅದರೊಳಗೆ ಓರ್ವ ಕವಿಯು ಸಿದ್ಧರನ್ನು ಕುರಿತು, ''ನೀವು ನಿತ್ಯ ಕರ್ಮವನ್ನು ಏನು ಕಾರಣದಿಂದ ತ್ಯಜಿಸಿರುವಿರಿ''? ಎಂದು ಪ್ರಶ್ನೆ ಮಾಡಿದನು. ಅದಕ್ಕೆ ಸಿದ್ಧಸಮರ್ಥನು ಹೇಳಿದ್ದೇನಂದರೆ–

''ಪಿತೃಲೋಕ ಮತ್ತು ನರಕ ಲೋಕಗಳಿಗೆ ಮರ-ಮರಳಿ ಎಡತಾಕು–ವದೇ ಕರ್ಮದ ಫಲವು. ಅದು ಹೇಗಂದರೆ ಕರ್ಮದಿಂದ ಕರ್ಮ ಸಂಸ್ಕಾರವು ಬೆಳೆದು ಕರ್ಮಿಯು ಚಿತ್ತದಲ್ಲಿ ಗುಪ್ತವಾಗಿ ಉಳಿಯುವದು. ಅಶ್ವಗಳು ರಥವನ್ನು ಎಳೆದೊಯ್ಯುವಂತೆ ಅಂತ್ಯ ಕಾಲಕ್ಕೆ ಕರ್ಮಿಯ ಅಸುಗಳು ಅವನನ್ನು ಧೂಮ ಮಾರ್ಗದಲ್ಲಿ ಎಳೆಯಲು ಅವನ ಕರ್ಮವು ಅವನನ್ನು ಪ್ರಾಣ ಸಹಿತವಾಗಿ ಲಿಂಗ ತನುವಿಗೆ ಬಂಧಿಸುವದು. ಆಗ ಆ ಕರ್ಮವು ಕೃಷ್ಣಪಕ್ಷ, ದಕ್ಷಿಣಾಯಣನ, ಧೂಮ ಮಾರ್ಗದಿಂದ ಅವನನ್ನು ಚಂದ್ರಲೋಕ, ಪಿತೃ–ಲೋಕ, ಮೊದಲಾದ ಲೋಕಗಳಿಗೊಯ್ದು ಅಲ್ಲಿ ಒಳ್ಳೆ ಭೋಗಗಳನ್ನುಣ್ಣಿ–ಸುವದು. ಆಗ ಆಣೆಕಲ್ಲಿನಂತೆ ಅವನ ಪುಣ್ಯವು ಕರಗುವದು. ಮತ್ತೆ ಆತನ ಸೂಕ್ಷ್ಮದೇಹದಲ್ಲಿ ಪೂರ್ವ ಕರ್ಮದ ಶೇಷವು ಉಳಿದಿರುವದರಿಂದ, ಅಲ್ಲಿ ಪ್ರಕಾಶಮಾನರಾದ ದೇವತೆಗಳು, ಅವನನ್ನು ಆ ಸ್ಥಳದಿಂದ ತಳ್ಳುವರು. ಆಗ ಅವನು ಯೋಮಕ್ಕೆ ಬರುವನು. ಬಳಿಕ ಅಲ್ಲಿಂದ ವಾಯುವಿನಲ್ಲಿ ಸೇರುವನು. ಮತ್ತೆ ಪಾವಕನಲ್ಲಿ ಬೆರೆಯುವನು. ನಂತರ ಮೇಘದಲ್ಲಿ ನೀರಾಗುತ್ತ ಭೂಮಿಗೆ ಬೀಳುವನು. ಅಲ್ಲಿಂದ ಪೈರು, ಧಾನ್ಯ, ಅನ್ನರೂಪತಾಳುತ್ತ ತನ್ನ ಪಾಪ

ಪುಣ್ಯಾನುಸಾರ ದೇಹ ಧರಿಸುವನು. ಬಳಿಕ ಅದೇ ತನುವನ್ನೇ ನೆಚ್ಚಿ, ಅದನ್ನೇ ಮೋಹಿಸಿ ಮತ್ತೆ ಕರ್ಮಗಳನ್ನು ಮಾಡುತ್ತ ಮೊದಲಿನಂತೆ ಜನನ ಮರಣ ಪೊಂದುತ್ತ ಇಹಕ್ಕೂ, ಪರಕ್ಕೂ, ಕತ್ತೆಯಂತೆ ತಿರುಗುವನು. ದುಃಖಕ್ಕೆ ಸುಖ ವೆಂದು ಚಿತ್ತದೊಳು ಮೋಹಹೊಂದಿದ್ದ ರಾಗಿಗಳಿಗೆ ಭವದ ಹೊರ್ತಾಗಿ ಬೇರೆ ಫಲವಿಲ್ಲ. ವಿವೇಕ ಮುಳ್ಳ ಮುಮುಕ್ಷುವೇ ಕರ್ಮಕ್ಕೆ ತಿರಸ್ಕಾರ ಮಾಡುತ್ತಿರುವಾಗ್ಗೆ ಬ್ರಹ್ಮಜ್ಞಾನಿಗೆ ನಿತ್ಯಕರ್ಮದ ತೊಡಕು ಎಲ್ಲಿರುವದು ? ಎಂದನು ಸಿದ್ಧನು.

ಇವೆಲ್ಲವನ್ನು ಶ್ರವಣ ಮಾಡುತ್ತಿದ್ದ ಆ ಬ್ರಾಹ್ಮಣರು ''ಇವನು ಜ್ಞಾನಿಗಳ ಒಡೆಯನೆಂದು'' ಅವನ ಅಡಿದಾವರೆಗಳಿಗೆ ನಮಿಸುತ್ತ ಕುಳಿತುಕೊಂಡರು. ಆಗ ಅವರೊಳಗೆ ಮತ್ತೊಬ್ಬನು ಭಕ್ತಿಯುಕ್ತನಾಗಿ, ''ಗುರುವರ್ಯಾ, ಮುಮುಕ್ಷುವಿಗೆ ಆ ಮೋಕ್ಷದ ಆಕಾಂಕ್ಷೆಯು, ಧರ್ಮವೋ ? ಗುಣವೋ ? ಎಂದು ಬಿನ್ನಯಿಸಿಕೊಂಡನು.

## ಮುಮುಕ್ಷುತ್ವವು ಅಭ್ಯಾಸ ಜನಿತವು

ಆಗ ಸಿದ್ಧಸದ್ಗುರುಗಳು, "ಕೇಳಿರಿ, ಅಗ್ನಿಯಲ್ಲಿರುವ ದಾಹಕ ಶಕ್ತಿಯಂತೆ ಮೋಕ್ಷಾಪೇಕ್ಷೆಯು ಧರ್ಮವೆಂದರೆ ಅದು ನಿತ್ಯವಾಗಿ ಇರಬೇಕಾಯ್ತು. ಮತ್ತು ಗುಣವೆಂದರೆ, ಆ ಮುಮುಕ್ಷುವಿನ ಮನಸ್ಸು ಜ್ಞಾನಾಭ್ಯಾಸದಲ್ಲಿ ಪ್ರವೃತ್ತಿಯಾಗದೆ, ಹಾಗೆಯೇ ಇರಬೇಕಾಯ್ತು ಹೀಗೆ ಇವೆರಡೂ ಅನು-ಭವಕ್ಕೆ ವಿರುದ್ಧವಾಗಿರುವದರಿಂದ ಮೋಕ್ಷದ ಇಚ್ಛೆಯು, ಅಭ್ಯಾಸ, ಸಂಜಾತವೆಂದು ಸಿದ್ಧವಾಗುವದು,'' ಎಂದರು. ಮತ್ತು ''ಮುಮುಕ್ಷುವು ಶ್ರೀಗುರು ಕೃಪೆಯಿಂದ ತತ್ವಮಸಿ ಮಹಾವಾಕ್ಯದ ಶ್ರವಣ ಮಾಡಲು, ಅಪರೋಕ್ಷ ಜ್ಞಾನವಾಗಿ ತನುಭಾವ ಅಳಿಯುವದು. ಆಗ ಸಮುದ್ರದಲ್ಲಿ ಬಿದ್ದ ನೀರಿನ ಹನಿಯು ಸಮುದ್ರಆಗುವಂತೆ ಮುಮುಕ್ಷುವಿನ ಬ್ರಹ್ಮಾಕಾರ ವೃತ್ತಿಯು ಬ್ರಹ್ಮ ಚೇತನದಲ್ಲಿ ಐಕ್ಯಹೊಂದುವದು. ಇದನ್ನು ಚನ್ನಾಗಿ ಅರಿತುಕೊಳ್ಳಿರಿ'' ಎಂದು ಬೋಧಿಸಿದರು.

ಆಗ ಅಲ್ಲಿದ್ದ ಎಲ್ಲ ಬ್ರಾಹ್ಮಣರು ಪರಮಾನಂದ ಹೊಂದಿದವರಾಗಿ ಶ್ರೀ ಸಿದ್ಧರ ಚರಣಕ್ಕೆ ನಮಿಸಿ ಶಾಂತಿ ಹೊಂದಿದರು. ಪಿಚ್ಚಂಡಯ್ಯನೆಂಬವನು, ಒಳ್ಳೇ ಹರುಷದಿಂದ ಈ ಸುಸಂಧಿಯನ್ನು ಕಳೆದುಕೊಳ್ಳಬಾರದು, ಎಂದು ತೀವ್ರ ಮುಂದೆ ಬಂದು, "ತಂದೆಯೇ, ಈ ಭೌತಿಕ ಚರಾ-ಚರ-ವಸ್ತುವೆಲ್ಲಕ್ಕೂ ಭೂಮಿಯೇ ಆಶ್ರಮವಾಗಿರಲು, ಅದಕ್ಕೆ ಆಶ್ರಯವು ಯಾವುದು ? ಎಂದು ಕೈ ಜೋಡಿಸಿ ಬಿನ್ನಯಿಸಿಕೊಂಡನು.

ಆಗ ಸಿದ್ಧಭಾರತಿಯು, "ನೀರಿನಾಶ್ರಯದಲ್ಲಿ ಭೂಮಿಯು, ಅಗ್ನಿಯ ಆಶ್ರಯದಲ್ಲಿ ನೀರು, ವಾಯುವಿನ ಆಶ್ರಯದಲ್ಲಿ ಅಗ್ನಿಯು, ಆಕಾಶದಾಶ್ರಯ ದಲ್ಲಿ ವಾಯು ಮತ್ತು ಆತ್ಮನಾಶ್ರಯದಲ್ಲಿ ಆಕಾಶವು ಇರುವದು," ಇದಕ್ಕೆ ಶ್ರುತಿ ಪ್ರಮಾಣವುಂಟು.

"ತಸ್ಮಾದ್ವಾ ಏ ತಸ್ಮಾದಾತ್ಮನಃ ಸರಾಶಾತ್ ಆಕಾಶಃ ಸಂಭೂತಃ ||
ಆಕಾಶಾ ದ್ವಾಯುಃ ವಾಯೋರಗ್ನಿಃ|| ಅಗ್ನೇರಾಪಃ ಅದ್ಭ್ಯಃ ಪೃಥಿವಿ||"

ಚಿನ್ನವಾಭರಣ ನ್ಯಾಯದಂತೆ ಎಲ್ಲಕ್ಕೂ ಪರಮಾತ್ಮನು ತಾನೇ ಮೂಲಾಧಾರನು" ನೋಡಿರೆಂದನು. ಆಗ ವಿಪ್ರನು, ವಿನಯದಿಂದ ಪುನಃ ಬಿನ್ನಯಿಸಿಕೊಂಡದ್ದೇನಂದರೆ, "ಯಾವ ಶಕ್ತಿಯ ಬಲದಿಂದ ಅನ್ನವು, ದೇವತೆ ಗಳಿಂದ ನರರಿಗೂ, ಮತ್ತು ನರರಿಂದ ದೇವತೆಗಳಿಗೂ, ಯಾವ ರೀತಿಯಿಂದ ಪ್ರಾಪ್ತವಾಗುವದು ? ಯಾವ ಶಕ್ತಿಯ ಬಲದಿಂದ ಪರಸ್ಪರರು ಸಾವಧಾನದಿಂದ ಜಗತ್ತನ್ನು ರಕ್ಷಿಸುವರು" ? ಹೇಳಿರೆಂದನು.

## ಬ್ರಾಹ್ಮಣಾದಿ ನಾಲ್ಕು ವರ್ಣಗಳು

ಸರ್ವಜ್ಞಮೂರ್ತಿ ಸಿದ್ಧನು, "ಬ್ರಾಹ್ಮಣಾದಿ ಚಾತುವರ್ಣ್ಯಗಳನ್ನು ಮೊದಲು ಕೇಳಿರಿ. ಹಿತ-ಅಹಿತ ಮೊದಲಾದ ದ್ವಂದ್ವಗಳಲ್ಲಿ ಪರಶಿವನಂತೆ ಸಮಭಾವದಿಂದಿದ್ದು ಪರಹಿತಕ್ಕಾಗಿ ಸ್ವಾರ್ಥವನ್ನು ತೊರೆದು, ಸಂತೋಷ ದಿಂದ ಸತ್ಕರ್ಮವನ್ನು ಮಾಡುತ್ತ ಭೂದೇವರೆನಿಸುತ್ತ ದೇವತೆಗಳ ಸಂತೋಷ ಕ್ಕಾಗಿ ಹೋಮ, ಯಜ್ಞ-ಯಾಗಾದಿಗಳನ್ನು ಮಾಡುವವರೇ **ದ್ವಿಜರು**- ಪೂರ್ವ ಜನ್ಮದ ಸುಕೃತದಿಂದ ಜಗತ್ತಿಗೆ ಒಡೆಯನಾಗಿ ಶೌರ್ಯದಿಂದ

ಶಸ್ತ್ರಾಸ್ತ್ರ ಹಿಡಿದು ಸೈನ್ಯದೊಂದಿಗೆ ಹೋರಾಡುತ್ತ, ಶತ್ರುಗಳನ್ನು ಜಯಿಸಿ ಧರ್ಮಶಾಸ್ತ್ರವನ್ನರಿತು, ಪ್ರಜೆಗಳನ್ನು ಧರ್ಮಕ್ಕನುಸರಿಸಿ ಆಚರಿಸುವಂತೆ ವಿಧಿಸುತ್ತ, ಅವರನ್ನು ಸುತರಂತೆ ಪಾಲಿಸುತ್ತ, ಜಗತ್ತಿನ ಕೀರ್ತಿಯನ್ನು ಸಂಪಾದಿಸುತ್ತ, ಉತ್ತಮ ದ್ವಿಜರನ್ನು ದೇವರೆಂದು ಮನ್ನಿಸುತ್ತ, ಸತ್ಯ ವ್ರತದಿಂದ ಅಶ್ವಮೇಧ ಯಜ್ಞಾದಿಗಳನ್ನು ಮಾಡುತ್ತ, ಭುವನದೊಳು ಪುಣ್ಯ ವರ್ಧನ ಮಾಡುವವನೇ **ಕ್ಷತ್ರಿಯನು.**

ಸಿರಿ ಸಂಪತುಗಳಿಂದ ಕೂಡಿದ ಸುಕೃತಿಯು, ಸತತ ಸತ್ಕರ್ಮಗಳನ್ನು ಆಚರಿಸುತ್ತ, ಸರ್ವರೊಳು ಸಮಭಾವಿ ಎನಿಸುತ್ತ, ಸ್ವಾರ್ಥತೊರೆದು, ದ್ವಿಜರೇ ತನ್ನ ದೈವವು, ಅರಸನೇ ಪಿತನು, ಶೂದ್ರರೇ ಅಣುಗುರು,'' ಎಂದು ಆಚರಿಸುತ್ತ ಕೃಷಿ, ವಾಣಿಜ್ಯ, ಸೂರ್ಯ ಸ್ಮರಣೆಗೈಯುತ್ತ, ಶಾಸ್ತ್ರಕ್ಕನುಸರಿಸಿ ಧನ, ಕನಕ, ವಸ್ತ್ರಾದಿಗಳನ್ನು ದಾನ ಮಾಡುತ್ತ ಮತ್ತು ಸತತ ಸರಕಾರಕ್ಕೂ ಯಜ್ಞಾದಿ ಸತ್ಕಾರ್ಯಕ್ಕೂ, ಸಕಲರಿಗೂ ಸಾಮಗ್ರಿಗಳನ್ನು ಪೂರೈಸುತ್ತ ಪುಣ್ಯ ಪಡೆಯುವವನೇ **ವೈಶ್ಯನು.**

ಮೇಲಿನ ಮೂರು ವರ್ಣದವರಿಗೆ ಸೇವಕನಾಗುತ್ತ, ಸ್ವಾರ್ಥವನ್ನು ತೊರೆದು ವಿಪ್ರ ಮತ್ತು ರಾಜ ರಕ್ಷಣೆ ಮಾಡುತ್ತ, ವೈಶ್ಯನ ಸಹಾಯ ಪಡೆದು, ಸತ್ಯನುಡಿ, ಸಮಭಾವ, ಸವಿನಯ, ಭಯ-ಭಕ್ತಿ ಇವುಗಳಿಂದೊಡಗೂಡಿ ಇರುವವನೇ **ಶೂದ್ರನು.**

## ಸತ್ಕರ್ಮದಾಶ್ರಯದಲ್ಲಿ ಜಗದ ವ್ಯವಹಾರ ನಡೆವುದು

ಈ ನಾಲ್ಕು ವರ್ಣದವರು ಅವರವರ ಧರ್ಮಕ್ಕನುಸರಿಸಿ ಸದಾಚಾರಣೆಯಿಂದ ನಡೆಯುವ ಬಲದಿಂದ ಸುರರೂ, ನರರೂ ಸುಖವಾಗಿ ಜೀವಿಸುವರು. ಮತ್ತು ಅದೇ ಬಲದಿಂದ ಸಾವಧಾನದಿಂದ ಜಗತ್ತನ್ನು ರಕ್ಷಿಸುವರು. ಅದು ಹೇಗೆಂದರೆ ಸರ್ವ ಮನುಜರ ಭಾವವೇ ಆಕಾಶವು, ಸೂರ್ಯ ಚಂದ್ರರೇ ಋತ್ವಿಜರು, ಎಲ್ಲರ ಸುಕರ್ಮಗಳೇ ಮೇಘಗಳು, ಪುಣ್ಯವೇ ಮಳೆಯು, ಚಂದ್ರನೇ ಯಜ್ಞದ ಒಡೆಯನು, ಯಜ್ಞಕಾಲದಲ್ಲಿ ಪರಿಣಮಿಸುವ, ಸೋಮರಸವನ್ನು ನರರಿಂದ ದೇವತೆಗಳು ಭುಂಜಿಸುವರು. ಆದರಿಂದ ಅವರು ಸಂತೋಷ ಹೊಂದಿ, ನರರಿಗೋಸ್ಕರ ಈಶ್ವರೀ ಕರ್ಮವನ್ನು ಕೈಕೊಂಡಿರುವರು. ಅದು

ಹೇಗೆಂದರೆ ರವಿಯು ಮಾರುತನೊಡಗೊಂಡು ತನ್ನ ಉಷ್ಣ ಕಿರಣದಿಂದ ಭೂ-ಜಲವನ್ನು ಹೀರ್ದು, ಅದನ್ನು ಆಕಾಶದಲ್ಲಿ ತಡೆಗಟ್ಟಿ ವರ್ಷಾಕಾಲದ ಕಿರಣಗಳಿಂದ ಧಾರುಣಿಗೆ ವೃಷ್ಟಿಗರೆಯುವನು. ಅದರಿಂದ ಉತ್ತಮೋತ್ತಮ ಬೆಳೆ ಬರುವದು. ನಂತರ ಹಿಮ ಕಿರಣಗಳಿಂದ ಬೆಳೆಯು ಫಲಿಸುವಂತೆ ಪೋಷಣೆ ಮಾಡುವನು. ಬಳಿಕ ಶಶಿಯು ತನ್ನ ಅಮೃತ ಕಿರಣವನ್ನು ಧಾನ್ಯಾದಿ ಫಲಗಳಿಗೆ ಧಾರೆ ಎರೆಯುವನು. ಆದ್ದರಿಂದ ಅವುಗಳಿಗೆ ರುಚಿ, ಪೌಷ್ಟಿಕತ್ವಗಳು ಬರುವವು. ಈ ರೀತಿ ದೇವೇಂದ್ರ ಮರುತಾದಿ ದೇವತೆಗಳು ಧರಣಿಯಲ್ಲಿ ಬೆಳೆಸಿದ ಅನ್ನವನ್ನು ನರರು ಸಂತೋಷದಿಂದ ಅವರ ಪ್ರಾರಬ್ಧಕ್ಕನುಸರಿಸಿ ಭುಂಜಿಸುವರು. ಈ ಪ್ರಕಾರ ಸುರಲೋಕದವರೂ, ನರಲೋಕದವರೂ, ಪಶು-ಪಕ್ಷಿ ಮೊದಲಾದ ಎಲ್ಲ ಜೀವರಾಶಿಗಳೂ ತಮ್ಮ ತಮ್ಮ ಪುಣ್ಯಾನುಸಾರ ಸುಖವಾಗಿ ಜೀವಿಸುವರು.

"ಇನ್ನು ಕುಂದುಕೊರತೆಗಳಿಲ್ಲದೆ ಪ್ರಜರನ್ನು ಪರಿಪಾಲಿಸುವ ರಾಜನು ಸುಂದರವಾದ ನಾಣ್ಯವನ್ನು ಮುದ್ರಿಸುವನು. ಅವುಗಳ ಚಲಾವಣೆಯಿಂದ ಬಂದ ಲಾಭವು ರಾಜಪ್ರಜೆಗಳಿಗೆ ಸುಖವನ್ನುಂಟುಮಾಡುವದು. ಮತ್ತು ಧನಿಕನು, ತನ್ನ ಧನವನ್ನು ವರ್ತಕರಿಗೆ ಕೊಡಲಾಗಿ ಅವರು ಅದನ್ನು ಕಳೆಯದೆ, ಅದರಿಂದ ಬಂದ ಲಾಭದಲ್ಲಿ ಧನಿಕನೂ, ತಾವೂ ಉಭಯತರು ಉಪಜೀವಿಸಿ ಸುಖಿಸುವರು. ಇದಕ್ಕೆ ಧನಿಕ ಋಣಿಕನ್ಯಾಯವೆನ್ನುವರು. ಇದಲ್ಲವೂ, ಪುಣ್ಯದ ಬಲದಿಂದ ನಡೆಯುವದು. ಏಕೆಂದರೆ ಪುಣ್ಯದಿಂದಲೇ ತ್ರಿಮೂರ್ತಿಗಳು ಜನಿಸಿದರು. ಪುಣ್ಯದಿಂದಲೇ ದೇವೇಂದ್ರನು, ಪುಣ್ಯದಿಂದಲೇ ದಿಕ್ಪಾಲಕರು, ಪುಣ್ಯದಿಂದಲೇ ದ್ವಿಜರು, ಪುಣ್ಯದಿಂದಲೇ ಧನಿಕರು ಪುಟ್ಟಿ ಅವರೆಲ್ಲರೂ ಈ ಜಗವನ್ನು ಪುಣ್ಯದಿಂದ ರಕ್ಷಿಸುವರು," ಎಂದನು.

ಸಿದ್ಧನ ನುಡಿಕೇಳಿ ಆ ದ್ವಿಜರು "ಇವನು ವಿದ್ಯಾಮೂರ್ತಿ" ಎಂದು ಅವನನ್ನು ಸತ್ಕರಿಸಿ ಮೃಷ್ಟಾನ್ನಾದಿಗಳಿಂದ ತೃಪ್ತಿಗೊಳಿಸಿ ನಮಿಸಿದರು. ಅಷ್ಟರಲ್ಲಿ, ಮಲಯಾನಾಥನೆಂಬವನು ಬಂದು, "ನನ್ನ ಮನಸ್ಸು ಏಕೆ ಚಲಿಸುವದು ?" ಎಂದು ಕೇಳಿದನು.

## ಮನೋಜಯಕ್ಕೆ ದೃಗ್-ದೃಶ್ಯ ವಿಚಾರವೇ ಸಾಧನ

ಅದಕ್ಕೆ ಯೋಗೀಶನಾದ ಸಿದ್ಧನು, "ದ್ವಿತೀಯ ಭೂತವು (ವಾಯು) ಮತ್ತು ದ್ವಿತೀಯ ಗುಣ (ರಜೋಗುಣ) ಇವುಗಳನ್ನು ಸುಮತಿಯಿಂದ ವಿಚಾರಿಸಿ ನೋಡಲಾಗಿ ಮನವು ಚಂಚಲದ ಕಾರಣವು. ಅದು ಹೇಗೆಂದರೆ ಆಕಾಶದ ಪಾದಾಂಶವು ವಾಯುವಿನ ಅರ್ಧಾಂಶದಲ್ಲಿ ಕೂಡಲು ಮನಸ್ಸಾಯಿತು. ಆ ಮನಸ್ಸು ಕ್ಷಣಮಾತ್ರವಾದರೂ, ಒಂದೇ ವಿಷಯದಲ್ಲಿ ನಿಂತಿರದೆ ವಾಯುವಿನಂತೆ ದಳ-ದಳಕ್ಕೆ ಚಲಿಸುವದು. ಮತ್ತು ಸಂಕಲ್ಪ-ವಿಕಲ್ಪ ಕಲ್ಪನಾದಿಗಳನ್ನು ಮಾಡುವ ವೃತ್ತಿಯು ರಾಜಸ ಗುಣದ ಸ್ವಭಾವವು. ನಿನಗೆ ಆ ವಾಯು ಚಲನೆಯು ಸತ್ಯವಾಗಿದ್ದರೆ ಯೋಗದಿಂದ ಅದು ಪೋಗುವದು. ಮತ್ತು ಮನಸ್ಸಿನಲ್ಲಿ ರಾಜಸ ಗುಣವಿದ್ದರೆ "ನಾನ್ಯಾರು" ಎಂಬ ದೃಗ್-ದೃಶ್ಯ ವಿವೇಕದಿಂದ ಹೋಗುವದು," ಎಂದನು. 'ಇದು ಯಾರಿಂದ ನನಗೆ ಫಲಿಸುವದು ?' ಎಂದು ಕೇಳಿಕೊಂಡನು— ಅದಕ್ಕೆ ಸಿದ್ಧನು, ಸತ್ಸಂಗ ಮತ್ತು ವಿನಯಾದಿ ಸಾಧನದಿಂದ ಫಲಿಸುವದು," ಎಂದನು. ಆಗ ಮಲಯನಾಥನು, "ಹಾಗಾದರೆ ತಾವೇ ಸದ್ಗುರುಗಳಿದ್ದೀರಿ. ಆ ದೃಗ್-ದೃಶ್ಯ ವಿಚಾರವನ್ನು ತಿಳಿಸಿ ನನ್ನನ್ನು ಧನ್ಯನನ್ನಾಗಿ ಮಾಡಿರಿ" ಎಂದು ಬಿನ್ನಯಿಸಿಕೊಂಡನು.

ಹಾಗಾದರೆ ಕೇಳು, "ಪ್ರಕಾಶಮಾನವಾಗಿರುವ ಚಿತ್ತು ಶುದ್ಧಾಂತಃಕರಣದಲ್ಲಿ ಪ್ರತಿಫಲಿಸಿ, ಅದು ಮನೋವೃತ್ತಿಯೆನಿಸಿ, ಜ್ಞಾನೇಂದ್ರಿಯ ಮುಖಾಂತರ ಶಬ್ದಾದಿ ವಿಷಯಗಳನ್ನು ಅರಿಯುವದು. ಇಲ್ಲಿ ವಿಷಯಗಳೇ ದೃಶ್ಯ, ಮತ್ತು ಆ ವಿಷಯಗಳನ್ನು ಅರಿಯುತ್ತಿರುವ ಜ್ಞಾನೇಂದ್ರಿಯಗಳೇ ದೃಶ್ಯಗಳಾಗುವವು. ಆ ಬಳಿಕ ಜ್ಞಾನೇಂದ್ರಿಗಳ ಮಂದತ್ವ ಪಟುತ್ವಾದಿಗಳನ್ನು ಅರಿಯುವ ಮನೋವೃತ್ತಿಯೇ, ದೃಕ್ ಎನಿಸುವದು. ಆಗ ಇಂದ್ರಿಯಗಳೇ ದೃಶ್ಯಗಳಾಗುವವು. ಮನಸ್ಸಿನ ಸಂಶಯಾದಿ ದೋಷಗಳನ್ನು ಅರಿಯುವ ಜೀವನು ದೃಕ್ಕೆನಿಸುವನು. ಆದರೆ ಪ್ರತಿನಿತ್ಯ ಸುಷ್ತಿಯಲ್ಲಿ ಜೀವನು ಲಯಿಸುತ್ತಿರಲು, ಕೂಟಸ್ಥಾತ್ಮನೇ ನಿಜವಾದ ದೃಕ್ಕೆನಿಸುವನು. ಆತನು ನಿತ್ಯವಾದ್ದರಿಂದ ಅವನೇ ಪರಮಾತ್ಮನು. ಅವನಕಿಂತಲೂ ಬೇರಾಗಿ ಮತ್ತೊಂದು ದೃಕ್ಕಿಲ್ಲವು. ಅವನು ಎಲ್ಲ ದೃಶ್ಯಗಳಿಗೆ ಬೇರಾಗಿದ್ದು ಒಳಹೊರಗೆಂಬ ಭಿನ್ನ

ಭಾವನೆ ಇಲ್ಲದ ಸಮಸ್ತ ಪ್ರಪಂಚವನ್ನು ಯತ್ನವಿಲ್ಲದೆ ಏಕಕಾಲಕ್ಕೆ ಅರಿಯು ವವನೇ ಪರಮ ಚಿನ್ಮಾತ್ರನೂ, ನಿರ್ಗುಣನೂ, ನಿಸ್ಸೀಮನೂ, ನಿಷ್ಕಲನೂ, ನಿಷ್ಕ್ರಿಯನೂ, ನಿರಂಜನನೂ, ನಿತ್ಯಾನಂದ ಪರಮಾತ್ಮನಾದ ನೀನು ನಿರಾ-ಲಂಬನಾಗಿ ಇರುವಿ ನಿಜವಾಗಿ ನಿನಗಿಂತ ಅನ್ಯದೃಕ್ಕಿಲೆಂದು ತಿಳಿ," ಎಂದು ಸಿದ್ಧಭಾರತಿಯು ಉಪದೇಶಿಸಿದನು

ಪುನಃ ಮಲಿಯನಾಥನು, "ಮುನಿವರ್ರ್ಯಾ, ನೀವು ಈ ಸತ್ಯದೃಕ್ಕಿಗೆ ಇಷ್ಟು ಲಕ್ಷಣಗಳನ್ನು ಏತಕ್ಕೋಸ್ಕರ ಹೇಳಿದಿರಿ "? ಎಂದು ಪ್ರಶ್ನೆ ಮಾಡಿದನು. ಅದಕ್ಕೆ ಸಿದ್ಧಯತಿಯು, ನ್ಯಾಯ, ವೈಶೇಷಿಕ, ಕಣಾದ ಮೊದಲಾದವರ ಮತದಲ್ಲಿ ಬರುವ ಅತಿವ್ಯಾಪ್ತಿ ದೋಷಗಳನ್ನು ನೀತಿಗಳೆಯಲಿಕ್ಕೆ ಇವೆಲ್ಲ ಲಕ್ಷಣಗಳು ವಜ್ರ ಖಡ್ಗ ಪ್ರಾಯವಾಗಿರುವವು, ಎಂದು ಹೇಳಿದನು. ಅದಕ್ಕಾ ವಿಪ್ರನು, ಯತಿವರ್ಯನೇ, ತಮ್ಮ ಬೋಧಪರ ವಾಕ್ಯಾಮೃತದ ಸೇವನೆ ಯಿಂದ ನನ್ನ ಮತಿಯಲ್ಲಿರುವ ಎಲ್ಲ ದೋಷಗಳು ಅಡಗಿ ನಿರ್ಮಲತ್ವದಿಂದ ಧನ್ಯನಾದೆನು," ಎಂದು ಆನಂದೋದ್ಗಾರದಿಂದ "ಮತಿಗೆ ಅತೀತನೇ ಜಯತು ಜಯತು ಶ್ರುತಿ ನಿಕಾಯನೇ ನಿನಗೆ ಜಯವಾಗಲಿ" ಎಂದು ಸ್ತುತಿಸಿ ನಮಿಸಿ ಹೊರಟು ಹೋದನು. ಎಂಬಲ್ಲಿಗೆ ಮಂಗಲ.

ಮಂಗಲ— ಶ್ರೀ ಮಹೇಶನ ಶ್ರೇಷ್ಠ ಛತ್ರಿಯ ।
ಸೋಮಕಾಂತಿ ಯನಾಸ್ಯ ನಾತ್ಮಾ ।
ರಾಮ ದೇವನ ಪಾಂಡುರಂಗನ ಪರಮ ಪಾವನನ ||
ಯೋಮರೂಪಾಚ್ಯುತನವರನಿ ।
ಸ್ಸೀಮ ಜಗದಾಧಾರ ನಿಜಸುಖ ।
ಧಾಮ ಭಕ್ತೋದ್ಧಾರನಂ ನಾನೊಲಿದು ನತನಪ್ಪೆ ||

ಇತಿ ಶ್ರೀ ಸಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ ಲೀಲಾಚರಿತ್ರೆ ಕಲ್ಪದ್ರುಮದೊಳು ಉತ್ತಮಾಧಿಕಾರಿಗಳಿಗೆ ಉಪದೇಶವೆಂಬ ೧೫ ನೇ ಅಧ್ಯಾಯ

— ಸಮಾಪ್ತಿ —

————

॥ ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ॥



# ಸಂಚಾರ ಸಂಭ್ರಮ ಕಾಂಡ

## ಅಧ್ಯಾಯ ೧೬

॥ ಓಂ ತತ್ಸತ್ ॥

ಈ ಅಧ್ಯಾಯದಲ್ಲಿ ಸರ್ವ ಜಗವು ಆತ್ಮ ಪ್ರಕಾಶದಿಂದ ಬೆಳಗುವದೆಂದು ಸಿದ್ಧ ಮಾಡಿದ್ದು.

ತತ್ವಮಸಿ ಮಹಾ ವಾಕ್ಯವು ಸ್ತುತಿಪರ ಮತ್ತು ಉಪಾಸನ ಪರವಲ್ಲವೆಂದು ಹೇಳಿ, ಜೀವ ಬ್ರಹ್ಮೈಕ್ಯವನ್ನು ಪಂಚಲಕ್ಷಣ ಅತಿವ್ಯಾಪ್ತಿ ದೋಷ ನಿವಾರಣ ಪೂರ್ವಕ ಸಿದ್ಧಮಾಡಿ ಹೇಳಿದ್ದು.

ಜ್ಞಾನಿಗೆ ದೇಹಾದಿ ಕರಣೇಂದ್ರಿಯ ವಿಷಯಂಗಳ ಲೇಪವು ಕಿಂಚಿತ್ತಾದರೂ, ಇರುವದಿಲ್ಲವೆಂದು ಸಿದ್ಧಮಾಡಿ ತೋರಿಸಿದ, ಸಿದ್ಧಸಿಗೆ ಕರ್ಮಠರೆಲ್ಲರು ಒಡಂಬಟ್ಟು, ಅವನಿಂದ ಉಪದೇಶ ಹೊಂದಿದ್ದು, ಮತ್ತು ಗುಜ್ಜಮ್ಮನೆಂಬ ಓರ್ವಸ್ತ್ರೀಯಳಿಗೆ ತತ್ವೋಪದೇಶಮಾಡಿದ ವಿಷಯಗಳು ಬಂದಿರುವವು.

ಸ್ತೋತ್ರ— ಪರಮ ಪಾರ್ವತಿ ಗಂಗೆ–ಯೆಂಬರು ।
ನಿರುತ ಕಲಹಂ ಗೈಯುತೊಂದು ದಿನ ।
ಹರನ ತನುವಂ ಕೊಯ್ದು ಭಾಗವ ಮಾಡಿಕೊಳ್ಳುತ್ತಾ ॥
ತೆರಳಿದರವರು ತಮ್ಮ ತಂದೆಗ ।
ಳರಮನೆಗೆ ಬಳಿಕ ಮೀಶನು ।
ತೊರೆದು ಕಾಯವ ನೆನ್ನೊಳೈತರೆ ಯವನೊಳಿರುತಿರ್ದ ॥

ಶಿರದ ಶಶಿ ಯಾಗಸಕೆ ವಸನವು ।
ಕರದ ಪಾತ್ರೆಯು ಸಾಧು ಜನಗಳ ।
ಕರಕೆ ಕಂಠದ ವಿಷವ ನಹಿಗಳು ಕೊಂಡು ವಲ್ಮೀಕಕೆ ॥
ಮೆರೆವ ಸರ್ವಜ್ಞತ್ವವದ ಭಯ ।
ಕರವು ಸಿದ್ಧನ ಹೃದಯ ಕಿಂತವು ।
ತೆ:ಳಿದವವಗೆ ನಮಿಸುತವನೊಳೈಕ್ಯ ಪೊಂದುವೆನು ॥

ಪದ—೧ ರಿಂದ ೬ ರವರೆಗೆ **ಸರ್ವ ಜಗವು ಆತ್ಮ ಪ್ರಕಾಶದಿಂದ ಬೆಳಗುವದು.**

ಬಳಿಕ ಸುಗುಣಿ ಸಿದ್ಧರ ವಾರ್ತೆಯನ್ನು ಕೇಳುತ್ತ ನಗರದ ಬುದ್ಧಿವಂತರೆಲ್ಲರು ಬಂದು, ಸಕ್ಕರೆಗೆ ಇರುವೆಗಳು ಮುತ್ತಿದಂತೆ, ಸಿದ್ಧರ ಸುತ್ತಲೂ ಕುಳಿತರು. ಆಗ ಒಬ್ಬ ಪೂಜಾರಿಯು, ಹರುಷೋದ್ರೇಕದಿಂದ ಮುಂದೆ ಬಂದು, "ಈ ಜಗತ್ತು ಯಾವ ಯಾವ ಪ್ರಕಾಶದಿಂದ ವಿಸ್ತಾರವಾಗಿ ಗೋಚರಿಸುವದು," ಎಂದು ಪ್ರಶ್ನೆ ಮಾಡಿದನು.

ಆಗ ಸಿದ್ಧಯತಿಯು, "ಜಗವು ಹಗಲು ಸೂರ್ಯನ ಪ್ರಕಾಶದಿಂದ ಮತ್ತು ರಾತ್ರಿಯಲ್ಲಿ ದೀವಿಗೆ, ಚಂದ್ರನ ಪ್ರಕಾಶದಿಂದ ಬೆಳಗುವದು. ಇವೆಲ್ಲವುಗಳನ್ನು, ನೇತ್ರವು ಬೆಳಗುವದು. ಆ ನೇತ್ರವನ್ನು ಮುಚ್ಚಲಾಗಿ ಅವನ್ನು ಬುದ್ಧಿ ಬೆಳಗುವದು. ಬಳಿಕ ಅಹಂಕಾರವು ಸಮಾಧಿ ಸುಷುಪ್ತಿಗಳಲ್ಲಿ ಲಯ ಹೊಂದಲು ಆ ಕ್ಷಣದಲ್ಲಿ ಚಿದಾಭಾಸ ಜೀವನು, ಆತ್ಮನಲ್ಲಿ ಐಕ್ಯವಾಗುವನು.

ಆಗ ಒಳಹೊರಗೆಂಬ ಕಲ್ಪನೆ ಏನೂ ಇಲ್ಲದ ಸ್ವಯಂ ಜ್ಯೋತಿ ಪರವಸ್ತುವು ಸರ್ವವನ್ನು ಬೆಳಗುತ್ತಿರುವದು. ಆ ಚಿದಾತ್ಮನೇ ನೀನಿರುವಿ," ನೋಡೆಂದನು. ಆಗ ದ್ವಿಜನು ಮಾನ್ಯರೇ, ಇಂಥ ಬೋಧಪರ ವಾಕ್ಯಗಳನ್ನು ಕೇಳಿ, "ನಾನು ತಮ್ಮಿಂದ ಧನ್ಯನಾದೆನು. ನನ್ನ ತಂದೆ-ತಾಯ್ಗಳು, ನನ್ನ ಸರ್ವ ವಂಶವೇ ಧನ್ಯವಾಯಿತು," ಎಂದು ಪರಮ ಸಂತೋಷದಿಂದ ಸಿದ್ಧರಿಗೆ ಸಾಷ್ಟಾಂಗದಿಂದ ನಮಿಸಿ ಜಯಜಯತೆಂದು ಸ್ತುತಿಸುತ್ತ ಕುಳಿತುಕೊಂಡನು.

ಬಳಿಕ ಚಿದಂಬರ ದೀಕ್ಷಿತನು, ಒಳ್ಳೆಆತುರ ಮನಸುಳ್ಳವನಾಗಿ ಸಿದ್ಧರನ್ನು ಕುರಿತು, "ತತ್ವಮಸಿ ಮಹಾ ವಾಕ್ಯಕ್ಕೆ ನೀವು ಏನೆಂದು ಅರ್ಥ ಮಾಡುವಿರಿ ?" ಎಂದು ಪ್ರಶ್ನೆ ಮಾಡಿದನು.

**ಪದ— ೭-೩೩ ತತ್ವಮಸಿ ಮಹಾವಾಕ್ಯವು ಸ್ತುತಿಪರಾದಿಗಳಲ್ಲವು.**

ಅದಕ್ಕೆ ಸಿದ್ಧರು, "ಶಂಭು ರೂಪನೇ ನೀನಿರುತ್ತಿ ಎಂಬ ಅರ್ಥವನ್ನು ಮಾಡುತ್ತೇವೆ," ಎಂದು ಉತ್ತರ ಹೇಳಿದರು.

ದೀಕ್ಷಿತನು, "ತಾವು ಹೇಳುವದು ಸ್ತುತಿ-ಪರವಾಗುತ್ತದೆ. ಓರ್ವ ಪುರುಷನು, ರಾಜನಿಗೆ ನೀನು ದೇವೇಂದ್ರನಿರುವಿ, ಎನ್ನುವ ವಾಕ್ಯದಂತೆ ನಿಮ್ಮ ಶ್ರುತಿಯಾದರೂ ಕಿಂಚಿತ್ ಜ್ಞಾನರೂಪ ಜೀವನಿಗೆ, ನೀನು ಜ್ಞಾನಘನನಿರುವಿ, ಎಂದು ಹೇಳುವದು, ಸಾದೃಶ್ಯಪರವಲ್ಲದೆ, ಯಥಾರ್ಥವಾಗದು. ಹೀಗಿದ್ದು ಯತೀಶ್ವರನೇ, ನೀನು ಶ್ರುತಿಯ ತತ್ವಾರ್ಥವನ್ನು ತಿಳಿಯದೆ, ಅದು ಬೋಧ ಪರವೆಂದು ಹೇಳುವದು ಉಚಿತವೇ ? ಇದನ್ನು ಜಗತ್ತಿನಲ್ಲಿ ಯಾರಾದರೂ ನಂಬಬಹುದೇ ? ಓರ್ವ ಭಿಕ್ಷುಕನು, ಧನಿಕನನ್ನು ಕುರಿತು, ನೀನು ದೇವೇಂದ್ರನ ಸಮಾನ ಭೋಗಮುಳ್ಳವನು. ಈ ಜಗತ್ತಿನಲ್ಲಿ ನಿನ್ನ ಭೋಗಕ್ಕೆ ಸಮಾನರು ಮತ್ತಾರನ್ನೂ ಕಾಣೆನು," ಎಂದು ಸ್ತುತಿ ಮಾಡುತ್ತಾನೆ. ಇದರಿಂದ ಆ ಧನಿಕನು ದೇವೇಂದ್ರನಾಗಬಲ್ಲನೇ ? ಇದರಂತೆ ಆ ಮಹಾ ವಾಕ್ಯವು, ನೀನು ವ್ಯಾಪಕನು, ನಿತ್ಯ ಮುಕ್ತ ಬ್ರಹ್ಮನು, ಎಂದು ಹೀಗೆ ವರ್ಣನೆ ಮಾಡಿದರೆ ಜೀವನು ಎಂದಾದರೂ ಬ್ರಹ್ಮನಾಗುವದುಂಟೇ ? ನೀವು ಹೇಳುವ ಮಹಾ ವಾಕ್ಯದ ಅರ್ಥವು ಸ್ತುತಿಪರವಾಗಿರುತ್ತದೆ ಎಂದು ನುಡಿದನು.

ಆಗ ಸಿದ್ಧನು, 'ದೀಕ್ಷಿತರೇ, ನೀವು ಹೀಗೆ ನುಡಿಯುವದು ಸರಿಯಲ್ಲಾ ಏಕೆಂದರೆ ದರಿದ್ರನಾದ ಭಿಕ್ಷುಕನು, ಧನಿಕನಿಂದ ಧನವನ್ನು ಪಡೆಯಬೇಕು ಎಂಬ ಆಶೆಯಿಂದ, ನೀವು ಹೇಳಿದಂತೆ ನುತಿಸಬಹುದು. ಆದರೆ ವೇದ ರಹಸ್ಯ ಪ್ರತಿಪಾದನೆ ಮಾಡುವ, ಈ ಮಹಾ ವಾಕ್ಯವು ಜೀವನಿಂದ ಏನೊಂ-ದನ್ನೂ ಬೇಡುವ ಅಪೇಕ್ಷೆ ಇದೆ, ಜೀವನ ದುಃಖವನ್ನು ದೂರ ಮಾಡುವ ಕನಿಕರದಿಂದ ಬೋಧಿಸುತ್ತದೆ. ಇದಕ್ಕೆ ನುತಿಪರವೆಂದು ನೀವು ಹೇಳುವದು ಅನುಚಿತವು. ಇದನ್ನು ನೀವು ಪ್ರೇಮದಿಂದ ತಿಳಿದು ವಿಚಾರಿಸಿರಿ. ಕರ್ಮ, ಗುಣ, ವರ್ಣಾಶ್ರಮಗಳು ಕರ್ಮದಿಂದ ಜನಿಸಿದ ದೇಹಕ್ಕಲ್ಲನೆ ಸಾಕ್ಷಿಕನಾದ ನಿರ್ಮಲಾತ್ಮನಿಗೆ ಅವು ಒಮ್ಮೆಯಾದರೂ ಸೋಂಕ ಲಾರವು. ಆದ್ದರಿಂದ ನಿರ್ಮಲವಾದ ಮಹಾವಾಕ್ಯವದು. ಕರ್ಮಪರವಲ್ಲ. ಹಾಗಿದ್ದರೆ ಜಗತ್ತಿನಲ್ಲಿ ಜ್ಞಾನಿಗಳು, ಅದನ್ನು ಅರಿತು ನಿತ್ಯ ವರ್ಣಾಶ್ರಮಗಳಿಗೆ ಮನಸೋತು, ಕರ್ಮವನ್ನೇ ಆಚರಿಸಬಹುದಾಗಿತ್ತು. ವಿಚಾರಿಸಿ ನೋಡಲಾಗಿ ಅದು ಹಾಗಿಲ್ಲವು. ಆದಕಾರಣ ಮಹಾ ವಾಕ್ಯವು ಸ್ತುತಿಪರವಲ್ಲ. ಮತ್ತು ಕರ್ಮಪರವೂ ಅಲ್ಲ," ಎಂದು ಬೊಧಿಸಿದರು. ಈ ಪ್ರಕಾರ ಪಾರ ಮಾರ್ಥದ ರಹಸ್ಯವನ್ನು ಸೌಮ್ಯದಿಂದ ತಿಳಿಸಲು ದೀಕ್ಷಿತನು, ಒಪ್ಪಿಕೊಂಡು ಸಂತೋಷಹೊಂದಿ ಸುಮ್ಮನಾಗಿ ಕುಳಿತುಕೊಂಡನು.

ಮತ್ತೆ ರಾಮದೀಕ್ಷಿತನೆಂಬುವನು, ಮುಂದೆ ಬಂದು, "ಶಾಂತಮಹಿ-ಮರೆ, ತಾವು ಹಿಂದೆ ಹೇಳಿದ ಮಹಾ ವಾಕ್ಯದಲ್ಲಿ ನನಗೊಂದು ಸಂಶಯ ಬಂದಿರುವದು. ಅದೇನಂದರೆ ನಮ್ಮ ಪೂರ್ವಜರು ಮಣ್ಣು, ಕಲ್ಲು, ಕಟ್ಟಿಗಿ, ತಾಮ್ರ, ಹಿತ್ತಾಳಿ, ಬೆಳ್ಳಿ ಮೊದಲಾದವುಗಳಲ್ಲಿ ಯಾವುದಾದರೊಂದು ವಸ್ತುವಿ ನಿಂದ, ನಾನಾಪ್ರಕಾರದ ಮೂರ್ತಿಗಳನ್ನು ಮಾಡಿಸಿ, ಅವುಗಳಿಗೆ ರಾಮ, ಕೃಷ್ಣ, ಗಣಪತಿ, ಪಾರ್ವತಿ ಎಂದು ಅನೇಕ ಹೆಸರುಗಳಿಂದ ಪೂಜಿಸುತ್ತಾರೆ. ಮತ್ತು ದೇವರೆಂದು ಭಜಿಸುತ್ತಾರೆ. ಅದಕ್ಕೆ ಉಪಾಸನ ಪರವಾದ ವೇದ ವಾಕ್ಯಗಳ ಪ್ರಮಾಣ ಕೊಡುತ್ತಾರೆ. ಉಪಾಸನಕ್ಕೆ ಮುಖ್ಯವಾಗಿ ನಂಬಿ ಗೆಯೇ ಕಾರಣವು. ಅಲ್ಲಿ ವಿಚಾರಕ್ಕೆ ಆಸ್ಪದವೇ ಇಲ್ಲ ಇಂಥ ವೇದ ವಾಕ್ಯಗಳು ದೇವರಲ್ಲದ ಮೂರ್ತಿಗಳಲ್ಲಿ ದೇವ ಬುದ್ಧಿಯನ್ನು ಹುಟ್ಟಿಸುವಂತೆ ಈ ಜ್ಞಾನ

ಕಾಂಡದ, ಮಹಾ ವಾಕ್ಯಗಳಾದರೂ, ಬ್ರಹ್ಮನಲ್ಲದ ಜೀವನಲ್ಲಿ, ಬ್ರಹ್ಮ ಬುದ್ಧಿಯನ್ನುಂಟು ಮಾಡುತ್ತಿರಬಹುದು. ಶಿಲಾದಿ ಮೂರ್ತಿಗಳು ಹೇಗೆ ದೇವರಾಗಲಾರವೋ, ಹಾಗೆಯೇ ಜೀವನು ಕೂಡಾ ಬ್ರಹ್ಮನಾಗಲಾರನು. ಅದು ಕಾರಣ ಜೀವನದಲ್ಲಿ ಬ್ರಹ್ಮ ಬುದ್ಧಿಯನ್ನುಂಟು ಮಾಡುವಂಥ ಆ ಮಹಾ ವಾಕ್ಯವು, ಉಪಾಸನಪರವಾಗಿರಬಹುದೆಂದು ಸಂಶಯವು ಬಂದಿರುವದು- ಅದನ್ನು ಪರಿಹರಿಸಬೇಕು ದೇವಾ," ಎಂದು ಬಿನ್ನಯಿಸಿಕೊಂಡನು.

## ಮಹಾ ವಾಕ್ಯವು ಉಪಾಸನಪರವಲ್ಲ

ಸಿದ್ಧರು "ರಾಮದೀಕ್ಷಿತರೇ, ನೀವು ಹೀಗೆ ಹೇಳುವದು ಸರಿಯಾದುದಲ್ಲ. ಯಾಕಂದರೆ ಜ್ಞಾನಿಗಳಿಗೆ ಮಾನಸಿಕ ಕರ್ಮಗಗಳಿಲ್ಲ. ಮಹಾ ವಾಕ್ಯದ ಲಕ್ಷಾರ್ಥವನ್ನು ವಿಚಾರಿಸಲಾಗಿ ಅದು ಉಪಾಸನಪರವಾಗಿರದೆ ಬೋಧಪರ ವಾಗಿರುವದು" ಇದಕ್ಕೆ ಶ್ರುತಿ ಪ್ರಮಾಣ.

ಶ್ರುತಿ— ನಕರ್ಮಣಾ, ನಪ್ರಜಯಾ ನಧನೇನ ನಬಹುನಾಶ್ರು ತೇನ
ತ್ಯಾಗೇನೈಕ್ಯನು ಅಮೃತತ್ವ ಮಾನಶುಃ ||

ಹೀಗೆ ಶ್ರುತಿ ಪ್ರಮಾಣವಿರಲು ಇದಕ್ಕೆ ನೀನು ತ್ಯಾಗ ಪರವೆಂದು ಹೇಳಿದರೆ ಜ್ಞಾನ ಪರ ಶ್ರುತಿಯು ಹೀಗೆ ಹೇಳುತ್ತದೆ.

"ಜ್ಞಾನಾದೇವತು ಕೈವಲ್ಯಂ ನಾನ್ಯಃ ಪಂಥಾ ಅಯನಾಯ ವಿದ್ಯತೆ" ಎಂದು ಪ್ರತಿಪಾದನ ಮಾಡುತ್ತಿರಲಾಗಿ ಅದು ಉಪಾಸನಪರವಲ್ಲ. ಉಪಾಸನಪರ ವಾಕ್ಯಗಳು. ವಿವೇಕವಿಲ್ಲದ ಜನರನ್ನು ಕುರಿತು ಮೂರ್ತಿಗಳಲ್ಲಿ ಶ್ರದ್ಧಾ ಮೂಲಕ ದೇವ ಬುದ್ಧಿಯನ್ನುಂಟು ಮಾಡುತ್ತವೆ. ಉಪಾಸನೆ ಮಾಡುವವರಿಗೆ ಕಾಮ್ಯ ಫಲವು ಸಿದ್ಧಿಸುವದುಂಟು. ಮೂರ್ತಿಗಳು ಪ್ರತ್ಯಕ್ಷವಾಗಿ ದೇವರಿಲ್ಲದಿದ್ದರೂ 'ನಿನಗೆ ಕಲ್ಯಾಣ ಮಾಡುವದೆಂದು' ಉಪಾಸನಪರ ವಾಕ್ಯಗಳು ಬಲತ್ಕಾರದಿಂದ ದೇವತಾ ಬುದ್ಧಿಯನ್ನು ಉಂಟುಮಾಡುತ್ತವೆ. ಆದರೆ ಜ್ಞಾನಪರ ಮಹಾವಾಕ್ಯವು ಒಂದರಲ್ಲಿ ಇನ್ನೊಂದನ್ನು ಹುಟ್ಟಿಸುವದಿಲ್ಲ. ಆದರೆ ಬ್ರಹ್ಮನಾದ ಜೀವನಿಗೇನೇ, "ನೀನು ಬ್ರಹ್ಮನಿದ್ದಿ' ಎಂದು ಹೇಳುತ್ತದೆ. ಅಂದರೆ ತಾನು ಬ್ರಹ್ಮನಿದ್ದರೂ 'ಬ್ರಹ್ಮನಲ್ಲ ಜೀವನು ಸಂಸಾರಿ ದುಃಖಿ' ಎಂದು ಅವಿವೇಕದಿಂದ ಭಾವಿಸಿಕೊಂಡಿದ್ದಾನೆ, ಇಂಥ

ಜೀವನಿಗೆ ವಿವೇಕವನ್ನುಂಟುಮಾಡಿಸಿ ಅವನ ಜೀವ ಭಾವವನ್ನು ಕಳೆದು ಬ್ರಹ್ಮ ಭಾವವನ್ನುಂಟುಮಾಡುತ್ತದೆ. ಈ ಮಹಾ ವಾಕ್ಯವೂ ಕೂಡಾ ಉಪಾಸನ ಪರವಾದರೆ, ವೇದದಲ್ಲಿ ಜ್ಞಾನಕಾಂಡವಿಲ್ಲದಂತಾದೀತು. ಅದು ಕಾರಣ ಮಹಾವಾಕ್ಯವು ಪುರುಷ ತಂತ್ರವಾದ ಉಪಾಸನಪರವಾಗದೆ ಇದ್ದದ್ದನ್ನು ಇದ್ದಂತೆ ಹೇಳುವ ವಸ್ತು ತಂತ್ರವಾಗಿದೆ. ನೀನು ಬೇಕಾದರೆ ಅಹಂಗ್ರಹೋಪಾಸನೆ [ಸಗುಣೋಪಾಸನೆ] ಯನ್ನು ಮಾಡು. ಅಂತಃಕರಣವೇ ದೇವಾಲಯವು ಮತ್ತು ಬ್ರಹ್ಮವೇ ದೈವತ' ವೆಂದು ಸತ್ಯವಾಗಿ ತಿಳಿದು ಉಪಾಸನೆ ಮಾಡು. ಅಲ್ಲಿಯೂ ಉಪಾಸ್ಯೋಪಾಸಕತ್ವದ ಅಹಂ ತಿಳಿದು ತಾನೇ ಬ್ರಹ್ಮವಾಗುವನು. ಅದುಕಾರಣ ಜ್ಞಾನಕಾಂಡವು ನಿರ್ಗುಣವಲ್ಲದೆ ಸಗುಣಪರವಲ್ಲ. ಜ್ಞಾನವಿಲ್ಲದೆ ಕಡುತರ ಅವಿದ್ಯೆಯು ನಷ್ಟವಾಗಲಾರದು" ಎಂದು ಉಪದೇಶಿಸಿದನು. ಇದೆಲ್ಲವನ್ನು ಕೇಳಿದ ಆ ದ್ವಿಜನು ಮನದಲ್ಲಿ ಸಂತೋಷವುಳ್ಳವನಾಗಿ ಸಿದ್ಧರಿಗೆ ನಮಿಸಿ ಕುಳಿತುಕೊಂಡನು.

ಅಷ್ಟರಲ್ಲಿ ತಿರಕಂಭಟ್ಟನೆಂಬ ನೈಯಾಯಿಕನು ಮುಂದೆ ಬಂದು "ನೀವು ಬ್ರಹ್ಮ ಮತ್ತು ಆತ್ಮರುಗಳು ಲಕ್ಷಣಗಳನ್ನು ಹೇಗೆ ಕಲ್ಪಿಸುವಿರಿ ?" ಎಂದು ಕೇಳಿದನು.

## ಬ್ರಹ್ಮಾತ್ಮರ ಸದಾದಿ ಪಂಚಲಕ್ಷಣಗಳು

ಆಗ ಕರುಣಾಳು ಶಾಂತ ಸಿದ್ಧರು "ಭಟ್ಟರೇ, ಶಾಂತರೀತಿಯಿಂದ ಕೇಳಿರಿ. ಮಾಯೆ, ಅವಿದ್ಯೆಗಳೆಂಬ ಭಾವಕಲ್ಪಿತವಾದ ಉಪಾದಿಗಳನ್ನು ಕಳೆದುಳಿದ ಕೀಳಲ್ಲದ ಚೊಕ್ಕ, ವ್ಯಾಪಕ, ನಿತ್ಯ, ಅಪಾರ ಮತ್ತು ಚಿತ್ಸುಖಾದಿ ಗಳಿಂದ ಕೂಡಿದ, ನಾನತ್ವ ರಹಿತ, ಸರ್ವಾಧಾರ, ಮತಿ ವಿದೂರ ಈ ಮೊದ ಲಾದ ಲಕ್ಷಣಗಳಿಂದ ಕೂಡಿರುವ ಬ್ರಹ್ಮಾತ್ಮವಸ್ತುವನ್ನು ಸದ್ಗುರುಗಳೂ, ವೇದಾಂತ ಸಮೂಹವೂ ಹಾಕಿಕೊಟ್ಟ ಶ್ರೇಷ್ಠವಾದ ಜ್ಞಾನಪಥದಲ್ಲಿ ನಾವು ಕಾಣಬಹುದು" ಎಂದರು.

ನೈಯಾಯಿಕನಾದ ತಿರಕಂಭಟ್ಟನು, ಶ್ರೀ ಸಮರ್ಥರ ಮುಖದಿಂದ ಪರಾತ್ಪರ ಬೋಧಪರ ವಾಕ್ಯಗಳನ್ನು ಕೇಳಿ, ಹರುಷೋದ್ಗಾರದಿಂದ ಮತ್ತೆ

ಪ್ರಶ್ನೆ ಮಾಡುತ್ತಾನೆ. "ಬ್ರಹ್ಮಕ್ಕೆ ಪರಮಾನಂದ ಲಕ್ಷಣವೊಂದೇ ಮುಖ್ಯ ವಾಗಿರಲಿಕ್ಕೆ, ಮತ್ತೆ ನಿತ್ಯಾದಿ ಲಕ್ಷಣಗಳನ್ನು ಹೇಳುವ ಕಾರಣವೇನು ?"

ಸಿದ್ಧ ಭಾರತಿಯು, "ಬ್ರಹ್ಮಕ್ಕೆ ಸುಖವೆಂಬ ಒಂದೇ ಲಕ್ಷಣವನ್ನು ಹೇಳಿ ದರೆ, ಸಕಲ ವಿಷಯಗಳಲ್ಲಿ ಕಿಂಚಿತ್ತಾನಂದವು ಮತ್ತು ನಿದ್ರೆಯಲ್ಲಿ ನಿರ್ವಿಷಯ ದಾನಂದವು ಕಂಡು ಬರುವದು. ಅದರಿಂದ ಅತಿವ್ಯಾಪ್ತಿ ದೋಷವು ಬರು ವದು. (ಒಂದು ವಸ್ತುವಿನಲ್ಲಿದ್ದ ಲಕ್ಷಣವು, ಮತ್ತೊಂದು ವಸ್ತುವಿನಲ್ಲಿ ಕಂಡು ಬಂದರೆ, ಅದಕ್ಕೆ ಅತಿವ್ಯಾಪ್ತಿ ದೋಷವೆಂದು ಹೇಳುವರು. ಉದಾಹರಣೆ— ಹಾಲಿಗೆ ಶುಭ್ರ, ದ್ರವ ಮತ್ತು ಮಧುರ ಹೀಗೆ ಮೂರು ಲಕ್ಷಣಗಳುಂಟು. ಅವುಗಳಲ್ಲಿ ಶುಭ್ರ ಲಕ್ಷಣ ಒಂದನ್ನೇ ಹೇಳಿದರೆ, ಆ ಲಕ್ಷಣವು ಸುಣ್ಣದ ಗೋಡೆ ಅಥವಾ ಬಿಳಿ ಕಾಗದಗಳಲ್ಲಿ ಕಂಡು ಬರುವದು. ಇದು ಅತಿವ್ಯಾಪ್ತಿ ದೋಷವು. ಇನ್ನು ಶುಭ್ರ, ದ್ರವ ಎರಡನೇ ಲಕ್ಷಣಗಳನ್ನು ಹೇಳಿದರೆ ಆ ಲಕ್ಷಣಗಳು ಸುಣ್ಣದ ನೀರು ಇಲ್ಲವೆ ಕಳ್ಳಿ, ಎಕ್ಕಿ ಹಾಲುಗಳಲ್ಲಿ ಕಂಡು ಬರು ವವು. ಮಧುರ, ದ್ರವ ಇವೆರಡನ್ನೇ ಹೇಳಿದರೆ ಬೆಲ್ಲದ ನೀರಿನಲ್ಲಿ ಕಂಡು ಬರುವವು. ಮಧುರ, ಶುಭ್ರ ಎರಡನ್ನು ಹೇಳಿದರೆ ಅವು ಕಲ್ಲುಸಕ್ಕರಿಯಲ್ಲಿ ತೋರುತ್ತಿರುವವು ಮೂರೂ ಲಕ್ಷಣಗಳನ್ನು ಹೇಳಿದರೆ, ಆ ಲಕ್ಷಣಗಳು ಬೇರೆ ವಸ್ತುಗಳಿಗೆ ಹೋಗದೆ, ನೇರವಾಗಿ ಹಾಲಿನಲ್ಲಿಯೇ ತೋರುತ್ತವೆ) ಇಂಥ ಅತಿವ್ಯಾಪ್ತಿ ದೋಷ ಕಳೆಯುವದಕ್ಕಾಗಿ, ಸುಖ ಲಕ್ಷಣದೊಡನೆ ನಿತ್ಯಲಕ್ಷಣ ಹೇಳಲಾಗಿ, ಅದು ನಿರ್ದೋಷವು. ಇನ್ನು ಪರಬ್ರಹ್ಮಕ್ಕೆ ನಿತ್ಯಲಕ್ಷಣ ಒಂದನ್ನೇ ಹೇಳಲು, ನ್ಯಾಯ ಮತದವರು ಜಡದಲ್ಲಿ ನಿತ್ಯಲಕ್ಷಣಗಳು ಆತ್ಮನಿ ಗಿರುವಂತೆ ಆಕಾಶ, ಕಾಲ ಮೊದಲಾದವುಗಳಿಗೂ ಇರುವವೆಂದು ಹೇಳುವರು. ಇದೇ ಅತಿವಾಪ್ತಿ ದೋಷವು ಇದನ್ನು ಕಳೆಯುವದಕ್ಕಾಗಿ ಚಿತ್ತ ಲಕ್ಷಣ ಹೇಳಲು ಅದು ನಿರ್ದೋಷವು ಮತ್ತು ಬ್ರಹ್ಮಕ್ಕೆ ನಿತ್ಯ ಲಕ್ಷಣದೊಡನೆ, ಪ್ರಕಾಶ(ಚಿತ್ತು) ಲಕ್ಷಣವನ್ನು ಹೇಳಿದರೆ ನಿಮ್ಮ ಮತದಲ್ಲಿ ಸೂರ್ಯ, ಅಗ್ನಿ ಮೊದಲಾದವರಲ್ಲಿ ಪ್ರಕಾಶವು ಕ್ಷಣಿಕವಿರುವಂತೆ ಆತ್ಮನು ಪರಿಚ್ಛಿನ್ನ ಪ್ರಕಾಶ ವುಳ್ಳವನೆಂಬ ಅತಿವ್ಯಾಪ್ತಿ ದೋಷ ಬರುವದು. ಈ ದೋಷ ಕಳೆಯುವದಕ್ಕಾಗಿ ಪ್ರಕಾಶ ಲಕ್ಷಣದೊಡನೆ ವ್ಯಾಪಕ ಲಕ್ಷಣ ಹೇಳಿದರೆ, ಅದು ನಿರ್ದೋಷವು

ಇನ್ನು ವ್ಯಾಪಕತ್ವವನ್ನು ಬ್ರಹ್ಮಕ್ಕೆ ಹೇಳಿದರೆ ಸಾಂಖ್ಯರು, ವ್ಯಾಪಕತ್ವವನ್ನು ಪ್ರಕೃತಿಯಲ್ಲಿ ಮತ್ತು ನಭದಲ್ಲಿ ಇದೇ ಲಕ್ಷಣವನ್ನು ಹೇಳುವದರಿಂದ ಅಲ್ಲಿಯೂ ಅತಿ ವ್ಯಾಪ್ತಿದೋಷ ಬರುತ್ತದೆಂದು ತಿಳಿದು ಈ ದೋಷ ನಿವಾರಣೆಗಾಗಿ ವ್ಯಾಪಕದೊಡನೆ ಆಧಾರ ಲಕ್ಷಣ ಹೇಳಿದರೆ ನಿರ್ದೋಷವು. ಇನ್ನು ಬ್ರಹ್ಮವೇ ಸರ್ವಕ್ಕೂ ಆಧಾರವೆಂದು ಹೇಳಿದರೆ, ನೇಣಿನ ಆಧಾರದಲ್ಲಿ ವಿಷಮ ಪ್ರತಿಭಾಸಿಕ ಸರ್ಪ ಮೊದಲಾದವುಗಳು ತೋರುತ್ತವೆ. ಹೇಗೆ ಪುನಃ ಅತಿ ವ್ಯಾಪ್ತಿದೋಷ ಬರುವದು. ಅದಕ್ಕಾಗಿ ಈ ದೋಷ ಕಳೆಯಲು ಆಧಾರ ಲಕ್ಷಣದೊಡನೆ ಬ್ರಹ್ಮನಿಗೆ ಅಪಾರ ಲಕ್ಷಣ ಹೇಳಲಾಗಿದೆ.

ಸಾದು ನಿಶ್ಚಲದಾಸರು, ಬ್ರಹ್ಮವನ್ನು ಕುರಿತು ಇದೇ ರೀತಿ ಹೇಳಿರುವ ಲಕ್ಷಣಗಳನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

"ಜೋ ಸುಖ ನಿತ್ಯ ಪ್ರಕಾಶ ವಿಭು ನಾಮರೂಪ
ಆಧಾರ | ಮತಿ ನಲಖ್ಯೈ ಜಿಹಿ ಮತಿ ಲಖ್ಯೈ
ಸೋ ಮೈ ಶುದ್ಧ ಅಪಾರ"

ನೈಯಾಯಿಕರು, "ಆನಂದವು ಆತ್ಮನ ಗಣವೆಂದು ಹೇಳುವರು. ಆದರೆ ವಸ್ತುವಿನಲ್ಲಿ ಗುಣವು ಆಗಂತುಕವು. ರವಿಯ ಕಾಂತಿಯು, ಗುಣವಾಗಿರದೆ ಆತನ ಲಕ್ಷಣವೇ ಆಗಿರುವಂತೆ, ಆನಂದವು ಆತ್ಮನ ಲಕ್ಷಣವೇ ಹೊರತು, ಆತನ ಪ್ರಾಪ್ತಗುಣವಲ್ಲ" ವೆಂದು ಶ್ರುತಿ, ಯುಕ್ತಿ ಪ್ರಮಾಣಗಳಿಂದ ನೈಯಾಯಿಕರು ಒಡಂಬಡುವಂತೆ ಬ್ರಹ್ಮಜ್ಞಾನಿಯಾದ ಸಿದ್ಧಭಾರತಿಯು ಬೋಧಿಸಿದನು. ಅಲ್ಲಿ ನೆರೆದ ಎಲ್ಲ ಪಂಡಿತರು ಸಂತೋಷ ಹೊಂದಿ ಸಿದ್ಧರನ್ನು ಅಪ್ಪಿಕೊಂಡು ನಮಿಸಿದರು. ಪುನಃ ತಿಲಕಂಭಟ್ಟನು, ಸಂಶಯಗೊಂಡು, "ಯತಿಗಳೇ, ಬ್ರಹ್ಮವು, ಮತಿಗೆ ಅಗೋಚರವೆಂದಮೇಲೆ ಮತಿಯ ದುಃಖದ ನಿವೃತ್ತಿ ಎಂತಾಗುವದು ?" ಎಂದನು.

ಅದಕ್ಕೆ ಸಿದ್ಧಮತಿಯು, "ಭಟ್ಟರೇ ಕೇಳಿರಿ, ಬ್ರಹ್ಮವು ಮಲಿನ ಬುದ್ಧಿಗೆ ಅಗೋಚರವೇ ಹೌದು, ಆದರೆ ತಿಳಿಯಾದ (ಪರಿಶುದ್ಧ) ಬುದ್ಧಿಗೆ ಮಾತ್ರ ಅದು ವೇದ್ಯವಾಗುವದು. ತಾನು ಪರಿಶುದ್ಧ ಬುದ್ಧಿಯಿಂದ ನಿತ್ಯವು ತತ್ತ್ವಂ ಪದಗಳ ಪರಿಶೋಧನೆ ಮಾಡುತ್ತ ಬ್ರಹ್ಮಾತ್ಮೈಕ್ಯ ಭಾವದಲ್ಲಿ

ಮತಿಯನ್ನು ಸ್ಥಿರಗೊಳಿಸಿ ಲಯಿಸಲು, ದುಃಖವು ದೂರಾಗುವದು," ಎಂದನು.

ಆಗ ತಿರಕಂಭಟ್ಟನು ಸದ್ಗುರುವಿನ ಬೋಧಾಮೃತದಿಂದ ಸಂತುಷ್ಟನಾಗಿ, "ಗುರುವೇ, ನೀನು ಹರಿಯ ಅವತಾರನು, ಇದರಲ್ಲಿ ತಿಲಮಾತ್ರವೂ ಸಂಶಯವಿಲ್ಲ," ಎಂದು ಅವನ ಪಾದಕ್ಕೆರಗಿದನು, ಮತ್ತು "ಸದ್ಗುರುವೇ, ನಿನ್ನ ಬೋಧೆಯು ನನ್ನ ದ್ವೈತಮತಿಯನ್ನು ನುಂಗಿತು. ನಾನು ಪರಿಶುದ್ಧನಾದೆನು. ನಿಮ್ಮಿಂದ ಧನ್ಯನಾದೆನು," ಎಂದು ನಮಿಸುತ್ತ ಜಯಜಯಕಾರ ಮಾಡಿದನು. ಅಷ್ಟರಲ್ಲಿ ಓರ್ವ ವಿಪ್ರನು ಭಯ-ಭಕ್ತಿಯಿಂದ ದೇವರಿಗೆ ನೈವೇದ್ಯವನ್ನು ತಂದನು. ಅವನು ಈ ನೈವೇದ್ಯವನ್ನು ಈ ಯತಿವರಗೆ ಅರ್ಪಿಸುವದೇ ಯೋಗ್ಯವೆಂದು ತಿಳಿದು, ಅವನ ಮುಂದಿಟ್ಟು ನಮಿಸಿ ಗಮಿಸಿದನು. ಸಿದ್ಧನು ಅದನ್ನು ಭುಂಜಿಸಿ ವಿಶ್ರಾಂತಿ ಹೊಂದುವಷ್ಟರಲ್ಲಿ ಗೋವಿಂದಭಟ್ಟನೆಂಬೋರ್ವ ವಿಪ್ರನು ಬಂದು, "ಒಡೆಯರೆ, ತಾವು ತಮ್ಮ ಹಸಿವೆಯನ್ನು ಹಿಂಗಿಸಿಕೊಳ್ಳಲಿಕ್ಕೆ ಅನ್ನವನ್ನು ಭುಂಜಿಸಿದಿರಿ ಆದರೆ ನೀವು ಹೇಳುತ್ತೀರಿ, 'ಆತ್ಮನು ಪರಮ ನಿತ್ಯಾನಂದಭರಿತನಿರುವನೆಂದು, ಈಗ ನಿಮ್ಮ ಕಿಂಚಿತ್ ಕ್ಷುಧೆಯ ದುಃಖವನ್ನು, ನಿಮ್ಮ ಬ್ರಹ್ಮಜ್ಞಾನವು ಕಳೆಯದಿರಲು, ಅದು ಜನ್ಮಾದಿ ದುಃಖವನ್ನು, ಎಂತು ಕಳೆಯಬಲ್ಲದು ? ಇಂಥ ನಿಮ್ಮ ಬ್ರಹ್ಮಜ್ಞಾನವನ್ನು ನಂಬುವದರಿಂದ ಏನು ಪ್ರಯೋಜನ" ಎಂದು ಕೇಳಿದನು.

**ಪದ— ೩೪–೪೩ ಜ್ಞಾನಿಗೆ ದೇಹ ಕರಣಾದಿ ವಿಷಯಗಳ ಲೇಪನವಿಲ್ಲ**

ಅದನ್ನು ಸಿದ್ಧಭಾರತಿಯು ಕೇಳಿ, ವಿಪ್ರನಿಗೆ ಕೇಳುತ್ತಾನೆ, ನೀನು ಆತನ ಚೈತನ್ಯವನ್ನು ಲಕ್ಷಿಸಿ ಹೀಗೆ ಕೇಳುವಿಯೋ ? ಇಲ್ಲವೆ ಪಂಚ ಭೂತತತ್ವಮಯ ದೇಹವನ್ನು ಲಕ್ಷಿಸಿ ಕೇಳುವಿಯೋ ? ಇವುಗಳಲ್ಲಿ ಮೊದಲಿನ ಪಕ್ಷವನ್ನು ನೀನು ಕೇಳಿದರೆ ಅದು ಸಿದ್ಧವಾಗಲಾರದು. ಯಾಕೆಂದರೆ ಆತ್ಮನು ಷಡೂರ್ಮಿ [ಜನಿ, ಮರಣ, ಹಸಿವೆ, ತೃಷೆ, ಶೋಕ, ಮೋಹ] ಗಳಿಗೂ, ಅನ್ನಮಯ ಮೊದಲಾದ ಪಂಚಕೋಶಗಳಿಗೂ, ಸಾಕ್ಷಿಕನಾಗಿರುವನು. ಆದ್ದರಿಂದ ವೃದ್ಧ ವಿಪ್ರನೇ, ನಿನ್ನ ಮೊದಲಿನ ಪಕ್ಷವು ಸರಿಹೋಗಲಿಲ್ಲ. ಇನ್ನು ಎರಡನೆಯ

ಪಕ್ಷ ಒಪ್ಪಿದರೆ ಈ ಸ್ಥೂಲ ದೇಹವು ಪ್ರಾರಬ್ಧದ ಆಧೀನವಾಗಿರುವದು. ಹಸಿವು, ತೃಷೆ, ಸುಖ, ದುಃಖ, ನಿದ್ರೆ ವಿಷಮ ರೋಗಾದಿಗಳ ರೂಪದಿಂದ, ಈ ದೇಹವು ಪ್ರಾರಬ್ಧವಿರುವತನಕ ನಟಿಸಿ ನಂತರ ನಶಿಸುವದು. ವಿಚಾರಿಸಿದರೆ **ಆತ್ಮ–ದೇಹಗಳ ಬೆಸುಗೆ ಮೇಘ ನಭದಂತೆ ಇರುವದು.** ಇದೊತ್ತಟ್ಟಿಗಿರಲಿ, ಜ್ಞಾನವನ್ನು ಸಾಧಿಸುವ ವೈರಾಗ್ಯಶೀಲನಾದ ಸಾಧಕನಿಗೆ ದೈಹಿಕ [ದೇಹಕ್ಕೆ ಸಂಬಂಧ] ಬಾಧೆ ಇಲ್ಲೆಂದ ಮೇಲೆ ಸ್ವರೂಪ ತಿಳಿದ ಜ್ಞಾನಿಯು ದುಃಖದಲ್ಲಿ ಎಂದಿಗೂ ಸಿಲುಕಲಾರನು. ತಾನಾಗಿ ಒದಗಿ ಬಂದ ಪ್ರಾರಬ್ಧ ಸುಖ ದುಃಖಕ್ಕೆ, ಚಿಂತಿಸದೆ ನೀರೊಳಗಿರುವ ಕಮಲಪತ್ರವು ತೊಯ್ಯದಂತೆ, ಜ್ಞಾನಿಯು ನಿರ್ಲಿಪ್ತನಾಗಿರುವನು," ಎಂದನು.

ಆಗ ಭಟ್ಟನು, ವೇದಾಂತ.........ಸಾರ ಭೂತ ಸದ್ಗುರುವಿನ ಬೋಧ ಪರ ಸುವಾಕ್ಯಗಳನ್ನು ಕೇಳಿ, "ಗುರುವೇ, ತಮ್ಮ ಕೃಪೆ ಪಡೆಯದೆ, ಜಡಮತಿ ಯಾದ ನನಗೆ, ಈ ಇಂಗಿತವು ಹೇಗೆ ತಿಳಿದೀತು" ಎಂದು ನಮಿಸುತ್ತ ಸುಮ್ಮನಾದನು.

ಈ ರೀತಿ ಸಿದ್ಧಭಾರತಿಯು, ಮಾಪುತನು ಮದಕ್ಕೆ ಬಂದಿರುವ ಮದ್ದಾನೆಯನ್ನು ತನ್ನ ಅಂಕುಶದಿಂದ ವಶಪಡಿಸಿಕೊಳ್ಳುವಂತೆ ಅಲ್ಲಿ ಕೂಡಿ ರುವ ನೈಯಾಯಿಕ ಮೊದಲಾದ ಎಲ್ಲ ವಾದಿಗಳನ್ನು ಜ್ಞಾನ ಚತುರತೆಯಿಂದ ತನ್ನ ವಶಪಡಿಸಿಕೊಂಡನು. ಆಗ ಅವರೆಲ್ಲರು ಸಂತೋಷದಿಂದ ತಮ್ಮ ದ್ವೈತ ಭಾವವನ್ನು ತೊರೆದು ಭಯ–ಭಕ್ತಿಯಿಂದೊಡಗೂಡಿ, "ಇಂದು ನರರೂಪ ದಿಂದ ಹರನೇ ಇಳಿದು ಬಂದು ನಮ್ಮನ್ನು ವೇದಾಂತ ಪಥದಲ್ಲಿ ಕರೆದೊಯ್ದು ಬ್ರಹ್ಮಾತ್ಮೈಕ್ಯವನ್ನು ಬೋಧಿಸಿದನು," ಎಂದು ಕೊಂಡಾಡಿದರು. ಮತ್ತೆ ಕೆಲವುದಿನಗಳವರೆಗೆ ಅವರನ್ನು ತಮ್ಮಲ್ಲಿರಿಸಿಕೊಂಡು ಅವರಿಂದ ಶಾಸ್ತ್ರ ಶ್ರವಣ ಮಾಡಿ ಗುರುಕೃಪೆ ಪಡೆದರು. ಈ ವಾರ್ತೆಯನ್ನು ಕೇಳಿದ ಗುಜ್ಜಮ್ಮನೆಂಬ ಓರ್ವ ವಿರಕ್ತಳು ಭಯ–ಭಕ್ತಿಯುಕ್ತಳಾಗಿ ಕರಗಳಲ್ಲಿ ಫಲ–ಪುಷ್ಪಗಳನ್ನು ತಕ್ಕೊಂಡು ಬಂದು ಗುರುಗಳಿಗೆ ಸಾಷ್ಟಾಂಗದಿಂ ನಮಿಸಿ, "ಭಕ್ತವತ್ಸಲನಾದ ಸದ್ಗುರುವೇ, ನಿಜ ಮುಕ್ತಿದಾಯಕನೇ, ನನ್ನ ಭವದುಃಖ ನೀಗುವ ಯುಕ್ತಿ ಯನ್ನು ಬೋಧಿಸು" ಎಂದು ಅವರ ಚರಣಕಮಲಗಳಿಗೆ ಎರಗಿದಳು.

## ಪದ – ೪೪–೪೯ ಗುಜ್ಜಮ್ಮನಿಗೆ ತತ್ವೋಪದೇಶ

ಆಗ ದಯಾಳು ಸದ್ಗುರು ಸಿದ್ಧನು ಅವಳ ಭಕ್ತಿ-ಭಾವಕ್ಕೊಲಿದು ಕೂಡಲೆ ಅವಳಿಗೆ ಸ್ನಾನವನ್ನು ಮಾಡಿಸಿ ಕರುಣೆಯಿಂದ ಭಸ್ಮ, ರುದ್ರಾಕ್ಷಿ, ಅಂಗನ್ಯಾಸ, ಕರನ್ಯಾಸ ಇವುಗಳ ವಿಧಾನವನ್ನು ತಿಳಿಹೇಳಿ ಮಾನಸ ಪೂಜೆಯ ರೀತಿ ಎಲ್ಲವನ್ನು ತಿಳಿಸಿ, ಪಂಚಾಕ್ಷರೀ ಮಂತ್ರ ಉಪದೇಶಿಸಿ, ಇದನ್ನು ನೀನು ಎಂದೂ ಮರೆಯದೆ ಸತತ ಜಪಿಸುತ್ತಿರು" ಎಂದು ಬೋಧಿಸಿದನು. ಅಂದು ಆ ಸ್ತ್ರೀಯಳು ಗುರು ಕೃಪೆ ಪಡೆದು ಹರುಷದಿಂದ 'ನಾನು ಧನ್ಯಳಾದೆ' ಎಂದು ಗುರು ಮೂರ್ತಿಯನ್ನು ಹೃದಯದಲ್ಲಿ ನೆನೆಯುತ್ತ ನಮಿಸಿ ಗಮಿನಿಸಿದಳು.

ಅಂದು ಗುರುಗಳ ಪಯಣವೆಂದು ತಿಳಿದು ಸರ್ವರೂ ಸಂತೋಷದಿಂದ ಪೂಜಿಸುತ್ತ ಅವರಿಂದ ಆಶೀರ್ವಾದ ಪಡೆದು ಈ ರೀತಿ ಆರತಿಯನ್ನು ಬೆಳಗಿದರು.

ಜಯತು ತಾಮಸ ತಿಮಿರ ದಿನಮಣಿ ।
ಜಯತು ಭವಕುಲ ಶರಧಿ ಸುತುರಣಿ ।
ಜಯತು ಮೋಕ್ಷಾಸಕ್ತ ಜನ ಚಿಂತಾಮಣಿಯೇ ಜಯತು ॥
ಜಯತು ಬ್ರಹ್ಮಜ್ಞಾನ ವರಖಣಿ ।
ಜಯತು ಸದ್ಗುರು ಜನ ಕುಲಾಗ್ರಣಿ ।
ಜಯತು ಸಿದ್ಧಾರೂಢ ಸದ್ಗುಣ ಮಣಿಯೆ ಜಯ ಜಯತು ॥

ಈ ರೀತಿ ಸರ್ವರೂ ಒಳ್ಳೇ ಉತ್ಸಾಹದಿಂದ ಗುರು ಸಿದ್ಧನನ್ನು ಪಲ್ಲಕ್ಕಿಯಲ್ಲಿ ಒಳ್ಳೇ ವೈಭವದಿಂದ ಕೂಡ್ರಿಸಿ ನಾಲ್ಕು ಬೀದಿಗಳಲ್ಲಿ ಮೆರೆಸಿದರು ಆಗ ಗುರುನಾಥನು ಸಂತೋಷದಿಂದ ಅವರೆಲ್ಲರಿಗೂ ಪುನಃ ಆಶೀರ್ವದಿಸಿ ಅವರೆಲ್ಲರ ಸಮ್ಮತಿ ಪಡೆದು ಅಲ್ಲಿಂದ ಬೆಳಸಿದನು.

ಮಂಗಲ:-ಪರಶಿವನೆ ನಾಂ ನಿಮಗೆ ನಿರ್ಮಲ ।
ಕರುಣದಿಂದಭಿಷೇಕವಂ ಮನ ।
ವರಿತು ಗೈಯುತ ಭೇದಮತಿ ಸದ್ಗಂಥವಂ ತೀಡಿ ॥

ಇರಿಸಿ ತನು ನಾಲ್ಕೆಂಬ ಪೂಗಳ |
ಮರಣ ಜನಿಗಳ ಧೂಪನುರಿಸಿ |
ಪರಮ ಸುಖದೆಡೆ ಹಿಡಿದು ಗೈಯುವೆ ನೈಕ್ಯನಮನವನು ||

ಇತಿ ಶ್ರೀಗುರು ಸಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ ಲೀಲಾ ಚರಿತ್ರೆ ಕಲ್ಪದ್ರುಮದೊಳು ನೈಯಾಯಿಕರ ದ್ವೈತಮತವನತಿ-ಗಳೆದು ಅವರಿಗೂ ಮತ್ತು ಓರ್ವ ಸ್ತ್ರೀಯಳಿಗೂ ಗುರುಕರುಣೆಗೈದನೆಂಬಲ್ಲಿಗೆ

— ೧೬ ನೇ ಅಧ್ಯಾಯ ಸಮಾಪ್ತಿ —

|| ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ||



# ಸಂಚಾರ ಸಂಭ್ರಮ ಕಾಂಡ

## ಅಧ್ಯಾಯ ೧೭

|| ಓಂ ತತ್ಸತ್ ||

ಈ ಅಧ್ಯಾಯದಲ್ಲಿ ಸಿದ್ಧನು ತಿರವಂಕುರದ ಪದ್ಮನಾಭನ ದೇವಾಲಯದಲ್ಲಿ ಬ್ರಾಹ್ಮಣರಿಂದ ಅಗ್ರಪೂಜೆಯನ್ನು ಮಾಡಿಸಿಕೊಂಡು ಕ್ಷೇತ್ರಂಗಳನ್ನು ಸಂಚರಿಸುತ್ತ ಗೋಕರ್ಣಕ್ಕೆ ಬಂದದ್ದು.

ಅಲ್ಲಿ ಜಡಿಸ್ವಾಮಿಗಳನ್ನು ಕೂಡಿಕೊಂಡು ಆನಂದ ವಿಹಾರಮಾಡುತ್ತ ಮಹಾಬಲೇಶ್ವರ ದೇವಸ್ಥಾನದಲ್ಲಿ ಬ್ರಾಹ್ಮಣರಿಗೆ ಜ್ಞಾನೇಶ್ವರಿಯ ನಿಜವಾದ ಅರ್ಥವನ್ನು ಪೇಳಿ, ಕುಂಭ ನೈವೇದ್ಯವನ್ನುಂಡದ್ದು. ನಾಗ ತೀರ್ಥದಲ್ಲಿ ಬ್ರಾಹ್ಮಣರ ಇಚ್ಛಿತ ಪ್ರಶ್ನೆಗಳಿಗೆ ಅರ್ಥವನ್ನು ಹೇಳಿದ ವಿಷಯವಿರುವದು.

**ಸ್ತೋತ್ರ—** ಹರನೆ ಮೃತ್ಯುಂಜಯ ನೆನಿಪುದೀ ।
ಮೆರೆವ ಪಾಮವು ನಿನಗೆ ನಿಜದಿಂ ।
ನಿರುತ ಮಂಗನೇ ಪಾವನಾತ್ಮಕಿ ಪರಮ ಕಲ್ಯಾಣಿ ॥
ಗಿರಿಜೆ ಯೆನಿಸಿರ್ಪೈದೆಯಳೆ ಬಿಳು ।
ಗೊರಳೊಳಿಹ ಮಾಂಗಲ್ಯವೆಂಬುದ ।
ರಿರವಿನಿಂ ಬಂದಿರ್ಪಕಳದಿಂ ನಿನ್ನನಾ ನಮಿಪೆ॥

**ಪದ— ೧—೧೪ ಸಿದ್ಧನು ಪದ್ಮನಾಭನ ದೇವಾಲಯದಲ್ಲಿ ಬ್ರಾಹ್ಮಣರಿಂದ ಅಗ್ರಪೂಜೆಗೊಂಡು ಗೋಕರ್ಣದಲ್ಲಿ ಜಡಿಸ್ವಾಮಿ ಯನ್ನು ಕೂಡಿ ಲೀಲಾದಿಗಳನ್ನು ಮಾಡಿದ್ದು.**

ಬಳಿಕ ಸಿದ್ಧಯತಿಯು ಅಲ್ಲಿಂದ ತೀವ್ರ ಹೊರಟು ಗಿರಿ, ಅರಣ್ಯ, ಪುರ ಪಟ್ಟಣಗಳನ್ನು ಸಂಚರಿಸುತ್ತ ಭೋಟಾ ನಾರಾಯಣನ ದರುಶನ ಮಾಡಿಕೊಂಡನು. ಮತ್ತು ಅಲ್ಲಿ ಮೆರೆಯುತ್ತಿರುವ ಪರಮೇಶ್ವರ ಲಿಂಗ ವನ್ನು ಮುದನಿಂದ ಕಾಣುತ್ತ ಹಾಗೆಯೇ ಹೊರಟನು. ಮುಂದೆ ಠಸ್ಕರ ಮತ್ತು ಮಸ್ಕರ ನೋಡಿಕೊಂಡು ಬರುವಾಗ್ಗೆ, ತಿರುವಟಾರದಲ್ಲಿ ಶ್ರೀಕೃಷ್ಣ ಮೂರ್ತಿಯನ್ನು ಕಂಡನು. ಅಲ್ಲಿಂದ ಹಾಗೆಯೇ ತಿರುಮಲಾಂಕುರಕ್ಕೆ ಬಂದನು. ಅಲ್ಲಿ ಪ್ರದ್ಯುಮ್ನನಾಭನೆಂಬ [ಇವನು ಕೃಷ್ಣ ರುಕ್ಮಿಣಿಯರ ಮಗನು. ಇವನು ಆರುವರುಷದವನಿದ್ದಾಗ ಇವನನ್ನು ಶಂಭರಾಸುರನು ಸಮುದ್ರದಲ್ಲಿ ಎಸೆದನು. ಅಲ್ಲಿ ಅವನನ್ನು ಒಂದು ಮೀನ ನುಂಗಿತು, ಆ ಮೀನವನ್ನು ಬೆಸ್ತರು ಹಿಡಿದರು ಅದು ಶಂಭರನಲ್ಲಿ ಬೆಳೆಯಿತು. ಅಲ್ಲಿ ಆತನು ತನ್ನನ್ನು ಪಾಲಿಸಿದ ಮಾಯಾವತಿ ಎಂಬವಳ ಪ್ರೇಮಕ್ಕೆ ಪಾತ್ರನಾದನು. ಅವನು ದೊಡ್ಡವನಾದ ಬಳಿಕ ಶಂಭರಾಕ್ಷಸನನ್ನು ಕೊಂದು ಆ ಮಾಯಾ

ಪತಿಯನ್ನು ಮದುವೆಯಾದನು, ಎಂಬ ಇತಿಹಾಸ ಉಂಟು) ಉರಗಶೇನ ಮೂರ್ತಿಯನ್ನು ಕಂಡನು. ಆ ಸ್ಥಳದಲ್ಲಿ ಬ್ರಾಹ್ಮಣರ ಪಂಕ್ತಿಯು ಭರದಿಂದ ಸಾಗಿರಲು, ಅಲ್ಲಿಗೆ ಹೋಗಿ ತಾನೂ ಒಂದು ಎಲೆಗೆ ಕೂತನು. ವಿಪ್ರರು ಅದನ್ನು ಕಂಡು ಕೋಪಗೊಂಡು ಗದ್ದರಿಸಿ "ನೀನು ಶೂದ್ರನಿದ್ದು, ಬುದ್ಧಿ ಇಲ್ಲದೆ ಪಂಕ್ತಿಗೆ ಬಂದು ಕೂತಿರುವಿಯಾ ? ಎದ್ದು ನಡೆ" ಎಂದರು. ಆಗ ಸಿದ್ಧನು, ಅವರಿಗೆ "ವಿಪ್ರನ ಲಕ್ಷಣ ಶುದ್ಧ ವಿಪ್ರರೇ ಬಲ್ಲರಲ್ಲದೆ ಬುದ್ಧಿಶೂನ್ಯ ಶೂದ್ರರಾದ, ನೀವು ತಿಳಿಯಲಾರಿರಿ" ಎಂದನು.

ವಿಪ್ರರು ಸಿದ್ಧನಾಡಿದ ನುಡಿಯಿಂದ ರೇಗಿ, "ಎಲೋ ಏಕಾಏಕಿ ನಮಗೆ ಬುದ್ಧಿ ಶೂನ್ಯರು, ಶೂದ್ರರು ಎಂದು ಒಳ್ಳೆ ಧೈರ್ಯದಿಂದ ಹಳಿಯುತ್ತಿರುವಿ ನೀನು ಶುದ್ಧ ವಿಪ್ರನಾಗಿದರೆ, ನಿನ್ನ ಸೂತ್ರ ಶಿಖಾದಿಗಳು ನಿನ್ನೊಡನೆ ಸಿಟ್ಟಿಗೆದ್ದು ನಿನ್ನಲ್ಲಿರದೆ ಆಕಾಶಕ್ಕೆ ಹಾರಿ ಹೋದವೇ" ? ಎಂದು ಗದ್ದರಿಸಿದರು. ಅದಕ್ಕೆ ಸಿದ್ಧನು, "ಅಶಿಖಾ, ಅಯಜ್ಞೋಪವೀತಃ ಯತಿಃ ಯಾದೃಚ್ಛಿಕೋ ಭವೇತ್ ‖ ಎಂಬ ಶ್ರುತಿಯ ಪ್ರಮಾಣವನ್ನು ನೀವು ಮರೆತಿರಬಹುದು" ಎಂದನು.

ಆಗ ವಿಪ್ರರು, "ನೀನು ಯತಿಯಾಗಿದ್ದರೆ ಯತಿಯ ಚಿನ್ಹಗಳಾದ ದಂಡ, ಕಮಂಡಲಾದಿಗಳು ನಿನ್ನಲ್ಲಿ ಇರಬೇಕಲ್ಲವೇ ? ಎಂದು ಕೇಳಿದರು.

## ಬ್ರಾಹ್ಮಣನ ಚಿನ್ಹ

ಅದಕ್ಕೆ ಸಿದ್ಧನು ಹೇಳುತ್ತಾನೆ, "ಪರರ ಮೋಸಕ್ಕೆ ಕಾರಣಗಳಾಗಿರು–ವಂಥ ಡಾಂಭಿಕ ಚಿನ್ಹಗಳನ್ನು ತೊರೆದು ನಾನು ನಿಜ ಚಿನ್ಹಗಳನ್ನು ಧರಿಸಿರು–ವೆನು. ಅವು ಯಾವವೆಂದರೆ, ವಿರತಿಯೇ ಭಸ್ಮವು, ಸಮತೆಯೇ ಕಂಥೆ' (ಕೌಪೀನ) ವರ ವಿವೇಕವೇ ಕಮಂಡಲವು, ಜ್ಞಾನವೇ ದಂಡವು, ಪ್ರಣಮವೇ ಸೂತ (ಜನಿವಾರ)ವು, ಉಪರತಿಯೇ ಶಿಖೆ (ಜಂಡಿಕೆ) ಇವೆಲ್ಲವು, ಪರಮ ಯತಿಯ ಚಿನ್ಹಗಳು ಸತತ ನನ್ನಲ್ಲಿವೆ. ಅವುಗಳನ್ನು ನೀವು ಅರಿಯದಿದ್ದರೆ ಅದು ಯಾರ ತಪ್ಪು" ಹೇಳಿರೆಂದನು. ಇದೆಲ್ಲವನ್ನು ಕೇಳಿ ಅವರೊಳ ಗೋರ್ವ ತೀಕ್ಷಣ ಬುದ್ಧಿಯುತನು, ಭೋಜನ ಸಮಯಕ್ಕೆ ವೈಶ್ವಾನರನೇ ಇಂಥ ಸಡಗರದ ಯತಿರೂಪದಿಂದ ಬಂದಿರುವನು. ಅದು ಕಾರಣ ಇವನಿಗೆ

ಶೀಘ್ರನಾಗಿ ಅಗ್ರಪೂಜೆಯನ್ನು ಮಾಡಿದರೆ ನಾವು ಧನ್ಯರಾಗುವೆವು," ಎಂದನು.

### ಬ್ರಾಹ್ಮಣರಿಂದ ಅಗ್ರಪೂಜೆ

ಅದಕ್ಕೆ ಸರ್ವರು ಸಮ್ಮತಿಸಿ, ಸ್ತ್ರೀ ಪುರುಷರೆಲ್ಲರು ಸಿದ್ಧನಿಗೆ ಅರ್ಘ್ಯ ಪಾದ್ಯಗಳಿಂದ ಪೂಜಿಸಿ, ಇವನು ಪದ್ಮನಾಭನೇ ನಿಜವೆಂದು ಮೃಷ್ಟಾನ್ನ ಭೋಜನದ ಎಡೆಮಾಡಿ ತೃಪ್ತಿಗೊಳಿಸಿದರು. ನಂತರ ಅವರಿಂದ ಎಲ್ಲರೂ ಆಶೀರ್ವಾದಪಡೆದು ಸಂತೋಷದಿಂದ ಬೀಳ್ಕೊಟ್ಟರು.

ಬಳಿಕ ಸಿದ್ಧನು ಅಲ್ಲಿಂದ ಹೊರಟು ಜನಾರ್ಧನ ಕ್ಷೇತ್ರಕ್ಕೆ ಶೀಘ್ರದಿಂದ ಬಂದು ಅಲ್ಲಿದ್ದ ಸ್ವಾಮಿಯನ್ನು ಕಂಡನು. ಅಲ್ಲಿ ಮುಂದೆ ಕಾಣುವ ಗಿರಿ ಶಿಖರವನ್ನೇರಿದನು. ಅಲ್ಲಿ ಸ್ವಾಮಿಯು ಮೊದಲು ತಾನು ಸಂಧ್ಯಾವಂದನೆ ಮಾಡಿದ ಕುರುಹನ್ನು ಕಂಡು "ಪರಮ ಜ್ಞಾನಿಗೆ ಈ ನಾಮರೂಪ ಜಗವು ಸ್ವಪ್ನದಂತೆ ಮಿಥ್ಯೆ ತೋರಿಕೆ" ಎನ್ನುತ್ತ ಉಡುಪಿಗೆ ಬಂದನು. ಅಲ್ಲಿ ಶ್ರೀ ಕೃಷ್ಣ ಮೂರುತಿ ದರುಶನ ಮಾಡಿಕೊಂಡು ಕನಕನ ಕಿಂಡಿಯ ಕಡೆಗೆ ತಿರುಗಿದನು. ಅದನ್ನು ನಿರೀಕ್ಷಿಸಿ ತನ್ನ ಮನದೊಳು ಹೀಗೆ ತಿಳಿದನು. 'ಸಾಕ್ಷಾತ್ ಶುದ್ಧ ಪರಬ್ರಹ್ಮನು, ಕ್ಷೇತ್ರಜ್ಞನು' ಸರ್ವ ವ್ಯಾಪಕನಾದ ತಾನು ಸಗುಣರೂಪ ಧಾರಣ ಮಾಡಿ ಈ ಉಡುಪಿ ಕ್ಷೇತ್ರದಲ್ಲಿ ಮುದ್ದು ಕೃಷ್ಣನ ರೂಪದಿಂದ ಪ್ರಕಟನಾಗಿರುವನು. ಆತ್ಮನೇ ಈ ಸೃಷ್ಟಿಯ ಜ್ಞಾನವನ್ನು ತನ್ನೊಳು ಕುತೂಹಲದಿಂದ ಆಕರ್ಷಿಪುದರಿಂದ, 'ಕೃಷ್ಣ'ನೆನಿಸುವನು. ಈ ರೀತಿ ತಿಳಿಯುವದೇ ನಮ್ಮ ನೀತಿ, ಎನ್ನುತ್ತ ಸಂತೋಷದಿಂದ ನಿಜ ಸುಖ ಸಮಾಧಿಯಲ್ಲಿ ಮಗ್ನನಾದನು.

### ಪದ—೧೫–೫೬ ಜಡಿ ಸ್ವಾಮಿಗಳ ಸಂಗಡ ಆನಂದ ವಿಹಾರ

ಹೀಗೆ ಕೆಲವು ಕಾಲ ಕಳೆಯುತ್ತಿರಲು ಭೋಗದಾಯಕ ಕರ್ಮದಿಂದ ವೃತ್ತಿ ಪುನರುತ್ಥಾನವಾಗುತ್ತಿರಲು ಅಲ್ಲಿಂದ ಹೊರಟು ಮುರುಡೇಶ್ವರನ ದರ್ಶನ ಮಾಡಿಕೊಂಡನು. ಹಾಗೆಯೇ ಮುಂದೆ ಅರಣ್ಯ ಮಾರ್ಗದಿಂದ ನಡೆದು ಗೋಕರ್ಣ ಕ್ಷೇತ್ರಕ್ಕೆ ಬಂದನು. ಅಲ್ಲಿರುವ ಕೋಟಿತೀರ್ಥದಲ್ಲಿ ಸ್ನಾನಮಾಡಿ ಉತ್ಸಾಹದಿಂದ ಮಹಾಬಳೇಶ್ವರನ ದರುಶನಗೊಂಡನು.

ಮನಸ್ಸಿನಲ್ಲಿ, "ಈ ಕ್ಷೇತ್ರವೆಂಬುದು ಸುಂದರವಾದ ಭೂರೂಪ ಗೋವಿಗೆ ಕರ್ಣದಂತೆ ಹೊಂದಿಕೊಂಡಿದೆ. ಆದ್ದರಿಂದ ಇದಕ್ಕೆ ಗೋಕರ್ಣವೆಂಬ ನಾಮವು ಬಂದಿರುವದು. ಈ ಕ್ಷೇತ್ರವು ವೇದಪರ ಮಹಾ ವಾಕ್ಯ ಶ್ರವಣಕ್ಕೆ ಬಹು ಯೋಗ್ಯ ಸ್ಥಾನವಾಗಿ, ಮನುಜರಿಗೆ ಮುಕ್ತಿ ಮಂದಿರವಾಗಿದೆ" ಹೀಗೆ ಚಿಂತಿಸುತ್ತ ನೆರೆದಿರುವ ಯಾತ್ರಿಕರ ಸಮೂಹವನ್ನು ಸಂತೋಷದಿಂದ ಈಕ್ಷಿಸುತ್ತ ಮುಂದಕ್ಕೆ ಬಂದನು. ಅಷ್ಟರಲ್ಲಿ ಎದುರಿಗೆ ಧವಳಾಂಗವುಳ್ಳವನಾಗಿ ಕಂದು ಜಟದಿಂದೊಪ್ಪುವ ಮಂದಹಾಸದ ಸುಂದರ ವದನದಿಂದೊಪ್ಪುವ "ಜಡಿಸ್ವಾಮಿಯನ್ನು ಕಂಡನು. ಅವನು ಹೇಮಕೂಟದಲ್ಲಿ ಶೋಭಿಸುತ್ತಿರುವ ದಕ್ಷಿಣಾ ಮೂರ್ತಿಯಂತೆ ಒಪ್ಪುತ್ತಿದ್ದನು.

ಸಿದ್ಧನು ಇವನು ಜ್ಞಾನಿ ಇರಬಹುದೆಂದು ಕೆಲವು ಪ್ರಶ್ನೆಗಳಿಂದ ನಿಶ್ಚಯಿಸಿದನು. ನಂತರ ಈರ್ವರೂ ಕರಪಿಡಿದು ಒಂದೇ ಭಾವದಿಂದೊಡಗೂಡಿ ಮುಂದಿರುವ ಅಪಾರ ಸಾಗರದತ್ತ ಸಾಗಿದರು. ಪೂರ್ವದಲ್ಲಿ ಅಗಸ್ತ್ಯ ಮುನಿಯು ತನ್ನ ಗರ್ವವನ್ನು ಮುರಿದಿದ್ದನು. ಈಗ ಈ ತಾಪಸರೀರ್ವರು ಬಂದು ಯಾವ ಎಡರು ತರುವರೋ ?" ಎಂದು ನಿಗರ್ವದಿಂದ ಶರಧಿಯು ಭರದಿಂದ ಬಂದು ಬಾಗಿ ನಮಿಸಿತು. ಎಂಬಂತೆ ಅಲೆಗಳು ಬಂದು ಅವರ ಚರಣಕ್ಕೆ ಮುಟ್ಟಿದವು. ಸಂತರಿಗೆ ಸತ್ಕಾರ ಮಾಡುವದು ನೃಪರಿಗೆ ಸಂತೋಷದ ಕರ್ತವ್ಯವೆಂದು ವರಭಕುತಿಯಿಂದ ಚತುರಂಗ ಬಲದಿಂದ ಎದುರ್ಗೊಳ್ಳುವಂತೆ, ತೆರೆಗಳು ಅವರನ್ನು ಶರಧಿನಾದದಿಂದ ಸಾಲಾಗಿ ಬಂದು ಮಹಾತ್ಮರ ಪಾದಕಮಲಗಳಿಗೆ ಮುಟ್ಟಿ ಹಿಂದಕ್ಕೆ ಸರಿಯುತ್ತಿದ್ದವು. ಸಮುದ್ರನಾಥನು ಮುತ್ತುಗಳನ್ನು ಸೂರೆ ಮಾಡುತ್ತ ಬಂದು ನಮಿಸಿದನು ಎಂಬಂತೆ ತುಂತುರ್ವನಿಗಳು ತೂರುತ್ತ ಮಹಾತ್ಮರಿಗೆ ಸೋಂಕುತ್ತಿದ್ದವು.

ಶರಧಿಯು, "ಪಾಪಿಗಳು ಬಂದು ಬಂದು ನನ್ನಲ್ಲಿ ಸ್ನಾನಮಾಡುತ್ತಿರಲು ನಾನು ಮಲಿನವಾಗಿರುವೆನು. ಅದನ್ನು ಇಳೆಯ ಜನರ ಕಲ್ಯಾಣಕ್ಕೆ ಅವತರಿಸಿದ ಮಲಹರನ ಪ್ರತಿಮೂರ್ತಿಗಳಾದ ಈ ಉಭಯ ಮಹಿಮರ ಚರಣ ರಜದಿಂ (ಧೂಳಿಯಿಂದ) ಪವಿತ್ರನಾಗಬೇಕೆಂದು" ಸತ್ಪುರುಷರಿಗೊಲಿದು ನಮಿಸಿದನೆಂಬಂತೆ ತರಂಗಗಳು ಅವರ ಚರಣಕ್ಕೆ ಅಂಟುತ್ತಿದ್ದವು. ತೆರೆಗಳಿಂದ

ಬೋರ್ಗರೆವ ಅಪಾರ ಶರಧಿಯ ಒಡಲಲ್ಲಿರುವ ನಾನಾತರದ ಮುತ್ತು ಮಾಣಿಕ್ಯ, ವಜ್ರ, ವೈಢೂರ್ಯಗಳನ್ನು ಡೋಣಿಯು ತುಂಬಿಕೊಂಡು ಮಹಾತ್ಮರಿಗೆ ಕಾಣಿಕೆ ಕೊಡಬರುತ್ತವೆಂಬಂತೆ ಶೋಭಿಸುವ ಸೊಬಗನ್ನು ಸಂತೋಷದಿಂದ ಈರ್ವರು ಈಕ್ಷಿಸುತ್ತ ಗ್ರಾಮದ ಕಡೆಗೆ ಗಮಿಸಿದರು.

ಇಬ್ಬರೂ ಕೂಡಿ ಹೋಗುತ್ತಿರುವಾಗ ಜಡಿ ಸ್ವಾಮಿಯು ನನಗೆ ಬಹಳ ಚಳಿಯಾಗುತ್ತದೆ" ಎಂದನು. ಕೂಡಲೇ ಸಿದ್ಧನು ತಿಪ್ಪೆಯಲ್ಲಿ ಬಿದ್ದಿರುವ ಹಳೆಯದೊಂದು ಹರಕು ಚಾಪೆಯನ್ನು ತಂದು ಅದರ ಮಧ್ಯದಲ್ಲಿ ಒಂದು ಛಿದ್ರವನ್ನು ಮಾಡಿ ಅವನ ಕುತ್ತಿಗೆಯಲ್ಲಿ ಸಿಕ್ಕಿಸಿ, 'ಇದು ನಿನಗೆ ಕಂಥೆಯಾಯಿತು' ಎಂದನು. ಮತ್ತು ಅಲ್ಲಿ ಬಿದ್ದಿರುವ ಟೆಂಗಿನ ಪರಟೆಗಳ ಸರವನ್ನು ಮಾಡಿ ಕಂಠದಲ್ಲಿ ಹಾಕಿ 'ಇದು ಶಿರಮಾಲೆಯಾಗಿ ಶೋಭಿಸುವದು' ಎಂದನು. ಬಳಿಕ ಕುಂಕುಮ ಮಾರುವ ಅಂಗಡಿಯಲ್ಲಿ ಕುಂಕುಮ ಬೇಡಿ ತಂದು ಜಡಿ ಸ್ವಾಮಿಯ ಹಣೆಗೆ ಲೇಪಿಸಿದನು. ನಂತರ ಯಾತ್ರಿಕರು ಅಡಿಗೆ ಮಾಡಿ ಬಿಟ್ಟ ಗಡಿಗೆಯನ್ನು ತಂದು 'ಇದು ನಿನಗೆ ಕಮಂಡಲವು' ಎಂದು ಹೇಳಿ ಅದನ್ನು ಬಲಗೈಯಲ್ಲಿ ಹಿಡಿಸಿದನು. ಮುಂದೆ ಬಿದ್ದಿರುವ ಹರಕು ಕಸಬರಿಗೆಯನ್ನು ತಂದು ಎಡಗೈಯಲ್ಲಿ ಕೊಟ್ಟು 'ಇದು ನಿನಗೆ ಶೋಭಿಸುವ ನವಿಲುಗರಿಯಾಯಿತು' ಎಂದು ಹೇಳಿದನು. ಈ ಪ್ರಕಾರ ಜಡಿ ಸ್ವಾಮಿಯನ್ನು ಅಲಂಕರಿಸಿ "ನೋಡು ಈಗ ನೀನು ಬೈರವನಂತೆ ತೋರುತ್ತಿರುವಿ" ಎಂದು ಗಹಗಹಿಸಿ ನಗಹತ್ತಿದನು.

ಹೀಗೆ ಈರ್ವರು ಮುಂದೆ ಸಾಗಲು ಬಡವನಾದ ಓರ್ವ ತಪ್ಪಡೆಗಾರನು ಬರುವದನ್ನು ಕಂಡು ಅವನನ್ನು ಕುರಿತು, ನಾವು ಭಿಕ್ಷಾಟನಕ್ಕೆ ಹೊರಟಿರುವೆವು. ತಪ್ಪಡಿ ಬಾರಿಸಲು ನೀನು ನಮ್ಮೊಡನೆ ಬಂದೆಯಾದರೆ ಬಂದ ಭಿಕ್ಷದೊಳಗೊಂದು ಭಾಗ ಕೊಡುವೆವು," ಎಂದರು ಕೊಡಲೇ ಅವನೊಪ್ಪಿ ತಪ್ಪಡಿಯನ್ನು, "ಢಂ ಢಣ್" ಎಂದು ನುಡಿಸಿದನು. ಜಡಿಸ್ವಾಮಿಯು ಥೈ ಥೈ ಎಂದು ಕುಣಿಯು ಹತ್ತಿದನು. ಹೀಗೆ ಮೋಜುಮಾಡುತ್ತ ನಡೆದಿರಲು ಮುಂದೆ ಗೆಣಸು ಮಾರುವವನ ಬಂಡಿಯನ್ನು ಕಂಡು ಅಲ್ಲಿಗೆ ನಡೆದರು. ಅಲ್ಲಿ ತಪ್ಪಡಿಯನ್ನು, "ಚಕ್ಕನಕ್ಕ ಢಂ ಢಣ್" ಎಂದು ತಪ್ಪಡಿಯನ್ನು

ಬಾರಿಸಲು, ಜಡಿಸ್ವಾಮಿಯು ತಾಳಕ್ಕನುಸರಿಸಿ ಥಕ್ಕ ಥೈ ಎಂದು ಕುಣಿಯ ಹತ್ತಿದನು. ಹಿಂದಿನಿಂದ ಭಾರತಿಯು, 'ಭಾಪುರೆ ಶಾಭಾಶ, ಭಲೆ ಭಲೆರೆ! ವಾಹವ್ವಾ !' ಎಂದು ಹುರಿದುಂಬಿಸುತ್ತಿದ್ದನು. ಹೀಗೆ ಕುಣಿಯುತ್ತ ಈರ್ವರು ಪದಗಳನ್ನು ಹೇಳಲು ಪ್ರಾರಂಭವಾಡಿದರು.

ಚಕ್ಕ ನಕ್ಕ ಢಂ ಢಣ । ಚಕ್ಕ ನಕ್ಕ ಢಂ ಢಣ ||ಪಲ್ಲ||
ಹುಟ್ಟಿ ಬಂಜೆ ಹೆತ್ತಳು । ಒಳ್ಳೆ ಚಲ್ವ ಹೆಣ್ಣ ||
ಹುಟ್ಟಿ ಗುರುಡ ನಿಟ್ಟಿಹ । ನವಳ ಮೇಲೆ ಕಣ್ಣಾ ।
ಹುಟ್ಟಿ ಷಂಡ ಭೋಗಿಸಿ । ಹಚ್ಚಿಕೊಂಡ ಹುಣ್ಣ ।
ದಿಟ್ಟ ಜ್ಞಾನಿ ಮಾಡಿದ । ನೆಲ್ಲ ಸುಟ್ಟು ಸುಣ್ಣ ।
ಬಲ್ಲೆ ನೇಳ ಬಾಲೆ ನಿನ್ನ । ಎಲ್ಲಾ ಗುಣಾ ।
ಕಂಬಳೀದು ಕೊಡುವೆ ನಿನಗೆ । ಕುಬ್ಸದ್ ಖಣಾ ।
ಕಬ್ಬಿಣದ ಸರ್ಪಳಿ ಯಿಡುವೆ । ಸವ್ವಾಮಣಾ ।
ಇಟ್ಟುಕೊಂಡು ಕುಣಿಯೋ । ನೀನು ಠಣಾ ಫಣಾ ।

ಹೀಗೆ ಕುಣಿಕುಣಿದು ಹಾಡುತ್ತ ತಪ್ಪಡಿ ಬಡಿಯಲು, ಅಲ್ಲಿ ನೆರೆದ ಯಾತ್ರಿಕರು, ಆತುರದಿಂದ ಅವರಲ್ಲಿಗೆ ಬಂದು ಮುತ್ತಿದರು. ಹೀಗೆ ಸಂತೋಷ ದಿಂದ ಪದಗಳನ್ನು ಮುಕ್ತಾಯಮಾಡಿದ ಮೇಲೆ ಸಿದ್ಧನು, ಗೆಣಸಿನವನಿಗೆ ಗೆಣಸು ಬೇಡಲು, ಅವನು ಗಡಿಗೆಯ ತುಂಬ ಗೆಣಸುಕೊಟ್ಟನು. ಬಳಿಕ ಅಲ್ಲಿಂದ ಪೇಟೆಯ ಮಾರ್ಗವಿಡಿದು, ಅಂಗಡಿಗಳ ಮುಂದೆ ಕುಣಿ ಕುಣಿದು ಪದಗಳನ್ನು ಹೇಳುತ್ತ, ಅವರು ಕೊಟ್ಟದ್ದನ್ನು ಸ್ವೀಕರಿಸುತ್ತ ನಡೆದರು.

ಹಿಂದಿನಿಂದ ಸಿದ್ಧನು "ಭಲೆ ಭಲೆರೆ" ಎನ್ನುತ್ತ ಗೆಣಸು ತಿನ್ನುತ್ತ ಸಮುದ್ರ ತೀರದಲ್ಲಿ, ಹೊಳೆಯುತ್ತಿರುವ ಮಹಾಬಳೇಶ್ವರ ದೇವಾಲಯದೊಳಗೆ, ಪ್ರವೇಶ ಮಾಡಿದರು. ಅಲ್ಲಿ ಓರ್ವ ಸಂತನು, ಒಂದು ಸ್ಥಾನದಲ್ಲಿ ಹಸನ್ಮುಖನಾಗಿ ಕುಳಿತು, ಶ್ರೀ ಜ್ಞಾನೇಶ್ವರಿ ಪುರಾಣವನ್ನು ಓದಿ ಹೇಳುತ್ತಿದನು. ಅಲ್ಲಿ ನೆರೆದ ಸದ್ಭಕ್ತರು ಶ್ರದ್ಧೆಯಿಂದ ಶ್ರವಣ ಮಾಡುವ ಸಮಯಕ್ಕೆ ಮೂವರೂ ಅಲ್ಲಿಗೆ ಬಂದನು. ಸಿದ್ಧನು, "ಈಗ ನಾನು ಶಾಸ್ತ್ರವನ್ನು ಹೇಳುತ್ತೇನೆ" ಎಂದನು.

ಸಂತನು ಅದಕ್ಕೊಪ್ಪಿಕೊಂಡು ಸಿದ್ಧನನ್ನು ಮನ್ನಿಸುತ್ತ ಪೀಠದ ಮೇಲೆ ಕೂಡ್ರಿಸಿದನು.

## ಬ್ರಾಹ್ಮಣರಿಗೆ ಜ್ಞಾನೇಶ್ವರಿಯ ನಿಜಾರ್ಥ ಬೋಧಿಸಿದ್ದು

ಸಿದ್ಧನು, ಊರ್ಧ್ವ ಮೂಲಂ ಅಧಃ ಶಾಖಾ" ಎನ್ನುವ ಈ ಶ್ರುತಿ ವಾಕ್ಯದ ಅಭಿಪ್ರಾಯವನ್ನು ಹೇಳುತ್ತ, ಅದಕ್ಕೆ ತಾನೇ ಪೂರ್ವಪಕ್ಷದ ಅನೇಕ ಪ್ರಶ್ನೆಗಳನ್ನು ಎತ್ತುತ್ತ ಪುನಃ ಉತ್ತರಪಕ್ಷದಿಂದ ಅವುಗಳನ್ನು ಖಂಡಿಸಿ ಜ್ಞಾನಿಗಳೆಲ್ಲರ ಮನಸ್ಸು ಮೆಚ್ಚುವಂತೆ ವೈರಾಗ್ಯಪದಾರ್ಥವನ್ನು ಬೆಳೆಸುತ್ತ ಜ್ಞಾನಪರ ವಾಕ್ಯಗಳಿಂದ ಅವುಗಳನ್ನು ನಿರಸನಗೊಳಿಸುತ್ತ ಸರ್ವರಿಗೂ ಮೆಚ್ಚಿಗೆಯಾಗುವಂತೆ ಶ್ರುತಿ ಯುಕ್ತಿ ಮತ್ತು ಅನುಭವದ ವಾಕ್ಯಗಳಿಂದ ಬೋಧಿಸಿದನು. ಅವನ ಬೋಧೆಗೆ ಅಲ್ಲಿರುವ ದ್ವಿಜರೆಲ್ಲರು ಚಕಿತರಾಗಿ ತಲೆದೂಗುತ್ತ "ಶಂಕರನೇ ಇಂದು ಈ ವೇಷದಿಂದ ಬಂದಿರುವನು" ಎಂದು ಭಾವಿಸಿ ಬಹು ಭಕ್ತಿಯುಕ್ತರಾಗಿ ಸಂತೋಷದಿಂದ ಆರತಿ ಬೆಳಗಿ ನಮಿಸಿ ಹೋಗಹತ್ತಿದರು.

ನಂತರ ಆ ಸಂತನು ಆರತಿಯಲ್ಲಿರುವ ರೊಕ್ಕವನ್ನು ಎಣಿಸಲು ಪ್ರತಿದಿನಕ್ಕಿಂತಲೂ ಅಧಿಕವಾಗಿ ಬಂದಿದ್ದವು. ಸಿದ್ಧನು ಅದನ್ನರಿತು ಹಾಸ್ಯದಿಂದ "ಆರತಿಯೊಳಗೆ ಬಂದ ಎಲ್ಲ ರೊಕ್ಕ ನಮ್ಮದು" ಎಂದನು. ಸಂತನು "ಸಿದ್ಧನಾಡಿದ ರಹಸ್ಯವನ್ನು ತಿಳಿಯದೆ ಇವು ನಿಮ್ಮವೆಂತಯ್ಯಾ ?" ನನ್ನವೇ ಎಂದನು. "ನಮ್ಮ ಕಷ್ಟದಿಂದ ಬಂದಿರುವವು. ಆದ್ದರಿಂದ ನಮ್ಮವು" ಎಂದು ಸಿದ್ಧನು ಅವನ್ನು ಉಡಿಯೊಳು ಸುರುವಿಕೊಂಡನು. ಕೂಡಲೇ ಸಂತನು ಸಿದ್ಧನನ್ನು ಹಿಡಿದೆಳೆದು ಕದನಕ್ಕೆ ನಿಂತನು. ಆಗ ಅವರ ಕದನವನ್ನು ಕೇಳುತ್ತ ನಿಂತಿರುವ ಜನರೊಳಗೋರ್ವನು ಸಂತರೇ, "ನಾನು ಹೇಳುತ್ತೇನೆ ಕೇಳಿರಿ. ನೀವು ಒಬ್ಬರಿರುವಿರಿ, ಅವರು ಮೂವರಿರುವರು. ಅದು ಕಾರಣ ಬಂದರೊಕ್ಕದಲ್ಲಿ ಸರಿಯಾಗಿ ಎರಡು ಭಾಗಮಾಡಿ ಅವರಿಗೆ ಒಂದನ್ನು ಕೊಟ್ಟು ನೀವೊಂದು ಭಾಗವನ್ನು ತಕ್ಕೊಳ್ಳಿರಿ," ಎಂದನು. ಅದಕ್ಕೆ ಸಂತನು ಒಪ್ಪಿಕೊಂಡನು. ಸಿದ್ಧನು ಸಂತನನ್ನು ಕುರಿತು, "ನೀನು ದ್ರವ್ಯದಿಚ್ಛೆಯ ಸಂತನೋ ? ಅಥವಾ ಶಾಂತಿಯುತ ಪರಮ ಸಂತನೋ ? ನೀನು ಇಷ್ಟು ಅಲ್ಪ ರೊಕ್ಕಕ್ಕಾಗಿ ಕಲಹ ಮಾಡುವದಾದರೆ ಕಡು ಭ್ರಾಂತಿಯನ್ನು ಹುಟ್ಟಿಸುವ ಮಹದ್ವಿಷಯಗಳನ್ನು

ನೀನೆಂತು ತೋರಿಸುವೆ ? ಸಿಕ್ಕ ಈ ಆರೇಳು ರೂಪಾಯಿಗೆ ಬಾಯಿ ಬಿಟ್ಟು ಅತ್ತರೆ ಸಂತನೆನಿಸಿಕೊಂಡ ನಿನಗೆ ವಿಕ್ಕವರು ಕಡುಮೂರ್ಖನೆಂಬುವರು. ಅರಿಷಡ್ವರ್ಗಗಳನ್ನು ತಡೆಗಟ್ಟಿ ಶಾಂತಿಯಿಂದ ಯಾವನಿರುವನೋ ಅವನೇ ಸಂತನು" ಎಂದು ಹೇಳಿ ತನ್ನ ಜೋಳಿಗೆಯಿಂದ ಚಿನ್ನದ ಏಳು ನಾಣ್ಯಗಳನ್ನು ತೆಗೆದು ಮಂದಹಾಸದಿಂದ ಸಂತನಿಗೆ ಕೊಟ್ಟನು. ಆಗ ಅಲ್ಲಿ ನೆರೆದ ಜನಸಮೂಹವು ಸಿದ್ಧನ ಮಹಿಮೆಯನ್ನು ಕಂಡು ಪರಮ ಚಕಿತರಾಗಿ "ಅಹಹಾ! ನೃಡನೇ ಜಗದೋದ್ಧಾರಕ್ಕಾಗಿ ಈ ರೂಪದಿಂದ ಅವತರಿಸಿ ಬಂದಿಹನು. ಎಲ್ಲ ವಿಷಯ ತೊರೆದು, ಏನೊಂದು ಕುಂದಿಲ್ಲದೆ ಸದ್ಗುರುವೆನಿಸಿಕೊಳ್ಳುವಂಥ ಇವನ ದರುಶನದಿಂದ ನಮ್ಮಲ್ಲಿರುವ ಪಾಪವೆಲ್ಲ ಪರಿಹಾರವಾಯಿತು. ಇವನನ್ನು ಹೊಂದಿದವರೇ ಧನ್ಯರು ಏಕೆಂದರೆ ಶಾಂತಿಯಿಂದ ಮತ್ತು ಕರುಣೆಯಿಂದ ವೇದದಲ್ಲಿ ಹೇಳಿದ ಭಕ್ತಿ, ವಿರತಿ, ಜ್ಞಾನಗಳನ್ನು ಬಹು ಸುಲಭದಿಂದ ತಿಳಿಸಿ ಕೊಟ್ಟನು. ಎಂದು ಎಲ್ಲರೂ ಭಕ್ತಿಯುಕ್ತರಾಗಿ ನಮಿಸುತ್ತ ಪರಮ ಸಂತೋಷಪಟ್ಟರು.

## ಕುಂಭನೈವೇದ್ಯ ತಾವೇ ಉಂಡದ್ದು

ಬಳಿಕೆ ಮೂವರು ಗುಡಿಯ ಪಶ್ಚಿಮದ್ವಾರದಿಂದ ಮೊದಲಿನಂತೆ ಕುಣಿಯುತ್ತ ತಪ್ಪಡಿ ಬಾರಿಸುತ್ತ ನಡೆದರು. ಅಷ್ಟರೊಳು ಮಧ್ಯದಲ್ಲಿ ಓರ್ವ ಬ್ರಾಹ್ಮಣನು, ಕರಗಳಲ್ಲಿ ಪೂಜಾದಿ ದ್ರವ್ಯ, ಫಲ ಪುಷ್ಪಗಳನ್ನು ತಕ್ಕೊಂಡು ನೈವೇದ್ಯ ಸಮೇತನಾಗಿ, ಸಂಭ್ರಮದಿಂದ ದೇವಾಲಯಕ್ಕೆ ಬಂದನು. ಅದನ್ನು ಕಂಡು ಸಿದ್ಧನು "ಇದನ್ನು ಎಲ್ಲಿಗೆ ಒಯ್ಯುತ್ತೀ ?" ಎಂದು ಕೇಳಿದನು. ಭಟ್ಟನು "ದೇವರಿಗೆ ಅರ್ಪಿಸಲು ಎಂದನು". "ನಿಜವಾಗಿ ನಾನೇ ಪರಮದೇವನಿರಲಾಗಿ ಅದನ್ನು ಮತ್ತೇಕೆ ಒಯ್ಯುತ್ತೀ ? ಕೊಡು," ಎಂದನು. ಆಗ ಬ್ರಾಹ್ಮಣನು, "ನೀನೆಂಥ ದೇವನಯ್ಯಾ ? ಅನ್ನ ಮೇಲೆ ನಿನಗಿಷ್ಟು ಇಚ್ಛೆ ಇರಲಾಗಿ ಮಲಹರನು ನೀನೆಂತಾಗುವಿ ? ಆಶೆಯುಳ್ಳ ತಾನು ದೇವರಂತೆ ! ದೇವರು", ಎಂದು ಮುಂದೆ ಸಾಗಿದನು ಜಡಿ ಸ್ವಾಮಿಯು ನಲಿಯುತ್ತ ಒಲುಮೆಯಿಂದ ಅವನನ್ನು ಮುಟ್ಟಹೋದನು. ಆಗ ದ್ವಿಜನು, ಘಟ್ಟಿಸಿ ಚಿಟ್ಟನೇ ಚೀರಿದನು. ಕೂಡಲೇ ನೆರೆಹೊರೆಯ ಬ್ರಾಹ್ಮಣರೆಲ್ಲರು, ಓಡಿ ಬಂದು ಸಿಟ್ಟ–

ನಿಂದ ಜಡಿಸ್ವಾಮಿಯನ್ನು ಹೊಡೆಯ ಹೋದರು. ಸಿದ್ಧನು, "ದ್ವಿಜರೆ, ಪರಮ ಜ್ಞಾನಿಯನ್ನು ನೀವು ಹೊಡೆಯಬಹುದೋ ? ಹರನು ಸರ್ವರಲ್ಲಿ ವ್ಯಾಪಕನಿರುವನು. ಜ್ಞಾನಿಯು ಪ್ರಾಣಮುಖದಿಂದ ನಾನು ತೃಪ್ತನೆಂದು ಹೇಳುವ ಗೀತಾಪ್ರಮಾಣವನ್ನು ನೀವು ನೋಡಿಲ್ಲವೋ ? ಕೇಳಿರಿ—

ಅಹಂ ವೈಶ್ವಾನರೋ ಭೂತ್ವಾ । ಪ್ರಾಣಿನಾಂ ದೇಹಮಾಶ್ರಿತಃ ||
ಪ್ರಾಣಾಪಾನ ಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ||

ಪರಮಾತ್ಮನು ಸತ್ಪುರುಷನನ್ನು ಬಿಟ್ಟು ಶಿಲೆಯ ಮುಖದಿಂದ ತೃಪ್ತನಾಗುವನೋ ? ಶಿಲೆ ಅಂದರೆ ಅದು ಪರಮಾತ್ಮನೋ ? ಚನ್ನಾಗಿ ತಿಳಿದು ನೋಡಿರಿ. ರಾಜನಾದ ತಂದೆಯು, ತನ್ನ ಕಂದನಿಗೆ ಆಟಕ್ಕೋಸ್ಕರ ಮನೋ-ಹರವಾದ ಕಟ್ಟಿಗೆಯ ಆನೆಯನ್ನು ತರಿಸಿ ಕೊಟ್ಟನು. ಮಗನು ಬುದ್ಧಿವಂತ-ನಾದ ಮೇಲೆ ಅದಕ್ಕೆ ಮೋಹಿಸಿ ತನ್ನ ನಿಜವಾದ ಗಜವನ್ನು ತೊರೆದು ಬಿಡು-ವನೇ? ಪರಮಾತ್ಮನ ನಿಜವರಿಯದ ಮಂದಮನುಜರ, ಭಕ್ತಿ ಬೆಳೆಸುವದಕ್ಕಾಗಿ ಮುನಿಗಳು, ಶಿಲೆಗಳನ್ನು ಮೂರ್ತಿಯನ್ನಾಗಿ ಸ್ಥಾಪಿಸಿರುವರು. ತಾವು ಪರಮ ಬ್ರಾಹ್ಮಣರಿದ್ದು, ಅದಕ್ಕೆ ಮೋಹಿಸಿ ಬ್ರಹ್ಮವಿದ್ಯೆ ತೊರೆದು ಬಿಡಬಹುದೇ ? ಇದು ನಿಮಗೆ ಯೋಗ್ಯವಲ್ಲ. ಈಶನು ಜ್ಞಾನಯುತ ಸಾಧು-ಸುಜನರ ಪ್ರಾಣ ಮುಖದಿಂದ ತೃಪ್ತನಾಗುವನು," ಎಂದು ಬೋಧಿಸುವರು. ಅವರ ಬೋಧದಿಂದ ಸರ್ವ ದ್ವಿಜರ ಮನವು ಜಾಗ್ರತವಾಯಿತು. ಅವಕ್ಕೆ ಅವರೆಲ್ಲರೂ ಒಪ್ಪಿ ಸಂತೋಷದಿಂದ ಅವರೀರ್ವರನ್ನು ಪೂಜಿಸಿ ಹಾದಿಯಲ್ಲಿಯೇ ಉಣಬಡಿಸಿದರು. ಭೇದರಹಿತ ಜ್ಞಾನಸಂಪನ್ನರೀರ್ವರು ತೃಪ್ತಿಹೊಂದಿದರು. ಹೀಗೆ ಸಂತೋಷ ಪುಳ್ಳವರಾಗಿ ಹೊರಡಲು ಆ ದ್ವಿಜರು ತಮ್ಮ ವಸತಿ ಎಲ್ಲೆಂದು ಕೇಳಿದರು. ನಾವು ನಾಗತೀರ್ಥದಲ್ಲಿ ಇಳಿದಿರುವೆವು ಎಂದು ಹೇಳಿದರು.

ಬಳಿಕ ಮೂವರು ಮೊದಲಿನಂತೆ ಭಿಕ್ಷೆ ಬೇಡುತ್ತ ಸಿಕ್ಕಷ್ಟು ರೊಕ್ಕ ಫಲಾದಿಗಳನ್ನು ತಕ್ಕೊಂಡು ಸಮುದ್ರದ ದಡಕ್ಕೆ ಬಂದರು. ಅಲ್ಲಿ ವಿಶ್ರಮಿಸಿ ತಿರಿದು ತಂದದ್ದೆಲ್ಲವನ್ನು ದಧಿನಾಥನಿಗೆ ಆನಂದದಿಂದ ನೈವೇದ್ಯಮಾಡಿ ಸಿದ್ಧನು

ಇದೆಲ್ಲವನ್ನು ತಪ್ಪುಡಿಯುವನಿಗೆ ಕೊಟ್ಟನು. ಅವನು ಅದೆಲ್ಲವನ್ನು ತಕ್ಕೊಂಡು ಸಂತೋಷದಿಂದ, ''ನನ್ನ ಹೆಂಡರು ಮಕ್ಕಳೆಲ್ಲರಿಗೂ ಅನ್ನವಸ್ತ್ರಗಳಾದವೆಂದು'' ಹೋಗಲು ಅಪ್ಪಣೆ ಪಡೆದು ನಮಿಸಿ ಹೋದನು ಬಳಿಕ ಈರ್ವರು ಕೂಡಿ ನಾಗತೀರ್ಥಕ್ಕೆ ಬಂದು ಸ್ನಾನಮಾಡಿ ತಂದ ಭಿಕ್ಷಾನ್ನವನ್ನು ಭುಂಜಿಸಿ ವಿಶ್ರಾಂತಿ ಹೊಂದಿದರು. ಅಲ್ಲಿ ಮೂರು ದಿನ ಕಾಲ ಕಳೆಯುತ್ತಿರುವಾಗ, ವಿಪ್ರರು ಇವರು ಇರುವ ಸ್ಥಳಕ್ಕೆ ನಿತ್ಯ ಸಾಯಂಕಾಲಕ್ಕೆ ಬಂದು ತಮಗೆ ಬಂದಿರುವ ಎಲ್ಲ ಸಂಶಯಗಳನ್ನು ಪರಿಹರಿಸಿಕೊಂಡರು. ತಮ್ಮ ಕುಶಲ ಪ್ರಶ್ನೆಗಳಿಗೆ ಒಪ್ಪಿಗೆಯಾಗುವಂತೆ ಸಿದ್ಧನು ಉತ್ತರಿಸುವದನ್ನು ವಿಪ್ರರು ಕೇಳಿ, ಬಹು ಸಂತೋಷಹೊಂದುತ್ತ ಮೂರು ದಿನಗಳ ವರೆಗೆ ಅವರೊಡನೆ ಆನಂದದಲ್ಲಿ ಕಾಲಕಳೆದರು. ಮುಕ್ಕಣ್ಣನೇ ಧೀರನಾಗಿ ಬ್ರಹ್ಮಜ್ಞಾನಿ ರೂಪದಿಂದ ಅವತರಿಸಿ ಭವಸಾಗರದೊಳು ಬಳಲುವವರ ದುಃಖವನ್ನು ದೂರ ಮಾಡುವದಕ್ಕಾಗಿ ಬಂದಿರುವನು ಎಂದು ನಮಿಸುತ್ತ ಅಲ್ಲಿಂದ ಹೊರಟು ಹೋದರು. ಎಂಬಲ್ಲಿಗೆ ಮಂಗಲ.

ಪರಶಿವನೆ ನೀನೆನ್ನ ಜನ್ಮಾಂ ।
ತರದೆ ಬೆಳೆದಘರೂಪ ವನವ ।
ನ್ನುರುಹಿ ತವ ಮಧ್ಯ ಶಿಖಿ ನೇತ್ರದಿ ಮರಿವೆ ಗತ್ತಲೆಯಾ ॥

ಮೆರೆವ ದಕ್ಷಿಣ ಭಾನು ನಯನದಿ ।
ಪರಿದು ಚಿತ್ತ ಚಕೋರ ತಣಿಯಲ್ ।
ಸುರವ ನಾಮ ಸುಚಂದ್ರನೇತ್ರದಿ ನೋಡಿ ನೆರೆ ಪೊರೆಯೈ ॥

ಇತಿ ಶ್ರೀ ಸಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರಲೀಲಾ
ಚರಿತ್ರ ಕಲ್ಪದ್ರುಮದೊಳು ಭೈರವ ಲೀಲೆಯೆಂಬ
೧೭ ನೇ ಅಧ್ಯಾಯ ಸಮಾಪ್ತಿ

———

॥ ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ॥



# ಸಂಚಾರ ಸಂಭ್ರಮ ಕಾಂಡ

## ಅಧ್ಯಾಯ ೧೮

॥ ಓಂ ತತ್ಸತ್ ॥

ಈ ಅಧ್ಯಾಯದಲ್ಲಿ ದ್ವಾರಕೆಯಲ್ಲಿ ಒಬ್ಬ ವೈಷ್ಣವ ಯತಿಗೆ ಈ ಜಗತ್ ಪ್ರಪಂಚವೆಲ್ಲವೂ, ಸ್ವಪ್ನವತ್ ಮಿಥ್ಯವೆಂದು ಸಿದ್ಧಮಾಡಿ ತೋರಿಸಿದ್ದು.

ಪರಮಾತ್ಮನು ಪ್ರಾಣಿಗಳಿಗೆ ಕರ್ಮಾನುಸಾರ ಅನ್ನವನ್ನು ಪ್ರಯತ್ನವಿಲ್ಲದೆ ಕೊಡುವನೋ ? ಇಲ್ಲವೋ ? ಎಂದು ಸಿದ್ಧರನ್ನು ರುದ್ರಪುರಿಯಲ್ಲಿ ಪರೀಕ್ಷಿಸಿದ್ದು.

ನಾನಾ ಕ್ಷೇತ್ರಗಳನ್ನು ಸಂಚರಿಸುತ್ತ ಸಿದ್ಧನು ಕಾಶ್ಮೀರಕ್ಕೆ ಬಂದು ಅಲ್ಲಿ ಜೋತಿಷ್ಯರಿಗೆ ಖಗೋಲ ಸಿದ್ಧಾಂತವನ್ನು ತಿಳಿಸಿದ ವಿಷಯಗಳು ಇರುವವು.

ಸ್ತೋತ್ರ— ಮುಂಚೆ ಪಂಚಾನನನೆ ನಿನ್ನಯ ।
ಪಂಚ ಮುಖದಿಂ ಪಂಚ ಮೂರ್ತಿಯ ।
ಪಂಚ ಶಕ್ತಿಯ ಪಂಚ ವೇದವ ಪಂಚ ಕೃತ್ಯವನು ॥

ಪಂಚಭೂತ ಪ್ರಪಂಚವೆಲ್ಲವ
ಗೊಂಚಲಂದದಿ ವಂಚನೆಯದಿರ ।
ದುಂಚದಿಂ ಪುಟ್ಟಿಸಿದ ಪಂಚಾಕ್ಷರನೆ ಪೊರೆಯೆನ್ನ ॥

**ಪದ— ೧–೧೮ ಜಗತ್ ಪ್ರಪಂಚವೆಲ್ಲವು ಸ್ವಪ್ನದಂತೆ ಮಿಥ್ಯೆ.**

ಬಳಿಕ ಸಿದ್ಧನು ಅಲ್ಲಿಂದ ಹೊರಟು ಉಳುವಿಗೆ ಬಂದನು. ಅಲ್ಲಿಂದ ಹಾಗೆಯೇ ಹುಬ್ಬಳ್ಳಿ ಮಾರ್ಗದಿಂದ ಪಂಢರಪುರಕ್ಕೆ ಬಂದನು. ಅಲ್ಲಿ ವಿಠ್ಠಲನ ದರುಶನಗೊಂಡು ಮುಂದೆ ಸಾಗುತ್ತ...............ಕಲ್ಯಾಣಾದಿ ಪಟ್ಟಣಗಳನ್ನು ಕಾಣುತ್ತ ನಾಶಿಕಕ್ಕೆ ಬಂದು ಮುಟ್ಟಿದನು, ಅಲ್ಲಿ ಗೋದಾವರಿ ತೀರ್ಥದಲ್ಲಿ ಸ್ನಾನಮಾಡಿ, ತಿರಿದುಂಡು ತೃಪ್ತನಾದನು. ಮುಂದೆ ಪಂಚವಟಿಯಲ್ಲಿರುವ ಗುಪ್ತ ಗುಹೆಯೊಳಗೆ ನಾರಾಯಣನ ದರುಶನ ಮಾಡಿಕೊಂಡನು. ಅಲ್ಲಿಂದ ಬಂದು ತ್ರ್ಯಂಬಕೇಶ್ವರ ಮೂರ್ತಿಯನ್ನು ಕಂಡನು. ಮುಂದೆ ಸಾಗಿ ಬಂದು ಠಾಕುರ್ಜಿ ಮೂರ್ತಿ ದರುಶನಗೊಂಡನು. ಇವೆಲ್ಲವನ್ನು ನೋಡಿಕೊಂಡು ದ್ವಾರಕೆಯಲ್ಲಿರುವ ಗೋಮತಿ ತೀರ್ಥಕ್ಕೆ ಬಂದನು. ಅಲ್ಲಿ ಸ್ನಾನ ಮಾಡಿ ಹಾಗೆ ಸಂಚರಿಸುತ್ತ ಶ್ರೀ ವಿಷ್ಣು ಪಾದವನ್ನು ಕಂಡನು. ಬರುವಾಗ್ಗೆ, ಓರ್ವ ವೈಷ್ಣವ ಯತಿಯು ಭೆಟ್ಟಿಯಾದನು. ಅವನು ಸಿದ್ಧರನ್ನು ಕುರಿತು, "ನೀವು ಈ ಜಗತ್ತನ್ನು ಮಾಯಾ ಕಾರ್ಯವೆಂದು ಹೇಳುತ್ತೀರಲ್ಲವೇ ?" ಎಂದು ಪ್ರಶ್ನೆ ಮಾಡಿದನು, ಸಿದ್ಧ ಯತಿಯು ಹೌದು ಎಂದು ಒಡಂಬಟ್ಟನು. ಅದಕ್ಕೆ ಯತಿಯು, "'ಹಾಗಾದರೆ ತೋರುತ್ತಿರುವ ಈ ಜಗತ್ತು ವ್ಯವಹಾರಿಕವೋ ? ಅಥವಾ ಪ್ರಾತಿಭಾಸಿಕದ ತೋರಿಕೆಯೋ'' ? ಎಂದು ಪುನಃ ಪ್ರಶ್ನೆ ಮಾಡಿದನು. ಸಿದ್ಧನು ''ಸ್ವಪ್ನದಂತೆ ಅಭ್ಯಾಸ'' ಎಂದನು. ಹಾಗಾದರೆ ತೋರುವ ಸ್ವಪ್ನಕ್ಕೆ ಆಧಾರವಾವುದು'' ? ಎಂದನು ಯತಿಯು. ''ಬ್ರಹ್ಮವೆಂದು ಉತ್ತರ ಕೊಟ್ಟನು ಸಿದ್ಧನು. ''ಸ್ವಪ್ನವು ಬ್ರಹ್ಮಜ್ಞಾನಿಗೆ ತೋರಬಾರದು, ಏಕೆಂದರೆ ಬ್ರಹ್ಮನ ಆಧಾರದಲ್ಲಿ ತೋರುತ್ತವೆಂದರೆ, ಮುಮುಕ್ಷುವಿಗೆ ತತ್–ತ್ವಂ ಪದದ ಸಾರಭೂತ ಆತ್ಮಜ್ಞಾನವಾಗಲು, ಅವನಿಗೆ ಸ್ವಪ್ನವು ತೋರಬಾರದಾಗಿತ್ತು, ಇದಕ್ಕೆ ಏನು ಹೇಳುತ್ತೀರಿ'' ಎಂದನು ಯತಿಯು

ಅದಕ್ಕೆ ಜಾಣಸಿದ್ಧನು, "ವೈಷ್ಣವನೇ, ಸಂತೋಷದಿಂದ ಕೇಳು. ವಿಶ್ವ ಜೀವನು, ನೇತ್ರ ಸ್ಥಾನದಲ್ಲಿದ್ದುಕೊಂಡು, ಜಾಗ್ರಾವಸ್ಥೆಯಲ್ಲಿ ನಾನಾತರದ ಸಂಸ್ಕಾರಗಳನ್ನು ಪಡೆಯುವನು. ಕಂಠದಲ್ಲಿ ತೋರುವ ಸೂಕ್ಷ್ಮದೇಹಕ್ಕೆ ಅವು ಅಂಟಿಕೊಂಡು, ರಾಜಸ ಗುಣದಿಂದೊಪ್ಪುತ್ತಿರುವ ತೈಜಸ ಜೀವನಿಗೆ ಹೊಂದಲು, ಅದು ಕನಸಾಗುವದು. ಕನಸು ಮತ್ತು ಜಾಗ್ರದ ಭಾವವು ಸುಪ್ತಿಯನ್ನರಿಯುತ್ತಿರುವ, ಪ್ರಾಜ್ಞನಾಮಕ ಜೀವ ಚೇತನದಲ್ಲಿ ಅಡಗುತ್ತ ಪುನಃ ತೋರುತ್ತಿರಲಿಕ್ಕೆ ಸ್ವಪ್ನಕ್ಕೆ ಆಶ್ರಯವು, ಪ್ರಾಜ್ಞ ಜೀವನೇ ಆಗಿರುವನು ಎಂದನು. ಸಿದ್ಧನ ನುಡಿಯು ನಿಜವೆಂದು ಯತಿಯು ಒಪ್ಪಿಕೊಂಡನು.

ಪದ— ೧೧–೨೦ **ಪರಮಾತ್ಮನು ಪ್ರಾಣಿಗಳಿಗೆ ಕರ್ಮಾನುಸಾರ ಪ್ರಯತ್ನವಿಲ್ಲದೆ ಅನ್ನವನ್ನು ಕೊಡುವನು.**

ಅಷ್ಟರಲ್ಲಿ ಒಬ್ಬ ವೈಷ್ಣವನು ಗುಡಿಗೆ ಬಂದು, "ಇದು ಪಾರಣೆ (ಉಪವಾಸ ಬಿಟ್ಟಮೇಲೆ ಊಟ ಮಾಡುವದು) ಅತಿಥಿಗಳಿಗೆ ಮೊದಲು ಉಣಿಸಿದರೆ ಮಹಾಪುಣ್ಯ ಬರುವದು" ಎಂದು ಸಿದ್ಧರನ್ನು ಆದರದಿಂದ ಮನೆಗೆ ಕರೆದೊಯ್ದು ಭೋಜನ ಮಾಡಿಸಿ ತೃಪ್ತಿಗೊಳಿಸಿ ಕಳುಹಿಸಿದನು. ಸಿದ್ಧನು, ಸಂತೋಷದಿಂದ .....................ಹೊರಟು ಉಜ್ಜಯಿನಿಗೆ ಬಂದನು. ಅಲ್ಲಿಯ ಕಾಳಿಯ ಗುಡಿಯೊಳಗೆ ಹೋಗಿ ದೇವಿಯನ್ನು ಕಂಡು, ನನ್ನ ದರಮ ಚೈತನ್ಯ ಶಕ್ತಿಯೇ, ಈ ಪೀಠದಲ್ಲಿ ಕಾಳಿನಾಮದಿಂದ ಶೋಭಿಸುತ್ತಿರುವಳು" ಎಂದು ತಿಳಿದು, ಹಾಗೆಯೇ ಓಂಕಾರೇಶ್ವರಕ್ಕೆ ಬಂದನು. ಅಲ್ಲಿ ಕೋಟಿ ಲಿಂಗಗಳು ಯುಗಕ್ಕೊಮ್ಮೆ ಪ್ರಕಾಶಿಸುವ ಕಾಸಾರ (ಸರೋವರವನ್ನು) ಕಂಡು ತನ್ನ ಮನವಲ್ಲಿ, "ಕಲಿಯುಗದ ಮನುಜರಿಗೆ ಭಕ್ತಿ ಬೆಳಿಸಲೋಸುಗ, ಮುನಿಗಳು ಈ ಯುಕ್ತಿಯನ್ನು ಕಲ್ಪಿಸಿರುವರು" ಎಂದುಕೊಂಡು, ಬ್ರಹ್ಮಪುರಿಗೆ ಬಂದನು. ಅಲ್ಲಿರುವ "ನಿಬಾನಿ" ಯೆನಿಸುವ ಕಡಲಿನ ಆಖಾತದ ದಡದಲ್ಲಿ ಸಾಧುಗಳನ್ನು ಕಂಡು ಹಾಗೆ ರುದ್ರಪುರಿಯ ಕಡೆಗೆ ನಡೆದನು. ಅಲ್ಲಿ ಓಂಕಾರೇಶ್ವರನ ದರುಶನ ಮಾಡಿಕೊಂಡು ಕೆಳಗಿರುವ ಕಾಸಾರಕ್ಕೆ ಬಂದು ಸೇರಿದನು. ಅಲ್ಲಿ ಮೀನಗಳಿಗೆ ಅನ್ನ ಕೊಡುತ್ತಿರುವ ಜನರನ್ನು ಕಂಡು ತನ್ನ ಮನದೊಳಗೆ, "ಎಲ್ಲ ಪ್ರಾಣಿಗಳಿಗೆ ದೇವರು ಅಲ್ಲಲ್ಲಿಗೆ ಅನ್ನವನ್ನು ಇಟ್ಟಿರುವನು

ಆ ಅನ್ನಕ್ಕಾಗಿ ನಾನೇಕೆ ಯತ್ನ ಮಾಡಬೇಕು ?" ಎಂದು ಸಿದ್ಧ ಯತಿಯು ಧ್ಯಾನದಲ್ಲಿ ಸ್ವಸ್ಥ ಕುಳಿತನು. ಅದೇ ಸಮಯಕ್ಕೆ ಅಲ್ಲಿಗೆ ಓರ್ವನು ಮೀನ ಗಳಿಗೆ ಅನ್ನವನ್ನು ತಕ್ಕೊಂಡು ಬಂದನು. ಅವನು ಸಂತೋಷದಿಂದ ಮೀನ ಗಳಿಗೆ ಅನ್ನ ಹಾಕುತ್ತಿರುವಾಗ, ಯೋಗಿ ಸಿದ್ಧರನ್ನು ಕಂಡನು. ತನ್ನ ಮನ ದೊಳಗೆ, ''ಪೂರ್ವದಲ್ಲಿ ಸರೋವರದೊಳಗೆ ಮಚ್ಛ್ಯಾವತಾರದಿಂದ ಅವತರಿ ಸಿದ ಹರಿಯೇ ಇವನು'' ಎಂದುಕೊಂಡನು. ಮತ್ತು ''ಹರುಷವಾರಿಧಿ ಯೊಳ್ ನಲಿಯುತ್ತ ಮೆರೆಯುತ್ತಿರುವ ಹರಿಯೇ, ಇಂದು ನೀನು ನರರೂಪ ದಿಂದ ಬಂದಿರುವೆ ಅದಕ್ಕಾಗಿ ನಿನಗೆ ಮೊದಲು ಫಲ ಪಕ್ವಾನ್ನಗಳನ್ನು ಅರ್ಪಿ ಸುವದು ವಿಹಿತವು'' ಎನ್ನುತ್ತ ತಾನು ತಂದ ಫಲಾದಿ ಪದಾರ್ಥಗಳನ್ನು ಅವನ ಮುಂದಿಟ್ಟು ವಂದಿಸಿದನು.

ಸಿದ್ಧಯತಿಯು ತನ್ನ ಮುಂದಿರುವ ಫಲ ಪಕ್ವಾನ್ನಾದಿಗಳನ್ನು ಈಕ್ಷಿಸಿ, "ಸೋಮ–ಶೇಖರನೇ, ನಿನ್ನ ಮಹಿಮೆಯನ್ನು ತಾಮಸರೇನು ಬಲ್ಲರು ? ಕಾಮಿಗಳು ಕರ್ತವ್ಯವಹಿಸುತ್ತ ವೃಥಾ ಕೆಡುವರು'' ಈ ರೀತಿ ಪರಮನನ್ನು ಸ್ತುತಿಸುತ್ತ, ಆನಂದದಿಂದ ತನ್ನ ಹಸಿವಿಗೆ ತೃಪ್ತಿಯಾಗುವಷ್ಟು ಅನ್ನವನ್ನು ಸೇವಿಸಿದನು. ಮಿಕ್ಕುಳಿದುದನ್ನು ಮೀನಗಳಿಗೆ ಹಾಕಲಿಕ್ಕೆ ಅವನಿಗೆ ಹೇಳಿ, ತಾನು ಅಲ್ಲಿಂದ ಮಥುರಾಪುರಿಗೆ ನಡೆದನು, ಅಲ್ಲಿ ಸನ್ನುತ ಶ್ರೀರಾಮ ಮೂರ್ತಿ ದರುಶನಗೊಂಡು, ಇವನೇ ಎನ್ನ ಆತ್ಮರಾಮನಿದ್ದು, ಬಾಹ್ಯಾಂತ ರಂಗದಲ್ಲಿ ತಾನೇ ತೋರುವನು'' ಎನ್ನುತ್ತ ಹಾಗೆ ಮುಂದಕ್ಕೆ ಸಾಗಿ ಗೋಕುಲಕ್ಕೆ ಬಂದನು, ಅಲ್ಲಿ ರಾಧಾಕೃಷ್ಣ ಮೂರ್ತಿಯನ್ನೂ ಮತ್ತು ಮುರಲೀಧರ ಮೂರ್ತಿಯನ್ನೂ ಈಕ್ಷಿಸುತ್ತ ವೃಂದಾವನಕ್ಕೆ ಆಗಮಿಸಿದನು. ಅಲ್ಲಿ ಮೊದಲು ಕೃಷ್ಣನು ಗೋಪಾಲಕಿಯರನ್ನೊಡಗೊಂಡು ವಿನೋದ ಮಾಡಿದ ರಾಸಕ್ರೀಡೆ ಸ್ಥಳವನ್ನು ಕಂಡನು.

**ಪದ ೨೧–೪೩ ಸಿದ್ಧನು ಕಾಶ್ಮೀರಕ್ಕೆ ಬಂದು ಜ್ಯೋತಿಷ್ಯರಿಗೆ ಖಗೋಳಶಾಸ್ತ್ರ ಹೇಳಿದ್ದು.**

ಅಲ್ಲಿಂದ ಸಿದ್ಧನು ಬೇಗನೆ ಹೊರಟು, ಕಾಡುಬಿದ್ದು ಪರ್ವತಾವಳಿಯಲ್ಲಿ ಕಂದಕ, ಹಳ್ಳಕೊಳ್ಳಗಳನ್ನು ದಾಟುತ್ತ, ಗಿರಿ ಮರಡಿಗಳನ್ನು ತುಳಿಯುತ್ತ

ಕೆಂದಮೂಲಗಳನ್ನು ತಿನ್ನುತ್ತ, ತನಗಾದ ಎಲ್ಲ ಶ್ರಮವನ್ನು ಸಹಿಸಿಕೊಳ್ಳುತ್ತ ಕಾಶ್ಮೀರಕ್ಕೆ ಬಂದನು. ಆಲ್ಲಿ ಒಂದು ಗಜಾನನ ದೇವಾಲಯದಲ್ಲಿ ಜೋತಿಷ್ಯ ಶಾಸ್ತ್ರದಲ್ಲಿ ನಿಪುಣರಾದ ಅನೇಕ ಬಂಧರು ಕೂಡಿಕೊಂಡು ಖಗೋಲಶಾಸ್ತ್ರದ ವಾದದಲ್ಲಿ ತೊಡಗಿದ್ದರು. ಸಿದ್ಧಭಾರತಿಯು ಅದನ್ನು ಕೇಳಿ ಅವರ ಸಮೀಪಕ್ಕೆ ಹೋಗಿ ಕುಳಿತನು. ನಂತರ ಅವರೊಳಗೋರ್ವ ವಿಪ್ರನಿಗೆ ಮುದದಿಂದ, ''ಸುಮೂರ್ತವನ್ನು ಉಚ್ಚರಿಸುವದು, ಯಾವ ಕಾಲದಲ್ಲಿ'' ಹೇಳೆಂದನು.

ಆಗ ಜೋಯಿಸನು..........''ವಿಚಾರಿಸಿ ನೋಡಲಾಗಿ ಸುಮೂರ್ತದ ಪ್ರಥಮ ಚರಣದೊಳು ಐದನೆಯದಾದ ಮುಹೂರ್ತದಲ್ಲಿ ನುಡಿಯಬೇಕು'' ಎಂದು ಹೇಳಿದನು ಮತ್ತು ಇವನು ಜೋತಿಷ್ಯದೊಳಗೆ ಚನ್ನಾಗಿ ಪ್ರವೀಣನಿರಬೇಕೆಂದು ತಿಳಿದು ಸಿದ್ಧನನ್ನು ಕುರಿತು, ''ರವಿ ಶಶಿಗೆ ಏನು ಅಡರಿದವನ್ನು ತಿಳಿಸಬೇಕು'' ಎಂದು ಕೇಳಿಕೊಂಡನು.

## ಖಗೋಲ ಶಾಸ್ತ್ರವನ್ನು ಹೇಳಿದ್ದು

ವರುಷದೊಳಗೆ ಅಮವಾಸ್ಯೆ, ಹುಣ್ಣಿಮೆ ಇವೆರಡರಲ್ಲಿ ಮೇಷಾದಿ ದ್ವಾದಶಾದಿ ರಾಶಿಗಳಲ್ಲಿ ರವಿ-ಶಶಿ ಇವರೀರ್ವರಿದ್ದಾಗ ಅವರಿಗೆ ಕಠಿಯ ರಾಹು-ಕೇತು (ಇವರ ಸಮುದ್ರ ಮಥನಮಾಡುವ ಕಾಲದಲ್ಲಿ ಅಮೃತವನ್ನು ಅಪಹರಿಸಿದ್ದರಿಂದ ವಿಷ್ಣುವು ಇವರ ಶರೀರವನ್ನು ತುಂಡರಿಸಿದನೆಂದು ಕಥೆ) ಇವರಿಂದ ಯೋಗವಾಗಲು ಗ್ರಹಣಗಳಾಗುವವು. ಅದು ಹೇಗೆಂದರೆ ಒಂದೊಂದು ತಾರೆಗೆ ಮೆರೆಯುತ್ತಿರುವ ನಾಲ್ಕು ಚರಣಗಳು (ಅಂದರೆ ಅಕ್ಷರಗಳು ಚ, ಚೆ, ಚೊ, ಲಾ ಈ ಚರಣಗಳು ಅಶ್ವಿನಿ ನಕ್ಷತ್ರಕ್ಕೆ; ಲೀ, ಲೂ, ಲೇ, ಲೊ, ಭರಣಿಗೆ ಹೀಗೆ ಎಲ್ಲ ನಕ್ಷತ್ರಕ್ಕೂ ಇರುವವು ಮತ್ತು ಒಂದೊಂದು ರಾಶಿಯಲ್ಲಿ ತಾರೆಗಳು ಎರಡಿರಲು ಅವು ಎಂಟು ಚರಣ ಮತ್ತು ತಾನೊಂದು ಹೀಗೆ ಒಂಭತ್ತು ಚರಣಗಳಿರುವವು. ಸೂರ್ಯ-ಚಂದ್ರರು ಯಾವ ರಾಶಿಯೊಳಿರುವರೋ ಅಲ್ಲಿರುವ ತಾರೆಯ ಚರಣಗಳಿಗೆ ರಾಹು-ಕೇತುಗಳು ಕೂಡಿ ಒಂದಾಗಲು ಅದು ಒಂದು ಚರಣ. ಚರಣ ಒಂದಿದ್ದರೆ ಒಂದು ಪಾದಾಂಶವು. ಎರಡು

ಚರಣವಿರಲು ಎರಡು ಪಾದಾಂಶವು. ಮೂರು ಚರಣಗಳಿರಲು ಮೂರು ಪಾದಂಶವು. ನಾಲ್ಕು ಇದ್ದರೆ ಪೂರ್ಣ ಗ್ರಹಣವಾಗುವದು'' ಎಂದನು.

ಆಗ ದ್ವಿಜನು ಸಿದ್ಧರ ಮುಖದಿಂದ ಗ್ರಹಣದ ವಿಷಯವನ್ನು ತಿಳಿದು ಸಂತೋಷವುಳ್ಳವರಾದರು, ಇನ್ನು ಸೂರ್ಯನ ಕಿರಣ ಮತ್ತು ಅವನ ಗತಿ ಮೊದಲಾದ ವಿಷಯಗಳನ್ನು ತಿಳಿಸಬೇಕೆಂದು ಬಿನ್ನಯಿಸಿಕೊಂಡರು.

ಆಗ ಸಿದ್ಧನು ''ತರಣಿಗೆ ಕ್ಷಮೆ, ತಪನಿ, ತಾಪನಿ, ಧರಣಿ, ಭೋಗದೆ, ಧೂಮ್ರ, ಜ್ವಾಲಿನಿ, ಪರಮ–ಪ್ರಭೆ, ರುಚಿ, ವಿಶ್ವೆ ಬೋಧಿನಿ ಮತ್ತು ಸುಷುಮ್ನೆ ಹೀಗೆ ಧರೆಗೆ ಹಿತಕರವಾಗಿರುವ ಹನ್ನೆರಡು ಶುಭಕಲೆಗಳುಂಟು ಮತ್ತು ಹಿರಣ್ಮಯ (ಚಿನ್ನದ) ಕೇಶಮುಖ (ಬೀಜೋತ್ಪತ್ತಿ) ಲೋಮಗಳಿಂದ ಹೊಳೆ-ಯುತ್ತಿರುವ ೩೩೩ ಹಿಮಕಿರಣಗಳು, ೩೩೩ ಉಷ್ಣಕಿರಣಗಳು ಮತ್ತು ಅಷ್ಟೇ ವೃಷ್ಟಿ ಗರೆಯುವ ಕಿರಣಗಳು ಮತ್ತು ಬೀಜ ಭೂತದಿಂದಿದ್ದ ಒಂದು, ಹೀಗೆ ಇವೆಲ್ಲ ಕೂಡಲಾಗಿ ಸಹಸ್ರ ಕಿರಣಗಳಿಂದ ಸೂರ್ಯನು ರಾಜಿಸುತ್ತಿರುವನು. ಇದು ಅಲ್ಲದೆ ಆ ರವಿಯು ಕಾಲವಶನಾಗಿ ಕಲಮಲಾದಿಕ ತೇಜದಿಂದ ನವರತ್ನ ಕೆಚ್ಚಿರ್ಪ ನಾಲ್ಕು ಭುಜಗಳಿಂದ ಕೇಯೂರ, ಮುಕುಟ, ಕಟಿಕಮಾಲೆ ಕುಂಡ-ಲಾದಿ ಆಭರಣ, ವಸ್ತ್ರ, ಸುಗಂಧಾದಿಗಳಿಂದ ಅಲಂಕೃತನಾಗಿ ಸಿಂಧೂರ ವರ್ಣ ದಿಂದ ಮೆರೆಯುವನು. ಅವನ ಪರಿಮಿತಿಯು ಇಪ್ಪತ್ತೇಳು ಸಾವಿರ ಯೋಜನ ವಿರುವದು. ಇಂಥ ಸೋಜಿಗದ ಶರೀರದಿಂದ ಜಗತ್ತನ್ನು ಬೆಳಗುವ ಸೂರ್ಯನ ರಥಕ್ಕೆ ಏಳು ಕುದುರೆಗಳಿವೆ. ಅವುಗಳನ್ನು ಏಳು ಸರ್ಪಗಳಿಂದ ಬಂಧಿಸಿದೆ. ಜಗತ್ತಿನ ಸುತ್ತಲು ಇವನ ಗತಿಯು ಒಂದು ಶ್ವಾಸಕ್ಕೆ ಇಪ್ಪತ್ತೊಂದು ಸಾವಿರದಾ ಆರನೂರು ಯೋಜನವಿರುವದು. ಹಗಲಿರುಳಿನಲ್ಲಿ ನಿರಾಲಂಬ ಆಕಾಶದಲ್ಲಿ ಸೂರ್ಯನು ತಿರುಗುವನು. (ಸೂರ್ಯನು ಸ್ಥಿರವಾಗಿದ್ದು ಅವನ ಸುತ್ತಲೂ ಪೃಥ್ವಿ ತಿರುಗುತ್ತಿರುವದು ಎಂಬುದು ಆಧುನಿಕ ಸಿದ್ಧಾಂತವು).

ಪೃಥ್ವಿಯು ಕೇಂದ್ರಕ್ಕೆ ಧೃವತಾರೆಯು ನಿಶ್ಚಲವಾಗಿ ನಿಂತಿದೆ. ಚಂದ್ರನು ಪೃಥ್ವಿಯಿಂದ ಒಂದುಲಕ್ಷ ಯೋಜನ ಅಂತರದ ಮೇಲೆ ವಾಯುಮಂಡಲದಲ್ಲಿ ತಿರುಗುವನು. ಚಂದ್ರನಿಗಿಂತ ಎಷ್ಟೋ ಯೋಜನ ಅಂತರದ ಮೇಲೆ ಅಗಣಿತ

ತಾರಾಗಣವು ವಾಯು ಮಂಡಲದಲ್ಲಿ ಹೊಳೆಯುತ್ತಿರುತ್ತವೆ, ಮಂಗಳ, ಬುಧ, ಶನಿ ಮೊದಲಾದ ಗ್ರಹಗಳನ್ನು ವಾಯುವಿನ ಪಂಚಸೂತ್ರದಿಂದ ಮತ್ತು ಈಶ ಕೃಪೆಯಿಂದ ರವಿಯು ನಡೆಸುತ್ತಿರುವನು''. ಹೀಗೆ ಇನ್ನೂ ಹೆಚ್ಚಾಗಿ ಖಗೋಲ ಶಾಸ್ತ್ರವನ್ನು ಆ ಜೋಯಿಸರಿಗೆ ತಿಳಿಸಿದನು. ಆಗ ಎಲ್ಲ ಜೋಯಿಸರು ಆನಂದಭರಿತರಾಗಿ "ಇವನು ಕರಿವದನನೇ ಸತ್ಯ'' ಎಂದು ನಂಬಿ ಸ್ತುತಿಸಿ ನಮಿಸಿದರು.

ಆಗ ಸಿದ್ಧಭಾರತಿಯು ಎಲ್ಲ ದ್ವಿಜರನ್ನು ಕುರಿತು, ''ನೀವು ನಿಜವಾಗಿ ಎಲ್ಲಿಂದ ಬಂದಿರಿ ? ಎಲ್ಲಿಗೆ ಹೋಗುವಿರಿ ? ಮತ್ತು ನೀವು ಮಾಡುವದೇನು ? ಇವೆಲ್ಲವನ್ನು ಚೆನ್ನಾಗಿ ನಿಮ್ಮೊಳಗೆ ನೀವೇ ತಿಳಿದು ವಿಚಾರಿಸಿ ನೋಡಿರಿ. ನೀವು ಬ್ರಾಹ್ಮಣರಿದ್ದು ಸತ್ಯವಾಗಿ ಬ್ರಹ್ಮವಿದ್ಯೆಯನ್ನು ತೊರೆದು, ಈ ಜ್ಯೋತಿಷ್ಯಶಾಸ್ತ್ರವನ್ನು ಕಲಿತು ವಿದ್ವಾಂಸರೆನಿಸಿಕೊಳ್ಳುವದರಿಂದ ಮುಕ್ತಿಯಪ್ಪುದೇ ? ಎಂದಿಗೂ ಆಗಲಾರದು. "ಮನುಜ ಕುಲದ ಜನನದ ಲಾಭವಾವುದು ?'' ಆನಾರೆಂದು ತಿಳಿವುದು. ''ತಳುವದೆ ಮಾಳ್ಪುದಾವುದು?'' ಭವಹರಣ, ಎಂಬ ಪ್ರಮಾಣ ವಾಕ್ಯಗಳಿರುವದರಿಂದ ಗುರುಮುಖದಿಂದ ತತ್ವಮಸಿ ಮಹಾವಾಕ್ಯವನ್ನು ವಿಚಾರಿಸಿ ಘನತರ ಮುಕ್ತಿ ಸುಖವನು ಪಡೆಯುವದೇ ಮನುಷ್ಯನ ಮುಖ್ಯ ಕರ್ತವ್ಯವು ' ಎಂದು ಎಚ್ಚರಿಸಿದನು.

ಕೂಡಲೆ ಎಲ್ಲ ಜೋಯಿಸರು ಸಿದ್ಧರ ನುಡಿಕೇಳಿ ಚಕಿತರಾಗಿ ಗಣಿತ ಹಾಕಿದರು. ಭವಿಷ್ಯತ್ಪುರಾಣದಲ್ಲಿ ಕಲಿಯುಗದ ಪಂಚಸಹಸ್ರ ವರುಷಕ್ಕೆ ಪೊಡವಿಗೆ ತಡೆಯದೆ ಭಗವಂತನೇ, ಅವತರಿಸುವನೆಂಬುದನ್ನು ಅರಿತರು. ಆ ಪರಮಾತ್ಮನೇ ಇವನಿರುವನೆನ್ನುತ್ತ ಕೂಡಲೇ ಎಲ್ಲರೂ ಭಕ್ತಿಯುಕ್ತರಾಗಿ, ಸಿದ್ಧ ಯತೀಶ್ವರನಿಗೆ ಅಭ್ಯಂಗಸ್ನಾನ ಮಾಡಿಸಿದರು ಅಷ್ಟೋಪಚಾರದ ಪೂಜೆಗಳಿಂದ ಪೂಜಿಸಿ, ಮೃಷ್ಟಾನ್ನವನ್ನುಣಬಡಿಸಿ ತೃಪ್ತಿಗೊಳಿಸಿದರು ಮತ್ತು ಎರಡು ಮಾಸಗಳ ಪರಿಯಂತರ ತಮ್ಮಲ್ಲಿ ಇರಿಸಿಕೊಂಡು ಗುರುಕೃಪೆ ಪಡೆದರು ಮತ್ತು ಗುರುಮುಖದಿಂದ ತೈತ್ತರೀಯ ಉಪನಿಷತ್ತನ್ನು ನೆರೆ ಕೇಳಿ ಎಲ್ಲ ತತ್ವಗಳನ್ನು ಅರಿತುಕೊಂಡು ಗುರುಗಳನ್ನು ಬೀಳ್ಕೊಟ್ಟರು. ಎಂಬಲ್ಲಿಗೆ ಮಂಗಲ.

ಕಂದನೋರ್ವನು ಕ್ರೌಂಚ ಗಿರಿಯಂ ।
ಕಂದುಕದ ತೆರೆ ತೂರಲಿಕ್ಕದ ।
ಕಿಂದ್ರ ನಾರ್ಭಟಿಸುತ್ತ ವಜ್ರಂ ಗೊಂಡ ನೈಸರಲಿ ॥
ಬಂದು ವಿಧಿಯಾ ಬಾಲನಪ್ಪ ।
ಲ್ಕಂದು ರಾಘವನಂಕ ಕೇಳಲ್ ।
ಕಂದ ನವನಂ ನರಿದವರಿಗವನಪ್ಪ ನೊಪ್ಪಿರಲಿ ॥

ಇತಿ ಶ್ರೀ ಸಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ ಲೀಲಾ ಚರಿತ್ರ ಕಲ್ಪ ದ್ರುಮದೊಳು ಖಗೋಲ ವಿಚಾರವೆಂಬ ೧೮ ನೇ ಅಧ್ಯಾಯ

– ಸಮಾಪ್ತಿ –

॥ ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ॥



# ಸಂಚಾರ ಸಂಭ್ರಮ ಕಾಂಡ

## ಅಧ್ಯಾಯ ೧೯

॥ ಓಂ ತತ್ಸತ್ ॥

ಈ ಅಧ್ಯಾಯದಲ್ಲಿ ಪಂಜಾಬದಲ್ಲಿ ವೈದ್ಯರಿಗೆ ಆಯುರ್ವೇದದ ಮರ್ಮಗಳನ್ನು ತಿಳಿಸಿದ್ದು ಮತ್ತು ಅಮೃತಸರದಲ್ಲಿ ಶೀಖ ಜನರ ಓಂಕಾರ ಉಪಾಸನೆಗೆ ಉತ್ತೇಜನ ಕೊಟ್ಟದ್ದು.

ಜ್ಞಾನ ವಾಪಿ ಸ್ಥಳದಲ್ಲಿ ಸಾಧಕನಿಗೆ ಆಸನದ ಅಗತ್ಯವನ್ನೂ ಜ್ಞಾನಿಗೆ ಅದರ ಅಗತ್ಯವಿಲ್ಲವೆಂಬುದನ್ನೂ. ತಿಳಿಸಿದ್ದು. ಮತ್ತು ಕೇದಾರ ಘಟ್ಟದ ತುಂಡ ಪಾಣಿಯ ಲಿಂಗದೆಡೆಯಲ್ಲಿ, ಒಬ್ಬ ವಿಪ್ರನ ರೋಗವನ್ನು ನಿರ್ವಹಿಸಿ, ಪಂಚಾಕ್ಷರಿಯ ಬೋಧಿಸಿದ ವಿಷಯ ವಿರುವದು.

ಸ್ತೋತ್ರ— ಹರನೆ ತವಮತಿಯೆಂಬ ಮನದೊಳ್ |
ಕರುಣಿ ನಿನ್ನೋಂಕಾರ ಬೀಜವ |
ನಿರಿಸಿ ವೃಕ್ಷವ ಬೆಳಿಸಲಾ ವೃಕ್ಷಕ್ಕೆ ಬಹುತರದ ||
ಸುರಸ ಶಬ್ದಗಳೆಂಬ ಪೂಗಳು |
ಮೆರೆವ ವೇದಗಳೆಂಬ ಗುಚ್ಛಗ |
ಳಿರಲವನು ಸರಗೊಳಿಸಿರುವ ಋಷಿ ವೃಂದಕಾಂ ನಮಿಪೆ ||

## ಆಯುರ್ವೇದದ ರಹಸ್ಯ

ಸಿದ್ಧನು ಪಂಜಾಬಕ್ಕೆ ಬಂದನು. ಅಲ್ಲಿ ಚರಕ ಮುನಿ ಸಾಂಪ್ರದಾಯಕ ವೈದ್ಯನು, ಭೆಟ್ಟಿಯಾದನು. ಸಿದ್ಧನು ಅವನನ್ನು ಸರಸ ಮಾತುಗಳಿಂದ ಮಾತನಾಡಿಸಿದನು. ಆಗ ವೈದ್ಯನು, "ನಿನಗೆ ಚರಕ ಶಾಸ್ತ್ರದಲ್ಲಿ ಗತಿ ಇದ್ದಂತೆ ಕಂಡುಬರುವದು. ಅದು ಕಾರಣ ಆಯುರ್ವೇದದಲ್ಲಿ ವಿಧಿಸಲ್ಪಟ್ಟ ಆರೋಗ್ಯಾದಿ ಲಕ್ಷಣ ಮತು ರೋಗನಿವಾರಣೆಯ ಸಾಧನಗಳನ್ನು ನೀನು ತಿಳಿಸಿ ಹೇಳಬೇಕು," ಎಂದು ಕೇಳಿಕೊಂಡನು.

ಸಿದ್ಧನು ಅವನ ವಚನವನ್ನು ಸಾದರ (ಗೌರವ) ದಿಂದ ಸ್ವೀಕರಿಸಿ, ವೇದದಲ್ಲಿ ಹೇಳಿರುವ ಚರಕ ವಿಶ್ಯೆಯ ಅನುಭವವನ್ನು ಪೇಳಲನುವಾದನು.

"ವೈದ್ಯನೇ ಕೇಳು, ಮೊದಲು ದೇಹದ ರಚನೆ, ಚಲಿಸುವ ನಾಡಿಜ್ಞಾನ ಮತ್ತು ತ್ರಿದೋಷ ಲಕ್ಷಣಗಳನ್ನು ತಿಳಿದುಕೊಳ್ಳಬೇಕು. ಆ ಬಳಿಕ ರೋಗದ ಜ್ಞಾನವನ್ನೂ, ಆ ರೋಗದ ಪರಿಹಾರವಾಗುವ ಸಾಧನವನ್ನೂ ಮತ್ತು ಚಿಕಿತ್ಸಾದಿ ಪಂಚಕಗಳನ್ನು ಪೇಳುವೆನು," ಅವುಗಳನ್ನು ಚನ್ನಾಗಿ ಅರಿತುಕೊ.

ಮೊದಲು ವೈದ್ಯನು ನೀತಿ, ಧರ್ಮ, ಕರ್ಮೋಪಾಸನೆ ಮತ್ತು ಭೂತ ದಯೆಯಿಂದ ತಪವನ್ನಾಚರಿಸಿ, ಸಾತಿಶಯ ಪುಣ್ಯವನ್ನು ಸಂಪಾದಿಸಬೇಕು. ಪ್ರಖ್ಯಾತ ಗುರುವಿನಿಂದ ಬೋಧೆಯನ್ನು ಪಡೆದು, ಸ್ವಾರ್ಥವನ್ನು ತೊರೆದು ತೊಡೆ, ನಡೆ, ನುಡಿಗಳಲ್ಲಿ ಅತಿ ಶುದ್ಧ ಮನಸ್ಸಿನಿಂದ ಎಲ್ಲರಿಗೂ ತಾತನೆನಿಸಿ ಕೊಂಡು ಉಚ್ಚ—ನೀಚವೆಂಬ ಭೇದ-ಭಾವನೆ ತೊರೆದು, ಅಮೃತಹಸ್ತ, ವಾಕ್ ಸಿದ್ಧಿಯಾದಿಗಳನ್ನು ಪಡೆದುಕೊಂಡು ಎಲ್ಲ ರೋಗಿಗಳ ಮೇಲೆ ತನ್ನ ಕರುಣೆ ಬೀರುವವನೇ ವೈದ್ಯನೆನಿಸುವನು.

ಮೊದಲು ಮಾಡಿದ ಕರ್ಮದಿಂದ ಒದಗಿದ ರೋಗಮಯ ತನು ವೆಂಬುದು, ಮಹಾ ಪಂಚಭೂತಗಳಿಗೆ ಸಂಬಂಧಿಸಿದೆ ಇದು ರುಧಿರ ಮೊದ ಲಾದ ಸಪ್ತ ಧಾತುಗಳಿಂದ ಶ್ರೋತ್ರಾದಿ ನವ ರಂಧ್ರದಿಂದ, ಹನ್ನೊಂದು ಇಂದ್ರಿಯಗಳಿಗೂ, ಆರು ಕೋಶಗಳಿಂದ ಹೀಗೆ ಇಪ್ಪತ್ತೈದು ತತ್ವಗಳಿಂದ ಕೂಡಿದೆ. ಇದಕ್ಕೆ ಎಂಟು ಕೋಟಿ ರೋಮ, ಎಪ್ಪತ್ತೆರಡು ಸಾವಿರ ನಾಡಿ ಗಳಿವೆ. ತೊಂಭತ್ತಾರು ಬೆರಳುಗಳ ಉದ್ದಳತೆಯುಳ್ಳದ್ದು. ಆರು ವಿಕಾರ ಗಳಿಂದೊಡಗೂಡಿ ಕಾರಣ, ಪ್ರಾಣಾದಿಗಳಿಗೆ ಆಧಾರನಾದ ಜೀವನಿಗೆ, ಸುಖ ದುಃಖಗಳನ್ನುಳಿಸುವದಕ್ಕಾಗಿ, ಈ ತೋರ (ಸ್ಥೂಲ) ತನುವು ವಸತಿ (ಮನೆ) ಎನಿಸಿಕೊಂಡಿರುವದು. ಈ ಶರೀರವು ಶೋಣಿತ ಮತ್ತು ಶುಕ್ಲ ಸೇರಿ ಒಂದು ಮೂರ್ತಿಯಾಗಿ ಜನಿಸಿರುವದು. ಆದರೆ ನಡದ ಮೇಲೆ ಇರುವ ಉದರದಲ್ಲಿ ಅನ್ನ ಮಯ ಕೋಶವು ಇರುವದು. ಪ್ರಾಣಮಯ ಕೋಶವು ಎದೆಯಲ್ಲಿ ಇರುವದು. ರುಧಿಕೋಶ ಶ್ವಾಸಕೋಶಗಳೆರಡೂ ಅದರ ಎಡಬಲಕ್ಕೆ ಹೊಂದಿಕೊಂಡಿರು ವವು, ಮಸ್ತಕದಲ್ಲಿ ಮನೋಮಯಕೋಶವಿರುವದು. ಅದುವೇ ಸಂಕಲ್ಪ— ವಿಕಲ್ಪ ಮೊದಲಾದವುಗಳುಂಟು ಮಾಡುವ ಮೃದು ನರಗಳ ಪುಂಜವಾಗಿರು ವದು. ಅದರಲ್ಲಿರುವ ಮಿದುಳು ವಿಜ್ಞಾನಮಯಕೋಶವು. ಇದರ ನಿರ್ಮ ಲತ್ವವನ್ನು ಅರಿಯುವ ಮತ್ತು ಮನವು ಲಯಿಸುವ ಸ್ಥಳವೇ ಆನಂದಮಯ ಕೋಶವು. ಹೀಗೆ ಆರು ಕೋಶಗಳುಂಟು.

ಎದೆಯಲ್ಲಿರುವ ಶೋಣಿತ ಕೋಶವೇ ಹೃದಯ ಕಮಲವು. ರಕ್ತ ಹರಿಯುವ ನರಗಳು ಅಂತರ್—ಬಾಹಿರವೆಂದು ಎರಡುಬಗೆಯಾಗಿರುವವು.

ಸ್ತ್ರೀಯರಿಗೆ ಋತುಕಾಲ ಒದಗಲು ರಕ್ತವನ್ನು ಬಾಹ್ಯನಾಡಿಯು ಹೊರಗೆ ಹಾಕುವದು. ಶ್ವಾಸಕೋಶವು ಕಫಸ್ಥಾನವೆನಿಸಿಕೊಂಡಿದ್ದು ರಕ್ತವನ್ನು ಶುದ್ಧೀಕರಿಸುವದು. ಎಡ-ಬಲಗಳಲ್ಲಿರುವ ನಾಡಿಗಳಲ್ಲಿ ಒಂದು ನಾಡಿಯು ಕೆಟ್ಟ ಎಲ್ಲ ರಕ್ತವನ್ನು ಕೂಡಿಸುವದು. ಇನ್ನೊಂದು ನಾಡಿಯು ಶುದ್ಧರಕ್ತವನ್ನು ಸಂಗ್ರಹಿಸುವದು. ಪಿತ್ತ ಕೋಶವು ಉದರದ ಬಲಕ್ಕೆ ಕೆಳಮುಖ ಮಾಡಿ ಕದಳಿಯ ಮೊಗ್ಗೆಯಂತೆ ಜೋಲು ಬಿದ್ದಿರುವದು. ಉದರದ ಎಡಕ್ಕೆ ನೀಲಬಣ್ಣದ ಗುಲ್ಮವು ಜ್ವರವನ್ನು ಹುಟ್ಟಿಸುವದು.

ಇನ್ನು ಶಿರದಲ್ಲಿರುವ ಮಿದಳಿನ ನಾಡಿಯನ್ನು ವಿಚಾರಿಸುತ್ತಿರಲಿಕ್ಕೆ ಅದು ಬೆನ್ನೆಲುವಿನ ಉಂಗರಗಳನ್ನು ಜೋಡಿಸಿಕೊಂಡು, ಸರಳ ರಂಧ್ರದಲ್ಲಿ ಹಾಯ್ದು ನಾಭಿಯ ಕಂದವನ್ನು ಬಿಗಿದು, ತನ್ನ ಶಿರವನ್ನು ಮೂತ್ರಸ್ಥಾನದಲ್ಲಿರಿಸಿ ಶೋಭಿಸುತ್ತಿರುವದು. ಅದರಿಂದ ಸೂಕ್ಷ್ಮ ನಾಡಿಗಳು ಆ ಎಲುಬಿನ ಉಂಗರಗಳ ಸುತ್ತಲಿರುವ ಸಂದಿಯೊಳಗಿಂದ ಸರ್ವಾಂಗವನ್ನು ವ್ಯಾಪಿಸುತ್ತ ಸುಖ-ದುಃಖಕ್ಕೆ ಕಾರಣಗಳಾಗಿರುವವು. ಮತ್ತು ಸುಷುಮ್ನಾ ನಾಡಿಯು ನೆತ್ತಿಯಿಂದ ಕೆಳಮುಖವಾಗಿ ಹರಡಿಕೊಂಡಿರುವದು. ಅದು ಕಾರಣ ವೇದವು, ಈ ಶರೀರಕ್ಕೆ ವಿಷಯವಾದ ಸುಖ-ದುಃಖದ ಮೊಟ್ಟೆಯೆಂದು ಸಂತೋಷದಿಂದ ಹೇಳಿರುವದು.

ಇದರಲ್ಲಿರುವ ಅನ್ನದ ಚೀಲಕ್ಕೆ ಉದರವೆಂಬುವರು. ಕೆಳಗಿರುವ ಕಿಬ್ಬೊಟ್ಟೆಯೆಂಬುವದೆ ಮಲದ ಚೀಲವು. ಬಳಿಕೆ ಅವೆರಡರ ಪಕ್ಕಗಳಲ್ಲಿ ಜಲದ ಕೋಶಗಳಿಂದ ಇಳಿದಿರುವ ನರಗಳೇ ಮೂತ್ರ ನಾಡಿಗಳೆಂದು ಹೇಳಿಸಿ-ಕೊಳ್ಳುವವು. ಮಲದ ಮುಂಬದಿಗಿರುವ ಗೆಜ್ಜೆಯ ಕೆಳಗಿನ ಚೀಲವೇ, ಮೂತ್ರ ಕೋಶವು. ಇವು ಒಂದಕ್ಕೊಂದು ಸಂಬಂಧವಾಗಿರುವವು. ಎಲುವಿನ ಕೀಲ್ಪಾಳಿಗಳು. ಎಲುವಿನ ಕವಚಗಳು. ಇವು ಒಂದಕ್ಕೊಂದು ಸಂಬಂಧಿಸಿರುವವು. ಬಿಂದು (ವೀರ್ಯ) ಕೋಶವು ಶುಕ್ಲಕ್ಕೆ ಸ್ಥಾನವಾಗಿರುವದು. ಇದು ಆಸನ (ಗುದ) ಮತ್ತು ವೃಷಣ (ತರಡು) ಗಳ ಮಧ್ಯದಲ್ಲಿ ಇರುವದು. ಮತ್ತು ವೃಷಣದ ಚಿಕ್ಕ ನರಗಳು, ಸ್ತುತಿ ಚೀಲದಂತೆ ಎರಡಿರಲು ಅದಕ್ಕೆ ಅಂಡಕೋಶಗಳೆನ್ನುವರು. ಅವು ಎರಡು ವೃಷಣಗಳನ್ನು ಜೋಲುಗೆಡವಿರುವ ಎರಡು

ನರಗಳ ಕುಣಿಕೆಗಳು, ಗರ್ಭಕೋಶಕ್ಕೆ ವ್ಯಾಪಿಸಿಕೊಂಡು ಮುಂದೆ ನಾಭಿಯ ನಾಳವನ್ನು ಸೇರಿರುವವು. ಈ ಪ್ರಕಾರ ನರನಾಡಿಗಳು ತಮ್ಮ ತಮ್ಮೊಳಕ್ಕೆ ಒಂದಕ್ಕೊಂದು ಸಂಬಂಧವಾಗಿರುವವು. ಮಾಂಸವೇ ಪರಿಣಮಿಸಿ ಗ್ರಂಥಿಗಳಾಗಿರುವವು. ಅವುಗಳಿಗೆ ಚರ್ಮದ ಹೊದಿಕೆ ಇರುವದು. ಆ ಪರೆಗಳು ಮಾಂಸ ಮತ್ತು ಚರ್ಮಗಳ ನಡುವಿದ್ದು ಆ ಗ್ರಂಥಿಗಳನ್ನು ಪರಿಶುದ್ಧವಾಗಿ ಕಾಪಾಡುವದು. ನಂತರ ದಪ್ಪನ್ನ ಚರ್ಮವು ದೇಹಕ್ಕೆ ಹೊಂದಿಕೆಯಾಗಿದೆ. ಅದರಲ್ಲಿ ರೋಮ ಕೂಪಗಳಿದ್ದು ಅವೇ ತಿಳಿಯುವ ಸ್ಪರ್ಶಸ್ಥಾನಗಳು. ಬಳಿಕ ಉಂಡ ಅನ್ನವು ಜಠರಕ್ಕೆ ಇಳಿಯಲು, ಅಲ್ಲಿರುವ ಅಗ್ನಿಯಿಂದ ಅದು ಬೇಯುತ್ತ ರಸವಾಗಿ ಗಂಜಿಯಾಗುವದು. ಬಳಿಕ ಅದು ತಿಳಿರಕ್ತವಾಗುತ್ತ, ಸರ್ವ ನರಗಳಲ್ಲಿ ಸೇರಿ ಹರಿದಾಡುವದು. ಹರಿಯುವ ರಕ್ತಕ್ಕೆ ಅಡ್ಡಿ ಬರಲು, ಅದು ಅಲ್ಲಿಯೇ ಗಡ್ಡೆಗಟ್ಟಿ ಕುರುವೆನಿಸಿಕೊಂಡು ಬಾಧಿಸುವದು. ತಡೆಗಟ್ಟಿದ ಸ್ಥಾನದಲ್ಲಿ ಒಣಗಿದ ಮರದ ಚಕ್ಕೆಯಂತೆ ಸ್ಪರ್ಶಜ್ಞಾನವಾಗದಿರುವದೇ, ದಡ್ಡೆಂದು ಹೇಳಿಸಿಕೊಳ್ಳುವದು. ಹರಿಯುವ ರಕ್ತದ ಒತ್ತಡ ಹೆಚ್ಚಾದರೆ ಅದು ಛಳಕ ಎನಿಸುವದು. ಹೃದಯದೊಳಗೆ ರಕ್ತದ ಒತ್ತಡವು ಅತ್ಯಧಿಕವಾದರೆ, ಇಲ್ಲವೆ ಅತಿ ಕಡಿಮೆಯಾದರೆ, ಅಥವಾ ವಿಷವು ಕೂಡಿದರೆ ಮೊದಲು ರೋಗ ರುಜಾದಿಗಳು ತೋರಿ, ಬಳಿಕ ಮರಣ ಒದಗುವದು. ಅದು ಕಾರಣ ಆರೋಗ್ಯದಿಂದ ಬದಿಕಿರುವದಕ್ಕೆ ಶುದ್ಧ ರಕ್ತವೇಮೂಲ ಕಾರಣವು.

ಇನ್ನು ಪ್ರಾಣವು ರಸಮಯವೆಂದು ವೇದ ವೇಳುವ ಕಾರಣ ವೈದ್ಯನು ಲೂದಲಿಗೆ ಇವೆಲ್ಲವನ್ನು ಶೋಧಿಸುತ್ತ ಗುರುಕೃಪೆ ಪಡೆಯಬೇಕು. ಇನ್ನು ಪುರುಷನಿಗೆ ಬಲಬದಿಗೆ ಮತ್ತು ಸ್ತ್ರೀಯರಿಗೆ ಎಡಬದಿಗೆ ನಾಭಿಯಿಂದ ಎರಡು ಅಂಗುಲ ಅಂತರದ ಮೇಲೆ ಬತ್ತದ ಕಾಳಿನ ಹಾಗೆ ಮೆರೆಯುತ್ತಿರುವ ಜಠರಾಗ್ನಿ ಇರುವದು. ಅದು ನಿರುತ ಮೈತುಂಬ ವ್ಯಾಪಿಸಿ ಅನ್ನವನ್ನು ಜೀರ್ಣಿಸುವದು ನಾಡಿಗಳು ಚಲಿಸದಂತೆ ಬಿಸಿಹುಟ್ಟುವದೇ ಒಳಗಿರುವ ಗರ್ಭೋಷ್ಣವೆಂದು ತಿಳಿಯಬೇಕು.

ಹೃದಯದ ಚಲನೆಯು ಮತ್ತು ಶ್ವಾಸೋಚ್ಛ್ವಾಸ ಚಲನೆಯು ನಡೆಯಲಿಕ್ಕೆ ಇವೇ ಮೂಲಕಾರಣವು. ಬಿಸಿರಕ್ತ ಚಲನವು ಒಡಲೊಳಗಿರುವ

ಜೀವನಿಗೆ ಮೂಲ ಆಧಾರವು. ಇದಕ್ಕೆ ಹಲವರು ದೇಹ ಶಕ್ತಿ ಎನ್ನುವರು. ಈ ಪ್ರಕಾರ ವೈದ್ಯನು, ದೇಹದಲ್ಲಿ ಎಲ್ಲ ರಚನೆಗಳನ್ನು ಅನಂತ ಬಗೆಯಿಂದ ವಿಚಾರಿಸಿ, ತಿಳಿದ ನಂತರ ತಾನು ನಾಡಿಜ್ಞಾನ ಮಾಡಿಕೊಳ್ಳಬೇಕು. ಅದು ಹೇಗೆಂದರೆ ಪುರುಷರ ಬಲಗೈಯನ್ನೂ ಮತ್ತು ಸ್ತ್ರೀಯರ ಎಡಗೈಯನ್ನೂ ಶಾಸ್ತ್ರವಿಧಿಯಂತೆ ನಿರೀಕ್ಷಣೆ ಮಾಡಬೇಕು. ಮೊದಲು ತಾನು ಚತುರತನ ದಿಂದ ಸರ್ವನಾಡಿಗಳನ್ನು ಸರಿಯಾಗಿ ಶೋಧಿಸಿ ಸದ್ಯಕ್ಕೆ ಒಂಭತ್ತು ನಾಡಿ ಸ್ಥಳಗಳನ್ನು ಮುಟ್ಟಿ ಅವುಗಳಿಂದುಂಟಾಗುವ ಗತಿಗಳನ್ನು ಅರಿತು ತಿಳಿಯುವದು ಯೋಗ್ಯವು. ಹೆಬ್ಬೆರಳುಗಳ ನರದ ಗತಿಯು ಪ್ರಾಣಕ್ಕೆ ಮೂಲ ಸಾಕ್ಷಿಯಾ-ಗಿರುವದು.

## ರೋಗಿಯನ್ನು ಪರೀಕ್ಷಿಸುವದು

ವೈದ್ಯನಾದವನು ತನ್ನ ತರ್ಜನಿ, ಮಧ್ಯಮ, ಅನಾಮಿಕೆ (ಉಂಗರ ಇಡುವ ಬೆರಳು)ಗಳೆಂಬ ಮೂರು ಬೆರಳುಗಳ ತುದಿಯಿಂದ ರೋಗಿಯ ಹಸ್ತ ದಲ್ಲಿರುವ ನಾಡಿಗಳನ್ನು ಪರೀಕ್ಷಿಸುತ್ತ ರೋಗದ ಸಾಧ್ಯಾ-ಸಾಧ್ಯವೆಂಬುದನ್ನು ತಿಳಿದುಕೊಳ್ಳಬೇಕು. ತನ್ನ ತರ್ಜನಿ ಬೆರಳ ಸ್ಪರ್ಶದ ನರದ ಚಲನಗತಿಯು ಹೆಚ್ಚು ಹಾರುತ್ತಿದ್ದರೆ ವಾತವೆಂತಲೂ, ಮಧ್ಯಮ ಬೆರಳ ಸ್ಪರ್ಶದ ನರದ ವೇಗವು ಭರದಿಂದ ಚಲಿಸುತ್ತಿದ್ದರೆ ಪಿತ್ತವೆಂತಲೂ, ಅನಾಮಿಕ ಬೆರಳ ಸ್ಪರ್ಶದ ನಾಡಿಯ ಗತಿಯು ಹೆಚ್ಚಿದರೆ ಅದು ಶ್ಲೇಷ್ಮ (ಕಫ)ವೆಂದು........ತಿಳಿದು ಕೊಳ್ಳಬೇಕು. ರೋಗಿಯ ಮುಖಲಕ್ಷಣ, ಶ್ವಾಸದ ಗತಿ, ಸ್ವರ ಮತ್ತು ಶಿತೋಷ್ಣಾದಿಗಳನ್ನು ನೋಟದಿಂದಲೂ, ಸ್ಪರ್ಶದಿಂದಲೂ ಪರೀಕ್ಷಿಸಿ ರೋಗವನ್ನು ತಿಳಿಯಬೇಕು. ವಾತ, ಪಿತ್ತ ಮತ್ತು ಶ್ಲೇಷ್ಮ ನಾಡಿಗಳು ತಮ್ಮ ಸ್ಥಾನಗಳಲ್ಲಿ ಸಮನಾಗಿ ಚಲಿಸುತ್ತಿದ್ದರೆ ಅದು ಆರೋಗ್ಯ ಸ್ಥಿತಿಯೆಂದು ತಿಳಿಯಬೇಕು. ಮತ್ತು ಆ ನರಗಳ ಗತಿಯು ವಿಷಮ ಸ್ಥಿತಿಯೆಂದು ತಿಳಿದು ಬಂದರೆ ರೋಗ ಲಕ್ಷಣವೆಂದು ಗುರ್ತಿಸಬೇಕು.

ಹಾವಿನಂತೆ, ಏಡಿಯಂತೆ ವಕ್ರಗತಿಯಿಂದ ಹಾರುವದೆ ವಾತಕುಪಿತ (ಉದ್ರೇಕ) ನಾಡಿ ಎಂದು ಸಾವಧಾನದಿಂದ ಅರಿತುಕೊಳ್ಳಬೇಕು. ಮತ್ತು ಅದು

ಕಾಕನಂತೆ ಅಥವಾ ಕಪ್ಪೆಯಂತೆ ಝಾವ–ಝಾವಕೆ ಹಾರುವದೇ ಪಿತ್ತನಾಡಿಯು ಪಾರಿವಾಳ ಅಥವಾ ಹಂಸಪಕ್ಷಿಯ ಗಮನದಂತೆ ಹಾರುತ್ತಿದ್ದರೆ ಅದು ಶ್ಲೇಷ್ಮ ನಾಡಿಯೆಂದು ತಿಳಿಯಬೇಕು. ಬತ್ತದ ಅರಳಿನಂತೆ ಉಬ್ಬಿಸುವ ನಾಡಿಯೇ ವಾತವೆನಿಸುವದು. ಪಿತ್ತ, ವಿಷ, ಲವಣ, ಹುಳಿ ಮೊದಲಾದ ರಸಗಳು ಒಟ್ಟುಗೂಡಿ ಹೃದಯ ಕೋಶದಲ್ಲಿ ಇರುವದೇ ಪಿತ್ತವೆನಿಸುವದು. ಬಳಿಕ ಅದು ಶೀತ ಲಕ್ಷಣ ತಳೆದು, ಲೊದಡಿಯಾಗಿ ಉಸುರಿನ ಕೋಶದಲ್ಲಿ ಮತ್ತು ಕಂಠದ ಕೊಳವಿಯಲ್ಲಿ ಇರುವದೇ ಶ್ಲೇಷ್ಮವೆನಿಸುವದು. ಇನ್ನು ತಿತ್ತಿರಿ ಪಕ್ಷಿಯಂತೆ ಉತ್ತರೋತ್ತರ ವಿಷಮ ಗತಿ ಹೆಚ್ಚುತ್ತ ಇದ್ದರೆ, ಅದು ಸನ್ನಿಪಾತಕ ಲಕ್ಷಣವು ಶ್ಲೇಷ್ಮದ ಕೊರತೆಯಾದರೆ ಪಿತ್ತವು ಹೆಚ್ಚುವದು. ಆ ಪಿತ್ತಕ್ಕೆ ವಾತವು ಕೂಡಲು, ಅದು ಪಿತ್ತವಾತವು, ಪಿತ್ತಗತಿ ಕಡಿಮೆಯಾಗಿ, ಶ್ಲೇಷ್ಮ ವಾತದ ವತ್ತಡವು ಹೆಚ್ಚಿದರೆ, ಅದು ಶೀತವಾತವೆಂದು ಹೇಳಿಸಿಕೊಳ್ಳುವದು. ವಾತಕ್ಕಿಂತಲೂ ಶ್ಲೇಷ್ಮ ಹೆಚ್ಚಾದರೆ, ವಾತ, ಶೀತವೆಂದು ಹೇಳಿಸಿಕೊಳ್ಳುವದು. ವಾತ ಕ್ಷೀಣಿಸಿ ಶ್ಲೇಷ್ಮಕ್ಕಿಂತ ಪಿತ್ತ ವರ್ಧಿಲು ಅದು ಶೀತ-ಪಿತ್ತವೆನಿಸುವದು. ಪಿತ್ತಕ್ಕಿಂತ ಶ್ಲೇಷ್ಮವು ಅಧಿಕವಾದರೆ ಅದು ಪಿತ್ತ-ಶೀತವೆನಿಸುವದು.

ನರವು ಸ್ಥಾನಾಂತರವಾಗುತ್ತ ಸ್ಫುರಿಸಿದರೆ, ಅದು ಘಾತುಕ ಚಿನ್ಹವು. ಮತ್ತು ನಾಡಿಯು, ಕೆಲಕಾಲ ತನ್ನ ಸ್ಥಾನದಲ್ಲಿ ಕೆಲ ಕಾಲ ಸ್ಥಾನಾಂತರದಿಂದ ಗತಿಸಿದರೆ, ಅದು ಮರಣ ಸೂಚಕವು. ನಾಡಿಯ ಗತಿಯು, ವೇಗದಲ್ಲಿದ್ದು ಬಿಸಿಯಿದ್ದರೆ ಅದು ಜ್ವರದ ಲಕ್ಷಣವು. ಬಳಿಕ ಆಶೆ, ಕೋಪ, ಭಯ ನಿರುತ ಚಿಂತನಾದಿಗಳಲ್ಲಿರುವವರ ನಾಡಿಯು, ಸೂಕ್ಷ್ಮತೆಯನ್ನು ಹೊಂದುತ್ತ ತೀವ್ರವಾಗಿ ಗತಿಸುವದು.

ಧಾತು ಪುಷ್ಟಿ ಕ್ಷೀಣಿಸಿದವನ, ಮತ್ತು ಮಂದಾಗ್ನಿಯುಳ್ಳವನ ನಾಡಿಯು ಬಹು ಮಂದ ಗತಿಯಿಂದ ನಡೆಯುವದು. ತನುವಿನಲ್ಲಿ ಮಾಂಸ ರಕ್ತವು ಹೆಚ್ಚಿದರೆ ನಾಡಿಯು ತುಸು ಬಿಸಿಯಾಗುವದು. ಬೆಳವಣಿಗೆ ಯಾದವನ ನರದ ಚಲನೆಯು ಬಲವಾಗಿದ್ದು, ಮಂದಗತಿಯಿಂದ ಚಲಿಸುವದು ಜಠರಾಗ್ನಿಯ ವರ್ಧನೆಯು ನರವು, ನಿರುತ ಲಗುಬಗೆಯಿಂದ ಗತಿಸುತ್ತಿರುವದು.

ಇನ್ನು ಪರಮ ಸುಖಿಗಳ ನಾಡಿಯು ಸ್ಥಿರತೆಯಿಂದ ಬಲವಾಗಿ ವರ್ತಿಸುವದು. ಹಸಿದವನ ನಾಡಿಯು ಚಪಲತೆಯಿಂದ ಚಲಿಸುವದು. ಭೋಜನದಿಂದ ತೃಪ್ತನಾದವನ ನಾಡಿಯು, ಶಾಂತಿ ಸಮತೆಯಿಂದ ನಡೆಯುವದು ಈ ರೀತಿ ನಾಡಿಗಳ ತಿಳವಳಿಕೆಯಿಂದ, ರೋಗವನ್ನು ಗುರುತಿಸಿಕೊಳ್ಳಬೇಕು.

ಇನ್ನು ಗ್ರಹ ಪೀಡಿತರ ನಾಡಿಯನ್ನು ಪರೀಕ್ಷಿಸಲು, ಅದು ವಾತ, ಪಿತ್ತಗಳೆರಡರ ಸಂಕಲನವಾಗುತ್ತ ಕಂಪಿಸುವದು. ಮತ್ತು ಹೆಚ್ಚು ವೇಗಗೂಡಿ ಗತಿಸುವದು, ಅದನ್ನು ಸ್ಪರ್ಶಿಸಿ ನೋಡಲು ಒಮ್ಮೆ ತಣ್ಣಗೂ, ಮತ್ತೊಮ್ಮೆ ಬಿಸಿಯಾಗಿಯೂ ಇರುವದು. ಕ್ರೂರ ನೋಟವು, ಕೆಂಪು ಕೆಂಗೊನೆ, ಆವೇಶ, ದುಡಿ, ದುರ್ಬಲತೆ, ನಿರಾಹಾರದಿಂದಿರುವದು, ಇಲ್ಲವೆ ಮಿತಿ ಇಲ್ಲದೆ ಉಣ್ಣುವದು, ಘೋರ ಸ್ವರದಿಂದ ಭಯಗ್ರಸ್ತನಾಗುವದು, ಹಾರಿ ಬೀಳುವದು ಹೀಗೆ ಲಕ್ಷಣಗಳು ಕಂಡುಬರುವವು.

ಇನ್ನು ಗರ್ಭಿಣಿ ಸ್ತ್ರೀಯರ ಸ್ನಾಯುವಿನೊಳಗಿರುವ ಅರುಂಧತಿ ನಾಡಿ-ಯಿಂದೊಡಗೂಡಿ ಪೊಳೆವ ವಶಿಷ್ಠ ನಾಡಿಯು, ತಾರೆಯರಂತೆ ಅತಿಸೂಕ್ಷ್ಮಗತಿಯಿಂದ ಚಲಿಸುವದು. ವೃದ್ಧರ, ಬಾಲಕರ, ಉನ್ಮತ್ತರಾಗಿರುವವರ ನಾಡಿ-ಗಳು, ಅತಿ ಸೂಕ್ಷ್ಮವಾಗಿರುವದರಿಂದ ಅವು ಸ್ಪರ್ಶಕ್ಕೆ ತಿಳಿಯಲಾರವು. ನಾಡಿ-ಗಳ ಪರಿಜ್ಞಾನವಿದ್ದ ವೈದ್ಯನು ರೋಗಿ ಉಂಡದ್ದನ್ನು ಅವನ ಆಯುಷ್ಯ ಮೊದಲಾದವುಗಳನ್ನು ಗುರುಕೃಪೆಪಡೆದು ಎಲ್ಲವನ್ನೂ ಪೇಳಬಲ್ಲನು.

## ವಾತಾದಿ ಮೂರು ದೋಷಗಳು

ಇನ್ನು ವಾತಾದಿ ಮೂರು ದೋಷಗಳನ್ನು ತಿಳಿದುಕೋ. ಬಹು ನೃದು ಬಹಳ ಬಿಸಿಯಾದ ಅನ್ನವನ್ನು ಅತಿ ಸ್ವಲ್ಪ ಉಂಡರೆ, ಗಾಳಿ, ಛಳಿ, ನೀರು ಇವು ಹಗೆಗಳಾದೊಡೆ, ಮನವನ್ನು ತಡೆದೊಡಿ, ಆಶೆ, ದಃಖ, ಭಯ, ವ್ಯಸನಂಗಳೊದಗಿದೊಡೆ, ನಿದ್ರೆ ತಡೆದೊಡೆ, ಶ್ರಮವಗೈದೊಡೆ ಸಂಧ್ಯಾಕಾಲ ದೊಳು ಉಂಡದ್ದು ಅಜೀರ್ಣವಾದೊಡೆ ಮತ್ತು ಧಾತುವಿನ ಬಲವು ಕ್ಷೀಣಿಸಿ ದೊಡೆ ತನುವನು ಉಬ್ಬಿಸುವದೇ ವಾತದೋಷವು.

ಇನ್ನು ಖಾರ, ಹುಳಿ, ಲವಣಗಳನ್ನು ಬಹು ಬಿಸಿಯಾಗಿರುವ ಪದಾರ್ಥ ಗಳನ್ನು ಸೇವಿಸಲು ಅವು ಪಚನವಾಗದೆ ಎದೆ ಯುರಿಯನ್ನು ಸಂಕಟವನ್ನು

ಅಜೀರ್ಣವನ್ನು ಮತ್ತು ಭ್ರಮಣವನ್ನು ಉಂಟು ಮಾಡುವದೇ ಪಿತ್ತ ದೋಷವು.

ತಾನು ಮಧುರ ಪದಾರ್ಥಗಳನ್ನು ತಣ್ಣಗಾದ ಅಡಿಗೆಯನ್ನು ಪ್ರೀತಿಯಿಂದ ಸ್ವೀಕರಿಸುವದು, ಹಗಲು ನಿದ್ರೆಗೈಯುವದು, ಭೋಜನವಾದ ಬಳಿಕ ಆತುರದಿಂದ ಶ್ರಮವ ಗೈಯುವದು, ನೀತಿ ತಪ್ಪುತ್ತ ಬೆಳಗಿನ ಜಾವದಲ್ಲಿ ಕಡು ಕಷ್ಟದಿಂದ ಕೆರಳುವದು– ಈ ಲಕ್ಷಣಗಳು ಶ್ಲೇಷ್ಮ ದೋಷವು.

## ರೋಗವು ಹುಟ್ಟುವ ಕ್ರಮ

ಇನ್ನು ರೋಗಗಳು ಹುಟ್ಟುವ ಕ್ರಮವನ್ನು ತಿಳಿಸುತ್ತೇನೆ ಆಲಿಸು. ಜೀವನು ತಾನು ಮುನ್ನ ಮಾಡಿದ ಕರ್ಮಫಲವನ್ನು ಉಣ್ಣುವದಕ್ಕೆ ಮನಸ್ಸಿನ ವಶನಾಗುವನು. ಆ ಮನಸ್ಸಿನ ಅಧೀನದಲ್ಲಿ ದಶೇಂದ್ರಿಯಗಳಿರುವವು. ಪೂರ್ವ ಕರ್ಮಾನುಸಾರ ಸುಖ–ದುಃಖ ರೂಪ ಫಲವನ್ನು ಉಣ್ಣುವ ನಿಮಿತ್ತ ನೀರು ಕೂಳಿನ ವಿಕಾರದಿಂದ ಸೋರುತ್ತಿರುವ ಮುಟ್ಟಿನಲ್ಲಿ ವೀರ್ಯವು ಜಾರುತ್ತ ಸತಿ–ಪತಿಗಳೀರ್ವರ ಸಂಯೋಗದಲ್ಲಿ, ಪಿಂಡವಾಗುತ್ತದೆ. ಅದು ಹಿಂದೆ ಹೇಳಿದ ಮೂರು ದೋಷಗಳಿಂದ ರಚಿತವಾಗಿ ತನುವೆನಿಸಿ ಜೀವನೊಡಗೊಂಡು ಬಂದಿರುವದು. ಇದಕ್ಕೆ ಅನ್ನ, ನೀರು, ಹವೆ ಇವೆಲ್ಲವು ರೋಗ ರುಜಾದಿಗಳನ್ನು ತಂದೊಡ್ಡುವವು. ಹೇಗಂದರೆ ಪೂರ್ವಕರ್ಮವು ಮನಸ್ಸಿನೊಳಗೆ ಸೇರಿರಲು ಆ ಮನಸ್ಸು ವಿಷಮವೆನಿಪ ವಿಷಯಕ್ಕೆ ಆಶಿಸಿ ಅದರ ಬೆಂಬತ್ತಿ ತನುವಿಗೆ ರೋಗಾದಿಗಳನ್ನುಂಟು ಮಾಡಿ ಉಣಿಸುವದು. ವೈರಿಯೆಂದೆನಿಸುವ, ಆ ಕರ್ಮನಾಶಕ್ಕೆ ಕರುಣದಿಂದ ಜಗತ್ತನ್ನು ಪೊರೆಯುವ, ಪರಶಿವನನ್ನು ನಿರುತ ಮನದಲ್ಲಿ ಪ್ರೀತಿಯಿಂದ ನನೆಯುತ್ತ, ವಿಷಯಗಳಿಗೆರಗುವ ಮನಸ್ಸನ್ನು ತಡೆಹಿಡಿದು, ತನ್ನ ವಶ ಮಾಡಿಕೊಳ್ಳುತ್ತ, ಇತಿ–ಮಿತಿಯಿಂದ, ಹಿತವಾದ ಅನ್ನವನ್ನು ಉಪಭೋಗಿಸಲಾಗಿ ಅದು ಆರೋಗ್ಯಮಕ್ಕುಂ। ಇದನ್ನು ತಿಳಿಯದೆ ಸ್ವತಂತ್ರದಿಂದ ಆಚರಿಸಿ ರೋಗದ ಬೀಜ ಬಿತ್ತುವನು. ತನುವಿಗೆ ವಿರೋಧವೆನಿಸುವ ತರುಣಿ ಮೊದಲಾದ ವಿಷಯಗಳನ್ನು ಅತಿ ಆತುರತೆಯಿಂದ ಮಿತಿ ಮೀರಿ ಭೋಗಿಸಲು ಬಹುತರದ ಜ್ವರಗಳು, ವಾಂತಿ ಭ್ರಾಂತಿ, ಅತಿಸಾರ, ಕಾಯಿಲೆ, ಮೂಲವ್ಯಾಧಿ, ಕುಷ್ಟರೋಗ, ಬಾಣಂತಿಬೇನೆ,

ಅಜೀರ್ಣ, ಕ್ಷಯ, ಪ್ರಮೇಹ (ಜನನೇಂದ್ರಿಯದ ಒಂದು ವ್ಯಾಧಿ) ಧಾತು-ಕ್ಷಯಾದಿ ರೋಗಗಳು ಉದಿಸುವವು.

## ರೋಗ ಪರಿಹಾರಕ್ಕೆ ಉಪಾಯ

ಆ ರೋಗಗಳಿಗೆ ಆಯುರ್ವೇದವು ಹೇಳಿರುವ ಪರಿಹಾರವನ್ನು ತಿಳಿಸಿ ಕೊಡುತ್ತೇನೆ ತಿಳಿದುಕೊ. ಪೊಡವಿಯಲ್ಲಿ ಉದ್ಭಿಜ, ಖನಿಜ, ಪ್ರಾಣಿಜ ಈ ಮೂರರಲ್ಲಿ ವೈದ್ಯರು ಔಷಧ ಮಾಡುವರು. ಮುಂದೆ ಪಾಷಾಣ, ರಸ, ಧಾತು (ಲೋಹ) ಗಳಿಂದು ಮೂರು ಪ್ರಕಾರದ ಖನಿಜಗಳಲ್ಲಿ ಸಿಂಧೂರ, ಮಂಡೂರ (ಕಬ್ಬಿಣದ ಕಿಟ್ಟ) ತಾಮ್ರ, ಭಸ್ಮ ಮೊದಲಾದವುಗಳನ್ನು, ಉದ್ಭಿಜದಿಂದ ಫಲ (ಜಾಜಿಕಾಯಿ) ವಲ್ಲರಿ (ಬಳ್ಳಿ), ಕಂದ (ಗಡ್ಡಿ) ಮೂಲಿಕೆ (ಬೇರು) ಪತ್ರಪುಷ್ಪಗಳಿಂದ ಚೂರ್ಣ (ಸುವಾಸಿಕ ಪುಡಿ), ಕಷಾಯ, ಲೇಹ್ಯ (ನೆಕ್ಕು-ವದು) ಮಾತ್ರೆ ಮೊದಲಾದವುಗಳನ್ನು ಮತ್ತು ಚರಕ ಮುನಿ ಸಾಂಪ್ರದಾಯಕರಾದ ವೈದ್ಯರು ಪಕ್ಷಿ, ಕ್ರಿಮಿ, ಮೃಗ ಮತ್ತು ಜಲಕರ ಮಕ್ಷಿಕಾದಿ ಪ್ರಾಣಿಗಳ ರಕ್ತ, ಸುರಸ, ಮಾಂಸ, ಅಸ್ತಿ ಮೊದಲಾದವುಗಳನ್ನು ಗಿಡ ಮೂಲಿಕೆ, ಬೆಲ್ಲ, ಫಲಾದಿಗಳಲ್ಲಿ ಬೆರೆಯಿಸಿ ಇಂತು ಲೇಹ್ಯಾದಿಗಳನ್ನು ರಚಿಸುವರು. ಬಳಿಕ ವೈದ್ಯನು ರೋಗಿಯಾದವನ ತಳ (ಅಂಗಾಲ) ನಡ, ತಲೆ, ಎದೆ ಮೊದಲಾದ ಎಲ್ಲ ಅವಯುವಗಳನ್ನು ಕಾಲಕ್ಕನುಸರಿಸಿ, ಚಿಕಿತ್ಸೆಮಾಡಿ ಅವನ ರೋಗದ ಸಾಧ್ಯಾಸಾಧ್ಯವನ್ನು ತಿಳಿದುಕೊಳ್ಳಬೇಕು ಮತ್ತು ಅನ್ನದ ರಸವು ಉದರದಲ್ಲಿ ಇಳಿದು ಅದು ಏಳುವ ದಿನಗಳಿಗೆ ಚನ್ನಾಗಿ ಒಂದೊಂದು ಪ್ರಕಾರದ ರೂಪಾಂತರ ಹೊಂದುತ್ತ ರಕ್ತಾದಿ ಧಾತುಗಳಾಗುವವು.

ಬಲ್ಲ ವೈದ್ಯನು ಅವೆಲ್ಲವನ್ನು ಅರಿತು ತಾನು ಯಾವ ಧಾತುವಿನಲ್ಲಿ ಯಾವ ರೋಗ ಉದಿಸಿರುವದೆಂಬುದನ್ನು ತಿಳಿಯುತ್ತ ರಕ್ತರೋಗಕ್ಕೆ ಒಂದು ಸಪ್ತಕವು, ಮಾಂಸ ರೋಗಕ್ಕೆ ಸಲ್ಲುವ ಔಷಧ ಎರಡು ಸಪ್ತಕವು, ಹೀಗೆ ಎಲ್ಲವನ್ನು ತಿಳಿಯುತ್ತ ಏಳೇಳು ದಿವಸಗಳವರೆಗೆ ಈ ರೀತಿ ನಾಲ್ವತ್ತೊಂಭತ್ತು ದಿವಸಗಳ ಪರಿಯಂತರ ಕೊಡುವನು. ವೈದ್ಯನಾದವನು, ಇವೆಲ್ಲವುಗಳನ್ನು ತನ್ನ ಚಿತ್ತದಲ್ಲಿ ಇಟ್ಟುಕೊಂಡಿರಬೇಕು ಮತ್ತು ಸಪ್ತ ರುಜುಗಳೇ ಮುಖ್ಯವು, ಅವುಗಳಿಂದ ಹುಟ್ಟಿದ ರೋಗಗಳು ಬಹು ಬಗೆಯಾಗಿರುವವು. ಅವುಗಳನ್ನು

ಹಲವು ಅನುಭವದಿಂದಲೂ, ಗುಪ್ತದಿಂದಲೂ, ಪ್ರಕಟದಿಂದಲೂ, ಆಪ್ತನಾಗಿ ಅರಿಯುತ್ತ ಅವಕ್ಕೆ ಕ್ಲುಪ್ತ (ನಿಶ್ಚಯ) ವಾಗಿರುವ ಭಸ್ಮ ಮಾತ್ರಾದಿಗಳನ್ನು ಕೊಡಬೇಕು.

## ಔಷಧ ಕೊಡುವ ಕ್ರಮ

ಇನ್ನು ಔಷಧ ಕೊಡುವ ವಿಧಾನವನ್ನು ಅರಿತುಕೊ. ರೋಗಿಯನ್ನು ಕೂಡಲೇ ಪರೀಕ್ಷಿಸಿ ಅವನ ರೋಗದ ಅರ್ಧ ಭಾಗವನ್ನು ತನ್ನ ತಪಸ್ಸಿನಿಂದ ಉಳಿದ ಅರ್ಧ ಭಾಗವನ್ನು ಔಷಧದಿಂದ ನಿವಾರಣೆ ಮಾಡಬೇಕು.

ವೈದ್ಯನು ಔಷಧ ಕೊಡುವಾಗ "ಮೃಢನ ನೆನೆಯುತ್ತ, ತುಸು ಭೂಮಿಗಿಡುತ್ತ, ತಾನು ತುಸು ಸೇವಿಸಿ ಬಳಿಕ ರೋಗಿಗಳಿಗೆ ಕೊಡಲು ಕೂಡಲೆ ಆ ರೋಗ ಪರಿಹಾರವಾಗುವದು'' ಎಂದು ಸಿದ್ಧನು ವೈದ್ಯಶಾಸ್ತ್ರದಲ್ಲಿ ಪೇಳಿರುವ ಪರಿಯನ್ನು ತಿಳಿಸಿ ಹೇಳಿದನು. ಆಗ ವೈದ್ಯನು ಆನಂದ ಹೊಂದಿ ಸ್ವಾಮಿಗೆ ನಮಿಸಿ ಅವರನ್ನು ತೃಪ್ತಿಗೊಳಿಸಿ, ''ನೀನು ಇಂದ ಧರನೇ ಹೌದು'' ಎಂದು ಭಕ್ತಿಭಾವದಿಂದ ನಮಿಸಿ ಗಮನಿಸಿದನು.

## ಪದ— ೭೪-೭೫ ಓಂಕಾರ ಉಪಾಸನೆ

ಬಳಿಕ ಸಿದ್ಧನು ಅವನನ್ನು ಆಶೀರ್ವದಿಸಿ ಅಲ್ಲಿಂದ ತೀವ್ರ ಹೊರಟು ಅಮೃತಸರಕ್ಕೆ ಬಂದು ಸ್ನಾನ ಮಾಡಿದನು. ಅಲ್ಲಿಂದ ಪಟ್ಟಣದಲ್ಲಿ ತಿರಿದುಂಡು 'ನಾನಕ್ ಶಹ' ವೆಂಬ ಸ್ವಾಮಿಗಳ ಮಠಕ್ಕೆ ಬಂದನು. ಅಲ್ಲಿ ಗುರುಗಳ ಹಸ್ತ ರಚಿತಮಾರ್ಗಿಪ ಹಳೆಯ ಶಾಸ್ತ್ರವನ್ನು ಅವಲೋಕನ ಮಾಡಿ ಅಲ್ಲಿರುವ ಜನಂಗಳಿಗೆ ''ಈ ನಿಮ್ಮ ಶಾಸ್ತ್ರವು ಪ್ರಣವ ಉಪಾಸನಕ್ಕೆ ಬಹು ಮುಖ್ಯವಾಗಿರುವದು. ಆದಕಾರಣ ನೀವು ನಿರುತ ಶ್ರದ್ಧೆಯುಳ್ಳವರಾಗಿ ಭಕ್ತಿಯಿಂದ ಉಪಾಸನೆ ಮಾಡಿರಿ" ಎಂದು ಉಪದೇಶಿಸಿದನು. ಹಾಗೆಯೆ ಅಲ್ಲಿಂದ ಮುಂದೆ ಸಾಗಿ ಸಾರಂಗ ಪುರಿಗೆ ಬಂದನು. ಅಲ್ಲಿಂದ ಪ್ರಯಾಣ ಬೆಳೆಸುತ್ತ ಕುರುಕ್ಷೇತ್ರವನ್ನು ಕಂಡು, ಹರಿದ್ವಾರವನ್ನು ನೋಡಿಕೊಂಡು, ಭರದಿಂದ ಬದರಿಕಾಶ್ರಮಕ್ಕೆ ಸಾಗಿ ಬಂದು ನಾರಾಯಣನ ದರುಶನಗೊಂಡು ಕೇದಾರದಲ್ಲಿ ಕೇದಾರೇಶ್ವರನ್ನು ಕಂಡು ಅಲ್ಲಿಂದ ಗಂಗೋತ್ರಿಯನ್ನು ಬಳಸುತ್ತ ಜ್ಞಾನವಾಪಿಯ ಬಳಿಯಲ್ಲಿ ನಿರ್ವಿಕಲ್ಪನೆಯಿಂದ ಕುಳಿತು ಅಜಗರನಂತೆ ಸುಖದಿಂದ ಶಯನ ಮಾಡಿದನು.

## ಜ್ಞಾನಿಗೆ ಆಸನದ ಅಗತ್ಯವಿಲ್ಲ

ಅಷ್ಟರಲ್ಲಿ ಸಾಧನನಾದ ಓರ್ವ ಯೋಗಿಯು ಅಲ್ಲಿಗೆ ಬಂದು, "ಇವನು ಧರಣಿಯ ಮೇಲೆ ಶವಾಸನದಿಂದ ಯೋಗ ಮಾಡುತ್ತಿರುವನು'' ಎಂದು ತಿಳಿದು ತನ್ನ ಹಸ್ತವನ್ನು ಸಿದ್ಧನಿಗೆ ಸ್ಪರ್ಶ ಮಾಡಿದನು. ಕೂಡಲೆ ಸಿದ್ಧನು ಕಣ್ದೆರೆದು ನೋಡಿದನು. ಆಗ ಆ ಯೋಗಿಯೇ, ''ನಿನ್ನದು ಯಾವ ಆಸನ'' ಎಂದು ಕೇಳಿದನು.

ಸಿದ್ಧಮುನಿಯು, ''ನೀನಾವ ಆಸನದೊಳಿರುವಿ'' ? ಪೇಳೆಂದನು. ''ನಾನು ನಿಂತಿರುವದು ಸ್ತಂಭಾಸನವು, ನಿನ್ನ ಆಸನ ಯಾವದಿರುವದು'' ? ಹೇಳೆಂದನು. ''ಮಲ-ಮಾಯಾದಿಕ ತನುವೇ ನಾನೆಂದು ನಿಶ್ಚಯಿಸಿದ ಜೀವನಿಗೆ ಆಸನವು ಯೋಗ್ಯವು. ಜೀವನ ಉಪಾದಿಗಳನ್ನು ಕಳೆದುಳಿದ, ಉಳಿಮೆಯಾದ ಬಿಂಬರೂಪ ಬ್ರಹ್ಮನಲ್ಲಿ ಐಕ್ಯಗೊಂಡ ವರಮುನಿಗೆ ಯಾವ ಆಸನಗಳಿಲ್ಲ'' ಎಂದನು. ಆಗ ಯೋಗಿಯು, ''ಬಿಂಬ ಪ್ರತಿಬಿಂಬಗಳೆರಡರ ಐಕ್ಯತೆ ಎಂಬುವದು ಭೇದವೋ ಅಭೇದವೋ'' ? ಎಂದು ಕೇಳಿದನು.

ಅದಕ್ಕೆ ಸಿದ್ಧನು, ''ಭೇದಾಭೇದ ಭಾವನೆಗಳಿಗೆ ನಿಜವೆಂಬುದರಲ್ಲಿ ಅವಕಾಶವಿಲ್ಲ. ಅದು ಹೇಗಂದರೆ ಮುಕುರದೊಳು ತನ್ನ ಮುಖವನ್ನು ಈಕ್ಷಿಸುವಾಗ ತನ್ನ ಬಿಂಬರೂಪ ಮುಖವು ಉತ್ತರ ಮುಖವಾಗಿರಲು ಕನ್ನಡಿಯಲ್ಲಿ ಹೊಳೆದು ಪ್ರತಿಫಲಿಸುವ ಪ್ರತಿಬಿಂಬ ಮುಖವು ದಕ್ಷಿಣಮುಖವಾಗಿ ಕಾಣುವದು. ಉಪಾಧಿಯೊಳಿರುವ ಭೇದವನ್ನು ತಿಳಿದದ್ದಾದರೆ ಬಿಂಬ ಪ್ರತಿಬಿಂಬಗಳು ಅಭೇದವಾಗಿಯೇ ಇರುವವು. ಏಕೆಂದರೆ ದರ್ಪಣದಲ್ಲಿ ತೋರಿರುವ ಮುಖವನ್ನು ನೋಡಿ ನಿಜ ಮುಖವನ್ನು ಗುರ್ತಿಸುವರು. ಭೇದಾಭೇದದ ನಿರ್ಧಾರವನ್ನು ಗಣಿಸಲ್ಕೆ ಬರುವಂತಿಲ್ಲ. ಅದು ಅನಿರ್ವಚನೀಯವೆಂಬುದೇ ಸಿದ್ಧಾಂತವು'' ಎಂದನು. ಅದಕ್ಕೆ ಯೋಗಿಯು ಸಮ್ಮತಿಸಿ, ತಾನು ತಿರಿದು ತಂದ ಅನ್ನವನ್ನು ಸಿದ್ಧನೊಡನೆ ಉಂಡು ಹೊರಟುಹೋದನು. ಬಳಿಕ ಸಿದ್ಧನು ಕೂಡಾ ಅಲ್ಲಿಂದ ಹೊರಟು ತುಂಡ ಪಾಣಿಯ ಲಿಂಗವನ್ನು ಕಂಡು, ಅಲ್ಲಿ ಹಳೆಯ ಜ್ವರದಿಂದ ಬಳಲುತ್ತಿರುವ ಓರ್ವ ವಿಪ್ರನನ್ನು ಕಂಡು, ಅವನಿಗೆ ಪರಮ ಪಂಚಾಕ್ಷರಿಯನ್ನು ಬೋಧಿಸಿ, ಅವನ ರೋಗವನ್ನು ನಿವರ್ತಿಸಿ ನಡೆದನು ಎಂಬಲ್ಲಿಗೆ ಮಂಗಲ.

ಪರಮ ಪಾವನ ಮಂಗಲಾತ್ಮನೆ ।
ಮೆರೆವ ಕರುಣಾಮೃತ ಸುಶರಧಿಯೆ ।
ಸುರಗಣಾರ್ಚಿತ ದೇವ ದೇವನೆ ಲೋಕೇಶಾ ॥
ಮರಣವರ್ಜಿತ ಸ್ವಪ್ರಕಾಶನೆ ।
ಹರುಷ ಖಣಿಯೇ ಪನುಷಮಣಿಯೆ ।
ನಿರುತ ದುಃಖಿಪ ಜನಕೆ ಸುಖವಂ ಕೊಟ್ಟು ರಕ್ಷಿಪುದು ॥

ಇತಿ ಶ್ರೀಮತ್ ಸಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ
ಲೀಲಾಚರಿತ್ರ ಕಲ್ಪದ್ರುಮದೊಳು ವೈದ್ಯವಿಚಾರವೆಂಬ
— ೧೯ ನೇ ಅಧ್ಯಾಯ ಸಮಾಪ್ತಿ

———

॥ ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ॥



# ಸಂಚಾರ ಸಂಭ್ರಮ ಕಾಂಡ

## ಅಧ್ಯಾಯ ೨೦

॥ ಓಂ ತತ್ಸತ್ ॥

ಈ ಅಧ್ಯಾಯದಲ್ಲಿ ಕಣಾದ, ಗೌತಮ ಮತದ ನೈಯಾಯಿಕರಿಗೆ, ನ್ಯಾಯಶಾಸ್ತ್ರದ ಅಭಿಮಾನವನ್ನು ಬಿಡಿಸಿ, ಜ್ಞಾನ ಮಾರ್ಗಕ್ಕೊಂಡಬಡಿಸಿದ್ದು.

ಜ್ಞಾನ ಮಾರ್ಗದಲ್ಲಿ ಸಂಶಯಗೊಂಡ ನೈಯಾಯಿಕರಿಗೆ, ಬರುವ ಮಹತ್ತರ ಹಾನಿಯನ್ನು ತೋರಿಸಿ, ನಿಜ ತತ್ವವನ್ನು ಬೋಧಿಸಿ, ಬ್ರಹ್ಮಾನಂದದಲ್ಲಿರಿಸಿದ್ದು.

ಸರ್ವ ಘಾಟಗಳನ್ನು ನೋಡುತ್ತ, ಗಂಗಾ ಘಾಟದಲ್ಲಿ ನಂಗನಿಗೆ ತಕ, ಉತ್ತರಕೊಟ್ಟದ್ದು ಮತ್ತು ವ್ಯಾಸ ಕಾಶಿಗೆ ಬಂದು ವ್ಯಾಸನಿಗೆ ಕೊಟ್ಟ ಕುಂದನ್ನು ನಿವಾರಿಸಿದ್ದು ಇವೆಲ್ಲ ವಿಷಯಗಳಿರುವವು.

ಸ್ತೋತ್ರ:— ರಕ್ಷಿಸೈ ಸದ್ರೂಪಜೀವನೆ |
ರಕ್ಷಿಸೈ ಚಿದ್ರೂಪ ಮೂರ್ತಿಯೆ |
ರಕ್ಷಿಸೈ ಸುಖರೂಪ ಗುರುವೆ ಬೇಡಿಕೊಂಬುವೆನು ||
ರಕ್ಷಿಸೈ ಸದ್ಗುಣದ ರಾಶಿಯೆ |
ರಕ್ಷಿಸೈ ಕರುಣಾಂಬು ನಿಧಿಯೆ |
ರಕ್ಷಿಸೈ ದಯವಿಟ್ಟು ಜಗವಂ ನಾನು ವಂದಿಪೆನು ||

**ಪದ— ೧-೪೧ ಸಿದ್ಧನು ನೈಯಾಯಿಕರ ವಾದವನ್ನು ನಿಲ್ಲಿಸಿ ಜ್ಞಾನಮಾರ್ಗ ತಿಳಿಸಿದ್ದು.**

ಬಳಿಕ ಚರಿತ್ರ ನಾಯಕನು, ಕೇದಾರ ಘಟ್ಟವನ್ನಿಳಿದು ನಾನಾ ಗುಡ್ಡ ಪರ್ವತಗಳನ್ನು ಸುತ್ತಿ ಕಾಶಿಗೆ ಬಂದನು. ಗಂಗೆಯಲ್ಲಿ ಮಣಿಕರ್ಣಿಕಾ ಘಾಟದೊಳಗೆ ಮುಂಡನ ಮತ್ತು ಸ್ನಾನ ಮಾಡಿ ಪಿಂಡಾದಿಗಳನ್ನು ಕೊಡುವವರನ್ನು ಕಂಡು, ಗಹಗಹಿಸಿ ನಗುತ್ತ ಮುಂದೆ ಸಾಗೆದನು. ಸಮೀಪದ ಜಂಗಮ ವಾಡಿಯಲ್ಲಿ ಅಧ್ಯಯನ ಮಾಡುವದನ್ನು ಈಕ್ಷಿಸಿದನು. ಹಾಗೆಯೇ ಮುಂದೆ ಕಾಲಭೈರವನ ಗುಡಿಯಲ್ಲಿ ಭೈರವ ಮೂರ್ತಿಯನ್ನು ನೋಡಿದನು. ಅಲ್ಲಿಂದ ವಿಶ್ವೇಶ್ವರನನ್ನು ಈಕ್ಷಿಸುತ್ತ ಸಡಗರದ ಅನ್ನಪೂರ್ಣೇಶ್ವರಿ ದೇವಿಯ ದರುಶನಗೊಂಡು, ಮುಂದೆ ಸಾಗಿದನು. ಅಲ್ಲಿ ಸುರಾಭಾಂಡ ಲಿಂಗವನ್ನು ನೋಡಿಕೊಂಡು ಬ್ರಹ್ಮಘಾಟಕ್ಕೆ ಬಂದನು. ಅಲ್ಲಿ ಹೊಳೆಯೊಳಗಿಳಿದು ಸ್ನಾನಮಾಡಿಕೊಂಡು ವಿಶ್ರಾಂತಿಗೋಸುಗ ದಶಾಶ್ವಮೇದದ ಘಾಟದಿಂದ ಮೇಲಕ್ಕೆ ಹತ್ತಿಬಂದು, ಅಲ್ಲಿ ಒಂದು ದೇವಾಲಯದಲ್ಲಿ ವಿಶ್ರಮಿಸಿದನು

ಮತ್ತು ತನ್ನ ಮನದಲ್ಲಿ ನೆನೆದುಕೊಂಡದ್ದೇನಂದರೆ, "ವಿಧಿಯು ಪೂರ್ವದಲ್ಲಿ ತಾನು ಇಲ್ಲಿಗೆ ಬಂದು ಆನಂದದಿಂದ ಹತ್ತು ಅಶ್ವಮೇಧ ಯಜ್ಞಗಳನ್ನು ಮಾಡಿದ್ದರಿಂದ ಈ ಘಾಟಕ್ಕೆ ದಶಾಶ್ವಮೇಧವೆಂಬ ಹೆಸರು ಬಂದಿರುವದು. ಮತ್ತು ಈಶನೇ ಮೊದಲುಗೊಂಡು ಇರುವೆ ಕಡೆಯಾಗಿ ನಿಖಿಲರೊಳು, ಹುಟ್ಟುವ ಎಲ್ಲ ವ್ಯಕ್ತಿಗಳಿಗೆ ನಾನೇ ಮೂಲಾಧಾರನಾಗಿದ್ದೇನೆ. ಆ ವಿಧಿಯು ನನಗೆ ಬೇರಾಗಿಲ್ಲ" ಹೀಗೆ ಸಿದ್ಧನು ಅಂದುಕೊಂಡು ನಿರ್ವಿಕಲ್ಪದಿಂದ ಕುಳಿತುಕೊಂಡನು. ಅದೇ ಸಮಯಕ್ಕೆ ಅಲ್ಲಿಗೆ ಮಹಾದೇವ ಶಾಸ್ತ್ರಿ ಎಂಬವನು, ತನ್ನ ಪ್ರೀತಿಯ ಬಹು ಶಿಷ್ಯರೊಂದಿಗೆ ಬಂದನು ಶಿಷ್ಯರು, ಬೇಗನೆ ತಮ್ಮ ಗುರುಗಳಿಗೆ ಸಲ್ಲುವಂಥ ಪೀಠವನ್ನಲಂಕರಿಸಿ, ಅದರ ಮೇಲೆ ಕೂಡ್ರಿಸಿದರು. ಬಳಿಕ ತಾವೆಲ್ಲರು ನಮಿಸುತ್ತ ಅವರ ಬಳಿಯಲ್ಲಿ ಕುಳಿತರು.

## ಕಣಾದ ಗೌತಮ ನೈಯಾಯಿಕ ಮತಗಳು

ಗುರುಗಳು ತಮ್ಮ ಎಲ್ಲ ಶಿಷ್ಯರನ್ನು ಕುರಿತು, "ಮಕ್ಕಳಿರಾ, ತರ್ಕವನ್ನು ಚೆನ್ನಾಗಿ ಅರಿತುಕೊಳ್ಳಿರಿ. ಈತನ ಸರ್ವಸೃಷ್ಟಿಯನ್ನು ವಿಚಾರಿಸಲಾಗಿ ಅದ-ರೊಳು ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ ಮತ್ತು ಅಭಾವ ಹೀಗೆ ಸಪ್ತ ಪದಾರ್ಥಗಳು.

ತತ್ರದ್ರವ್ಯಾಣಿ ಪೃಥಿವ್ಯಪ್ತೇರಜೋ ವಾಯ್ವಾಕಾಶ ಕಾಲದಿಗಾತ್ಮ-ಮನಾಂಸಿ ನವೈವ || ರೂಪ, ರಸ, ಗಂಧ, ಸ್ಪರ್ಶ, ಸಂಖ್ಯಾ, ಪರಿಮಾಣ ಪೃಥಕ್ತ್ವ, ಸಂಯೋಗ, ವಿಭಾಗ, ಪರತ್ವಾಪರತ್ವ, ಗುರುತ್ವ, ದ್ರವತ್ವ, ಸ್ನೇಹ, ಶಬ್ದ, ಬುದ್ಧಿ, ಸುಖ, ದುಃಖೇಚ್ಛಾದ್ವೇಷ, ಪ್ರಯತ್ನ ಧರ್ಮಾಧರ್ಮ ಸಂಸ್ಕಾರಾಶ್ಚತುರ್ವಿಂಶತಿಗುರ್ಣಾಃ || ಉತ್‌ಕ್ಷೇಪಣಾಪಕ್ಷೇಪಣಾಕುಂಚನ ಪ್ರಸಾ-ರಣ ಗಮನಾನಿ ಪಂಚಕರ್ಮಾಣಿ || ಪರಮಪರಂಚೇತಿ ದ್ವಿವಿಧಂ ಸಾಮಾ-ನ್ಯಮ್ || ನಿತ್ಯದ್ರವ್ಯ ವೃತ್ತಯೋ ವಿಶೇಷಾಸ್ತ್ವನಂತಾ ಏವ | ಸಮವಾಯಸ್ತ್ವೇಕಏವ | ಅಭಾವಶ್ಚತುರ್ವಿಧಃ || ಪ್ರಾಗಭಾವಃ ಪ್ರಧ್ವಂಸಾಭಾವೋಽ, ತ್ಯಂತಾಭಾವೋಽನೋನ್ಯಾವಶ್ಚೇತಿ || ತತ್ರಗಂಧವತೀಪೃಥಿವೀ || ಸಾದ್ವಿವಿಧಾ | ನಿತ್ಯಾಽ ನಿಶ್ಯಾಚ ! ನಿತ್ಯಾಪರಮಾಣುರೂಪಾ | ಅನಿತ್ಯಾ ಕಾರ್ಯರೂಪಾ | ಪುನಸ್ತ್ರಿವಿಧಾ ಶರೀರೇಂದ್ರಿಯ ವಿಷಯ ಭೇದ್‌ತಾ |

ಶರೀರ ಮಸ್ಮದಾದೀನಾಮ್ । ಇಂದ್ರಿಯಂ ಗಂಧಗ್ರಾಹಕಂ ಘ್ರಾಣಂ ನಾಸಾಗ್ರವತಿ । ವಿಷಯೋ ಮೃತ್ಪಾಷಾಣಾದಿಃ ||

ಹೀಗೆ ತರ್ಕಶಾಸ್ತ್ರವನ್ನು ಮನರಂಜನೆಯಾಗುವಂತೆ ಬೋಧಿಸುವ ಸಮಯಕ್ಕೆ ಜಗನ್ನಾಥ ದೀಕ್ಷಿತ ಶಾಸ್ತ್ರಿಯೆಂಬವನು ವಾಲಿ ದಳದಂತಿರುವ ತನ್ನ ಬಹುಶಿಷ್ಯರನ್ನೊಡಗೊಂಡು ಅಲ್ಲಿಗೆ ಸಂತೋಷದಿಂದ ಬಂದು ಕೂತನು. ಅಲ್ಲಿಂದ ತನ್ನ ನಿಜ ಶಿಷ್ಯರಿಗೆ ಗೌತಮೋಕ್ತ ನ್ಯಾಯ ಶಾಸ್ತ್ರದಲ್ಲಿ ಹುದುಗಿ ಕೊಂಡಿರುವ ಮುಕುತಿಯನ್ನು ಈವ ಯುಕುತಿಯನ್ನು ಹೇಳಲನುವಾದನು. "ಪ್ರಮಾಣ, ಪ್ರಮೇಯ ಸಂಶಯ, ಪ್ರಯೋಜನ, ದೃಷ್ಟಾಂತ, ಸಿದ್ಧಾಂತ, ಅವಯವ, ತರ್ಕ, ನಿರ್ಣಯ, ವಾಲ, ಜಲ್ಪ, ವಿತಂಡ, ಹೇತ್ವಾಭಾಸ, ಛಲ, ಜಾತಿ, ನಿಗ್ರಹ, ಸ್ಥಾನಾನಾಂ ತತ್ವಜ್ಞಾನಾನ್ನಿಶ್ರೇಯಸಾಧಿಗಮಃ

ಇತಿ ನ್ಯಾಯಶಾಸ್ತ್ರೇಷೋಡಶ ಪದಾರ್ಥಾನಾಮುಕ್ತತಾತ್ ಕಥಂ ಸಪ್ತೈ ವೇತ್ಯತಆಹ || ಸರ್ವೇಶಾಂ ಸಪ್ತಸೇವಾಂತರ್ಭಾವ ಇತ್ಯರ್ಥಃ ||

ಆತ್ಮ ಶರಿರೇಂದ್ರಿಯಾರ್ಥ ಬುದ್ಧಿ ಮನಃ ಪ್ರವೃತ್ತಿದೋಷ ಪ್ರೇತ್ಯಭಾವ ಫಲ ದುಃಖಾಪವರ್ಗಾಸ್ತು ಪ್ರಮೇಯಂ || ಇತಿ ದ್ವಾದಶ ವಿಧಂ ಪ್ರಮೇಯಂ || ಪ್ರವೃತ್ತಿ ಧರ್ಮಾಧರ್ಮೌ || ರಾಗ ದ್ವೇಷ ಮೋಹ ದೋಷಾಃ || ರಾಗಾಃ ಇಚ್ಛಾ । ದ್ವೇಷೋ ಮನ್ಯುಃ । ಮೋಹಃ ಶರೀರಾದೌ ಆತ್ಮತ್ವ ಭ್ರಮಃ || ಪ್ರೇತ್ಯಭಾವೋ ಮರಣಂ || ಫಲಂ ಭೋಗಃ || ಅಪವರ್ಗೋ ಮೋಕ್ಷಃ || ಸಚಸ್ವಸಮಾನಾಧಿಕರಣ ದುಃಖ ಪ್ರಾಗಭಾವಾಸಮಾನಕಾಲೀನ ದುಃಖ ಧ್ವಂಸಃ || ಪ್ರಯೋಜನಂ ಸುಖಪ್ರಾಪ್ತಿಃ ದುಃಖಹಾನಿಶ್ಚ || ಪ್ರಾಮಾಣಿಕ ತ್ವೇನ ಅತ್ಯುಪಗತೋರ್ಥಃ ಸಿದ್ಧಾಂತಃ || ನಿರ್ಣಯೋ ನಿಶ್ಚಯಃ || ಸಚ ಪ್ರಮಾಣ ಫಲಮ್ || ತತ್ವಬುಬುತ್ಸೋಃ ಕಥಾವಾದಃ || ಉಭಯ ಸಾಧನ ವತೀ ವಿಜಿಗೀಷುಕಥಾ ಜಲ್ಪಃ || ಸ್ವಪಕ್ಷ ಸ್ಥಾಪನ ಹೀನಾ ವಿತಂಡಾ || ಕಥಾನಾಮ ನಾನಾವಕ್ತೃಕ ಪೂರ್ವೋತ್ತರ ಪಕ್ಷ ಪ್ರತಿಪಾದಕ ವಾಕ್ಯ ಸಂದರ್ಭಃ || ಅಭಿಪ್ರಾಯಾಂತರೇಣ ಪ್ರಯುಕ್ತಸ್ಯಾರ್ಥಾಂತರಂ ಪ್ರಕಲ್ಪ್ಯ ದೂಷಣಂ ಛಲಮ್ ಅಸದುತ್ತರಂ ಜಾತಿಃ || ಸಾಧರ್ಮ್ಯ ವೈಧರ್ಮ

ಉತ್ಕರ್ಷಾಪಕರ್ಷವರ್ಣ್ಯಾವರ್ಣ್ಯ ವಿಕಲ್ಪ ಸಾಧ್ಯ ಪ್ರಾಪ್ತ್ಯಪ್ರಾಪ್ತಿ ಪ್ರಸಂಗ ಪ್ರತಿ ದೃಷ್ಟಾಂತಾನುತ್ಪತ್ತಿ ಸಂಶಯ ಪ್ರಕರಣ ಹೇತ್ವಾರ್ಥಾಪತ್ತ್ಯ ವಿಶೇ ಷೋಪಪತ್ತ್ಯು ಪಲಬ್ಧ್ಯನುಪಲಬ್ಧಿ ನಿತ್ಯಾನಿತ್ಯ ಕಾರ್ಯಾಕಾರ್ಯ ಸಮಾ ಜಾತಯಃ|| ವಾದಿನೋಪಜಯ ಹೇತುರ್ನಿಗ್ರಹ ಸ್ಥಾನಮ್ || ಪ್ರತಿಜ್ಞಾ ಹಾನಿಃ, ಪ್ರತಿಜ್ಞಾನಂತರಂ, ಪ್ರತಿಜ್ಞಾವಿರೋಧಃ, ಪ್ರತಿಜ್ಞಾಸನ್ಯಾಸಃ, ಹೇತ್ವಂ ತರಂ, ಅರ್ಥಾಂತರಂ, ನಿರರ್ಥಕಂ, ಅವಿಜ್ಞಾ,ತಾರ್ಥಂ ಅಪಾರ್ಥಂಕಂ, ಅಪ್ರಾಪ್ತ ಕಾಲಂ,ನ್ಯೂನಂ,ಅಧಿಕಂ,ಪುನರುಕ್ತಂ, ಅನನುಭಾಷಣಂ, ಅಜ್ಞಾನಂ,ಅಪ್ರತಿಭಾ ವಿಕ್ಷೇಪಃ, ಮತಾನುಜ್ಞಾಪರ್ಯನು ಯೋಜ್ಯೋಪೇಕ್ಷಣಂ, ನಿರನು ಯೋಜ್ಯಾನು ಯೋಗಃ, ಅಪಸಿದ್ಧಾಂತಃ, ಹೇತ್ವಾಭಾಸಾಶ್ಚ, ನಿಗ್ರಹಸ್ಥಾನಾನಿ || ಶೇಷಂ ಸುಗಮಂ ||

ಈ ಪ್ರಕಾರ ಜಗನ್ನಾಥ ಶಾಸ್ತ್ರಿಯು ಪ್ರಾಚೀನ ನ್ಯಾಯ ಮತವನ್ನು ತನ್ನ ಶಿಷ್ಯರಿಗೆ ಬೋಧಿಸಹತ್ತಿದನು. ಆಗ ಮಹಾದೇವ ಶಾಸ್ತ್ರಿಯು ಅದನ್ನು ಕೇಳಿ ಮುಂದೊರೆದು, "ನೀನು ಹೇಳುವ ಪದಾರ್ಥಗಳನ್ನು ಎಣಿಸುತ್ತಿರಲಿಕ್ಕೆ ಅವು ಏಳೇ ಇರುವವು," ನೋಡೆಂದನು. ಜಗನ್ನಾಥ ಶಾಸ್ತ್ರಿಯು, "ನೀನು ಹೇಳುವದು ನವೀನ ನ್ಯಾಯ ಶಾಸ್ತ್ರವು" ಆದರೆ ''ಷೋಡಶ ಪದಾರ್ಥ ಗಳಿರುವವೆಂದು ಪ್ರಾಚೀನ ಮತವು ಸ್ಥಾಪನಗೈದಿರುವದನ್ನು ನೀನು ಅರಿ ತಿಲ್ಲವೋ'' ? ಎಂದು ಶಾಸ್ತ್ರಿಯು ನುಡಿದನು. ಮಹಾದೇವ ಶಾಸ್ತ್ರಿಯು, ''ನೀನು ನೂರೆಂಟು ಕಲ್ಪಿಸಿ ಹೇಳಿದರೂ, ಅವೆಲ್ಲವೂ ಏಳರಲ್ಲಿಯೇ ಅಂತರ್ಗ ತವು,'' ನೋಡೆಂದನು.

ಆಗ ಜಗನ್ನಾಥ ಶಾಸ್ತ್ರಿಯು, ದ್ರವತೀತಿ ದ್ರವ್ಯಾಃ'' ಎಂದು ದ್ರವಿ ಸಲು ದ್ರವ್ಯವೆಂಬ ನಾಮವು ಅದಕ್ಕಿರುವವು" ಎಂದನು. ಮಹಾದೇವ ಶಾಸ್ತ್ರಿಯು, ''ನೀನು ಹೀಗೆ ಹೇಳುವದು ಒಳ್ಳೆವದಲ್ಲವಯ್ಯಾ ! ಗುಣಾ ನಾಮಾಶ್ರಯೋದ್ರವ್ಯಾಃ," ಇದಕ್ಕೇನು ಹೇಳುವಿ ? ''ಗುಣಗಳಾಶ್ರಯತ್ವ ವನ್ನು ಬಿಡದಿರುವದೇ ದ್ರವ್ಯವು'' ಎಂದು ಈರ್ವರಿಗೂ ಬಿಡದೆ ವಾದ ವಿವಾದ ನಡೆಯಿತು.

## ನ್ಯಾಯ ಶಾಸ್ತ್ರದ ಅಭಿಮಾನ ಬಿಡಿಸಿ ಜ್ಞಾನ ಮಾರ್ಗಕ್ಕೆ ಒಡಂಬಡಿಸಿದ್ದು

ಸಿದ್ಧಭಾರತಿಯು ಇವರ ವಾದವನ್ನು ಕೇಳಿ "ಇವರು ಕೆಡುವ ವಸ್ತುವಿನ ಕಡು ವಿಚಾರದಲ್ಲಿಯೇ, ಕುಳಿತುಕೊಂಡರೆ ಇವರ ಗತಿಯೇನು ? ಇವರಿಗೆ ಮುಂದೆ ಕೆಡದ ವಸ್ತುವು, ದೊರಕುವದೆಂತು ?" ಎಂದು ತನ್ನ ಮನದಲ್ಲಿ ನೆನೆದು ಇವರ ವೃತ್ತಿಯನ್ನು ನಿಜ ವಸ್ತುವಿನ ಕಡೆಗೆ ತಿರುಗಿಸಬೇಕೆಂಬ, ಕಳಕಳಿಯ ಕರುಣೆಯಿಂದ, ''ಪಂಡಿತರೇ ಗುಣ, ದ್ರವ್ಯಾದಿಗಳನ್ನು, ನೀವು ಅರಿಯುವಾಗ ಅವುಗಳೇ ನೀವಾಗಿರುವಿರೋ ? ಇಲ್ಲವೆ ಅರಿಯುವವರು, ನೀವದಕೆ ಬೇರಾಗಿರುವಿರೋ ? ನೀವು ಇದನ್ನು ತಿಳಿದು ಪೇಳಿರಿ ? ವಸ್ತುಗಳೇ ನಾವಾಗಿರುವೆವೆಂದು ನೀವು ಹೇಳಿದರೆ, ಅದು ಉಚಿತವಲ್ಲವು, ಯಾಕಂದರೆ ಅವು ಜಡದೃಶ್ಯಗಳಾಗಿ ನಾಶವುಳ್ಳವುಗಳಾಗಿರುತ್ತವೆ. ನೀವು ಕೆಡದಿರುವ ಆತ್ಮ ಚೈತನ್ಯರಿರುವಿರಿ. ಹೀಗಿರಲು, ನೀವು ಅವುಗಳಿಗೆ ಭಿನ್ನವಾಗಿರುವದೇ ನಿಜವು.

ಬಳಿಕ ಅಜಡ ಚೈತನ್ಯ ಆತ್ಮವಸ್ತುವು, ಬ್ರಹ್ಮ ಚೈತನ್ಯಕ್ಕೆ ಭೇದವೋ ಅಭೇದವೋ ? ಭೇದವೇ ನಿಜವೆಂದು ನೀವು ಹೇಳಿದರೆ, ವೇದವು ಕದಕ್ಕೆ ಸಮ್ಮತಿಸದು. ಯಾಕಂದರೆ, ಏಕಮೇವಾದ್ವಿತೀಯಂ'' ಎಂಬ ಶ್ರುತಿಯು ಮೋದದಿಂದ ಪೇಳಿರುವ ವಾಕ್ಯಕ್ಕೆ ವಿರೋಧವಾಗುವದು. ಆದ್ದರಿಂದ ಬ್ರಹ್ಮಕ್ಕೆ ಮತ್ತು ತನಗೆ ಅಭೇದವೆಂತಲೇ ಹೇಳಬೇಕು. ಮತ್ತು ಈ ಅಭೇದವು ಯಾವಾಗಲೂ ಇರುವದೋ ? ಇಲ್ಲವೆ ಅರಿಯುವ ಕಾಲದಲ್ಲಿ ತೋರುವದೋ ಹೀಗೆ ಎರಡು ಸಂಶಯುಗಳು ಬರುವವು. ಅರಿಯುವ ಕಾಲದಲ್ಲಿ ಭೇದವಿದೆ, ಎಂದರೆ ಅದರೊಳಗಿರುವ ಸ್ವತಂತ್ರದ ಅಸ್ತಿತ್ವ ತೋರದೇ ಹೋದೀತು ! ಅದು ಕಾರಣ ಇದನ್ನು ತಿಳಿದು ಅಭೇದವು ಬಾಧೆಯಿಲ್ಲದೆ ನಿರುತ ಇರುತಿಹುದೆಂದು ನೀವು ನಿಶ್ಚಯಿಸಬೇಕು. ಅಭೇದ ಜ್ಞಾನವು ಬೇರೆ ಯಾವ ಸಾಧನಗಳ ಅಪೇಕ್ಷೆಯಿಲ್ಲದೆ ಮುಕ್ತಿಯನ್ನು ಕೊಡುವದು.

''ಹೇ ಭೇದವಾದಿಗಳಾದ ಪಂಡಿತರೆ, ಕರ್ಮಾದಿಗಳು ನಿಮಗೆ ಮುಕ್ತಿ ಕೊಡುವವೋ ? ಒಂದು ವೇಳೆ ಕರ್ಮಗಳ ಸಹಾಯ ಬೇಕೆಂದು ಹೇಳಿದರೆ

ವೇದ ವಿಧಿಸಿರುವ 'ಜ್ಞಾನಾದೇವತು ಕೈವಲ್ಯಂ' ಎಂಬ ವಾಕ್ಯದಲ್ಲಿ ಏಕ ಪದವು ಜ್ಞಾನಕ್ಕೆ ಪ್ರಾಸ್ತ್ಯ ಕೊಟ್ಟದೆ. ಇದಲ್ಲದೆ 'ತು' ಪದದಿಂದ ಜಡಸಾಧನಂಗಳ ನೆಲ್ಲವನ್ನು ನೇತಿಗಳೆದುಳಿದು ಜ್ಞಾನದಿಂದಲೇ ಕೈವಲ್ಯವು ಪ್ರಾಪ್ತವೆಂದು ಹೇಳಿದೆ. ಆದ್ದರಿಂದ ಕರ್ಮ ಜಾಲದಲ್ಲಿ ಸಿಲುಕಿ ಹಂಬಲಿಸದೆ, ಮುಕ್ತಿಗಾಗಿ ಜ್ಞಾನವನ್ನೇ ನಂಬಬೇಕು" ಎಂದು ಬೋಧಿಸಿದನು.

ಸಿದ್ಧರ ಅಮೃತಪರ ಬೋಧ ವಾಕ್ಯವನ್ನು, ವಾದಿಗಳು ಚನ್ನಾಗಿ ಆಲಿಸಿ ತಲೆ ದೂಗಿ ತಮ್ಮೊಳಗೆ ಹೀಗೆ ಅಂದುಕೊಂಡರು. ''ಇವನು ಶಾಂತ ತಪೋ ಮೂರ್ತಿ ಇರುವನು. ವಿಶ್ವೇಶ್ವರನ ಕೃಪೆಯನ್ನು ಪಡೆದ ಶ್ರೋತ್ರೀಯ ಬ್ರಹ್ಮನಿಷ್ಠ ಅನುಭವಿ ಇರುವನು. ಭ್ರಾಂತರಾದ ನಮ್ಮಲ್ಲಿ ಶುದ್ಧ ಶಾಬ್ದಿಕ ಜ್ಞಾನವಿರುವದು. ನಮಗೆ ಅನುಭವ ಜ್ಞಾನ ವಿಲ್ಲದಿರಲು, ಇವನೊಡನೆ ನಮ್ಮವಾದತರ್ಕಗಳೆಲ್ಲ ವ್ಯರ್ಥವು,'' ಎನ್ನುತ್ತ ಶಾಸ್ತ್ರಿಗಳು ತಮ್ಮ ಎಲ್ಲ ಶಿಷ್ಯವೃಂದದೊಂದಿಗೆ ಸಿದ್ಧರಿಗೆ ನಮಿಸುತ್ತ ''ಸಾಧುವರ್ಯನೇ, ತಾವು ಹೇಳುವ ಮಾರ್ಗವೇ ಸತ್ಯವು'' ಎಂದು ಒಪ್ಪಿಕೊಂಡರು.

ಅದಕ್ಕೆ ಭಾರತಿಯು, ''ಮುಕ್ತಿಸ್ಥಾನನೆನಿಪ ಕಾಶೀಕ್ಷೇತ್ರ, ವಿದು-ತಾರಕ (ದುಃಖದಿಂದ ದಾಡಿಸುವ) ಮಂತ್ರೋಪದೇಶರ ಮನೋಹರ ಸ್ಥಳವಾಗಿರು-ವದು. ಇಲ್ಲಿ ತತ್ವಜ್ಞಾನಿಗಳ, ಅಮೃತ ಸಮಾನವಾಗಿರುವ ಉಪದೇಶದಿಂದ, ಜ್ಞಾನ ಸಂಪಾದಿಸಿಕೊಳ್ಳುವ ಸಮಯವನ್ನು ತೊರೆದು, ತರ್ಕದಿಂದ ಬೇರೆ ಭಾವನೆಗಳನ್ನು ಮಾಡುವದು, ಅಥವಾ ತರ್ಕದಲ್ಲಿ ತೊಡಗುವದು, ಬಲ್ಲವರ ಅಭಿಮತವಲ್ಲ. ಆದ್ದರಿಂದ ನಿಮ್ಮ ಗರ್ವಭಾವವನ್ನು ತೊರೆದು, ಇರುವದೇ ಯೋಗ್ಯವು,'' ಎಂದು ಉಪದೇಶಿಸಿದನು. ಅದಕ್ಕೆ ಶಾಸ್ತ್ರಿಗಳು ಒಪ್ಪಿಕೊಂಡು ಭರದಿಂದ ಸಿದ್ಧರಿಗೆ ಪುನಃ ನಮಿಸಿ ಪರಮ ಸ್ವಾಮಿಯೇ ಈಗ ತಾವು ಹೇಳುವದು ಅಕ್ಷರಶಃ ಸತ್ಯವಿರುವದು. ಎದು ಎಲ್ಲರೂ ಪುನಃ ನಮಿಸಿ ಹೊರಟು ಹೋದರು.

**ಪದ ೪೨-೪೮ ಮೂವರು ಶಿಷ್ಯರಿಗೆ ನ್ಯಾಯ ಶಾಸ್ತ್ರದಲ್ಲಿ ಭಯವನ್ನು ತೋರಿಸಿ ನಿಜತತ್ವವನ್ನು ಬೋಧಿಸಿದ್ದು**

ಬಳಿಕ ಅವರೊಳಗಿನ ಮೂವರು ಶಿಷ್ಯರು, ಅವರೆಲ್ಲರನ್ನು ಬಿಟ್ಟು ಹಿಂದಿರುಗಿ ಸಿದ್ಧರ ಬಳಿಗೆ ಬಂದು, ಸ್ವಾಮಿ, ತಾವು ಬೋಧಿಸಿದ ಬ್ರಹ್ಮೋಪ ದೇಶಕ್ಕೆ ನಾವು ಒಪ್ಪಲಾರೆವು, ಅದೇಕೆಂದರೆ, ಅಪ್ರತ್ಯಕ್ಷವಾಗಿರುವ ಶ್ರುತಿ ವಾಕ್ಯವನ್ನು ಕೇಳುತ್ತ ನಮ್ಮ ಮನಸ್ಸು ಅಭಾವವಾಗುವದು'' ಎಂದು ಶಂಕಿಸಿದರು.

ಆಗ ಸಿದ್ಧ-ಸದ್ಗುರುವು ಅವರಿಗೆ, "ನಿಮ್ಮ ಮನವು ಶೂನ್ಯವಾದಲ್ಲಿ ಹಾಳು ಗೈಯುವದೆಂದು, ಭಯವನ್ನು ಹೇಳುವದು. ನಿಮ್ಮ ಮನವೋ ? ಜ್ಞಾನವೋ ? ಅದು ಮನಸ್ಸೆಂದು ಹೇಳಿದರೆ ಲೀನವಾಗಿರುವ, ಮನವು ಲೀನವಾಗಿಹುದೆಂದು, ತಾನೆಂತು ಪೇಳುವದು ? ಇದು ಅನುಚಿತವು. ಇನ್ನು ಜ್ಞಾನ ಹೇಳುವದು ಎಂದರೆ ಜ್ಞಾನವು ಮನಸ್ಸಿಲ್ಲದೆ ಹೇಳಲಾರದು ಇಂಥ ಹೀನ ಪ್ರಶ್ನೆಯನ್ನು ಮಾಡುವದು, ಬುಧರಿಗೆ ಅನುಚಿತವು. ನಿತ್ಯ ವಾಗಿ ನ್ಯಾಯ, ತರ್ಕಗಳನ್ನು ಮಾತ್ರ, ಅಭ್ಯಾಸ ಮಾಡುವ ಜ್ಞಾನಿಯು, ಮುಂದೆ ಬ್ರಹ್ಮರಾಕ್ಷಸನಾಗಿ ಹುಟ್ಟವನು. ಅದು ಹೇಗೆನಲು ಕೇಳಿರಿ. ತಾನು ಪರರನ್ನು ಗೆಲ್ಲುತ್ತ, ಜನರಿಂದ ಪರಮ ಪಂಡಿತನೆನಿಸಿಕೊಳ್ಳಬೇಕೆಂಬ ಉದ್ದೇಶದಿಂದ ಕಷ್ಟಪಡುತ್ತ ತನ್ನ ಎಲ್ಲ ಆಯುಷ್ಯವನ್ನು ಅದಕ್ಕೆ ವ್ಯಯ ಮಾಡುತ್ತ, ಗರ್ವದಿಂದ ವಾದವನ್ನು ಮಾಡುವನು. ತಾನು ಸೋತರೆ ಕಡುದುಃಖವಾಗುವದು. ತಾನು ಗೆದ್ದರೆ, ತನ್ನ ವಾದಿಗಳಿಗೆ ತನ್ನಂತೆ ಸಹಿಸದಷ್ಟು ತಾಪವಾಗುವದು, ಇದು ನಿಜವು. ಇಂತು ಪರರಿಗೆ ತಾನು ತಾಪ ಕೊಡಲು ಆ ತಾಪವು ಪಾಪವನ್ನು ಹೆಚ್ಚಿಸಿ ದೇವನ ಶಾಪದಿಂದ ತಾನು ಬ್ರಹ್ಮರಾಕ್ಷಸನಾಗುವದೇ ನಿಜವು," ನೋಡಿರೆಂದನು.

ಆಗ ಮೂವರು ಸಿದ್ಧಭೂಪನ ಅನುಭವ ವಾಕ್ಯಗಳನ್ನು ಕೇಳಿ ಭಯ-ಗ್ರಸ್ತರಾಗಿ. "ನಾವು ಲೌಕಿಕ ಮಾರ್ಗ ಹಿಡಿದು ಕೆಟ್ಟೆವು. ಗುರುವೇ ಮುಂದೆ ನಮ್ಮ ಗತಿ ಏನು ? ಈ ಪಾಪವೆಂತು ಪೋಪುದು ? ಇದಕ್ಕೆ ಉಪಾಯವನ್ನು ಪೇಳಿ ಪೊರೆಯಿರಿ," ಎಂದು ಬಾಗಿ ನಮಿಸಿದರು. ಆಗ ಮಹಾತ್ಮರು ಮೂವರಿಗಾದ ಪ್ರಾಯಶ್ಚಿತ್ತವನ್ನು ಕಂಡು ಮುದದಿಂದ ಅವನನ್ನು ಪಿಡಿದೆತ್ತಿ ಅವರಿಗೆ ಚಂದ-ದಿಂದ ತತ್ವಮಸಿ ಮಹಾವಾಕ್ಯವನ್ನು ಉಪದೇಶಿಸಿ ಆಶೀರ್ವದಿಸಿದರು. ಆಗ

ಮೂವರು ತಂದೆಯೆ ತಮ್ಮಿಂದ ನಾವು ಧನ್ಯರಾದೆವು ಎನ್ನುತ್ತ ಅಪ್ಪಣೆ ಗೊಂಡು ನಮಿಸಿ ಗಮಿಸಿದರು.

ಪದ—೪೯–೭೧ **ನಂಗಾಘಟದಲ್ಲಿ ಬೈರಾಗಿಗೆ ಉಪದೇಶ**

ಬಳಿಕ ಪರಮಹಂಸರು ಘಳಿಲನೆ ಅಲ್ಲಿಂದ ಹೊರಟು ಬಸವದುರ್ಗ, ನಾರದ, ಚೌಕಿ, ಚೌಷಷ್ಟಿ, ಲೋಲಂರ್ಕ, ಹಳೆಯ ಪಾಂಡೇಶಾದಿ ಘಾಟ ಗಳನ್ನು ನೋಡುತ್ತ ಹರಿಶ್ಚಂದ್ರ ಘಾಟಕ್ಕೆ ಬಂದರು. ಅಲ್ಲಿರುವ ಮಸಣ ದನ್ನೀಕ್ಷಿಸುತ್ತ ನಂಗಾಘಾಟಕ್ಕೆ ಬಂದು ವಿಶ್ರಮಿಸಿದರು. ಅಲ್ಲಿ ನಂಗಾ ಸಾಂಪ್ರದಾಯಕ ಓರ್ವ ಬೈರಾಗಿಯು ಸಂಚರಿಸುತ್ತ ಅಲ್ಲಿಗೆ ಬಂದನು. ಕುಳಿತಿರುವ ಸಿದ್ಧನನ್ನು ಕಂಡು, "ವಸ್ತ್ರಾದಿಗಳನ್ನು ಧರಿಸಿರುವ ಜಡರಿಗೆ ಕಡು ಚಿಂತೆಯಲ್ಲದೆ ವಿಷಯಗಳಲ್ಲಿ ಸುಖವಿಲ್ಲವೆಂದು ತಿಳಿದ ಸಾಧುಗಳಿಗಿಲ್ಲ. ಶರೀರಕ್ಕೆ ಅರಿವೆಯು ನಿನಗೆ ಏತಕ್ಕೆ ಬೇಕು,"? ಎಂದು ಪ್ರಶ್ನೆಮಾಡಿದನು.

ಆಗ ಸಿದ್ಧಯತಿಯು, ಆ ನಂಗಾ ಬೈರಾಗಿಯನ್ನು ಕುರಿತು, ''ವಸ್ತ್ರ ಧಾರಣವನ್ನು ಬಿಟ್ಟಿರುವವನ ಸ್ಪರ್ಶೇಂದ್ರಿಯವು ತನ್ನ ವಿಷಯವನ್ನು ಗ್ರಹಿ–ಸುವ ಕಾಲಕ್ಕೆ ಸುಖ–ದುಃಖಗಳು ಆಗುವವೋ ಇಲ್ಲವೋ'' ಎಂದು ಕೇಳಿ–ದನು. ಬೈರಾಗಿಯು, ''ಸನ್ನುತನೆ, ಪ್ರಾರಬ್ಧ ವಶದಿಂದ ತನ್ನ ವ್ಯವಹಾರ ನಡೆದಿರಲು ಮೊದಲು ತನ್ನ ಮನವನ್ನು ಸ್ಥೈರಿಸಿದವನಿಗೆ ಸುಖ ದುಃಖಗಳು ಇಲ್ಲ'' ನೋಡೆಂದನು.

"ಹಾಗಾದರೆ ಸ್ಥೈರಣೆಯೇ ಈಗ ಸುಖಕ್ಕೆ ಸಾಧನವಾಗಿರಲು ಬಹಿ ರಂಗ ವಸ್ತ್ರ ತ್ಯಾಗವೆಂಬುವದು ಹೇಗೆ ಸಾಧನವಾಗುವದು,'' ಎಂದನು. ಸಿದ್ಧನ ಮಾತಿಗೆ ಬೈರಾಗಿಯು ಚಕಿತನಾಗಿ, ''ಮೂಹದಿವಾನಾ ದಿಲ್‌ಶಿಯಾ ನಾ ಹೈ'' (ಅಂದರೆ ಇವನು ಹೊರಗೆ ಹುಚ್ಚನಂತೆ ಕಂಡರೂ ಒಳಗೆ ಜಾಣ ನಾಗಿ ಮೆರೆಯುವ ಪರಮ ಬ್ರಹ್ಮಜ್ಞಾನಿ ಇರುವದು ನಿಜ) ವೆಂದು ಹರುಷ ದಿಂದ ನಮಿಸುತ್ತ ಹೊರಟು ಹೋದನು.

**ವ್ಯಾಸ ಕಾಶಿಯಲ್ಲಿ**

ಬಳಿಕ ಚರಿತ್ರ ನಾಯಕನು, ಅಲ್ಲಿಂದ ಹೊರಟು ರಾಮ ನಗರವೆಂಬ ವ್ಯಾಸಕಾಶಿಗೆ ಬಂದು ರಾಜನು ನಿರ್ಮಿಸಿರುವ ಮಂದಿರಗಳನ್ನು ನೋಡಿ

ಕೊಂಡು ಮುಂದಿರುವ ಕೆರೆಯ ದಂಡೆಯಮೇಲೆ ಸ್ವಲ್ಪ ಹೊತ್ತು ವಿಶ್ರಮಿಸಿದನು. ಹಾಗೆಯೇ ಮುಂದೆ ಬಂದು ಪ್ರೊಳಿವ ಗಿರಿಜಾದೇವಿಯ ಮಂದಿರವನ್ನು ಕಂಡು, ಅಲ್ಲಿ ಒಂದು ಬದಿಗೆ ನಿರ್ವಿಕಲ್ಪಿತನಾಗಿ ಕುಳಿತುಕೊಂಡನು. ಅದೇ ಸಮಯಕ್ಕೆ ದೇವಾಲಯದ ಪೂಜಾರಿಯು ಸ್ನಾನ ಸಂಧ್ಯಾವಂದನೆಗಳನ್ನು ತೀರಿಸಿಕೊಂಡು, ಸಾನುರಾಗದಿಂದ ಅರ್ಘ್ಯ ಪತ್ರಿ, ಪುಷ್ಪಾದಿಗಳನ್ನು ತೆಗೆದುಕೊಂಡು ಠಣಠಣನೆ ಹಾರುತ್ತ, ಮಂತ್ರ ಜಪಿಸುತ್ತ, ಗುಡಿಗೆ ಬಂದನು. ಅಲ್ಲಿ ಪೂಜೆಯನ್ನು ತೀರಿಸಿಕೊಂಡು, ತಿರುಗಿ ಬರುವಾಗ್ಗೆ ಕುಳಿತಿರುವ ಸಿದ್ಧನನ್ನು ಕಂಡನು. ಇವನಿಗೆ ಅನ್ನವಿಲ್ಲದೆ ಎಷ್ಟು ದಿನಗಳಾಗಿರುವವೋ ಏನೋ, ಅನ್ನವಿಲ್ಲದೆ ಹಸಿವೆಯಿಂದ ಬನ್ನ ಬಡುತಿಹನು. ಈ ಯತಿಯ ಉದರವು ಬೆನ್ನಿಗೆ ಹತ್ತಿರುವದು. ಎನ್ನುತ್ತ ''ನೀನಾರು ಎಂದು ಕೇಳಿದನು. ಆಗ ಸಿದ್ಧನು, "ನೀನು ನಿನ್ನನ್ನು ಅರಿತಿರಲಿಕ್ಕೆ ನೀನಾವನಾಗಿರುವಿಯೋ ಅವನೇ ನಾನಿರುವೆನು'' ಎಂದನು. ಆಗ ಅರ್ಚಕನು ''ಅದಿರಲಿ ಈಗ ಬಹಳ ವೇಳೆಯಾಗಿರುವ ಕಾರಣ ನನಗೆ ಹಸಿವೆ ತಡೆಯಲಿಕ್ಕೆ ಆಗದು, ಹೋಗುವೆನು. ನೀನೂ ಊಟ ಮಾಡುವಿಯೋ" ? ಎಂದು ಕೇಳಿದನು. "ನೀನು ಊಟ ಮಾಡಿದರೆ ನನಗೂ ಉಣಿಸು'' ಎಂದನು ಸಿದ್ಧ. ಅರ್ಚಕನು ''ಹಾಗಾದರೆ ಊಟಕ್ಕೆ ಮನೆಗೆ ಹೋಗುವಾ ನಡೆ'' ಎಂದನು.

ಅದಕ್ಕೆ ಭಾರತಿಯು, ''ನೀನು ನಡೆಸುತ್ತ ಮನೆಗೆ ಕರೆದೊಯ್ದು ಉಣಬಡಿಸಿದರೆ ಎಷ್ಟು ಫಲ ಬರುವದೋ, ಅದಕ್ಕೂ ಅಧಿಕ ಫಲವು ನೀನು ಅನ್ನವನ್ನು ಇಲ್ಲಿಯೇ ತಂದುಕೊಟ್ಟರೆ ಬರುವದು" ಎಂದನು. ಕೂಡಲೇ ಅರ್ಚಕನು ಧಾವಿಸಿ ತರತರದ ಪಕ್ವಾನ್ನದ ಅಡಿಗೆಯನ್ನು ತಂದನು. ಬಳಿಕ ಈರ್ವರೂ ಕುಳಿತು ಹರ್ಷದಿಂದ ಯಥೇಷ್ಟವಾಗಿ ಭೋಜನ ಮಾಡುತ್ತಿರುವಾಗ ಅಲ್ಲಿಗೆ ಅತಿಥಿಗಳು ಬರಲು, ಅವರಿಗೂ ಉಣಬಡಿಸುತ್ತ ಎಲ್ಲರೂ ಉಂಡು ತೃಪ್ತರಾದರು. ಬಳಿಕ ಈರ್ವರೂ ಕೂಡಿ ಬರುತ್ತಿರಲು, ಹೊಳೆಯ ಥಡದ ಮೇಲೆ ವ್ಯಾಸ ನಿರ್ಮಿತ ಪ್ರೊಳಿವ ಶಿವಾಲಯವನ್ನು ಕಂಡರು. ಆಗ ಅರ್ಚಕನು, "ವಿದ್ಯೆಯೊಳು ಬಲು ಬಲ್ಲಿದವನೆಂದು ಹೊಗಳಿಸಿಕೊಂಡ ವ್ಯಾಸನು, ಶಿವನನ್ನು ಹಳಿದು ತನ್ನ ಕರವು ಕತ್ತರಿಸುವಂತೆ ಮಾಡಿಕೊಂಡನು. ಹೀಗೆ ಮಾಡಿಕೊಂಡದ್ದು ಅವನ ಮೂಢತನವಲ್ಲವೇ ? ಎಂದು ಹೇಳಿದನು.

## ಕಾಶಿಯಲ್ಲಿ ವ್ಯಾಸನಿಗಾದ ಹಾನಿ ಮತ್ತು ಅದರ ನಿವಾರಣೆ

ಅದಕ್ಕೆ ಸಿದ್ಧನು, "ಮೊದಲು ವ್ಯಾಸನು ಕಾಶಿಯಲ್ಲಿ ಅನ್ನವಿಲ್ಲದೆ ಬನ್ನ ಬಡುತ್ತ ಮೂರು ದಿನಗಳವರೆಗೂ, ಅನ್ನವನ್ನು ಯಾಚಿಸಿದನು. ಆದರೂ ಒಂದು ತುತ್ತು ಅನ್ನವು ದೊರೆಯದಿರೆ, ದೇವರೊಳು ತಾನು ಭಿನ್ನಮತಿಯವ ನಂತೆ ನಟಿಸುತ್ತ, "ಲಕ್ಷ್ಮೀಪತಿಯೇ ನನ್ನ ರಕ್ಷಕನು," ಗಿರಿಜಾಧರನು, ತಾನೇ ಭಿಕ್ಷೆ ಬೇಡುತ್ತಿರಲು, ತನ್ನ ಭಕ್ತರಿಗೆ ಅನ್ನವನ್ನು ಕೊಡುವನೇ ? ಇವನಿರುವ ನಗರವೇ ಮಸಣವು, ಇದಕ್ಕೆ ಹರಿಶ್ಚಂದ್ರನೇ ಸಾಕ್ಷಿಯು, ಎನ್ನುತ್ತ ಶಿವನನ್ನು ಕರವೆತ್ತಿ, ಹಳಿದನು. ಹರನು ಕುಪಿತನಾಗಿ 'ವ್ಯಾಸ ಋಷಿಗೆ ನಿನ್ನ ಬಲಗೈ ಹರಿದು ಬೀಳಲಿ ! ಮತ್ತು ಮೆರೆಯುತ್ತಿರುವ ಈ ಕಾಶಿಯಿಂದ ನೀನು ಬಾಹಿರನಾಗು' ಎಂದು ಶಪಿಸಿದನು. ತಕ್ಷಣವೇ ಋಷಿಯ ಕರವು ಕತ್ತರಿಸಿತು. ಅಲ್ಲಿಂದ ವ್ಯಾಸನು ಹೊರಟು ಬಂದು ಈ ಸ್ಥಳದಲ್ಲಿ ಒಂದು ನಗರವನ್ನು ರಚಿಸಿ ಈ ಪವಿತ್ರ ಲಿಂಗವನ್ನು ಸ್ಥಾಪನೆ ಮಾಡಿದನು. ತನ್ನ ದೋಷ ಪರಿಹಾರಗೋಸುಗ, ಹನ್ನೆರಡು ಸಂವತ್ಸರ ಪರಿ ಯಂತರ ಘೋರ ತಪವನ್ನಾಚರಿಸಿ, ಶಿವನನ್ನು ಉಪಾಸಿಸಲು, ಅವನ ಕರವು ಮುನ್ನಿನಂತೆ ಚಿಗಿಯಿತು. ಮತ್ತು ಭಿನ್ನಮತಿಯು ನಾಶವಾಯಿತು ಆಗ ಬ್ರಹ್ಮ ಸೂತ್ರವನ್ನು ರಚಿಸಿದನು.

ಶೂರನಾದ ಹಿರಣ್ಯ ಕಶಪನ್ನು ಮೃಢನನ್ನು ಸ್ತುತಿಸಿ. ಹರಿಗೆ ಹೀನತನ ದಿಂದ ಹಳಿದು, ವಿರೋಧಿಯಾಗಲು ಅವನಿಗೂ ಮರಣವಾಯಿತು. ಜಾಣನೇ ಇಂಥವರೇ ದೇವತ್ವದಲ್ಲಿ ಭೇದವನ್ನುಂಟು ಮಾಡಿ, ಹಾನಿಯನ್ನು ಹೊಂದಿರಲು ಉಳಿದವರ ಪಾಡೇನು ? ಅನೇಕ ಮಕ್ಕಳಿಗೆ ಓರ್ವ ತಂದೆ ಇದ್ದನೆಂದು ತಿಳಿ. ಅವರು ಆಟವಾಡುತ್ತಿರುವಾಗ ಒಂದು ದಿನ ತಮ್ಮ-ತಮ್ಮೊಳಗೆ ವ್ಯಾಜ್ಯ ಬಂದಿತು. 'ನಿನ್ನ ತಂದೆಯು ಅಸತ್ಯವಂತನು. ನಿನ್ನ ತಂದೆಯು ಕಳ್ಳನು ನನ್ನ ತಂದೆಯು ಒಳ್ಳೆಯವನು,' ಹೀಗೆ ಅವರು ಕಲಹ ಮಾಡುವದನ್ನು ತಂದೆಯು ಕಂಡು, ಅವರನ್ನು ದಂಡಿಸುವಂತೆ, ಒಬ್ಬ ಪರಮಾತ್ಮನಿಗೆ ಹಲವು ನಾಮಗಳಿರಲು, ಅದನ್ನು ಅರಿಯದೆ ಬರೀ ಭ್ರಮೆಯಿಂದ ದೇವರ ವಿಷಯ

ವಾಗಿ ಭೇದವನ್ನುಂಟು ಮಾಡಿಕೊಂಡರೆ, ಆ ಪರಮನು ನಮ್ಮನ್ನು ದಂಡಿಸುವನು. ಅದು ಕಾರಣ ಭೇದವೇ ದುಃಖಕ್ಕೆ ಮೂಲ ಕಾರಣವಾಗಿರುವದು ಅಂಥ ಪರಮ ಋಷಿಗೆ ಹೀಗಾಗಿರಲು ಭೇದಮತಿ ದೇವರ ರಕ್ಷಣೆ ದೊರೆಯದು. ಈ ಬೋಧವು ಜನಗಳಿಗೆ ಆಗಲೆಂದು ವ್ಯಾಸನು ಹೆಚ್ಚು ಅಷ್ಟ ಪಟ್ಟವನಂತೆ ಈ ಕೃತಿ ರಚಿಸಿ ತೋರಿಸಿದನು. ಇದನ್ನು ಅರಿಯಲು ವ್ಯಾಸನು ಮೂಢನೆಂತಾಗುವನು ?" ಎಂದನು. ಅರ್ಚಕನು ಪರಮ ಸಿದ್ಧನ ಈ ತತ್ವವನ್ನು ಕೇಳಿ ಹರುಷದಿಂದ ನಮಿಸಿ ಅಪ್ಪಣೆಗೊಂಡು ಹೊರಟು ಹೋದನು. ಬಳಿಕ ಸಿದ್ಧಯತಿಯು ಅಲ್ಲಿಂದ ಹೊರಟು ಕಾಶಿಯ ಸುತ್ತಲಿರುವ ಪಂಚಕೋಶ ಯಾತ್ರಾಮಾಡುವದಕ್ಕಾಗಿ ಮುಂದೆ ಸಾಗಿದನು.

ಮಂಗಲ:— ಗಿರಿಯ ವೈರಿಗೆ ಯಾಜ್ಞೆಯೀಯುತ |
ಗಿರಿಯ ಸದನವ ಮಾಡಿಕೊಳ್ಳುತ |
ಗಿರಿಗೆ ತಾನೇಯಳಿಯನಪ್ಪುತ ಶ್ವೇತದಿಂಪೊಳೆದು ||
ಗಿರಿಗೆ ತಾನೇ ಈಶನೆನಿಸುತ |
ಗಿರಿಯ ಮೇಲ್ಗಟ್ಟದನ ನಳಿದನ |
ಮೆರೆವ ಹೃದಯಂ ಶೇರಿದವಗಂ ನಾನು ನತನಪ್ಪೆ ||

ಇತಿ ಶ್ರೀ ಸಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ ಲೀಲಾ
ಚರಿತ್ರ ಕಲ್ಪ ದ್ರುಮದೊಳು ಗೌತಮ ವೈಶೇಷಿಕನ್ಯಾಯ
ಶಾಸ್ತ್ರಗಳಿಂ ವಾದಗೈಯುವ ಶಾಸ್ತ್ರಿಗಳಿಗೆ ಅದನ್ನು ಬಿಡಿಸಿ
ಆತ್ಮಜ್ಞಾನದಭಿರುಚಿಯಂ ಪೇಳಿದ
೨೦ ನೇ ಅಧ್ಯಾಯ ಸಮಾಪ್ತಿ

———

|| ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ||



# ಸಂಚಾರ ಸಂಭ್ರಮ ಕಾಂಡ

## ಅಧ್ಯಾಯ ೨೧.

|| ಓಂ ತತ್ಸತ್ ||

ಈ ಅಧ್ಯಾಯದಲ್ಲಿ ಕಾಶಿಯಲ್ಲಿ ಸಿದ್ಧನು ಉಂಡ, ಎಂಜಲದ ಎಲೆಯನ್ನು ಶಿವನು ಪಾರ್ವತಿಯರು ತೆಗೆದದ್ದು, ಅಲ್ಲಿಂದ ಪ್ರಯಾಗ ಕ್ಷೇತ್ರವನ್ನೆಲ್ಲ ತಿರುಗಿ ಮೊಗಲ ಸರಾಯಿಗೆ ಬಂದದ್ದು, ಅಲ್ಲಿ ಒಬ್ಬ ಕಾವ್ಯಜ್ಞನಿಗೆ ವೀರರಸ ಉತ್ಪ್ರೇಕ್ಷಾಲಂಕಾರವನ್ನು ಪೇಳಿದ್ದು, ಮತ್ತು ಒಬ್ಬ ಸಾಹುಕಾರನ ಮನೆಯ ಕಾವಲುಗಾರನಿಗೆ ಆ ಮನೆಯನ್ನು ಧರ್ಮಛತ್ರವೆಂದು ಸಿದ್ಧ ಮಾಡಿದ್ದು. ಮತ್ತು ಮನೆಯ ಮಕ್ಕಳಕೂಡ ಚದುರಂಗದಾಟವನ್ನಾಗಿ ಗೆದ್ದದ್ದು, ಬಳಿಕ ಸಾಹುಕಾರನ ತಾಯಿಯ ರೋಗ ನಿವೃತ್ತಿ ಮಾಡಿ ಪೂಜೆಗೊಂಡು ಉಂಡು ತೃಪ್ತನಾಗಿ ಗಯಾಕ್ಕೆ ಹೋದದ್ದು.

ಸ್ತೋತ್ರ— ಈಶನೇ ಭಗೀರಥನ ಸುತಪ ವಿ |
ಲಾಸ ಕೊಲೆಯುತ ನಿನ್ನ ಶಿರದೊಳ್ |
ವಾಸಗೈದಿಹ ಗಂಗೆಯನ್ನವಗೀಯ ಲವಳವಗಂ ||

ಲೇಸುಗೊಡುತಂ ಕಾಶಿಯೊಳ್ ತಾಂ |
ನಾಶಿಸಲವಳ ಮೋಹದಿಂ ಕೈ |
ಲಾಸವ ನುಳಿದು ಕಾಶಿಯ ಲ್ಲಿಹ ನಿನ್ನನಾಂ ನಮಿಪೆ ||

## ಪದ— ೧—೧೫ ಶಿವ-ಪಾರ್ವತಿಯರು ಸಿದ್ಧನು ಉಂಡುಬಿಟ್ಟ ಎಂಜಲದ ಎಲೆಯನ್ನು ತೆಗೆದದ್ದು

ಅಲ್ಲಿಂದ ನಮ್ಮ ಚರಿತ್ರ ನಾಯಕನು, ಪಂಚಕ್ರೋಶ ಯಾತ್ರೆಗೆ ಹೊರಟನು. ಮೊದಲು ಜನಕರಾಜನು ನಿರ್ಮಿಸಿದ ಕರ್ದಮೇಶ್ವರನ ಮೂರ್ತಿಯನ್ನು ಕಾಣುತ್ತ, ಎರಡನೇಯ ದಿವಸ ಭೀಮ ಚಂಡಿಯನ್ನು, ಮತ್ತು ಗಂಧರ್ವಸೇನ ಸರಸಲಿಂಗವನ್ನು ನೋಡಿಕೊಂಡು, ಮುಂಡಕ್ಕೆ ಬಂದನು. ಅಲ್ಲಿರುವ ಕಾಶಿ ಶುಕ್ರ, ಪಶ್ಚಿಮೇಷಾದಿ ಲಿಂಗಗಳನ್ನು ಈಕ್ಷಿಸುತ್ತ, ಹಾಗೆಯೇ ಮೂರನೆಯ ದಿವಸ ರಾಮ ಷಡಾಯತವನ್ನು ನೋಡಿಕೊಂಡು ಬರುವಾಗ ಮಾರ್ಗದಲ್ಲಿ ದ್ರೌಪದಿಯ ಸರಸ ತೀರ್ಥವನ್ನು, ಅಲ್ಲಿಂದ ನಾಲ್ಕನೆಯ ದಿವಸ ಅಲ್ಲಿರೂ ಪಾಂಡವರ ಮೂರ್ತಿಗಳನ್ನು ಕಂಡು ಬರುವಾಗ್ಗೆ ಮಧ್ಯದಲ್ಲಿ ಹಳೆಯ ಲಿಂಗಗಳನ್ನು ಕಾಣುತ್ತ ತಾನು ೫ನೇ ದಿವಸಕ್ಕೆ ಕಪಿಲದಾರಾ ತೀರ್ಥಕ್ಕೆ ಬಂದನು. ಅಲ್ಲಿ ಸ್ನಾನತೀರಿಸಿಕೊಂಡು ಅಲ್ಲಿರುವ ಸಿದ್ಧಕೇರೀ, ಶಿವರಾಮ ಮೂರ್ತಿಗಳನ್ನೂ, ಸಿದ್ಧಿ, ನಿರ್ಮಾಸ, ಸ್ವಾಹಾ, ಬುದ್ಧಿ, ಸ್ವಾದ, ಸರ್ವಸುಂದರಿ, ಶುದ್ಧ ನಿದ್ರೆ ಮೊದಲಾದ ಎಲ್ಲ ಶಕ್ತಿಗಳನ್ನು ಅರಿತು ಪಂಚಕೋಶ ಯಾತ್ರಾ ಮುಗಿಸಿಕೊಂಡು ಸಿದ್ಧನು ಕಾಶಿಯಲ್ಲಿ ತಾನಿಳಿದ ಸ್ಥಳಕ್ಕೆ ಬಂದು ಸ್ವಸ್ಥ ಚಿತ್ತದಿಂದ ಕುಳಿತುಕೊಂಡನು.

ಅದೇ ಮಾರ್ಗದಿಂದ ಕೆಲ ಜನ ಬ್ರಾಹ್ಮಣರು, "ಅನ್ನಪೂರ್ಣೇಶ್ವರಿಯ ದೊಡ್ಡಛತ್ರದಲ್ಲಿ ಮಹಾಪ್ರಸ್ತ ನಡೆದಿರುವದು. ನಾವು ಅಲ್ಲಿಗೆ ಭೋಜನಕ್ಕೆ ಪೋಗುವೆವು" ಎಂದು ತಮ್ಮ ತಮ್ಮೊಳಗೆ, ಮಾತನಾಡುವದನ್ನು ಭಾರತಿಯು ಕೇಳಿದನು. ಕೂಡಲೇ ತಾನೂ ತೀವ್ರವಾಗಿ ಹೊರಟು ಊಟಕ್ಕೆ ಧಾವಿಸಿ ಒಳಗೆ ಘುಮುಕಹತ್ತಿದನು. ಅಷ್ಟರಲ್ಲಿ ದ್ವಿಜರು ಅವನನ್ನು ತಡೆದು, "ನೀನು ಕೇವಲ ಶೂದ್ರನಿದ್ದು ಗಡಿಬಿಡಿಯಿಂದ ಒಳಗೆ ಪಂತಿಗೆ ಪೋಗುವಿಯಾ ? ಕೂಡ್ರಿಲ್ಲೆ ! ಎಂದು ಮೆಟ್ಟು ಬಿಡುವ ಸ್ಥಳದಲ್ಲಿ ಕೂಡ್ರಿಸಿ, ಎಲೆಯನ್ನು

ಹಾಕಿದರು. ಸಮದರ್ಶಿ ಸಿದ್ಧನು, ಹರುಷದಿಂದ ಅಲ್ಲಿಯೇ ಕುಳಿತು ಊಟ ಮಾಡಿ, ತಾನುಂಡ ಮುಸುರೆ ಎಲೆಯನ್ನು ಅಲ್ಲಿಯೇ ಬಿಟ್ಟು ಹೊರಟನು. ಕೂಡಲೇ ವಿಪ್ರನೊಬ್ಬನು, ಸಿದ್ಧನನ್ನು ಹಿಡಿದೆಳೆಯುತ್ತ, "ನೀನುಂಡಿರುವ ಎಲೆಯನ್ನು ನಿಮ್ಮಪ್ಪ ತೆಗೆಯುವನೋ?" ಎಂದು ತಾಡಿಸಿದನು. ಆ ಹೊಡೆತಕ್ಕೆ ಸಿದ್ಧನು ಪಂಚಾಕ್ಷರಿಯನ್ನು ನುಡಿಯುತ್ತ, "ತನ್ನ ಮಗ ಬೇಕಾದರೆ, ನನ್ನ ತಂದೆಯೇ ಬಂದು ತೆಗೆದಾನು !" ಎನ್ನುತ್ತ ಹೊರಡಲು, "ನಿನ್ನಿಂದಲೇ ಈ ಎಲೆಯನ್ನು ತೆಗೆಸುವೆವು" ಎಂದು ಮತ್ತೆ ಹೊಡೆಯ ಹತ್ತಿದರು. ಆಗ ಯತೀಶ್ವರ ಸಿದ್ಧನು ಕಂದು ಗೊರಳನನ್ನು ನೆನೆದು, ಮೌನವನ್ನು ತಾಳಿದನು.

## ಪಾರ್ವತೀಶ್ವರರು ಪ್ರತ್ಯಕ್ಷರಾದದ್ದು

ಅಷ್ಟರಲ್ಲಿ ಓರ್ವ ಶಿವಯೋಗಿಯು, ಶಿರದಲ್ಲಿ ಜಡೆ, ಹಣೆಯಲ್ಲಿ ಭಸ್ಮ, ಕೊರಳಲ್ಲಿ ರುದ್ರಾಕ್ಷಿ ಮಾಲೆ ಧರಿಸಿ, ಕರದಲ್ಲಿ ದಂಡ ಕಮಂಡಲಗಳನ್ನು ಪಿಡಿದು ಪಾದಗಳಲ್ಲಿ ಕಡಾವುಗಳನ್ನು ಮೆಟ್ಟಿ, ಧವಳಾಂಗದ ಮೇಲೆ ಶುಭ್ರ ವಸ್ತ್ರದಿಂದೊಪ್ಪುತ್ತಿರುವ ಮುಕ್ಕಣ್ಣನಂತೆ, ಮುಂದೆ ಬಂದು, ನನ್ನ ಮಗನೆಲ್ಲಿ ? ಎಂದು ಕೇಳಿದನು. ಆಗ ಬ್ರಾಹ್ಮಣರು ಆ ಯತೀಶ್ವರನ ಮುಂದೆ, ಸಿದ್ಧನ ಉದ್ಧಟತನವನ್ನು ಹೇಳಿದರು. ಶಿವಯೋಗಿಯು, "ಸೈರಿಸಿರಿ ಆ ಎಂಜಲವನ್ನು ನಾನು ತೆಗೆಯುವೆವು," ಎಂದು ಚಂದದಿಂದ ಎಂಜಲವನ್ನು ತೆಗೆದು ಗೋಮಯವನ್ನು ಹಚ್ಚಿದನು. ಅಷ್ಟರೊಳಗೆ ಜರಿಯ ಪಿತಾಂಬರವನ್ನುಟ್ಟು ಕಂಚುಕೆಯನ್ನು ತೊಟ್ಟು, ಕೊರಳು, ತೋಳು, ಎದೆಗಳಿಗೆ ತರತರದ ನವರತ್ನ ಖಚಿತ ಆಭರಣಗಳಿಂದ ಅಲಂಕೃತಳಾಗಿ, ನೊಸಲಿಗೆ ಕಸ್ತೂರಿ ತಿಲಕವನ್ನಿಟ್ಟು, ಮೂಗಿನಲ್ಲಿ ಮುತ್ತಿನ ನತ್ತನಿಟ್ಟು, ಹೊಂಬಣ್ಣದಂತೆ ಹೊಳೆಯುತ್ತಿರುವ ಅಂಗಕ್ಕೆಲ್ಲ ಶ್ರೀಗಂಧವನ್ನು ತೀಡಿ ವೈಯಾರದಿಂದ, ತುಂಬಿದ ಪೊಂಗಲಶವನ್ನು ಕರದೊಳು ಪಿಡಿದ ಸುಂದರಿಯೋರ್ವಳು, ಒಳಗಿನಿಂದ ಬಂದು ಆ ಸಿದ್ಧನ ಕೈ ತೊಳೆದು ತನ್ನ ಸೆರಗಿನಿಂದ ಒರೆಸಿ ನಮಿಸುತ್ತ ಅದೃಶ್ಯಳಾದಳು. ಅವರೆಲ್ಲರು ಮೆರೆಯುವ ಋಷಿವರರನ್ನು ಎತ್ತ ನೋಡಿದರೂ ಕಾಣದಾದನು ! ಆಗ ಬ್ರಾಹ್ಮಣರೆಲ್ಲರು, ಆಶ್ಚರ್ಯ, ಆನಂದ ಖೇದಗಳನ್ನು ಒಮ್ಮೆಲೆ ಹೊಂದಿದವರಾಗಿ, "ಇಂಥ ಸುಸಂಧಿಯಲ್ಲಿ ನಾವು ಯತಿಗೆ ಮಂದಮತಿಯಿಂದ ಶೂದ್ರ

ನೆಂದು ಹಳಿಯುತ್ತ" ಹೊಡೆದುಬಿಟ್ಟೆವು. ನಾವು ಇವನಿಂದಲೆ ಇಂದು ಶಿವ ಪಾರ್ವತಿಯರನ್ನು ಕಂಡೂ ಕಾಣದಂತಾದೆವು "ಅಯ್ಯೋ ನಮ್ಮ ದುರ್ದೈವವೆ !" ಎಂದು ಸಿದ್ಧನನ್ನು ಹುಡುಕುವಮುನ್ನ ಅವನು ಒಂದು ಸಂದಿಯನ್ನು ಹಿಡಿದು ಹೋದನು. ಜನರು ನಗರವನ್ನೆಲ್ಲ ಸುತ್ತಾಡಿದರೂ, ಸಿದ್ಧನು ಎಲ್ಲಿಯೂ ಕಾಣದಾದನು. ನಮ್ಮ ಅಹಂಭಾವದಿಂದ ಮತ್ತು ವಿಪರೀತ ಮತಿಯಿಂದ ನಾವಿಂದು ದೇವರನ್ನು ಕಳೆದುಕೊಂಡೆವು. "ದೈವಗತಿಯಿಂ ಬೇರೆ ಗತಿಯುಂಟೇ ?" ಎಂದು ಮರುಗುತ್ತ ಪಶ್ಚಾತಾಪ ಹೊಂದಿದರು.

## ಪದ— ೧೯—೨೦ ಪ್ರಯಾಗ ಕ್ಷೇತ್ರ ನೋಡಿಕೊಂಡು ಮೊಗಲ ಸರಾಯಿಗೆ ಬಂದದ್ದು.

ಇತ್ತ ಭಾರತಿಯು ಒಡನೆ ಪೊಡವಿಯೊಳಗಿರುವ ನಿಖಿಳ ತೀರ್ಥಗಳಲ್ಲಿ ಪ್ರಖ್ಯಾತವೆನಿಸಿದ, ಪ್ರಯಾಗ ಕ್ಷೇತ್ರಕ್ಕೆ ಬಂದು ಅದನ್ನು ದಿಟ್ಟಿಸುತ್ತ ಮನಸ್ಸಿನಲ್ಲಿ "ಕ್ಷೇತ್ರಗಳನ್ನು ಸಂಚರಿಸುವದರಲ್ಲಿ ಶಕ್ತಿ ಹೀನರಾದವರು ಮೃಢನ ನಾಮದಲ್ಲಿಯೇ ಸರ್ವ ತೀರ್ಥಗಳು ಅಡಗಿರುವವೆಂದು, ನಿರುತ ಮನದೊಳು ಸದ್ಭಾವನೆ ಇರಿಸಿಕೊಂಡದ್ದಾದರೆ, ಆ ಎಲ್ಲ ತೀರ್ಥಗಳ ಫಲವು ಫಲಿಸುವದು. ಮತ್ತು ಅವರು ಹರನ ರೂಪನಾಗುವರು." ಎಂದು ಚಿಂತಿಸುತ್ತ ಗಂಗೆ-ಯಮುನೆಗಳ ಸಂಗಮದಲ್ಲಿ ಸ್ವಸ್ಥವಾಗಿ ಕುಳಿತನು. ಆ ಕ್ಷೇತ್ರಕ್ಕೆ ಯಾತ್ರೆಗಾಗಿ ಬಂದವರಲ್ಲಿ ಕೆಲವರು ಮುಂಡ, ಪಿಂಡ, ತರ್ಪಣಾದಿ ವಿಧಿ ನೇಮಾದಿಗಳನ್ನಾಚರಿಸುವದನ್ನೂ, ಅನೇಕರು ಸ್ನಾನಮಾಡುತ್ತ ಮಂತ್ರ ಪಠಿಸುವದನ್ನೂ ಕಂಡು ಸಿದ್ಧಭಾರತಿಯು, ಮನದೊಳು "ಇವರು ನಿತ್ಯ ನೈಮಿತ್ತಿಕಮಾದ ಕರ್ಮಗಳನ್ನು ನಿಷ್ಕಾಮದಿಂದ ಮಾಡಲು ಮೃಢನು ಒಲಿದು ಕೊಡುವ ಪ್ರಸಾದದಿಂದ ಶುದ್ಧಮನಸ್ಕರಾಗಿ ನಿರ್ಮಲ ಜ್ಞಾನಕ್ಕೆ ಅಧಿಕಾರಿಗಳಾಗುವರು" ಎಂದೆನ್ನುತ್ತ ಅಲ್ಲಿಂದ ಹೊರಟನು. ಮುಂದೆ ಕೋಟೆಯೊಳಗಿರುವ ಸಂಗಮನಾಥನ ದರುಶನಗೊಂಡು ಅಲ್ಲಿರುವ ಅಕ್ಷಯ ವಟುವೃಕ್ಷದ ಮೂಲವನ್ನು ನೋಡಿಕೊಂಡು, ಹಾಗೆಯೇ ಗುಪ್ತಗಾಮಿನಿಯಾಗಿರುವ ಸರಸ್ವತಿ ಮೂಲಸ್ಥಳವನ್ನು ನಿರೀಕ್ಷಿಸಿದನು. ಅಲ್ಲಿಂದ ಮುಂದೆಸಾಗಿ ಮೊಗಲ ಸರಾಯಿಗೆ

ಬಂದು, ಪುರದೊಳು ಸೇರಬೇಕೆನ್ನುವಷ್ಟರಲ್ಲಿ ನಸುಗತ್ತಲಾಯಿತು. ಕೂಡಲೆ ಬಿರುಗಾಳಿಯಿಂದ ಮೋಡವೆದ್ದು ಗುಡುಗುಮಿಂಚು ಏಕಕಾಲಕ್ಕೆ ಅಡಸಲು, ಅಲ್ಲೊಂದು ದೇಗುಲವ ಕಂಡು ಅದರಲ್ಲಿ ಕುಳಿತನು.

## ಪದ— ೨೧—೨೬ ಕಾವ್ಯಜ್ಞನಿಗೆ ವೀರರಸ ಉತ್ಪ್ರೇಕ್ಷಾಲಂಕಾರ ಪೇಳಿದ್ದು.

ಅಷ್ಟರಲ್ಲಿ ಮೊದಲೇ ಅಲ್ಲಿ ಕುಳಿತುಕೊಂಡಿದ್ದ ಓರ್ವ ಕಾವ್ಯಜ್ಞನು ಸಿದ್ಧನನ್ನು ದಿಟ್ಟಿಸಿ ಇವನು ಕಾವ್ಯಜ್ಞನಿರಬಹುದೆಂದು ನಿಶ್ಚಯಿಸಿ, "ಪರಮನೇ ವರ ಪಯೋನಿಧಿ ಮಧ್ಯದಿಂದ ಅವತರಿಸಿರುವ ಅಮೃತಾಂಶುವಿನಂತೆ ಮುನಿ-ವರರ ಮಧ್ಯದೊಳ್ ಒಲವಿನಲಿ ಎದ್ದನು ಆ ರಘುನಾಥನು. ಇದಾದ ಆಂಕಾರವು ? ಪೇಳು" ಎಂದನು. ಅದಕ್ಕೆ ಸಿದ್ಧಯತಿವರನು ಮುಗುಳು ನಗೆಯಿಂದ, "ಇದು ಉಪಮಾ ಅಲಂಕಾರವು" ಎಂದನು. ಕಾವ್ಯಜ್ಞನು ಪುನಃ "ಮೇಘವು ಹೀಗೇಕೆ ಮಿಂಚಿನಿಂದ ಗುಡುಗುವದು ? ಇದರ ಅಭಿಪ್ರಾಯವೇನು" ಪೇಳೆಂದನು.

ಆಗ ಸಿದ್ಧನು, ಅದನ್ನು ಮನದಲ್ಲಿ ತೂಗಿ ಕಾವ್ಯಜ್ಞನಿಗೆ ಹೇಳ-ಲಾರಂಭಿಸಿದನು. "ಮೇಘವಾಹನನು [ಇಂದ್ರನು] ತನ್ನ ವೈರಿಗಳಾದ ಗಿರಿಗಳ ಪಕ್ಕವನ್ನು ಛೇದಿಸುತ್ತಿರಲು, ಆಗ ಮೈನಾಕವೆಂಬ ಪರ್ವತವು ಭಯಗೊಂಡು ಭರದಿಂದ ಶರಧಿಯ ಬೆನ್ನು ಬಿದ್ದಿತು. ಇಂದ್ರನು ಅದನ್ನು ಕಂಡು ಶರಧಿಯ ಧೈರ್ಯಕ್ಕೆ ತಲೆದೂಗಿ, ತನ್ನ ಸೇನೆಯಂ ಗರೆದು, "ನೀವು ಜಲನಿಧಿಯಮೇಲೆ ದಾಳಿಮಾಡಲು ಬೇಗ ಹೋಗಿರಿ" ಎಂದು ಅಪ್ಪಣೆ ಮಾಡಿದನು. ಆಗ ಮೇಘ ಭಟನು ಅಬ್ಬರಿಸುತ್ತ ಜಲನಿಧಿಯೇ ! ಕೊಡು ನಮ್ಮ ಜಂಭಾರಿ [ಇಂದ್ರನ] ವೈರಿಯನ್ನು ಬಿಡು ನಿನ್ನ ಛಲವನ್ನು ! ನೀಂ ಕೊಡದಿರೆ ನಿನ್ನ ಬಲವ ಗಡಿಯುತ್ತ ಅಸುವ ನೀಗಿಸಿ ವೈರಿಯನ್ನು ಒಯ್ಯುತ್ತೇವೆ, ಎನ್ನುತ್ತ ಬಹು ಅರ್ಭಟಿಸಿ ಒಂದರುತ್ತ ಕಣ್ಣು-ಹಲ್ಗಿಸಿದರು. ಇದು ವೀರ ರಸಾನ್ವಿತದ ಪದವು ಉತ್ಪ್ರೇಕ್ಷಾ ಭೂಷಣ ಪದವು, ಇದನ್ನು ಪೌರುಷ್ಯ ಪರವಾಗಿ ಹೇಳಿರುವರು, ಎಂದನು. ಇದನ್ನು ಕೇಳಿ ಕೂಡಲೇ ಕಾವ್ಯ

ಜ್ಞನ ಮದವು ಇಳಿದು ವಿಸ್ಮಯ ಗೊಂಡವನಾಗಿ ಸಿದ್ಧನಿಗೆ ನಮಿಸಿ, ನೀನು ಸರ್ವಜ್ಞನಿರುವಿ" ಎನ್ನುತ್ತ ಹೊರಟು ಹೋದನು.

**ಪದ—೨೭—೫೧ ಸಾಹುಕಾರನ ಮನೆ ಧರ್ಮಛತ್ರವೆಂದು ಸಿದ್ಧಮಾಡಿದ್ದು.**

ಮಳೆಯಿಂದ ದೇಗುಲವು ಸೋರಹತ್ತಲು ಸಿದ್ಧನು, ಅಲ್ಲಿಂದೆದ್ದು ಊರೊಳಗೆ ಬಂದು ಒಬ್ಬ ಧನಿಕನ ಮನೆಯ ಕಟ್ಟೆಯ ಮೇಲೆ ಕುಳಿತನು. ಆಗ ಕಾವಲುಗಾರನು ಬಂದು ಸಿದ್ಧನಿಗೆ "ಎಲವೋ, ಇದು ಸಾಹುಕಾರನ ಸದನವಿದ್ದು, ಇಲ್ಲಿಗೇತಕ್ಕೆ ಬಂದಿರುವಿ ? ಹೋಗು, ಇಲ್ಲವಾದರೆ ನಿನ್ನ ಅವಸ್ಥೆ ನೆಟ್ಟಗಾಗಲಿಕ್ಕಿಲ್ಲ" ಎಂದು ಗದ್ದರಿಸಿದನು. ಸಿದ್ಧನು, "ಇದು ವಸ್ತಿಗಾರರು ಇಳಿದು ಕೊಳ್ಳುವ ಧರ್ಮಶಾಲೆ ಎಂದು ಬಂದಿರುವೆನು," ಎಂದನು ಆಗ ಕಾವಲುಗಾರನು ಸಿಟ್ಟಿನಿಂದ, "ನೀನು ಕಡು ಮೂರ್ಖನಿರುವಿ" ಎದ್ದು ನಡೆ, ಎಂದನು. ಭಾರತಿಯು, ನಾನು ಮೂರ್ಖನಲ್ಲ, "ನೀನೇ ಮೂರ್ಖನಿರುವಿ, ವಿಚಾರಿಸಿ ತಿಳಿದುಕೋ" ಎಂದನು. ಆಗ ಕಾವಲಗಾರನು "ನಾನು ಹೇಗೆ ಮೂರ್ಖನು ? ಹೇಳು" ಎಂದನು.

"ಹಾಗಾದರೆ ಪ್ರಥಮ ಈ ಮನೆಯಲ್ಲಿ ಯಾರಿದ್ದರು ? ಹೇಳು ಎಂದು ಕೇಳಿದರೆ ನೀನು ಈ ಸಾಹುಕಾರನ ಅಜ್ಜ ಇದ್ದನು ಎಂದು ಹೇಳುವಿ. ಅವನು ಅಳಿಯ, ಅವನ ಮಗ, ಮೊಮ್ಮಗ ಹೀಗೆ ನೀನು ಹೇಳುತ್ತ ಹೋಗುವಿ. ಇದರಂತೆ ವಿಚಾರಿಸುತ್ತ ಹೋಗಲು, ಮೊದಲಿರುವ ಹಳಬನು ಹೋಗಿ ಬಳಿಕ ಹೊಸಬನು ಬರುವನು. ಹೀಗಿರುವಲ್ಲಿ ಈ ಮನೆಗೂ ಧರ್ಮ-ಛತ್ರಕ್ಕೂ ಏನು ಅಭ್ಯಂತರ ಇರುವದು ? ನೀನೇ ನಿಶ್ಚಯಿಸಿ ನಿಜವನ್ನು ಹೇಳು ನೋಡೋಣ, ಛತ್ರಕ್ಕೂ ಈ ಮನೆಗೂ ಭೇದವಿಲ್ಲವೆಂಬುದನ್ನು ತಿಳಿಯದೆ, ಸಿಟ್ಟಿಗೇಳುವ ನೀನು ಮೂರ್ಖನೋ ? ನಾನು ಮೂರ್ಖನೋ ? ತಿಳಿದು ನೋಡು" ಎಂದನು.

ಹೀಗೆ ಈರ್ವರು ಉಚ್ಚಸ್ವರದಿಂದ ವಾದಗೈಯುತ್ತಿರುವದನ್ನು, ಒಳಗೆರುವ ಧನಿಕರು ಕೇಳಿ, ಬೇಗನೇ ಹೊರಗೆ ಬಂದನು. ಸೇವಕನನ್ನು ಕುರಿತು "ಇವನು ನುಡಿಯುವ ಎಲ್ಲ ನುಡಿಗಳು ನಮಗೆ ವೈರಾಗ್ಯ ತಂದು ಕೊಡುವ ನೀತಿಯ ವಾಕ್ಯಗಳಿರುವವು. ಅವುಗಳನ್ನು ಬೋಧಿಸಲು ಈಗ ನಮಗೆ ಗುರು

ವಾಗಿ ಬಂದಿರುವನು," ಎಂದು ಹೇಳಿ ಯತಿವರನ ಕಡೆಗೆ ತಿರುಗಿ ಅತಿ ಭಯ ಭಕ್ತಿ ವಿನಯಾದಿಗಳಿಂದ, "ತಂದೆಯೇ, ಇಂದು ಒಂದು ದಿವಸ ಇಲ್ಲಿಯೇ ವಸತಿಮಾಡಿ ನಾಳೆ ತಾವು ಪಯಣ ಮಾಡಬೇಕು," ಎಂದು ಕೈಜೋಡಿಸಿ ಕೇಳಿಕೊಂಡನು.

ಆಗ ಯತಿವರನು, ಧನಿಕನಿಗೆ "ಭೂಮಿ ಎಂಬ ಸದನದಲ್ಲಿ ತಮ್ಮ ಇಡೀ ಆಯುಷ್ಯವನ್ನು ಕಳೆದರೂ ಅದೊಂದು ಕ್ಷಣ ಸಹ ಪೂರ್ತಿಯಾಗುವ ದಿಲ್ಲ. ಛತ್ರದಂತಿರುವ ನಿನ್ನ ಮನೆಯನ್ನು ನೀನೇ ಒಂದು ದಿವಸ ಬಿಟ್ಟು ಹೊರಟು ಹೋಗುತ್ತಿರಲು, ನಾನೆಂತು ಇಲ್ಲಿರಬಲ್ಲೆ ?" ಎಂದನು.

"ಗುರುವೇ, ನಿನ್ನ ಈ ವಾಕ್ಯವು ಸತ್ಯವು ಎನ್ನುತ್ತ ಗುರುಗಳ ಕೆರಪಿ ಡಿದು, ತನ್ನ ಮೇಲಂತಸ್ಥಕ್ಕೆ ಹರುಷದಿಂದ ಕರೆದೊಯ್ದು, ಅಲ್ಲಿರುವ ತನ್ನ ಎಲ್ಲ ವೈಭವವನ್ನು ತೋರಿಸಿದನು. ಅಲ್ಲಿ ತನ್ನ ಸುತರು, ಮಿತ್ರರನ್ನೊಡ ಗೂಡಿ ಚಕ್ಕಂದದಿಂದ ಚದುರಂಗದಾಟವಾಡುತ್ತಿದ್ದರು. ಕೂಡಲೇ ಸಿದ್ಧನೂ ಅವರೊಂದಿಗೆ ಕೂತು ತಾನೂ ಆಟವಾಡತೊಡಗಿದನು. ತಾನೂ ಒಮ್ಮೆ ಕಾಲಾಳು ಒಮ್ಮೆ ಕುದುರೆಯನ್ನು ಹೀಗೆ ಬಿಡುತ್ತ ಮತ್ತೊಮ್ಮೆ ರಾಜನನ್ನು ಬಿಟ್ಟು ಅವರ ಆನೆಯ ಬಳಿಯಲ್ಲಿರುವ ಮನೆಯನ್ನು ನೋಡಿ, ಅದರೊಳು ಅವರ ರಾಜನಿರಲು, "ನಿಮ್ಮ ರಾಜನಿಗೆ ಚಕ್ಕು" ಎಂದು ಎಚ್ಚರ ಕೊಟ್ಟು ತನ್ನ ಕುದುರೆಯನ್ನು ಬಿಟ್ಟನು. ಮುಂದೆ ಒಡನೆ ತನ್ನ ಆಟ ಬರಲು ಫರ್ಜಿಯ ಮೇಲ್ಮನೆಯೊಳಿರುವ ಅವರ ಮಂತ್ರಿಯನ್ನು ತನ್ನ ಹಯದಿಂದ ಹಾರಿಸಿ ರಾಜನನ್ನು ಶೆರೆ ಹಿಡಿದನು. ಹೀಗೆ ಆಟವಾಡಿ ಅವರನ್ನು ಸೋಲಿ ಸಿದನು.

## ಚದುರಂಗದಾಟದ ಲಕ್ಷಾರ್ಥ ತಿಳಿಸಿದ್ದು

ಯತಿಸಿದ್ಧನು, "ತಮ್ಮ ಹೃದಯದೊಳಗೆ ತಿಳಿದು ಆಡುವ ಆಟದ ರೀತಿ ಯಾವುದೆಂದರೆ, ದಿಟವಾಗಿ ತಾನು ಅಧ್ಯಾತ್ಮವೆಂಬ ಪಟವು. ಅದರಲ್ಲಿ ಪ್ರಕೃತಿಗಳೆಂಬ ಪ್ರಕಟಿಸಿರುವ ಮನೆಗಳು. ತತ್ವ ವಿಚಾರವೆಂಬ ಚದುರಂಗ ದಾಟದಲ್ಲಿ ನಟಿಪ ಜೀವನ ಮತಿಯೇ ರಾಜನು. ಕುಟಿಲ ಮೋಹವೇ ಮಂತ್ರಿಯು, ಸ್ಥೂಲ ಸೂಕ್ಷ್ಮ ಎರಡು ಮದಗಜಗಳು ಕುಮತಿಗ

ಳೆಂಬ ಎರಡು ಒಂಟೆಗಳು, ಪ್ರವೃತ್ತಿ ನಿವೃತ್ತಿಗಳೆಂಬ ಎರಡು ಹಯಗಳು, ದುರ್ಗುಣಾದಿ ಎಂಟು ವೃತ್ತಿಗಳೇ ಕಾಲಾಳು, ಹೀಗೆ ಆಟಕ್ಕೊಸುಗ ಒಂದು ಬದಿಗೆ ಕಲ್ಪಿಸಬೇಕು. ಇನ್ನೊಂದುಬದಿಗೆ ದೇವ ಮತಿಯೇ ರಾಜನು, ವರ ವಿವೇಕವೇ ಮಂತ್ರಿಯು. ಸೂಕ್ಷ್ಮಸ್ಥೂಲದಿಂದಿರುವ ನಿರ್ಗಪೇ, ಎರಡು ಕರಿಗಳು ಸಮತೆ ಎನಿಸುವ ಎರಡು ಉಷ್ಟ್ರಗಳು, ನಿತ್ಯ ನಿವೃತ್ತಿ ಎಂಬ ಸ್ಥೂಲ ಸೂಕ್ಷ್ಮರೂಪ ಎರಡು ಹಯಗಳು, ಸದ್ಗುಣಾದಿ ಎಂಟು ವೃತ್ತಿಗಳೇ ಪ್ಯಾದೆ-ಗಳು. ಈ ಪ್ರಕಾರ ಕಲ್ಪಿಸಿಕೊಂಡು ಗುರು ಶಿಷ್ಯರು ಹರುಷದಿಂದ ಎದುರು ಬದುರು ಕುಳಿತು, ಪ್ರಶ್ನೋತ್ತರವೆಂಬ ಕಾಯಿಗಳನ್ನು ನಡೆಸಬೇಕು.

ಆಗ ಗುರುಗಳು ದುರ್ಗುಣಗಳಿಂದ ನಡೆಯುತ್ತಿರುವ ಕಾಲಾಳುಗಳೆಂಬ ವೃತ್ತಿಗಳನ್ನು ಕಡಿಯುತ್ತ, ಅಡಿಗಡಿಗೆ ಜೀವನಿಗೆ............ .. ಭ್ರಾಂತಿಮಯ ನೆಂದು ತಿಳಿಸುವದೇ ಶಹಾ ! ಬಳಿಕ ಕರಿ ತುರಗಗಳನ್ನು ಕಡಿಯುತ್ತ, ಶಿಷ್ಯ-ನನ್ನು ನಿರುತ್ತರಗೊಳಿಸುತ್ತ, ತಡೆಯುವದೇ ಅದು ಮಾತು, ಎನಿಸಿಕೊಂಬುದು. ಇನ್ನು ಕರುಣದಿಂದ ಗುರುಗಳು ಎನಿತು ಬೋಧಿಸಿದರೂ, ಅದನ್ನು ಅರಿಯದೆ ಇರುವದು ಆಟ ಕೆಡಿಸಿಕೊಂಬಂತೆ, ಬುರುಜುವೆನಿಸಿಕೊಳ್ಳುವದು. ಜೀವನ ಎಲ್ಲ ಸಮೂಹವನ್ನು ನಾಶಗಡಿಯುತ್ತ, ಅವನ ಲೌಕಿಕ ಮತಿ ಬಿಡಿಸುತ್ತ, ಪರಮನೊಳು ಐಕ್ಯಗೊಳಿಸುವದೇ ಅರಸನನ್ನು ಸೆರೆ ಹಿಡಿದು ಆಟವನ್ನು ಗೆದ್ದಂತೆ ! ಆ ಬಳಿಕೆ ಪಟ-ಕಾಯ್ಗಳನ್ನು ಧೀರತನದಿಂದ ಗುರುವಿಗರ್ಪಿಸಿ, ಎಲ್ಲವನ್ನು ಮಿಗೆ-ಮೀರಿ ನಿಂತು, ಸುಖಿಪುದೆ ಆಟದ ಮುಕ್ತಾಯವು. ಅಲ್ಲಿ ವದಕ್ಕಾಗಿ ಆಡಲು ಕಡೆಗೆ ವ್ಯಾಜ್ಯವೇ ಅದರ ಫಲವು ನೋಡಿರಿ" ಎಂದು ಬೋಧಿಸಿದನು.

ಅವರೆಲ್ಲರೂ ಸಿದ್ಧರ ಸೂಕ್ಷ್ಮ ವಕ್ತೃತ್ವವನ್ನು ಅರಿತು, ಇವನು ಜ್ಞಾನಿ ಪುರುಷನಿರುವನೆಂದು ಮನಗಂಡು, ನಮಿಸಿದರು. ಬಳಿಕ ಎಲ್ಲರೂ ಊಟಕ್ಕೋಸ್ಕರ ಕೆಳಗಿಳಿದು ಬರುವ ಸಮಯದಲ್ಲಿ, ಅಳುವ ಒಂದು ಧ್ವನಿ ಕೇಳ ಬಂದಿತು. ಭಾರತಿಯು ಇದೇನೆಂದು ಕೇಳಿದನು. ಸಾವುಕಾರನು, "ಗುರೂಜಿ, ನನ್ನ ತಾಯಿಗೆ ಉದರ ಶೂಲೆಯು, ಮೂರು ಮಾಸ ಪರಿಯಂತರ

ವಿದ್ದು, ಅದು ಈಗ ಅಧಿಕವಾಗಿದೆ. ಅದನ್ನು ಸಹಿಸಲಾರದೆ ರೋಧಿಸುತ್ತಿ-ರುವಳು. ಅದಕ್ಕೆ ತಾವೇನಾದರು ಉಪಾಯಮಾಡುವಿರೇನು "? ಎಂದನು.

## ಸಾವುಕಾರನ ತಾಯಿಯ ರೋಗನಿವಾರಣೆ

ಸಿದ್ಧಯೋಗಿವರನು, "ನೀನು ಹೆದರಬೇಡ ನಡೆ ಆ ಮುದುಕಿಯ ಬಳಿಗೆ," ಎನ್ನುತ್ತ ಅಲ್ಲಿಗೆ ಹೋಗಿ ಅವಳನ್ನು ನೋಡಿ, ಇದು ಪೂರ್ವ ಕರ್ಮದ ಫಲವು. ಅದು ಈಗ ರೋಗರೂಪದಿಂದ ಪರಿ-ಪರಿ ಕಷ್ಟಕೊಡುವ ದಾಗಿದೆ. ಇದಲುಪಾಯಕ್ಕೆ ವೇನೆಂದರೆ, ಭಕ್ತಿಯಿಂದ ಶಂಕರನ ನಾಮಸ್ಮರಣೆ ಮಾಡುವದು. ಇಲ್ಲವೇ ಮಾನಸ ಪೂಜೆ ಅಥವಾ ಮಹಾತ್ಮರಾದವರ ಪರಮ ಪಾದತೀರ್ಥದಿಂದ ಪರಿಹಾರವಾಗುವದು" ಎನ್ನುತ್ತ ಪಾದೋದಕವನ್ನು ಪಂಚಾಕ್ಷರ ನುಡಿಯುತ್ತ ಕುಡಿಸಲು, ಮುದುಕಿಯು ಶಾಂತಳಾದಳು.

ಇದನ್ನು ಅವರೆಲ್ಲರೂ ಕಣ್ಣಾರೆ ಕಾಣುತ್ತ ಆನಂದ ಹೊಂದುತ್ತ ಸದಯ ಸಿದ್ಧರಿಗೆ ನಮಿಸಿದರು. ಬಳಿಕ ಅದೇ ತಯಾರಿಸಿರುವ ಬಿಸಿ ಮೃಷ್ಟಾನ್ನವನ್ನು ಉಣಬಡಿಸಿ ತೃಪ್ತಿಗೊಳಿಸಿದರು. ನಂತರ ಮೃದುವಾದ ಹಾಸಿಗೆ ಹಾಸಿರುವ ಮಂಚದ ಮೇಲೆ ಸಿದ್ಧರನ್ನು ಸುಖವಾಗಿ ಮಲಗಿಸಿ, ಧನಿಕನು ತಾನೂ ಮಲಗಿಕೊಳ್ಳಲು ಹೋದನು.

ಇತ್ತ ಭಾರತಿಯು ತನ್ನ ಮನದೊಳು, "ಭೂಮಿಯೇ ಮಂಚವು, ಹೊದಿಕೆಯೇ ಆಕಾಶವು, ಅಚಲಮತಿ ಎಂಬ ತಲೆದಿಂಬು, ಇವು ಸಹಜ-ವಾಗಿರಲು ಉಳಿದ ಎಲ್ಲ ಭೋಗಗಳು ಪ್ರಾರಬ್ಧವಶದಿಂದ ಬಂದವುಗಳು" ಎಂದುಕೊಂಡ ಮಲಗಿದನು. ಮರುದಿವಸ ಆ ಮನೆಯ ಯಜಮಾನನಿಂದ ಹೊರಡಲಪ್ಪಣೆಗೊಂಡು ಉಲ್ಹಾಸದಿಂದ ತುರಗವೇಗದಂತೆ ಭರದಿಂದ ಗಯಾ-ಕ್ಷೇತ್ರಕ್ಕೆ ಬಂದನು. ಬರುವಾಗ್ಗೆ ಮಧ್ಯಮಾರ್ಗದಲ್ಲಿ ಹರಿಪುರದೊಳು ಮೆರೆವ ಪರಮೇಶ್ವರನ ದೇಗುಲದಲ್ಲಿ ಸ್ವಸ್ಥದಿಂದ ವಿಶ್ರಾಂತಿ ಹೊಂದಿದನು.

ಮಂಗಲ— ಶ್ರೀ ಸುಮಂಗಲ ದೇವನೇ ಕೈ ।
ಲಾಸದಿಂ ಧರೆಯೊಳಿಹ ಧರ್ಮವು ।
ನಾಶವಾಗುತ ಯುಗಯುಗದೆ ನಡೆಯಲ್ಕೆ ಇದನರಿತು ॥

ಭಾಸುರಾನ್ವಿತ ನೆನಿಪ ಸಾಧು ।
ವೇಷದಿಂ ನೀನೈದಿ ಭುವಿಗಂ ।
ಲೇಸು ಗೊಡುತಿಹ ಮೂರ್ತಿಯೇ ನಿನಗಾನು ನತನಪ್ಪೆ ॥

ಇತಿ ಶ್ರೀ ಸಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ ಲೀಲಾ ಚರಿತ್ರ ಕಲ್ಪದ್ರುಮದೊಳು ಶಿವಪಾರ್ವತಿಯರು ಸಿದ್ಧನೆಂಜಲದೆಲೆಯು ತೆಗೆದ-ರೆಂಬಲ್ಲಿಗೆ ೨೧ ನೆಯ ಅಧ್ಯಾಯ ಸಮಾಪ್ತಿ.

॥ ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ॥



# ಸಂಚಾರ ಸಂಭ್ರಮ ಕಾಂಡ

## ಅಧ್ಯಾಯ ೨೨

ಈ ಅಧ್ಯಾಯದಲ್ಲಿ ಗಾಯಕನಿಗೆ ಗಂಧರ್ವವೇದ ಸರ್ವ ಮರ್ಮವನ್ನು ಪೇಳಿ ಗಯಾಕ್ಕೆ ಬಂದು ವಿಷ್ಣು ಪಾದವನ್ನು ಕಂಡದ್ದು. ಬಳಿಕ ಗಯಾದಿಂದ ವೈಜನಾಥ, ಅರುಣಾಚಲ, ಗಂಗೆಯ ಸಹಸ್ರ ಮುಖ, ಕಲಕತ್ತಾ ಮೊದಲಾದ ಪ್ರಸಿದ್ಧ ದೇವಸ್ಥಾನವನ್ನು ನೋಡುತ್ತ ವಡ್ಡಿಗೆ ಬಂದು ಜಗನ್ನಾಥನನ್ನು ಕಂಡು, ಅಲ್ಲಿಗೆ ದೇವರ ಪ್ರಸಾದವನ್ನುಂಡು ಕಬೀರದಾಸರ ಮಂದಿರಕ್ಕೆ ಬಂದು ಅಲ್ಲಿಯ ಸಂತರಿಗೆ ರಾಮನಾಮದ ಮಹಿಮೆಯನ್ನು ಹೇಳಿದ್ದು.

ಸ್ತೋತ್ರ— ಮಂಗಲಾತ್ಮಾ ರಾಮ ನಿಸ್ಸೀ ।
ಮಾಂಗ ಚಿನ್ಮಯ ದಕ್ಷಮುಖ ಮುಖ ।
ಭಂಗಪಿತ ಭುವನೇಶ ಶಾಶ್ವತ ಶೂಲಿ ತ್ರಿಪುರಾರಿ ||
ತುಂಗ ಶಶಿಧರ ಕಾಲಜಿತುವೇ ।
ದಾಂಗ ಪಶುಪತಿ ಪರಮ ಭಾವಜ ।
ಭಂಗ ಸುಖಮಯ ಸುತ್ರಿಲೋಚನ ದೇವನೇ ನಮಿಪೆ ||

ಪದ— ೧.-೨೩ **ಗಾಯಕನಿಗೆ ಗಂಧರ್ವವೇದದ ಮರ್ಮ ಹೇಳಿದ್ದು**

ಚರಿತ್ರನಾಯಕನು ಪರಮೇಶನ ದೇಗುಲದಲ್ಲಿ ವಿಶ್ರಮಿಸಿದಾಗ ಅರ್ಚಕರು ಶಶಿಧರನ ಪೂಜೆಯನ್ನು ಲಲಿತವಾಗಿ ಮಾಡಿದರು. ವಾದ್ಯಗಳು ಮೊಳಗಿದ ಬಳಿಕ ಓರ್ವ ಗಾಯಕನು ಗಾನಸೇವೆಯನ್ನು ಸಲ್ಲಿಸಲೋಸುಗ ಭೈರವಿರಾಗ ದಲ್ಲಿ ಹಾಡಲಾರಂಭಿಸಿದನು. ಯತೀಶ್ವರನು ಅದನ್ನು ಕೇಳಿ ಗಾಯಕನಿಗೆ ಹೇಳಿ ದನು. "ಈಗ ಮೃಡನ ಪೂಜೆಯ ಸಮಯವಿರುವದು. ಕಾರಣ ನೀನು ಶಂಕರಾಭರಣ ರಾಗವನ್ನೆತ್ತುವದು ವಿಹಿತ. ಅದೇತಕೆಂದರೆ, ಒಡಲೊಳಿ ರುವ ಕುಂಡಲಿ ಸರ್ಪವು ನಾಭಿಯ ಸುತ್ತುಗಟ್ಟಿ ಮೇಲ್ಮುಖವಾಗಿ ಸಾಗಿ ಬೆನ್ನುಹುರಿಯಿಂದ ಬ್ರಹ್ಮರಂಧ್ರಕ್ಕೆ ಸೇರಿರುವದು. ಇದು ಈ ಶರೀರದಲ್ಲಿ ಆತ್ಮರೂಪ ಶಂಕರಗೆ ಉರಗಾಭರಣವಾಗಿರುವದು. ಅದಕ್ಕಾಗಿ ಈಗ ನೀನು ಶಂಕರಾಭರಣದಲ್ಲಿ ನುತಿಸುವದು ಉಚಿತ" ಎಂದನು. ಅದರಂತೆ ಗಾಯ ಕನು ಶಂಕರಾಭರಣದಲ್ಲಿ ಹಾಡಿ ಮುಗಿಸಿದನು. ನಂತರ ಸಿದ್ಧನಿಗೆ ವಿನಯ ದಿಂದ ಎಲ್ಲ ರಾಗಗಳ ಉತ್ಪತ್ತಿ, ಅವುಗಳ ಸ್ಥಾನಾದಿಗಳನ್ನು ತಿಳಿಸಿಕೊಡ ಬೇಕೆಂದು ಬಿನ್ನೈಸಿಕೊಂಡನು.

ಆಗ ಸಿದ್ಧ ಯತಿವರ್ಯನು, ಮುದದಿಂದ ಗಾಯಕನಿಗೆ "ನಿನಗೆ ಗಂಧರ್ವವೇದದ ಸಾರವನ್ನು ಪೇಳುವೆನು. ಅದನ್ನು ಪ್ರೀತಿಯಿಂದ ಅರಿತು ಕೊಳ್ಳು. ಪರಶಿವನ ವಿಖ್ಯಾತವಾಗಿರುವ ಈಶ್ವರ, ಸದ್ಯೋಜಾತ, ವಾಮ ದೇವ, ಅಘೋರ, ತತ್ಪುರುಷ, ಈಶಾನ್ಯ ಮತ್ತು ನಿರಂಗ ಈ ಪ್ರಕಾರ ಸಪ್ತ ಮುಖಗಳು. ಅವುಗಳಿಂದ ಹೊರಡುವ ಸ್ವರಗಳು ಯಾವವೆಂದರೆ ಷಡ್ಜ,

ವೃಷಭ, ಗಾಂಧಾರ ಮಧ್ಯಮ, ಪಂಚಮ, ದೈವತ ಮತ್ತು ನಿಷಾದ ಅವುಗಳಿಗೆ ಕಂಠದಲ್ಲಿ ಸ್ಥಾನಗಳು ಷಡ್ಜವು, ಶಿರದಲ್ಲಿ ಋಷಭವು, ನಾಶಿಕದಲ್ಲಿ ಗಾಂಧಾರವು, ಹೃದಯದಲ್ಲಿ ಮಧ್ಯಮವು, ಮುಖದಲ್ಲಿ ಪಂಚಮವು ಮತ್ತು ತಾಲುವಿನಲ್ಲಿ ದೈವತವು, ಪೂರ್ವಾಂಗ (ನಾಟಕ ಮೊದಲಾದವುಗಳ ಪೀಠಿಕೆ ಆರಂಭ) ದಲ್ಲಿ ಉದಯವಾಗುವವು.

ಇವುಗಳ ರಂಜನ ಕಾಲವನ್ನು ವಿಚಾರಿಸೋಣ. ಮಧ್ಯಾಹ್ನವು ಷಡ್ಜಕ್ಕೆ, ಅಪರಾಹ್ನವು ಋಷಭಕ್ಕೆ, ಸಾಯಂಕಾಲವು ಗಾಂಧಾರಕ್ಕೆ, ಪ್ರಥಮ ರಾತ್ರಿಯು ಮಧ್ಯಮಕ್ಕೆ ಪಂಚಮಕ್ಕೆ ಅಪರಾತ್ರಿಯು, ದೈವತಕ್ಕೆ ನಿಶೆಯು, ನಿಷಾದಕ್ಕೆ ಉದಯಕಾಲ ಹೀಗೆ ಇರುವವು. ಇನ್ನು ಅವುಗಳ ಹೋಲಿಕೆಗೆ ಪ್ರಾಣಿಗಳ ಸ್ವರವನ್ನು ಕೇಳು. ನವಿಲಿನ ಕೇಕೆ, ಗೂಳಿಯ ಗಂಭೀರವ, ಕ್ರೌಂಚದ ಇಂಚರ, ಕೋಗಿಲೆಯ ಗಾನ, ಹೇಷಾರವ (ಕುದುರೆಯ ಹುಂಕಾರ) ಮತ್ತು ಬೃಂಹಣ (ಆನೆ ಒದರುವ ಶಬ್ದ) ಗಾರ್ಧಭ-ಧ್ವನಿ ಹೀಗೆ ಸಪ್ತಸ್ವರಗಳಿರುವವು. ಬಳಿಕ ಷಡ್ಜಾದಿಗಳಿಗೆ ಕ್ರಮದಿಂದ ಸಂಜ್ಞಾಕ್ಷರಗಳು.

**ಸ, ರಿ, ಗ, ಮ, ಪ, ದ, ನಿ,** ಎಂಬ ಏಳು ಅಕ್ಷರಗಳಿರುವವು. ಗಾಯಕರು ಇವುಗಳನ್ನು ಉಚ್ಚರಿಸುತ್ತ ಗಾಯನ ಮಾಡುವರು. ಪಂಚಮ ಮತ್ತು ಷಡ್ಜವೆಂಬವೆರಡು ನಿರುತ ನಿರ್ವಿಕಾರಗಳಾಗಿರುವವು. ಇದಕ್ಕೆ ಪ್ರಕೃತಿ ಸ್ವರಗಳೆನ್ನುವರು ಉಳಿದ ಐದು ಸ್ವರಗಳು ವಿಕಾರಗಳಾಗಿರಲು ಅವಕ್ಕೆ ಪ್ರಕೃತಿ ವಿಕೃತಿಗಳೆರಡೂ ಕೂಡಿಕೊಂಡಿರುವ ಮಿಶ್ರಸ್ವರಗಳೆನ್ನುವರು. ಸಂಗೀತವಿದ್ಯೆಯಯನ್ನು ಚನ್ನಾಗಿ ಕಲಿಯಬೇಕೆಂಬುವವನು ಪ್ರಕೃತಿ ಮತ್ತು ವಿಕೃತಿ ಸ್ವರಗಳ ಜ್ಞಾನವನ್ನು ಪೂರ್ಣ ತಿಳಿದುಕೊಂಡಿರಬೇಕು. ಪ್ರವೃತ್ತಿಪರ ಷಡ್ಜ ಮತ್ತು ಪಂಚಮ ಇವೆರಡು ಯಾವಾಗಲೂ ಕೆಡದೆ ಹಾಗೆಯೇ ಇರುವವು. ಮತ್ತು ಋಷಭದಲ್ಲಿ ಶುದ್ಧ ಋಷಭವು, ಚತುಶ್ರುತಿ ಋಷಭವು ಮತ್ತು ಷಟ್ಶೃತಿ ಋಷವೆಂದು ೩ ವಿಧಗಳಿರುವವು. ಗಾಂಧಾರವು ಪ್ರಸಿದ್ಧ, ಸಾಧಾರಣ ಮತ್ತು ಅಂತರಮುಖವೆಂದು ಮೂರು ಪ್ರಕಾರದಿಂದಿರುವದು. ಮಧ್ಯಮವು ಶುದ್ಧ-ಮಧ್ಯಮ, ಪ್ರತಿ ಮಧ್ಯಮ ಹೀಗೆ ಎರಡು ತೆರದಿಂದ ಇರುವವು. ದೈವತವು ಶುಧ್ಧ, ಚತುಶ್ರುತಿ ಮತ್ತು ಷಟ್ಶೃತಿ ಎಂದು ಮೂರು ಪ್ರಕಾರವಾಗಿರುವದು,

ಬಳಿಕ ನಿಷಾಧದಲ್ಲಿ ಶುದ್ಧ, ಕೈಶಿಕ, ಶಾಕಲಿ ಎಂದು ತ್ರಿವಿಧ ರೂಪಗಳಿರುವವೆಂದು ತಿಳಿದುಕೊಳ್ಳು.

ಇನ್ನು ವಿಕೃತಿ-ಪ್ರಕೃತಿಗಳ ಸಮ್ಮಿಶ್ರಣದಿಂದ ಹನ್ನೆರಡು ಸ್ವರಗಳಸ್ಥಾನಗಳಿರುವವು. ಅವುಗಳನ್ನು (ಹದಿನಾರರಿಂದ ಹೆಚ್ಚುತ್ತ) ಒಂದಕ್ಕಿಂತ ಒಂದನ್ನು ಇಳಿಸದೆ ಆಯಾ ಸ್ವರಗಳನ್ನು ಆಯಾ ಸ್ಥಾನಕ್ಕೆ ಏರಿಸುತ್ತಿರಲು ಅದುವೇ ಆರೋಹಣವೆನಿಸುವದು. ಬಳಿಕ ಅವುಗಳನ್ನೇ ಇಳಿಸುತ್ತ ಹೋಗಲು ಅವ-ರೋಹಣವಾಗುವದು. ಈ ರೀತಿ ನಡೆಯಲು ಅದರಿಂದ ಅನೇಕ ಮೂರ್ಛನೆಗಳು ಬೆಳೆಯುವವು. ಅವುಗಳಿಂದ ಭೈರವಾದಿ ರಾಗಗಳು ಉದಿಸುವವು. ಇಂತು ಸಂಗಿತದಲ್ಲಿ ಸರಸರಾಗ ಸ್ವರಾವಳಿಗಳಿಗೆ ಮೆರೆವ ಜಂಟಿ ಸುಗೀತೆ ಮತ್ತು ಸ್ವರ ಸುಸಾಲಂಕಾರ ಸಾಹಿತ್ಯಾದಿಗಳನ್ನು ಹೇಳುವೆನು ಕೇಳು.

## ಗಾಯನ ವಾದಗಳಿಗೆ ತಾಳಗಳೇ ಮೇರೆಗಳಾಗಿರುವವು

ಆ ತಾಳಗಳನ್ನು ತಿಳಿದು ಕೊಳ್ಳು. ಧೃವ, ಮಠ್ಯ, ರೂಪಕ, ಝಂಪಾ ತ್ರಿಪುಟ, ಅಟ, ಏಕಗಳೆಂಬ ಸಪ್ತ ತಾಳಗಳು ಇರುವವು ಅವಕ್ಕೆ ಆರು ಅಂಗಗಳಿರುವವು. ಅವುಗಳನ್ನು ಹೇಳುವೆನು ಕೇಳು. ಅನುಧೃತವು ಮತ್ತು ಧೃತ, ಲಘು, ಕಾಕ, ಪದ, ಗುರು, ಪ್ಲುತಗಳೆಂದು ಮತ್ತು ಚತುಃಶ್ರವೆಂತಲೂ, ತ್ರಿಶ್ರವೆಂತಲೂ, ಮಿಶ್ರವೆಂತಲೂ ಮತ್ತು ಖಂಡವೆಂತಲೂ, ಸಂಕೀರ್ಣವೆಂತಲೂ ಐದು ಪ್ರಕಾರದ ಜಾತಿಯ ತಾಳಗಳಿರುವವು. ಒಂದು ಪೆಟ್ಟು ಅದು ಮೂರು ಮಾತ್ರೆಗಳಿಂದ ಲಘುವಿರಲು ಚತುಃಶ್ರವು. ಒಂದು ಪೆಟ್ಟು ಎರಡು ಮಾತ್ರಾ ಲಘುವಿದ್ದರೆ ತ್ರಿಶ್ರವು ಒಂದು ಘಾತ ಆರು ಮಾತ್ರೆಗಳಿಂದ ಲಘುವಿದ್ದರೆ ಮಿಶ್ರ ಜಾತಿಯದು ಒಂದು ಘಾತವು ನಾಲ್ಕು ಮಾತ್ರಾ ಲಘುವಿದ್ದರೆ ಅದು ಖಂಡವು. ಒಂದು ಘಾತ ಎಂಟು ಮಾತ್ರೆಗಳಿಂದ ಲಘುವಿದ್ದರೆ ಅದಕ್ಕೆ ಸಂಕೀರ್ಣಜಾತಿ ಎಂದು ಹೇಳುವರು. ಮುಂದೆ ಅನುಧ್ರುತಕ್ಕೆ ಘಾತ ಒಂದೇ ಇರುವದು. ಇನ್ನು ಧ್ರುತಕ್ಕೆ ಒಂದು ಪೆಟ್ಟು ಹುಸಿ, ಮತ್ತೊಂದು ದಿಟ ಹೀಗೆ ಎರಡು ಇರುತ್ತವೆ. ಇದಕ್ಕೆ ಮೊದಲು ಒಂದು ಲಘುವಿದ್ದು ಬಳಿಕ ತಾನೊಂದು ಧೃತ (ಅವಸರ) ತಾಲರೀತಿ ಇದ್ದು ಬಳಿಕ ಲಘು ಎರಡಿದ್ದರೆ ಅದು ಧ್ರುವತಾಳವೆನಿಸುವದು. ಅದರ ತರುವಾಯ ಮೊದಲೊಂದು

ಲಘುವಿದ್ದು ಬಳಿಕ ಮತ್ತೊಂದು ಧೃತವಿದ್ದು ನಂತರ ಲಘು ಒಂದಿದ್ದರೆ ಅದು ಮಠ್ಯತಾಳವೆನಿಸುವದು. ಬಳಿಕ ಮೊದಲೊಂದು ಧೃತವಿದ್ದು ನಂತರ ಲಘು ವಿದ್ದರೆ ಅದು ರೂಪಕತಾಳವೆನಿಸುವದು. ತದನಂತರ ಮೊದಲೊಂದು ಲಘು ವಿದ್ದು ಬಳಿಕೊಂದು ಅನುಧೃತ ನಂತರ ಧೃತವಿದ್ದರೆ ಅದು ಝುಂಪೆ ತಾಳವೆನಿ ಸುವದು. ಇನ್ನು ಪ್ರಥಮದಲ್ಲಿ ಒಂದು ಲಘುವಿದ್ದು ಬಳಿಕ ಎರಡು ಧೃತ ವಿದ್ದರೆ ಅದಕ್ಕೆ ತ್ರಿಪುಟ ತಾಳವೆನ್ನುವರು. ಮತ್ತು ಮೊದಲು ಎರಡು ಲಘು ಎರಡು ಧೃತ ಹೀಗಿದ್ದರೆ ಅದು ನಟತಾಳವೆಂದು ಹೇಳಿಸಿಕೊಳ್ಳುವದು. ಲಘು ಒಂದೇ ಇದ್ದರೆ, ಅದು ಏಕತಾಳವೆನಿಸುವದು. ಈ ಏಳು ತಾಳಕ್ಕೂ ಮುಖ್ಯ ಅಂಗವೆನಿಸುವ ಲಘುವಿಗೆ ಆ ಪಂಚ ಜಾತಿಗಳ ಅಳತೆಗೂಡುತ್ತ ಒಟ್ಟು ಮೂವತ್ತೈದು ಪ್ರಕಾರದ ತಾಳಗಳಾಗಿರುತ್ತವೆ' ನೋಡೆಂದನು.

ಮತ್ತು ಹ್ರಸ್ವಾಕ್ಷರ ಒಂದನ್ನು ಉಚ್ಚರಿಸುವಕಾಲಕ್ಕೆ ಒಂದು ಮಾತ್ರೆ ಇರುವದು. ವಿಸರ್ಗ, ಅನುಸ್ವಾರ, ದೀರ್ಘ ಮತ್ತು ಸಂಯುಕ್ತ ಸ್ವರಗಳನ್ನು ಉಚ್ಚರಿಸುವ ಕಾಲಕ್ಕೆ ಎರಡು ಮಾತ್ರೆಗಳಿರುವವು. ಈ ಮಾತ್ರಾ ಕ್ರಮಗಳ ಸಮೂಹಕ್ಕೆ ತಾಳವೆನ್ನುವರು. ಚತುರಶ್ರ (ನಾಲ್ಕು ಮೂಲೆಯ) ಅಸ್ತಿತ್ವವನೂ ತ್ರಿಪುಟ ತಾಳವನ್ನೂ ತಿಳಿದು ನೋಡಲಾಗಿ ಅದು ಆದಿ ತಾಳವಾಗಿರುವದು. ಮಾತ್ರೆಗಳನ್ನು ಉಚ್ಚರಿಸಿದಂತೆ ಕಾಲಗಳು ನಡೆಯುತ್ತಿರುವವು. ಅವು ಆರು ತೆರನಾಗಿರುವವು. ಒಂದೊಂದೆ ಮಾತ್ರೆಗಳನ್ನು ಸಾವಕಾಶವಾಗಿ ನುಡಿ ಯಲು ಅದು ಪ್ರಥಮಕಾಲವೆನಿಸುವದು. ಒಂದು ಮಾತ್ರೆ ನುಡಿಯುವ ಕಾಲದಲ್ಲಿ ಎರಡು ಮಾತ್ರೆಗಳನ್ನು ನುಡಿಸಿದರೆ, ಅದು ದ್ವಿತೀಯಕಾಲವಾಗು ವದು. ಅಷ್ಟೇ ಕಾಲದಲ್ಲಿ ನಾಲ್ಕು ಮಾತ್ರೆ ನುಡಿಸಿದ್ದಾದರೆ ತೃತೀಯಕಾಲವಾಗು ವದು. ೮ ಮಾತ್ರೆಗಳನ್ನು ನುಡಿಸಿದರೆ ಅದಕ್ಕೆ ಚತುರ್ಥಕಾಲವೆನ್ನುವರು. ಹದಿ ನಾರು ನುಡಿದರೆ ಅದು ಪಂಚಮ ಕಾಲವಾಗಿ ಮಿಂಚುವದು. ಮತ್ತು ಮೂವತ್ತೆ ರಡು ಮಾತ್ರೆಗಳನ್ನು ನುಡಿಸಿದರೆ ಅದುವೇ ಆರನೆಯ ಕಾಲ. ಇವೆಲ್ಲ ಮಾತ್ರೆಗಳು ಎಲ್ಲಿ ಉದಿಸಿರವವೋ ಅವನ್ನು ಅಲ್ಲಿಗೆ ಒಯ್ಯುತ್ತ ಅಲ್ಲಿಯೇ ಲಯಿಸಿದರೆ ಈಶ ಕೃಪೆಯಿಂದ ಗಾಯಕನು ಜ್ಞಾನಪಡೆದು, ಅದರಿಂದ ಮುಕ್ತನಾಗುವನು. ಹರನನೊಲಿಸುವದಕ್ಕಾಗಿ, ಸ್ವರವ ದಂಡಿಸಬೇಕಲ್ಲದೆ, ನರರನೊಲಿಸಲು ದಂಡಿಸಬಾರದು. ಇದು ಸತ್ಯ, ನೋಡೆಂದನು.

ಗಾಯನ ವಿದ್ಯೆಯು ಬಹು ಕಠಿಣತರದ್ದು, ಅದುಕಾರಣ ಸಂಗೀತ ವಿದ್ಯೆಯನ್ನು ಗುರುಗಳ ಸಮ್ಮುಖದಲ್ಲಿ, ತಾನು ಅರಿತು ನಿತ್ಯ-ನಿತ್ಯಕ್ರಮದಿಂದ ಅಭ್ಯಾಸವನ್ನು ಮಾಡುತ್ತಿರಬೇಕು. ದೈವವಶದಿಂದ ಅವನು ಗಂಧರ್ವ ವಂಶಕ ನಿದ್ದರೆ ಅವನಿಗೆ ಈ ವಿದ್ಯೆಯು ಸುಲಭವಾಗಿ ಲಭಿಸುವದು ನೋಡೆಂದನು."

ಸಿದ್ಧ ಸದ್ಗುರುನಾಥನು, ಈ ಪ್ರಕಾರ ಸಾಮವೇದದ ಸಮಸ್ತ ರಹಸ ವನ್ನು, ಸಂತೋಷದಿಂದ ತಿಳಿಸಿ ಹೇಳಿದನು. ಗಾಯಕನೆ ಮೊದಲುಗೊಂಡು ಸಕಲರು ಕೇಳಿ ಸಂತೋಷಹೊಂದಿ, "ಪೊಡವಿಗ್ಹೆದಿಹ ಮೃಢನಿವನು," ಎನ್ನು ನಮಿಸಿದರು. ಬಳಿಕ ಸಿದ್ಧನು, ಗುಡಿಯಿಂದ ಹೊರಟು ಕಾಡು ತುಳಿಯುತ್ತ, ಗಯಾಕ್ಷೇತ್ರಕ್ಕೆ ಬಂದು ಅಲ್ಲಿ ವಿಷ್ಣುಪಾದವನ್ನು ಕಂಡನು. ಆ ಪಾದಕ್ಕೆ ಪಿಂಡಪ್ರದಾನ ಕರ್ಮಕಾಂಡದಲ್ಲಿ ಪೇಳಿದ ಪ್ರಕಾರ ಕರ್ಮಗೈಯ್ಯು ವವರನ್ನು ನೋಡಿ, "ಈ ಜನರು ಈ ಕರ್ಮಗಣೆನೆಸಗಿದರೆ, ಪಿತೃದೇವತೆಗಳು ತೃಪ್ತರಾಗುವರು. ಮತ್ತು ತೃಪ್ತರಾದ ಆ ದೇವತೆಗಳು ಅವರನ್ನು ವೇದಾಧಿ ಕಾರಿಗಳ ಒಡಲಲ್ಲಿ ಜನಿಸುವಂತೆ ಕೃಪೆದೋರುವರು. ನಂತರ ಅವರು ವೇದ ದ್ವಾರಾಮುಕ್ತಿ ಹೊಂದುವರು" ಎಂದುಕೊಂಡನು.

ಅಲ್ಲಿಂದ ಮುಂದೆ ವೈಜನಾಥಕ್ಷೇತ್ರಕ್ಕೆ ಬಂದನು. ಅಲ್ಲಿ ದೇವರಿಗೆ ಅಭಿಷೇಕವು ಸಂಭ್ರಮದಿಂದ ಜರುಗಿತ್ತು. ಅದನ್ನು ಕಂಡು "ನಮನಕ್ಕೆ ಸೂರ್ಯನು, ಗಂಧಕ್ಕೆ ವಾಯು ಎಂತು ಒಲಿವರೋ ಅಂತೆಯೇ ಪರಮೇಶನು ಅಭಿಷೇಕ ಪ್ರಿಯನು. ಅದಕ್ಕಾಗಿ ಇವರು ಮುದದಿಂದ ಅಭಿಷೇಕ ಮಾಡುವರು. ಮೊದಲು ಸ್ಥೂಲ ಲಿಂಗಕ್ಕೆ ಸ್ಥೂಲದ ಅಭಿಷೇಕ ಬೇಕು. ಪ್ರತಿಮೆಯಲ್ಲಿರುವ ಮೊದಲಿನ ಶಿಲಾಭಾವವು ನಶಿಸಿ ಹೋಗುತ್ತ, ದೇವಭಾವವು ಎಂತು ಉಂಟಾ ಗುವದೋ, ಅಂತೆಯೇ ಮಂದಮತಿಯಾದ ಜೀವರಲ್ಲಿಯ ದೇಷಭಾವವಳಿದು ಆತ್ಮಭಾವ ಲಭಿಸಲೆಂದು ಧರಣಿಯಲ್ಲಿ ಋಷಿಪುಂಗವರು, ಈ ಸತ್ಕೃತಿಗ ಳನ್ನು ಎಸಗಿರುವರು" ಎನ್ನುತ್ತ............ಮುಂದೆ ಸಾಗಿ, ಅರುಣಾಚಲಕ್ಕೆ ಬಂದನು. ಹಾಗೆಯೇ ಅಲ್ಲಿರುವ ಗಿರಿಶಿಖರವನ್ನೇರಿ ನಿರ್ವಿಕಲ್ಪ ಸಮಾಧಿಯಲ್ಲಿ ಕುಳಿತನು.

ಮುಂದೆ ಕೆಲಹೊತ್ತಿನ ಮೇಲೆ ಸವಿಕಲ್ಪ ಸ್ಥಿತಿಗೆ ಬರಲು, "ತಂದೆಯಾದ ಈ ಅರುಣಾಚಲೇಶಗೆ, ಮುದದಿಂದ ಮಾನಸ ಪೂಜೆ ಮಾಡಿದೊಡೆ, ಅದರಿಂದ ತೃಪ್ತನಾದ ಯಾವ ಪರಮನಿರುವನೋ, ಅವನೇ ನಾನಿರುವೆನು," ಎಂದು-ಕೊಂಡು ಅಲ್ಲಿಯೇ ಪವಡಿಸಿದನು. ನಂತರ ಬೆಳಗಿನೊಳು ಎದ್ದು ನಿಂತಾಗ, ತನ್ನ ಎರಡು ತೊಡೆಗಳ ಸಂದಿನೊಳು ಬಾಲಭಾಸ್ಕರನ ಹೊಂಬಣ್ಣದ ನೀಟಾದ ಕಿರಣಗಳು ಹೊಳೆಯಲು ಸಿದ್ಧನು, ಧರಣೀರಥಕ್ಕೆ ತಾನೇ ಚಕ್ರ ನೆನಿಪಂತೆ, ಮತ್ತು ಸಂದಿಯನ್ನೇರಿ ಲೋಕದ ಒಳ ಹೊರಗಿರುವ ತಮವೆಂಬ ಅಜ್ಞಾನ ಕತ್ತಲೆಯನ್ನು ಕಳೆಯಲಿಕ್ಕೆ ಭೂಮಿಗೆ ಒಡಮೂಡಿ ಬಂದ ಮೃಢ ನಂತೆ ತೋರಿದನು.

ಬಳಿಕ ಸಹಸ್ರ ಮುಖದಿಂದ ಹೊಳೆಯುತ್ತಿರುವ ಪರಮ ಪಾವನಾತ್ಮಕ ಗಂಗೆಯನ್ನು ಜಲಧಿಯ ಥಡದಲ್ಲಿ ಈಕ್ಷಿಸಿದನು. 'ಶಿವನು' ಭಗೀರಥನ ತಪಕ್ಕೆ ಮೆಚ್ಚಿ ಆತನ ವಂಶಿಕ ಸಗರನ ಅರವತ್ತು ಸಾಸಿರ ಸುತರು, ಕಪಿಲ ಮುನಿಯ ಶಾಪದಿಂದ ದುಃಖಿಸುತ್ತಿದ್ದರು ಅವರ ಶಾಂತಿಗಾಗಿ, ಮತ್ತು ಧರಣಿಯ ಹಿತಕ್ಕಾಗಿ, ತನ್ನ ನಿಜ ಸತಿ, ಗಂಗೆಯನ್ನು ಕಳುಹಿಸಲು ಒಡನೆ ಬಂದಿಹಳು" ಎಂದುಕೊಂಡು ಹಾಗೆ ಮುಂದೆ ಬಂದು, ಊರೊಳಗೆ ಬೇಡಿ ತಂದ ಭಿಕ್ಷಾನ್ನದಿಂದ ತೃಪ್ತನಾಗಿ ಕಲಕತ್ತೆಗೆ ಬಂದನು.

ಹೊಳೆಯ ದಡದಲ್ಲಿ ಹೊಳೆಯುವ ಕಾಳೀದೇವಿಯ ದರುಶನಗೊಂಡು ಹಾಗೆಯೇ ವಡ್ಡಿಗೆ ಬಂದನು. ಅಲ್ಲಿ ಗುಡಿಯೊಳು ವೈಜನಾಥನನ್ನೂ, ನೀಲ ಚಕ್ರವನ್ನೂ ನೋಡಿಕೊಂಡು ಬರುವಾಗ್ಗೆ ಅಲ್ಲಿಯೇ ಒಂದು ಸ್ಥಳದಲ್ಲಿ ತಂದರ ಮೇಲೊಂದರಂತೆ ಏಳು ಗಡಿಗೆಗಳನ್ನೇರಿಸಿ, ಪಾಕಮಾಡಿ ವಿಜ್ರಂಭಣೆ-ಯಿಂದ ಪೂಜೆಗೈಯುತ್ತ ಎಡೆಹಿಡಿದು, ಆ ಪ್ರಸಾದವನ್ನು, ಅರ್ಚಕರು ಅತಿಥಿ ಗಳಿಗೆ ಕೊಡುವಾಗ್ಗೆ, ಅಲ್ಲಿಯೇ ನಿಂತಿದ್ದ ಸಿದ್ಧನಿಗೂ ಸಲ್ಲಿಸಿದರು. ಸಿದ್ಧನು ಸುಪ್ರಸಾದವನ್ನು ಸ್ವೀಕರಿಸಿ, "ಅನ್ನಬ್ರಹ್ಮವೆಂದು ಹೇಳುವ ಶ್ರುತಿ ವಾಕ್ಯವು, ಈ ಸ್ಥಳಕ್ಕೆ ಸಲ್ಲುವದು" ಎಂದು ಊಹಿಸಿದನು ಆಗ ಅಲ್ಲಿಗೆ ಕೆಲವು ದ್ವಿಜರುಬಂದು ದೇವರ ದರುಶನಗೊಂಡು, ಪ್ರಸಾದದ ಎರಡು ಪಾತ್ರೆಗಳನ್ನು ಕ್ರಯಕ್ಕೆ ಕೊಂಡು, ಹರುಷದಿಂದ ಎಲ್ಲರೂ ಊಟಮಾಡುತ್ತಿರುವಾಗ, ಸಿದ್ಧನನ್ನು ಕಂಡು,

ಬಾ ಎಂದು ಕರೆದು ಅವನಿಗೂ ತುಸು ಅನ್ನವನ್ನು ನೀಡಿದರು. ಅವನೂ ಅದನ್ನು ಉಂಡು ತೃಪ್ತನಾಗಿ, ಗುಡಿ ಪೌಳಿಗೆ ಬಂದು ಕ್ಷಣಹೊತ್ತು ವಿಶ್ರಮಿಸಿದನು. ಅಲ್ಲಿಂದ ಮುಂದೆ ಘೋರ್ಗ್ಗರೆಯುತ್ತಿರುವ ಜಲಧಿಯ ದಡದಲ್ಲಿ ಸಂತಶಿರೋಮಣಿ ಕಬೀರದಾಸನ ಮಂದಿರಕ್ಕೆ ಬಂದನು. ಅಲ್ಲಿ ಸಂತ ಸಮೂಹವು ಸಲ್ಲಲಿತ-ವಾಗಿರುವ **ರಾಮನಾಮವನ್ನು** ಬಿಡದೆ ಎರಡಾವೃತದಿಂದ ಉಚ್ಚರಿಪುದನ್ನು ಕೇಳಿ "ಸಂತರೆ! ಇಲ್ಲಿ ಕೇಳಿರಿ, ವಾಲ್ಮೀಕಿಯಿಂದ ವಿರಚಿತಮಾದ ಸಲ್ಲಲಿತ ರಾಮನಾಮವನ್ನು ಮೂರು ಲೋಕದ ಜನರು ಮೂರುನೂರಾಮೂವತ್ತುಮ್ಮಾ-ರರಂತೆ ಸರಿಯಾಗಿ ಮುದದಿಂದ ವಿಭಾಗಿಸಿಕೊಂಡು ತಾವಿರಲು, ಮಿಕ್ಕುಳಿ-ದಿರುವ ಒಂದು ನಾಮವನ್ನು ತೋರಭಕ್ತಿಯಿಂದ ಒಂದು ಸಲ ರಾಮ ಅಂದ ದ್ದಾದರೆ ಅವರಿಗೆ ಬುಕ್ತಿ-ಮುಕ್ತಿಗಳಾಗುವವು. ನೀವು ಬಿಡದೆ ರಾಮ್ರಾಮ ಹೀಗೆ ಉಚ್ಚರಿಸಿದರೆ ಆ ನಾಮದ ಶಕ್ತಿಗೆ ಲಘುತನವು ಬರುವದು. ಅದು ಕಾರಣ ನೀವು ಒಂದು ಸಲ ಮಾತ್ರ ಉಚ್ಚರಿಸಬೇಕು" ಎಂದನು.

ಆಗ ಎಲ್ಲ ಸಂತರು ಹರುಷದಿಂದೊಪ್ಪುತ್ತ ನಮಿಸಲು ಸಿದ್ಧನು ಅಲ್ಲಿಂದ ಹೊರಟು ಕಟಕದಲ್ಲಿ ಮಹಾನದಿಯ ತೀರಕ್ಕೆ ಬಂದನು ಎಂಬಲ್ಲಿಗೆ

ಮಂಗಲ— ಪಾಹಿ ಪಶುಪತೆ ನಿನ್ನ ಪಾಶದಿ ।
ಪಾಹಿ ಯಃವಿಕಾರಿಯೆ ವಿಕಾರದಿ ।
ಪಾಹಿ ಮೃತ್ಯುಂಜಯನೆ ಮೃತ್ಯುವಿನಿಂದ ಮನ್ಮಥನಿಂ ॥
ಪಾಯಿ ಭವನೇ ದೀನು ಭವದಿಂ ।
ಪಾಹಿ ಭುವನೇಶಾ ತ್ರಿಭುವನದಿ ।
ಪಾಹಿ ನೇರೆ ಸರ್ವೇಶನೆ ನೀಂ ದುಃಖದಿಂ ಜಗವಂ ॥

ಇತಿ ಶ್ರೀ ಸಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ ಲೀಲಾ
ಚರಿತ್ರ ಕಲ್ಪದ್ರುಮದೊಳು ಗಾನೋತ್ಪತ್ತಿಯಂ ಮೇಣ್
ರಾಮನಾಮ ಮಹಿಮೆ ಬೋಧೆ ಎಂಬ
೨೨ ನೇ ಅಧ್ಯಾಯ ಸಮಾಪ್ತಿ.

————

॥ ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ॥



# ಸಂಚಾರ ಸಂಭ್ರಮ ಕಾಂಡ

## ಅಧ್ಯಾಯ ೨೩

ಈ ಅಧ್ಯಾಯದಲ್ಲಿ ಕಟಕ ಪ್ರಾಂತದಲ್ಲಿ ಮಹಾನದಿಯನ್ನು ದಾಟಿದ್ದು. ಮತ್ತು ಓಢ್ರದೇಶದಲ್ಲಿ ಸಿದ್ಧನನ್ನು ಕಳ್ಳನೆಂಬ ಭಾವದಿಂದ ಹೊಡೆಯುವ ಯತ್ನ ಮಾಡಿದಾಗ್ಗೆ ಆ ಜನರನ್ನು ಈಶ–ನಂದೀಶರು, ಹಯಾರೂಢರಾಗಿ ಬಂದೋಡಿಸಿ, ಸಿದ್ಧನಿಗೆ ಅಭಯಗೊಟ್ಟದ್ದು. ಮಂಗಗಳಿಂದ ಕೂಡಿದ ಅತಿ ಭಯಂಕರ ಕಾಡಾರಣ್ಯದಲ್ಲಿ ಭಯವಿಲ್ಲದೆ ಪಾರಾಗಿ ಹೋದದ್ದು. ಸಿಂಹಾಚಲದ ಗೋಮುಖ ತೀರ್ಥದಲ್ಲಿ ಒಬ್ಬ ಮಾರವಾಡಿಯ ಮಹಾರೋಗ ನಿವಾರಣೆ ಮಾಡಿ ಅವನಿಗೆ ಸುಲಭದಿಂದ ಪಂಚೀಕರಣ, ಪಂಚಕೋಶಗಳ ವಿವೇಕದ್ವಾರ ಜ್ಞಾನೋಪದೇಶ ಮಾಡಿ ಧನ್ಯನಾಗಿ ಮಾಡಿದ ವಿಷಯಗಳಿರುವವು.

ಸ್ತೋತ್ರ— ಸರ್ವ ಮುಖಗಳ್ ನಿನ್ನ ಮುಖವೈ ।
ಸರ್ವ ಸುಜ್ಞಾನೇಂದ್ರಿಯಂಗಳ್ ।
ಸರ್ವ ಭುಜಗಳ್ ಸರ್ವ ಹೃತ್ಕಟನಿನ್ನವಿರುತಿಹವು ॥
ಸರ್ವ ತೊಡೆಗಳ್ ನಿನ್ನ ತೊಡೆಗಳ್ ।

ಸರ್ವಪದ ತಪವದಗಳ್ಳೆ ನೀಂ |
ಸರ್ವರಂತರ್ಯಾಮಿಯುಷ ನಿನಗಾನು ನತನಪ್ಪೆ |

## ಪದ—೧-೭ ಕಟಕ ಪ್ರಾಂತದಲ್ಲಿ ಮಹಾನದಿಯನ್ನುದಾಟಿದ್ದು

ಹಿಂದೆ ಹೇಳಿದಂತೆ ಭಾರತಿಯು ಮಹಾನದಿಯ ದಡದಲ್ಲಿರುವ ಭದ್ರಾಕ್ಷ ವೆಂಬ ಪುರಕ್ಕೆ ಬಂದನು. ಅಲ್ಲಿ ಭದ್ರಾಕ್ಷಲಿಂಗವನ್ನು ಕಂಡು, ಹೊಳೆಯ ದಡಕ್ಕೆ ಬಂದನು. ನಾವೆ ಬಾರದ್ದರಿಂದ ಎರಡು ದಿನಗಳವರೆಗೆ ಅನ್ನವಿಲ್ಲದೆ ಉಪವಾಸದಿಂದ, ನದಿಯ ದಡಲ್ಲಿಯೇ ಇದ್ದನು. ಸಿದ್ಧನು ಪ್ರಾರಬ್ಧವನ್ನೀಕ್ಷಿ ಸುತ್ತ, ಹಸಿವೆ ಶೀತಗಳಿಂದೊದಗಿದ ಎಲ್ಲ ದುಃಖವನ್ನು ತನ್ನ ತಪೋ ಶಕ್ತಿ ಯಿಂದ ತಾಳುತ್ತ, ಏನೊಂದು ವ್ಯಸನವಿಲ್ಲದೆ ತನ್ನ ಸ್ವರೂಪದಲ್ಲಿ ಮಗ್ನ ನಾಗಿದ್ದನು. ಮೂರನೇ ದಿನ ನಾವೆ ದಡಕ್ಕೆ ಬಂದಿತು. ಕೂಡಲೇ ಸಿದ್ಧನು ಅದನ್ನು ಹತ್ತಹೋಗಲು, ಅಂಬಿಗನು ರೊಕ್ಕ ಕೇಳಿದನು. "ನಾನು ಮೊದಲೆ ರೊಕ್ಕನೀಗಿರಲು, ನಿನಗೀಗ ಎಲ್ಲಿಂದ ರೊಕ್ಕ ಕೊಡಲಿ ?" ಅನ್ನಲು ಅಂಬಿಗನು, "ನಿನ್ನಲ್ಲಿ ಮತ್ತೇನಾದರೂ ಇದ್ದರೆ ಕೊಡು" ಎಂದನು ಕೂಡಲೇ ಸಿದ್ಧನು, "ಇದೊಂದು ಜೀರ್ಣವಾಗಿರುವ ಲಂಗೋಟಿ ಇರುವದು. ಬೇಕಾದರೆ ತಕ್ಕೊಳ್ಳಿ" ಎಂದು ಅದನ್ನು ಭರಕ್ಕನೆ ಕಳೆದು ಅವನ ಮೇಲೆ ಬೀಸಾಕಿದನು.

ಅಂಬಿಗನು ಅದನ್ನು ನೋಡಿ ಲಜ್ಜಿತನಾಗಿ, ನಗುತ್ತ ಸಿದ್ಧನನ್ನು ನಾವೆ ಯಲ್ಲಿ ಕುಳ್ಳಿರಿಸಿಕೊಂಡು ಆಚೆಯ ದಡಕ್ಕೆ ಮುಟ್ಟಿಸಿದನು. ನಾವೆಯಿಂದ ಇಳಿಯುವ ಎಲ್ಲ ಜನರಿಂದ ರೊಕ್ಕ ವಸೂಲಿ ಮಾಡಲು ದಿನಾಲು ಬರುವ ರೊಕ್ಕ ಕ್ಕಿಂತಲೂ ಅಂದು ಅಧಿಕ ಹಣ ದೊರೆಯಿತು. ನಾವಿಕನು ಹರುಷಿತನಾಗಿ "ಈ ಬ್ರಹ್ಮಚಾರಿಯ ಮಹಿಮೆಯಿಂದ ಇಂದು ನನಗೆ ಇಷ್ಟು ಲಾಭ ದೊರೆ ಯಿತು ! ಇದರಿಂದ ಇವನಿಗೆ ವಸ್ತ್ರ ತಂದು ಕೊಡಬೇಕು" ಎಂಬ ಬುದ್ಧಿ ಉಂಟಾಯಿತು. ಕೂಡಲೆ ಒಂದು ಧೋತರದ ತಾಗೆ ತರಿಸಿ ಸಂತೋಷದಿಂದ ಸಿದ್ಧಮುನಿಗೆ ಹೊದಿಸಿದನು. ಆಗ ಸಿದ್ಧನು ಆದರಲ್ಲಿ ತನಗೆ ಬೇಕಾದ ಆರು ಮೊಳ ಮಾತ್ರ ಇರಿಸಿಕೊಂಡು ಉಳಿದೆಲ್ಲವನ್ನು ಅನಾಥರಿಗೆ ಸಲ್ಲಿಸಿಬಿಟ್ಟನು. ಆವರೆಲ್ಲರು ಬಹು ಮುದದಿಂದ "ಇವನಿಗೆ ಮೊದಲೇ ತನ್ನ ನಿಜ ದೇಹದ

ಮಮತೆ ಇಲ್ಲದಿರುವಾಗ ಈ ವಸ್ತ್ರದ ಆಶೆ ಎಲ್ಲಿಂದ ಬರಬೇಕು ? ಇವನು ತಿತಿಕ್ಷೆಯನ್ನು ಪೂರ್ಣ ಸಾಧಿಸಿರುವನು" ಎನ್ನುತ್ತ ನಮಿಸಿದರು.

## ಪದ—೮–೯೭ ಓಢ್ರದೇಶದಲ್ಲಿ ಕಾಡಹಳ್ಳಿ ಜನರ ಕೈಯಿಂದ ಪಾರಾದದ್ದು

ಅಲ್ಲಿಂದ ಬಳಲುತ್ತ ಭಾರತಿಯು ಓಢ್ರದೇಶಕ್ಕೆ ಬಂದನು. ಅಲ್ಲಿರುವ ಜನಗಳು ಅತಿಶಯ ಬಡತನದಿಂದ ಕಡುನಿಷ್ಕರುಣಿಗಳಾಗಿದ್ದರು. ಅವರು ಯಾರಾದರು ಬಂದು ತಮ್ಮ ದ್ರವ್ಯ ಅಪಹರಣ ಮಾಡ್ಯಾರು ! ಎಂಬ ಭಯ ದಿಂದ ತಮ್ಮ ಗ್ರಾಮದ ಸಮೀಪದಲ್ಲಿ ಯಾರನ್ನೂ ಬರಗೊಡುತ್ತಿರಲಿಲ್ಲ. ತಾವು ತಮ್ಮಲ್ಲಿಯ ಲೋಭಗುಣಗಳನ್ನು ಪರರ ಮೇಲೆ ಆರೋಪಗೈಯ್ಯುತ್ತಿದ್ದರು. ಸಿದ್ಧನಿಗೆ "ಇವನು ಕಳ್ಳನಿರುವನೆಂದು ತಿಳಿದು ಇವನನ್ನು ಹಗ್ಗದಿಂದ ಬಂಧಿಸಿ ಕೊಳ್ಳಿಯಿಂದ ಬರೆಕೊಟ್ಟು ಊರಿಂದ ತಳ್ಳಬೇಕು" ಎಂದು ಕೆಲವರು ಕೊಳ್ಳಿ ಹಗ್ಗಗಳನ್ನು ತರಲು ಹೋದರು. ಇತ್ತ ಸಿದ್ಧನು ತನಗೆ ಬಂದೊದಗಿದ ವಿಪತ್ತನ್ನು ಕಂಡು ಶಿವಧ್ಯಾನದಲ್ಲಿ ನಿಮಗ್ನನಾದನು. ಹ್ಯಾಗಂದರೆ ಒಂದು ಹರಿಣಿಯು ಅರಣ್ಯದಲ್ಲಿ ಹೆರಿಗೆಯ ವೇದನೆಯಲ್ಲಿದ್ದಾಗ ಅಂದು ಬೇಟೆ ಗಾರರು, ಸಜ್ಜುಗೊಂಡು ಅಲ್ಲಿಗೆ ಬಂದರು. ಒಂದು ದಿಕ್ಕನ್ನು ಅಗ್ನಿಯಿಂದ ಬಂಧನ ಮಾಡಿದರು. ಮತ್ತೊಂದು ದಿಕ್ಕಿನಲ್ಲಿ ಬಲೆಯನ್ನೊಡ್ಡಿದರು. ಮಗು ದೊಂದು ದಿಕ್ಕಿಗೆ ನಾಯಿಗಳ ಬಂಧನ ಮಾಡಿ, ನಾಲ್ಕನೇ ದಿಕ್ಕಿನಲ್ಲಿ ತಾವು ಗುರಿಯಿಕ್ಕಿ ಬಾಣಗಳನ್ನು ಎಸೆಯ ಹತ್ತಿದರು. ಹೀಗೆ ಎಲ್ಲ ದಿಕ್ಕುಗಳಲ್ಲಿ ಕೋಲಾಹಲ ಎಬ್ಬಿಸಿದರು. ಆಗ ಆ ಹರಿಣಿಯು ತನಗೆ ಬಂದೊದಗಿದ ಆಪತ್ತಿನಲ್ಲಿ ತನಗೇನೊಂದು ಯತ್ನತೋಚದೆ ನಿಟ್ಟುಸುರು ಬಿಡುತ್ತ ಕಂಥುಗೊರಳಿನ ಧ್ಯಾನದಲ್ಲಿ ಮಗ್ನನಾಗಿ ನಿಂತು ಬಿಟ್ಟಿತು. ಆಗ ಶಿವನು ತನ್ನ ಮಾಯಾ ಬಲದಿಂದ ತಕ್ಷಣವೇ ಬಿರುಗಾಳಿಯನ್ನೆಬ್ಬಿಸಿದನು. ಕೂಡಲೆ ಮೋಡಗಳೆದ್ದು ಮಿಂಚಿನಿಂದ ಗುಡುಗುತ್ತ ಬಿರುಗಾಳಿಯೊಂದಿಗೆ ಭರ ದಿಂದ ಮಳೆಯು ಸುರಿಯ ಹತ್ತಿತು. ಗಾಳಿಯಿಂದ ಬಲೆಗಳು ಹರಿದವು. ಹುಡಿಯು ಹಾರಿ ಬೇಡರ ಕಣ್ಣು ತುಂಬಿತು. ಹರಿಣಿಗಿಟ್ಟ ಗುರಿಯು ತಪ್ಪಿ, ಬಾಣಗಳು ಬೇಟೆಯ ನಾಯಿಗಳಿಗೆ ಬಡಿದು

ಸತ್ತು ಬಿದ್ದವು. ಮಳೆಯಿಂದ ಅಗ್ನಿಯು ನೊಂದಿತು. ಹಾಗೆಯೇ ಹಳ್ಳ-ಕೊಳ್ಳಗಳು ತುಂಬಿ ಭರದಿ ಬರಹತ್ತಿದವು. ಆಗ ಬೇಡರೆಲ್ಲರೂ, ಗಡಬಡಿಸಿ ಹೊರಟುಹೋದರು. ಬಳಿಕ ಮೃಗವು, ಶಾಂತಿತಳೆಯಿತು. ಇದರಂತೆ ಕೂಡಲೇ ಜವಾನರೀರ್ವರು, ಬೆಟ್ಟದಂಥ ಅಶ್ವಗಳನ್ನೇರಿ ಓಡಿಸುತ್ತ ಸಿದ್ಧ-ನಿರುವಲ್ಲಿಗೆ ಬಂದು ಘೋರಸೆ "ಕೌನ ಹೈರೇ ? ಬೆಯಿಮಾನ ಪಕಡೋ ಯಹಿ ಸಬಕೋ ಪತಾಲೆತೆ ಹೈ ಕೌನ ಕೌನ ಹೈ" ಎಂದು ಆರ್ಭಟಿಸುತ್ತ ಬಂದರು. ಆಗ ಅವರೆಲ್ಲರು ಜವಾನರ ಆರ್ಭಟಕ್ಕೆ ಭಯಗೊಂಡ, ಪ್ರಾಣ-ದಾಶೆಯಿಂದ ಮನ ಬಂದತ್ತ ಕಾಲಿಗೆ ಬುದ್ಧಿ ಹೇಳಿದರು. ಬಳಿಕ ಹಯವನ್ನೇ-ರಿದ ಜವಾನರೀರ್ವರು ಮುದದಿಂದ ಸಿದ್ಧಯತಿಯ ಸಮೀಪಕ್ಕೆ ಬಂದು ಸುನೋಜೀ ! ಕಲೀಕೆ ಪಾಂಚ ಹಜಾರ ಕಾ ಸಮಯ. ಉಸಮೆ ಏಕಪಾದ ಬೀತಗಯಾ ಹೈ ಇಸಮೆ ಹೋಸಿಯಾರಸೆ ಚಲೇತೋ ಭಗವಾನ ಆಪ ಸಬಕೀ-ಕಸೂರ ಮಾಫ ಕರೆಂಗೆ ಬಹುತ ಠೀಕ ತರಹಸೆ ಚಲೋ" ಎಂದು ಹೇಳಿ ನಮಿಸಿ ಹೋದರು. ಹೀಗೆ ಸಿದ್ಧನಿಗೆ ಅಭಯಂ ಕೊಡಲು ನಂದೀಶ್ವರರೇ ವೇಷಧಾರಿಗಳಾಗಿ ಬಂದಿದ್ದರು.

ಬಳಿಕ ಸಿದ್ಧನು ಅಲ್ಲಿ ಎಲ್ಲಿಯಾದರೂ ಸಮೀಪದ ಹಳ್ಳಿಗೆ ಹೋದರೂ ಇದೇ ಹಾಡು, ಆಗುವದೆಂದು ತಿಳಿದು ಅಡವಿಯಲ್ಲಿಯೇ, ಇದ್ದುಕೊಂಡು ಕೆಂದಮೂಲಗಳನ್ನು ತಿನ್ನುತ್ತ ನಾಲ್ಕು ದಿವಸಗಳವರೆಗೆ ಹಸಿವೆ ಶೀತೋಷ್ಣಾ-ದಿಗಳನ್ನೂ ಸಹಿಸುತ್ತ ಮನದೊಳು, ಇಲ್ಲಿ ಬದ್ರಿನಾಥನ ಸುತ್ತು ಮುತ್ತಲಿನ ಪ್ರದೇಶಗಳಲ್ಲಿಯ ಹಿಮದಂತೆ ಶೀತ ತುಂಬಿರುವದು" ಎಂದು ನಿರ್ವಿಕಲ್ಪ ಸಮಾಧಿಯಲ್ಲಿ ಆನಂದ ಹೊಂದಿದನು. ಬಳಿಕ ಕೆಲಕಾಲದ ಮೇಲೆ ಎಚ್ಚತ್ತು ಪುನಃ ಮಾರ್ಗಸ್ಥನಾಗಿ ಹೋಗುತ್ತಿರಲು, ಮಧ್ಯಮಾರ್ಗದಲ್ಲಿ ಒಬ್ಬ ಬೈರಾಗಿ ಕೂಡಿದನು.

## ಪದ—೧೮-೨೩ ಕಾಡಾರಣ್ಯದಲ್ಲಿ ನಿರ್ಭಯದಿಂದ ಮಂಗಗಳ ಕೈಯಿಂದ ಪಾರಾದದ್ದು

ಈರ್ವರು ಕೂಡಿ ಪಯಣ ಬೆಳೆಸಿದರು. ಪುರಗಳು ಬಂದಲ್ಲಿ ಯಾಚಿಸುತ್ತ ನೀರು ಕಂಡಲ್ಲಿ ಭುಂಜಿಸುತ್ತ ನಡೆದರು. ಆಗ ಬೈರಾಗಿಯು, ಸಿದ್ಧನಿಗೆ ಹೇಳಿ-

ದನು, "ಮುಂದೆ ಛತ್ತೀಸಗಡ ಇರುವದು. ಅಲ್ಲಿಗೆ ಹೋದರೆ ನಮಗೆ ಮಂಗಗಳ ಉಪದ್ರವವಾಗುವದು. ಆದ್ದರಿಂದ ನಾವು ಬೇರೊಂದು ಮಾರ್ಗವಿಡಿದು ಹೋಗುವದು ಒಳಿತು," ಎಂದದು.

ಆದಕ್ಕೆ ಸಿದ್ಧಯತಿಯು ಬೈರಾಗಿಯನ್ನು ಕುರಿತು, "ನಷ್ಟವಾಗುವ ಈ ತನುವನ್ನು ನೀನೆಷ್ಟು ದಿನ ರಕ್ಷಿಸುವಿ ? ದೇಹವು ನಷ್ಟವಾದರೂ, ದೇಹಿಗೆ ಸಾವಿಲ್ಲ. ಅದು ಕಾರಣ ನಷ್ಟವಾಗುವ ತನುವಿಗೆ ಮನಗೊಡದೆ ನಿಷ್ಠೆಯಿಂದ ನಿತ್ಯಾತ್ಮನಲ್ಲಿ ಮನಸ್ಸನ್ನು ಸ್ಥಿರಗೊಳಿಸಿದ್ದಾದರೆ ದುಃಖ ಪರಿಹರವು. ಹೃದಯ ವೆಂಬ ದರ್ಪಣದ ಮುಂದೆ ತೋರಿ ಕೆಡುತ್ತಿರುವ ದೇಹ ನಾನೆಂಬ ಪ್ರತೀತಿಯಾ ದರೆ ಭಯವು ಹಿಂಗದು. ನಿತ್ಯಾತ್ಮನು, ಅದೇ ಹೃದಯ ಸಮ್ಮುಖದಲ್ಲಿದ್ದರೆ ತಾನು ಅಭಯನಾಗುವನು ಆತ್ಮಜ್ಞಾನ ನಿಷ್ಠರ ಹೃದಯದಲ್ಲಿ ಸಚ್ಚಿದಾನಂದ, ನಿರ್ಗುಣ, ನಿರುಪಮ ಆತ್ಮನು ನಿರುತವಾಸವಾಗಿರಲು, ತನಗೆ ಯಾರಿಂದಲೂ ಭಯವಿಲ್ಲ.

ಜನನ ಮರಣ ರಹಿತನಾದವಗೆ ಕಾಲನ (ಯಮನ) ಭಯವೇ ಇಲ್ಲೆಂದು ಮೇಲೆ ಇಂಥ ಕ್ಷುದ್ರ ಕಪಿಗಳ ಭಯವು ಅವನಿಗೆಂತಯ್ಯಾ ?" ಎಂದು ಬೈರಾಗಿಗೆ ಹೇಳಿ, ಅವನನ್ನು ತೊರೆದು ನಾನೊಬ್ಬನೇ ಅದೇ ಮಾರ್ಗದಿಂದ ನಡೆದನು. ಹೀಗೆ ಮಾರ್ಗ ಹಿಡಿದು ನಡೆಯುತ್ತಿರಲು ಬೈರಾಗಿಯು ಹೇಳಿ-ದಂತೆ ಮುಂದೆ ನೂರಾರು ಮಂಗಗಳು ಸಿದ್ಧನನ್ನು ಕಂಡು ಸುತ್ತಲಿನಿಂದಲೂ ಜಿಗಿಯುತ್ತ, ಓಡುತ್ತ ಬಂದು ಅವನನ್ನು ಮುತ್ತಿದವು. ಅವನಲ್ಲಿ ತಿನ್ನುವ ಜೀನಸು ಏನೂ ಇರಲಿಲ್ಲ. ಅವನು ನಗ್ನದಿಂದಿರುವದನ್ನು ನೋಡಿ, ನಿರಾಶೆ ಗೊಂಡು ಅಲ್ಲಿಂದ ಹೊರಟು ಹೋದವು.

### ಪದ—೨೪-೨೫ ಒಬ್ಬ ಮೊರವಾಡಿಯ ಮಹಾ ರೋಗ ಕಳೆದು ಪಂಚೀಕರಣ ಬೋಧಿಸಿದ್ದು

ಭಾರತಿಯು ಅಲ್ಲಿಂದ ಹೊರಟು ಸಿಂಹಾಚಲಕ್ಕೆ ಬಂದನು. ಅಲ್ಲಿಯ ದೇವಸ್ಥಾನದಲ್ಲಿರುವ ನರಸಿಂಹ ಮೂರ್ತಿಗೆ ಚಂದದಿಂದ ಶ್ರೀಗಂಧ ಲೇಪನ ಮಾಡುವದನ್ನು ಕಂಡನು. ಮತ್ತು ತನ್ನ ಮನದೊಳಗೆ "ದೇವರು ಸದ್ವಾಸನೆ

ಯುಳ್ಳ ಭಾವಕ್ಕೆ ಒಲಿಯುವನಲ್ಲದೆ, ನಾನು ಹುಟ್ಟಿ—ಸಾಯುವೆನೆಂಬ ದುರ್ವಾಸನಾ ಭಾವಕ್ಕೆ ಅವನು ಅಗೋಚರನು, ಎಂಬ ಭಾವವನ್ನು ಇದು ಸೂಚಿಸುವದು" ಎನ್ನುತ್ತ ಹೊರಗೆ ಬಂದು ಗೋಮುಖ ತೀರ್ಥದಲ್ಲಿ ಕುಳಿತನು. ಅಷ್ಟರಲ್ಲಿ ಪರ್ವತ ಕೆಳಗಿರುವ ಪುರದಿಂದ ಬಹು ಜನರ ಸಂದಣಿ "ಬೇಡ ಬೇಡ" ಎಂದು ಕೂಗುತ್ತ ಓಡೋಡುತ್ತ ಬರುವ ಜನರನ್ನು ಕಂಡು ಸಿದ್ಧನು ಏನಿದು ಗದ್ದಲ" ಎಂದು ಕೇಳಿದನು.

ಬಳಿಕ ಅವರೊಳಗೋರ್ವನು "ಹೇ ಸ್ವಾಮಿ ಈ ಮಾರವಾಡಿಗೆ ಹನ್ನೆ-ರಡು ವರುಷಗಳಿಂದಲೂ ಮಹಾ ರೋಗವು ಕೊರೆಯುತ್ತಿರುವದು. ಅದು ಈಗ ಅತಿ ಹೆಚ್ಚಾಗಿ ಅದರ ವ್ಯಥೆಯನ್ನು ತಾಳಲಾರದೆ, ಈ ಪರ್ವತವನ್ನೇರಿ ಅದರ ಮೇಲಿಂದ ಉರುಳಿ ಪ್ರಾಣ ಬಿಡಬೇಕೆಂದು ಅದನ್ನೇರುತ್ತಿರುವನು. ಯಾರು ಎಷ್ಟು ಹೇಳಿದರೂ ಕೇಳಲೊಲ್ಲನು" ಎಂದು ಹೇಳಿದನು. ಕೂಡಲೆ ಯೋಗಿವರನು ಅವನನ್ನು ತನ್ನ ಸಮ್ಮುಖದಲ್ಲಿ ಕರೆಯಿಸಿಕೊಂಡು "ಏನಯ್ಯಾ, ಕಾಮಧೇನುವಿನಂತೆ ಗೋಮುಖ ತೀರ್ಥವು ಈ ಸ್ಥಳದಲ್ಲಿದ್ದೂ, ನಿನ್ನ ಬೇನೆಯು ನಶಿಸಲಿಲ್ಲವೇ ? ಬಾ ಇಲ್ಲಿ" ಎಂದು ತೀರ್ಥದ ಬಳಿಯಲ್ಲಿ ಕೂಡ್ರಿಸಿ, ಸದ್ಗುರು ಸಿದ್ಧನು ಅವನ ಮುಖದಿಂದ "ಓಂ ನಮೋ ನರಸಿಂಹಾಯ" ಎಂಬ ಮಂತ್ರವನ್ನು ನುಡಿಸಿದನು. ಮತ್ತು ತಾನು ಆ ತೀರ್ಥವನ್ನು ತನ್ನ ಬೊಗಸೆಯಲ್ಲಿ ತುಂಬಿ ತಂದು ಕೃಪಾಕಟಾಕ್ಷದಿಂದೀಕ್ಷಿಸಿ ಅವನ ಮಸ್ತಕದ ಮೇಲೆ ಪ್ರೋಕ್ಷಣೆ ಮಾಡಿದನು. ತಕ್ಷಣವೇ ಅವನ ವ್ಯಾಧಿಯು ಸಂಪೂರ್ಣ ನಾಶಿಯಾಗಿ ಮೊದಲಿನಂತೆ ಸುಖಿಯಾದನು.

ಬಳಿಕ ಮಾರವಾಡಿಯು, ತನ್ನ ಮನದಲ್ಲಿ "ನನ್ನ ಪೂರ್ವಸುಕೃತದಿಂದ ಈ ರೋಗ ಪರಿಹರಿಸುವದಕ್ಕಾಗಿ ಶ್ರೀ ನರಸಿಂಹನೇ, ಇಂದು ದೇವ ವೈದ್ಯ-ನಾಗಿ ಬಂದಿರುವನು. ಇದರಲ್ಲಿ ಏನು ಸಂದೇಹವಿಲ್ಲ," ಎನ್ನುತ್ತ, "ಜೈ ಗುರುದೇವ ! ಇಂದು ನಾನು ತಮ್ಮಿಂದ ಧನ್ಯನಾದೆನು" ! ಎಂದು ಹರು-ಷೋದ್ಗಾರದಿಂದ ಕುಣಿದಾಡುತ್ತ ಸ್ವಾಮಿಗಳವರ ಚರಣಕ್ಕೆ ಎರಗಿದನು. ನಂತರ ಪುರದ ಜನರನ್ನು ಕೂಡಿಸಿ, ಪರಮ ಉತ್ಸವದಿಂದ ಸಿದ್ಧಯೋಗಿ ವರನನ್ನು ಮೆರೆಯಿಸಿ ಎಂದು ಹೇಳಿದನು. ಕೂಡಲೆ ಎಲ್ಲ ಜನರು ಒಟ್ಟು-

ಗೂಡಿ ವಾದ್ಯಗಳೊಂದಿಗೆ ಬಹು ವಿಜೃಂಭಣೆಯಿಂದ ನಾಲ್ಕೂ ಬೀದಿಗಳಲ್ಲಿ ಪಲ್ಲಕ್ಕಿ ಉತ್ಸವದೊಂದಿಗೆ ಮೆರೆಸುತ್ತ ಪುನಃ ಮಾರವಾಡಿಯ ಮನೆಗೆ ತಂದು ಇಳಿಸಿದರು.

ಬಳಿಕ ಮಾರವಾಡಿಯು, ಸಿದ್ಧರನ್ನು ಒಳಗೆ ಕರೆದೊಯ್ದು ಪೂಜಿಸಿ, ಮೃಷ್ಟಾನ್ನದೆಡೆಯನ್ನು ಮುಂದಿಟ್ಟು, ತೃಪ್ತಿಗೊಳಿಸಿದನು. ನಂತರ ಅನು-ರಾಗದಿಂದ ತನ್ನ ದೇಹ, ಗೃಹ ಮತ್ತು ಸತಿ, ಪುತ್ರ, ಧನ-ಧಾನ್ಯ ಕನಕ ಮೊದಲಾದ ತನ್ನ ಎಲ್ಲ ಸರ್ವವನ್ನು, ಸಿದ್ಧಸದ್ಗುರು ವರನ ಚರಣಕ್ಕೆ ಧಾರೆ ಎರೆದನು. ನಂತರ "ಸದ್ಗುರುವೇ, ನಾನು ಮತ್ತೆ ಈ ವಿಷಯಾದಿಗಳಿಗೆ ಸೇರಿಕೊಂಡಿದ್ದಾದರೆ ತಮ್ಮನ್ನು ಮರೆಯುವೆನು," ಎಂದು ಹೇಳಿದನು

ಆಗ ಸದ್ಗುರುವರನು, "ಇವೆಲ್ಲವು ನನ್ನವಾಗಿಯೇ ನಿನ್ನಲ್ಲಿರಲಿ ! ಈಗ ಈ ದ್ರವ್ಯದಲ್ಲಿ ಅರ್ಧಭಾಗವನ್ನು, ನಿನ್ನ ಮಕ್ಕಳಿಗೋಸ್ಕರ ತೆಗೆದಿಡು. ಉಳಿದ ಅರ್ಧ ಹಣವನ್ನು ಬಡವರಿಗೆ ದಾನ ಮಾಡು," ಎಂದು ಹೇಳಿದ ದನು. ಮಾರವಾಡಿಯು ಗುರುವಿನ ಆಜ್ಞಾನುಸಾರ ಸಂತೋಷದಿಂದ ತನ್ನ ಸಿರಿಯನ್ನು ಸಕಲ ದರಿದ್ರರಿಗೆ ದಾನಮಾಡಿದನು. ಮರುದಿನ ಮಾರ-ವಾಡಿಯು, ಪರಮ ದಯಾಳುವೇ, ನನ್ನ ಮೇಲೆ ಕೃಪೆದೋರಿ, ನನಗೆ ಈ ಶರೀರದ ಸ್ಥಿತಿ ಗತಿಗಳ ಇರವನ್ನೂ, ಹುಟ್ಟು ಸಾವುಗಳ ರೀತಿಯನ್ನೂ ಮತ್ತು ನನ್ನ ಸ್ವರೂಪವನ್ನೂ ಮುದದಿಂದ ಅರುಹಿ ನನ್ನನ್ನು ಪೊರೆಯಬೇಕು." ಎಂದು ಬಿನ್ನೈಸಿಕೊಂಡನು.

## ಮಾರವಾಡಿಗೆ ಪಂಚೀಕರಣ ಬೋಧಿಸಿದ್ದು

ಆಗ ಸಿದ್ಧಸದ್ಗುರುಗಳು, "ಈಗ ನಿನಗೆ ನಿನ್ನನ್ನು ತಿಳಿದುಕೊಳ್ಳಬೇಕೆಂಬ ಬುದ್ಧಿ ಉದಯವಾಗಿರಲು, ನೀನೇ ಧನ್ಯನು ! ಪೇಳುವೆನು ಕೇಳು. "ಏನೊಂದು ಊಹಿಸಲಿಕ್ಕೆ ಬಾರದ ಸಚ್ಚಿದಾನಂದ, ಅದ್ವಯ, ನಿತ್ಯ, ನಿರ್ವಿ-ಕಾರ, ಸ್ವಯಂ ಪ್ರಕಾಶ ಪರವಸ್ತುವೇ ನೀನು. ಆ ನಿನ್ನ ಸ್ವರೂಪಕ್ಕೆ ಕಾರ್ಯ ಕಾರಣಗಳಿಂದ ತೋರುವ ಈ ನಾಮರೂಪ ಜಗತ್ತಿನ ಕಲ್ಪನೆಗಳೇನೂ ಇರದೆ ತಾನೇ ತಾನಾಗಿರುವದು. ಆ ಪರಬ್ರಹ್ಮ ವಸ್ತುವಿಗೆ ಅಕಸ್ಮಾತ್ತಾಗಿ ಒಂದಾ-

ನೊಂದು ಕಾಲದಲ್ಲಿ "ನಾನು ಆನಂದ ಘನಸ್ವರೂಪನೆಂಬ ತನ್ನ ಸ್ವಜ್ಞಪ್ತಿಯು ತನಗುಂಟಾಯಿತು, **ಅದುವೇ ಚಿಚ್ಛಕ್ತಿಯು** ಇದಕ್ಕೆ ಅನುಭವ ದೃಷ್ಟಾಂತವೇನಂದರೆ ಜಾಗ್ರ ಮತ್ತು ಸ್ವಪ್ನಗಳಲ್ಲಿ ತೋರುವ ವಸ್ತುಗಳೇನೂ ಇರದೆ ನಿದ್ರೆಗೆ ಸಾಕ್ಷಿಯಾಗಿ ಬೆಳಗುವ ಸ್ವಯಂ ಪ್ರಕಾಶ ವಸ್ತುವಿನ ಸನ್ನಿಧಾನದಲ್ಲಿ ನಿದ್ರೆಯಿಂದ ಎಚ್ಚತ್ತೊಡನೆ ಏನೂ ಅರಿಯದೆ ಸುಖದಿಂದ ಮಲಗಿದ್ದೆನೆಂಬ ಸ್ವಜ್ಞಪ್ತಿಯು (ಅಹಂ ಭಾವ) ಮುಂದುಗೊಂಡು ತೋರುವದು. ಆ ಅಹಂಕಾರವೇ ಜಾಗ್ರ, ಸ್ವಪ್ನಗಳ ವ್ಯವಹಾರಕ್ಕೆ ಮೂಲ ಕಾರಣವಾಗಿದೆ. ಅದರಂತೆ ನಿಜಸ್ವರೂಪನಾದ ನಿನ್ನಲ್ಲಿ ಸ್ವಜ್ಞಾಪ್ತಿ ಮುಂದುಗೊಂಡು ತೋರಿದ್ದೇ ಚಿಚ್ಛಕ್ತಿಯು. ಇದುವೇ ಮುಂದೆ ಹೇಳುವ ಮಹದಾದಿ ಸಕಲ ತತ್ವಗಳಿಗೆ ಕಾರಣವಾಯಿತು. ಅದು ಶುದ್ಧಾ ಶುದ್ಧ ರೂಪದಿಂದ ಕೂಡಿ ಮಾಯೆ ಎಂದು ಹೇಳಿಸಿಕೊಂಡಿತು. ಅದರಲ್ಲಿರುವ ಸತ್ವ, ರಾಜಸ, ತಾಮಸ ಈ ಮೂರು ಗುಣಗಳು ಸಮಾನ ಸ್ಥಿತಿಯಲ್ಲಿ ಇದ್ದುಕೊಂಡು ಜಗದುದಯಕ್ಕೆ ಕಾರಣವಾಗಲು, ಅದಕ್ಕೆ ಪ್ರಕೃತಿಯೆಂಬ ಹೆಸರು ಬಂದಿತು. ಮುಂದೆ ಆ ಮೂರು ಗುಣಗಳು ಹಮ್ಮಿನಿಂದ ಪ್ರಕಟವಾಗಲು ಆ ಹಮ್ಮು ಮೂರು ಗುಣಗಳಲ್ಲಿ ಸೇರಿ ವೈಕಾರಿಕ ಅಹಂಕಾರ, ತೈಜಸ ಅಹಂಕಾರ, ಭೂತಾದಿ ಅಹಂಕಾರಗಳು ತೋರಿದವು.

ಸತ್ವಗುಣ ವೈಕಾರಿಕ ಅಹಂಕಾರದಲ್ಲಿ ಪಂಚ ಜ್ಞಾನೇಂದ್ರಿಯಗಳು, ರಜೋ ಗುಣ–ತೈಜಸ ಅಹಂಕಾರದಲ್ಲಿ ಪಂಚ ಕರ್ಮೇಂದ್ರಿಯಗಳು, ಪಂಚ ಪ್ರಾಣಗಳು ಮತ್ತು ಸತ್ವ, ರಾಜಸ ಇವೆರಡರ ಮಿಶ್ರದಲ್ಲಿ ಜ್ಞಾತ್ರ, ಮನ, ಬುದ್ಧಿ, ಚಿತ್ತ ಮತ್ತು ಅಹಂಕಾರಾದಿ ಪಂಚ ಅಂತಃಕರಣಗಳು ಹುಟ್ಟಿದವು. ತಮೋಗುಣಾತ್ಮಕ ಭೂತಾದಿ ಅಹಂಕಾರದಿಂದ ಪಂಚಭೂತಗಳು ಜನಿಸಿದವು.

ಇನ್ನು ಪಂಚ ಭೂತಗಳ ಪಂಚೀಕರಣದಿಂದ ಸ್ಥೂಲ ತನುವಿನ ರಚನೆಯಾದದ್ದನ್ನು ಹೇಳುತ್ತೇನೆ ಕೇಳು. ಮೊದಲು ಬ್ರಹ್ಮನು ಸೃಷ್ಟಿ ನಿರ್ಮಾಣ ಮಾಡುವಾಗ್ಗೆ ಒಂದು ಚಮಚೆಯನ್ನು ತಕ್ಕೊಂಡನು. ಅದರಿಂದ ಕ್ರಮವಾಗಿ ಪಂಚ ಭೂತಗಳನ್ನು ಹಂಚುವ ಕಾಲಕ್ಕೆ ಆಕಾಶದಲ್ಲಿಯ ಐದು ಚಮಚೆ ಅಳೆದುಕೊಂಡನು. ಅವುಗಳನ್ನು ಒಂದಾಗಿ ಮಾಡಲು ಅದು

ಜ್ಞಾತೃವಾಯಿತು. ಬಳಿಕ ಆಕಾಶದ ಐದು ಚಮುಚೆಗಳಲ್ಲಿಯ ಒಂದು ಚಮುಚೆಯನ್ನು ವಾಯುವಿನ ನಾಲ್ಕು ಚಮುಚೆಗಳಲ್ಲಿ ಬೆರಸಲು ಅದು ಮನಸ್ಸಾಯಿತು. ಅದೇ ಆಕಾಶದ ಒಂದು ಚಮುಚೆ ಭಾಗವನ್ನು ಅಗ್ನಿಯ ನಾಲ್ಕರಲ್ಲಿ ಸೇರಲು ಅದು ಬುದ್ಧಿಯಾಯಿತು. ಅದೇ ಆಕಾಶದ ಒಂದು ಚಮುಚೆಯನ್ನು ಜಲದ ನಾಲ್ಕು ಚಮುಚೆಯಲ್ಲಿ ಕೂಡಿಸಲು ಅದು ಚಿತ್ತವಾಯಿತು. ಅದೇ ಆಕಾಶದ ಒಂದು ಚಮುಚೆ ಭಾಗವನ್ನು ಪೃಥ್ವಿ ನಾಲ್ಕು ಚಮುಚೆಗಳಲ್ಲಿ ಬೆರಸಲು ಅದು ಅಹಂಕಾರವಾಯಿತು. ಹೀಗೆ ಜ್ಞಾತೃ, ಮನಸ್ಸು ಬುದ್ಧಿ, ಚಿತ್ತ ಮತ್ತು ಅಹಂಕಾರಗಳು ಉದಿಸಿದವು. ಇವುಗಳಿಗೆ ಆಕಾಶ ಪಂಚೀಕರಣವೆನ್ನುವರು.

ವಾಯುವಿನಲ್ಲಿಯ ಐದು ಚಮುಚೆ ತಕ್ಕೊಂಡು ಒಂದು ಮಾಡಲು ಅದು ವ್ಯಾನವಾಯಿತು. ಅದೇ ಪವನದ ಐದರಲ್ಲಿ ಒಂದು ಭಾಗ ತಕ್ಕೊಂಡು ಗಗನದ ನಾಲ್ಕು ಚಮುಚೆಗಳಲ್ಲಿ ಕೊಡಿಸಲು ಅದು ಸಮಾನವಾಯಿತು. ಅದೇ ವಾಯುವಿನ ಒಂದು ಚಮುಚೆಯನ್ನು ಶಿಖಿಯ ನಾಲ್ಕು ಚಮುಚೆಗಳಲ್ಲಿ ಕೂಡಿಸಲು ಅದು ಉದಾನವಾಯಿತು. ಅದೇ ಅನಿಲದ ಒಂದು ಚಮುಚೆ ಭಾಗವು ವಾರಿಯ ನಾಲ್ಕು ಚಮುಚೆಗಳಲ್ಲಿ ಕೂಡಿಸಲಾಗಿ ಅದು ಅಪಾನವಾಯಿತು. ಅದೇ ಮಾರುತನ ಒಂದು ಚಮುಚೆ ಧರಣಿಯ ನಾಲ್ಕು ಚಮುಚೆಗಳಲ್ಲಿ ಬೆರಸಲು ಅದು ಪ್ರಾಣವಾಯಿತು. ಹೀಗೆ ಸಮಾನ, ವ್ಯಾನ ಉದಾನ ಅಪಾನ ಮತ್ತು ಪ್ರಾಣ ಇವುಗಳಿಗೆ ಸಾಂಖ್ಯರು ವಾಯು ಪಂಚೀಕರಣ ವೆನ್ನುವರು.

ಇದೇ ರೀತಿ ಅಗ್ನಿಯಲ್ಲಿಯ ಐದು ಚಮುಚೆಗಳನ್ನು ಅಳೆದು ಒಂದು ಮಾಡಲು ಅದು ನೇತ್ರವಾಯಿತು. ಅದರ ಐದರಲ್ಲಿಯ ಒಂದು ಚಮುಚೆಯನ್ನು ನಭದ ನಾಲ್ಕರಲ್ಲಿ ಬೆರಸಲು ಅದು ಶ್ರೋತ್ರೇಂದ್ರಿಯವು. ಅದೇ ಅನಲನ ಒಂದು ಚಮುಚೆಯನ್ನು ಅನಿಲನ ನಾಲ್ಕು ಚಮುಚೆಗಳಲ್ಲಿ ಕೂಡಿಸಲು ಅದು ತ್ವಚೇಂದ್ರಿಯವು. ಅದೇ ಪಾವಕನ ಒಂದು ಚಮುಚೆ ಜಲದ ನಾಲ್ಕು ಚಮುಚೆಗಳಲ್ಲಿ ಒಂದು ಮಾಡಲು ಅದು ರುಚಿಸುವ ಜಿಹ್ವೇಂದ್ರಿಯು. ಅದೇ ಅಗ್ನಿಯ ಒಂದು ಚಮುಚೆಯನ್ನು ಪೃಥ್ವಿಯ ನಾಲ್ಕು ಚಮುಚೆಗಳಲ್ಲಿ

ಬೆರಸಲು ಘ್ರಾಣೇಂದ್ರಿಯವು. ಈ ಪ್ರಕಾರ ಶ್ರೋತ್ರ, ತ್ವಚ, ನೇತ್ರ, ಜಿಹ್ವೆ ಮತ್ತು ಘ್ರಾಣಗಳೆಂಬ ಐದು ಜ್ಞಾನೇಂದ್ರಿಯಗಳಿಗೆ ಪಂಡಿತರು ಅಗ್ನೀ ಪಂಚೀಕರಣವೆನ್ನುವರು.

ನಂತರ ಜಲದ ಐದು ಚಮುಚೆ ಅಳೆದು ಒಂದು ಗೂಡಿಸಲು ಅದು ರಸವಾಗಿ ಜೀವ್ಹೇಂದ್ರಿಯಕ್ಕೆ ವಿಷಯವಾಯಿತು. ಅದೇ ವಾರಿಯೊಳಗಿನ ಒಂದು ಚಮುಚೆ ತೆಗೆದು ಗಗನದ ನಾಲ್ಕರಲ್ಲಿ ಕೂಡಿಸಲು ಅದು ಶಬ್ದವಾಗಿ ಶ್ರೋತ್ರೇಂದ್ರಿಯಕ್ಕೆ ವಿಷಯವಾಯಿತು ಮತ್ತು ಅದರ ಒಂದು ಚಮುಚೆಯನ್ನು ಪವನದ ನಾಲ್ಕು ಚಮುಚೆಗಳಲ್ಲಿ ಬೆರಸಲು ಅದು ಸ್ಪರ್ಶವಾಗಿ ತ್ವಚೇಂದ್ರಿಯಕ್ಕೆ ವಿಷಯವಾಯಿತು. ಅದರದೇ ಒಂದು ಚಮುಚೆಯ ಭಾಗವು ಶಿಖಿಯ ನಾಲ್ಕು ಚಮುಚೆಗಳಲ್ಲಿ ಬೆರಸಲು ಅದು ರೂಪವಾಗಿ ನೇತ್ರಕ್ಕೆ ವಿಷಯವಾಯಿತು. ಅದೇ ಜಲದ ಒಂದು ಚಮುಚೆಯನ್ನು ಪೃಥ್ವಿ ನಾಲ್ಕು ಚಮುಚೆಗಳಲ್ಲಿ ಕೂಡಿಸಲು ಗಂಧವಾಗಿ ಘ್ರಾಣೇಂದ್ರಿಯಕ್ಕೆ ವಿಷಯವಾಯಿತು ಈ ಪ್ರಕಾರ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಪಂಚ ವಿಷಯಗಳಿಗೆ ಪಂಡಿತರು ಜಲಪಂಚೀಕರಣವೆನ್ನುವರು.

ಇಂತು ಬ್ರಹ್ಮನು ಮುದದಿಂದ ಜೀವರುಗಳ ಭೋಗಕ್ಕಾಗಿ ಇವುಗಳನ್ನು ರಚಿಸಿರುವನು. ಇದೇ ಪ್ರಕಾರ ವಾಕ್, ಪಾಣಿ, ಪಾದ, ಗುಹ್ಯ, ಗುದಗಳೆಂಬ ಕರ್ಮೇಂದ್ರಿಯಗಳು ಹುಟ್ಟಿದವು.

## ದೇಹ ಪಂಚೀಕರಣ

ವೀರ್ಯ ಮತ್ತು ರಕ್ತಗಳಲ್ಲಿ ಇರುವ ಪೃಥ್ವಿ ಅಂಶವು ಮೈಥುನ ಕಾಲದಲ್ಲಿ ಮಿಲನವಾಗಲು ಅಸ್ತಿಯಾಯಿತು- ಆ ಎರಡರಲ್ಲಿಯ ಪೃಥ್ವಿ, ಅಗ್ನಿಯ ಅಂಶಗಳು ಒಂದಾಗಲು, ನರಗಳು, ಧರೆ ಮತ್ತು ವಾಯು ಕೂಡಲು, ಚರ್ಮವು, ಧರೆ ಮತ್ತು ಗಗನ ಬೆರೆಯಲು, ರೋಮ, ಹೀಗೆ ಅಸ್ತಿ, ಮಾಂಸ, ನರ, ಚರ್ಮ ಮತ್ತು ರೋಮ ಇವು ದೇಹದಲ್ಲಿಯ ಪೃಥ್ವಿ ಪಂಚೀಕರಣವೆಂದು ಹೇಳಿಸಿಕೊಳ್ಳುವವು.

ಜಲ ಮತ್ತು ಪೃಥ್ವಿ ಅಂಶಗಳೇ ರಕ್ತವು. ಜಲ-ಜಲಗಳಂಶವೇ, ಶುಕ್ಲವು ಜಲ ಮತ್ತು ಅಗ್ನಿ ಇವುಗಳ ಅಂಶವೇ, ಮೂತ್ರವು. ಜಲ ವಾಯು

ವಿನ ಅಂಶವೇ, ಬೆವರು, ಜಲದ ಗಗನದ ಅಂಶವೇ, ಜೊಲ್ಲು ಇವು ದೇಹದಲ್ಲಿ ಜಲದ ಪಂಚೀಕರಣದಿಂದ ಪುಟ್ಟಿದವು.

ಶಿಖಿ ಮತ್ತು ಪೃಥ್ವಿಯ ಅಂಶವೇ ಆಲಸ್ಯವು ಶಿಖಿ. ವಾರಿಯ ಅಂಶವೇ, ಕಾಂತಿಯು ಶಿಖಿಗಳೆರಡರ ಅಂಶವೇ, ಕ್ಷುದೆಯು ಶಿಖಿವಾಯುಗಳ ಅಂಶವೇ ತೃಷೆಯು ಶಿಖಿ ಗಗನಗಳಂಶವೇ, ನಿದ್ರೆಯು. ಇವುಗಳಿಗೆ ಅಗ್ನಿ ಪಂಚಿಕರಣವೆನ್ನುವರು,

ಪವನ ಮತ್ತು ಧರೆಗಳು ಕೂಡಲು ಆಕುಂಚನ. ಪವನ ಜಲಗ-ಳಂಶವೇ ಚಲನವು. ಪವನ-ಶಿಖಿಗಳು ಕೂಡಲು, ವಲನ, ಪವನಗಳೆರಡೂ ಕೂಡಲು, ಧಾವನ. ಪವನ-ನಭಗಳು ಕೊಡಲು, ವಿಸ್ತರಣ. ಹೀಗೆ ಆಕುಂಚನ, ಚಲನ, ವಲನ, ಧಾವನ, ವಿಸ್ತರಣ. ಇವಕ್ಕೆ ವಾಯುಪಂಚೀ ಕರಣವೆನ್ನುವರು.

ನಭವು ಪೃಥ್ವಿಯಲ್ಲಿ ಬೆರೆಯಲು ಭಯವು. ನಭವು ವಾರಿಯಲ್ಲಿ ಸೇರಲು ಮೋಹವು. ನಭ-ತೇಜಗಳ ಅಂಶವೇ ಕ್ರೋಧವು. ನಭ-ವಾಯುಗಳ ಅಂಶವೇ ಕಾಮ (ಬಯಕೆ) ಗಳು. ಗಗನದ ಮುಖ್ಯ ಭಾಗವೇ ಶೋಕವೆನಿಸುವದು. ಬುಧರು ಇವಕ್ಕೆ ಆಕಾಶ ಪಂಚೀಕರಣವೆನ್ನುವರು.

## ಪಂಚೀಕರಣದ ೨೫ ತತ್ವಗಳು

| | ಆಕಾಶ | ವಾಯು | ಅಗ್ನಿ | ಜಲ | ಪೃಥ್ವಿ |
|---|---|---|---|---|---|
| ಆಕಾಶ ತತ್ವ | ಜ್ಞಾತೃ | ಮನ | ಬುದ್ಧಿ | ಚಿತ್ | ಅಹಂಕಾರ |
| ವಾಯು ತತ್ವ | ಸಮಾನ | ವ್ಯಾನ | ಉದಾನ | ಅಪಾನ | ಪ್ರಾಣ |
| ಅಗ್ನಿ ತತ್ವ | ಶ್ರೋತ್ರ | ತ್ವಚ | ನೇತ್ರ | ಜಿಹ್ವೆ | ಘ್ರಾಣ |
| ಜಲ ತತ್ವ | ಶಬ್ದ | ಸ್ಪರ್ಶ | ರೂಪ | ರಸ | ಗಂಧ |
| ಪೃಥ್ವಿ ತತ್ವ | ವಾಕ್ | ಪಾಣಿ | ಪಾದ | ವಾಯು | ಉಪಸ್ಥ |

## ದೇಹ ಪಂಚೀಕರಣ

| | | | | | |
|---|---|---|---|---|---|
| ಆಕಾಶ ತತ್ವ | ಶೋಕ | ಕಾಮ | ಕ್ರೋಧ | ಮೋಹ | ಭಯ |
| ವಾಯು ತತ್ವ | ಪ್ರಸರಣ | ಧಾವನ | ವಲನ | ಚಲನ | ಆಕುಂಚನ |
| ಅಗ್ನಿ ತತ್ವ | ನಿದ್ರಾ | ತೃಷೆ | ಕ್ಷುಧೆ | ಕಾಂತಿ | ಆಲಸ್ಯ |
| ಜಲ ತತ್ವ | ಜೊಲ್ಲು | ಬೆವರು | ಮೂತ್ರ | ಶುಕ್ಲ | ರಕ್ತ |
| ಭೂಮಿ ತತ್ವ | ರೋಮ | ಚರ್ಮ | ನರ | ಮಾಂಸ | ಅಸ್ತಿ |

## ಅವಸ್ಥಾ ತ್ರಯಗಳು

ಇಂತು ಬ್ರಹ್ಮನು ಪಂಚಭೂತಗಳನ್ನು ಪಂಚೀಕರಿಸಿ ಸರ್ವ ಜೀವರುಗಳಿಗೆ ಅನ್ನ ಮೊದಲಾದಿ ಸಕಲ ವಿಷಯೋಪಭೋಗಗಳನ್ನು ಭೋಗಿಸುವದಕ್ಕಾಗಿ ಮೂರು ತನುಗಳನ್ನು ರಚಿಸಿದನು. ಆ ಶರೀರಗಳು ಚಲಿಸದಿರೆ ಅಂತರ್ಯಾಮಿ ರೂಪದಿಂದ ತಾನೇ ಜೀವಭಾವದಿಂದ ದೇಹದಲ್ಲಿ ಪ್ರಾದು-ರ್ಭವಿಸಿ ಅವುಗಳು ಎಂತೊ ತಾನೂ ಅಂತೆಯೇ ನಟಿಸುವನು. ತನ್ನನ್ನು ತಾನೇ ಮರೆತು ಜೀವನೆನಿಸುತ್ತ ವಿಷಯಗಳನ್ನು ಕಾಮಿಸುವನು. ಬಳಿಕ ಮೇಲೆ ಹೇಳಿದ ಇಪ್ಪತ್ತೈದು ತತ್ವಗಳ ಮಿಲನದಿಂದ ಈ ಸ್ಥೂಲ ದೇಹದೊಳಗೆ ಜಾಗ್ರಾವಸ್ಥೆಯಲ್ಲಿ ನೇತ್ರಸ್ಥಾನದಲ್ಲಿ ಸತ್ವಗುಣ ಆಕಾರ ಮಾತ್ರಾದಿಂದೊಡಗೂಡಿ ವಿಶ್ವಜೀವನೆನಿಸಿಕೊಂಡು ಜಾಗ್ರಾವಸ್ಥೆಯ ಸ್ಥೂಲ ವಿಷಯ ಭೋಗಗಳನ್ನು ಅನುಭವಿಸುವನು.

ಇಪ್ಪತ್ತೈದು ತತ್ವಗಳಲ್ಲಿ ಜ್ಞಾನೇಂದ್ರಿಯಗಳೈದು, ಕರ್ಮೇಂದ್ರಿಯಗಳೈದು, ಪ್ರಾಣಗಳೈದು, ಮನಸ್ಸು ಮತ್ತು ಅಹಂಕಾರ ಇಂತು ಹದಿನೇಳು ತತ್ವದಿಂದ ಜನಿಸಿರುವದು; ಸೂಕ್ಷ್ಮ ತನುವು. ಅದರಲ್ಲಿ ರಜೋಗುಣದಿಂದ ಕೂಡಿಕೊಂಡು ಉಕಾರ ಮಾತ್ರಾದಿಂದ ಕಂಠ ಸ್ಥಾನದಲ್ಲಿದ್ದು ಮನೋಕರಣ ಮಾಡಿಕೊಂಡು, ಅದರಿಂದ ಕನಸು ರಚಿಸಿ, ಅಲ್ಲಿಯ ಸೂಕ್ಷ್ಮ ವಿಷಯಗಳನ್ನು ಅನುಭವಿಸುವವನೇ ತೈಜಸ ಜೀವನೆನಿಸಿಕೊಳ್ಳುವನು.

ಸ್ವಯಂ ಪ್ರಕಾಶನಾದ ಆತ್ಮನು ಅಜ್ಞಾನದಿಂದ ಆವೃತನಾಗಿ ತಮೋಗುಣದಿಂದ ಕೂಡಿಕೊಂಡು ಮಕಾರಮಾತ್ರಾದಿಂದ ಹೃದಯಸ್ಥಾನದಲ್ಲಿದ್ದು

ಸ್ಥೂಲ ಸೂಕ್ಷ್ಮ ಶರೀರಗಳಿಗೆ ಕಾರಣವಾಗಿ ಸುಪ್ತಾವಸ್ಥೆಯನ್ನು ಹೊಂದಿ ಅಜ್ಞಾನರಹಿತ ಆನಂದವನ್ನನುಭವಿಸುವ ಜೀವನೇ ಪ್ರಾಜ್ಞನೆನಿಸಿಕೊಳ್ಳುವನು.

## ಪಂಚ ಕೋಶ ವಿವೇಕ

ಭ್ರಾಂತಿಗೊಳಿಸುವ ಅವಸ್ಥಾ ತ್ರಯಕ್ಕೆ ಒಳಗಾದ ಜೀವನಿಗೆ ನಿರುತ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನ ಮತ್ತು ಆನಂದ ಮಯ ಎಂಬ ಐದು ಕೋಶಗಳು ಇರುವವು. ಜಾಗ್ರಾವಸ್ಥೆಗೆ ಅನ್ನಮಯ ಕೋಶವು, ಸ್ವಪ್ನಾವಸ್ಥೆಗೆ ಪ್ರಾಣಮಯ, ಮನೋಮಯ ವಿಜ್ಞಾನಮಯ ಈ ಮೂರು ಕೋಶಗಳಿರುವವು. ಆನಂದಮಯ ಕೋಶವು ಸುಷುಪ್ತಿ ಗಿರುವದು.

ಬ್ರಹ್ಮನು ಈ ರೀತಿ ಇವೆಲ್ಲ ತತ್ವಗಳನ್ನು ಪಂಚೀಕರಿಸಿದನು. ಮತ್ತು ಅದರ ಒಡೆತನವನ್ನು ಅನ್ನಪೂರ್ಣೇಶ್ವರಿಗೆ ಕೊಟ್ಟು "ನೀನು ಇಳೆಯ ಸಕಲ ಜೀವಿಗಳಿಗೂ ಒಲಿದು ಅನ್ನವನ್ನು ನೀಡುತ್ತ ರಕ್ಷಿಸು ಎಂದನು. ದೇವಿಯು ಮುದದಿಂದ ಒಪ್ಪಿಕೊಂಡಳು.

ಅದು ಕಾರಣ ಈ ಕೋಶಗಳು ನೀನಲ್ಲ. ಇವೆಲ್ಲ ನಿನಗೆ ಬೇರಾಗಿ ಎದು ರಿಟ್ಟು ಪ್ರತೀತಿಯಾಗುವವು. ಇದಿರಿಟ್ಟು ಕಾಣುವ ವಸ್ತು ನೀನೆಂದೂ ಆಗ– ಲಾರಿ. ಸತ್ಯನೂ, ಜ್ಞಾನಸ್ವರೂಪನೂ, ಆನಂದರೂಪನೂ, ನಿತ್ಯನೂ, ಪರಿ- ಪೂರ್ಣನೂ, ನಿರಂಕುಶನೂ, ನಿರಂಜನನೂ, ನಿರಾಳನೂ, ನಿರಾಲಂಬನೂ, ನಿರಾತಂಕನೂ, ನಿರಾವರ್ಣನೂ, ನಿರ್ಲಿಪ್ತನೂ, ನಿಷ್ಕಲಂಕನೂ, ನಿಷ್ಕ್ರಿಯನೂ, ನಿಶ್ಚಲನೂ, ನಿತ್ಯಮುಕ್ತನಾದ ನೀನು ನಿರಾಂತಕದಿಂದ ನಿರಂತರ ಸಕಲ ವಿಷಯ ಗಳನ್ನು ಅರಿಯುತ್ತಿರುವಿ. ಹೀಗಿದ್ದು ನೀನು ನನ್ನನ್ನು ಮರೆತು, ಇವೆಲ್ಲ ವಿಷಯಗಳನ್ನು ಮಮಕರಿಸುತ್ತ ಮೋಹಿತನಾಗಿರುವಿ ಹೇಗಂದರೆ ನನ್ನ ಜಾಗ್ರ, ನನ್ನ ಸ್ವಪ್ನ, ನನ್ನ ಸುಪ್ತಿ, ನನ್ನ ದೇಹ, ನನ್ನ ಪ್ರಾಣ, ನನ್ನ ಮನಸ್ಸು, ನನ್ನ ಬುದ್ಧಿ, ನನ್ನ ಆನಂದ ಹೀಗೆ ಅವೆಲ್ಲವುಗಳಿಗೆ ನನ್ನವು ನನ್ನವು ಎನ್ನುತ್ತ ಅವುಗಳ ಉಪಾಧಿಯಿಂದ ಸುಖ–ದುಃಖಕ್ಕೆ ಒಳಗಾಗಿರುವಿ. ವಿಚಾರಿಸಲಾಗಿ ನೀನು ಕೇವಲ ಅವುಗಳನ್ನು ಅರಿಯುವ ಸಾಕ್ಷಿಕನಾಗಿರುವಿ. ಶರಧಿಯೊಳು ತೋರಿ ಅಡಗುತ್ತಿರುವ ತೆರೆನೊರೆಗಳಿಗೆ ಜಲವೇ ಆಧಾರವಾದಂತೆ ನಿನ್ನಲ್ಲಿಯ

ಕರಣ ದೇಹೇಂದ್ರಿಯಾದಿಗಳಿಗೆ ನೀನೇ ಆಧಾರಭೂತನಾಗಿರುವಿ. ತೋರದ ಅಡಗದ ಸದ್ರೂಪು ನೀನು. ಅದಿಂದೆಬುದಕ್ಕೆ ಆಶ್ರಯಪದವಾಗಿ ತ್ರಿಕಾಲ ದಲ್ಲಿಯೂ ಬಾಧೆ ರಹಿತನಾಗಿರುವ ನೀನೇ ಸತ್ಯವಸ್ತುವು, ನಿನ್ನ ಪ್ರೇರಣೆ ಯಿಂದಲೇ ಜಾಗ್ರ ಸ್ವಪ್ನಗಳು ಜನಿಸಿ, ತಮ್ಮ ಕಾರ್ಯಗಳನ್ನು ಮಾಡುತ್ತಿರು ವವು. ಸುಷುಪ್ತಿಯಲ್ಲಿ ಅವೆಲ್ಲವು ಮಾಯವಾಗುವವು. ಅವುಗಳು ನಿನ್ನನ್ನು ಅರಿಯಲಾರವು. ನೀನು ಮಾತ್ರ ಅವುಗಳ ಆಗುಹೋಗುಗಳನ್ನು ಸತತ ಅರಿಯುವದರಿಂದ ನೀನು ಸ್ವಪ್ರಕಾಶನು. (ತಿಳಿವಿನ ರೂಪನು) ಅರಿಯದಿರುವ (ಜಡವಾದ) ವಿಷಯಗಳನ್ನು ಅಭಿಮಾನಿಸುತ್ತ ನೀನೇ ಅವುಗಳ ಆಕಾರವಾಗು ತ್ತಿರುವಿ. ಅವುಗಳಿಗೆ ಏನಾದರೂ ಹಾನಿಯುಂಟಾದರೆ ಅವುಗಳ ಅಭಿಮಾನ ದಿಂದ ದುಃಖಿಸುವಿ. ಯಾಕೆಂದರೆ ಎಲ್ಲ ವಿಷಯಗಳು ನಿರುತ ದುಃಖದಾಯಕ ವಿರುವವು. ನೀನು ಸುಷುಪ್ತಿಗೆ ತೆರಳಿದಾಗ ಎಲ್ಲ ವಿಷಯಗಳು ಅಡಗಲು ನಿನ್ನ ನಿಜಸುಖವನ್ನು ನೀನು ಅನುಭವಿಸುವಿ. ಈ ಅಭಿಮಾನ ಪ್ರಮಾಣ ದಿಂದ ನೀನು ಪರಮ ಸುಖಿಯು. ಆಭರಣದೊಳಗಿರುವ ಸುವರ್ಣದಂತೆ ನೀನು ವ್ಯಾಪಕನು ಮತ್ತು ಗಗನಾದಿಗಳಲ್ಲಿ ನಿನ್ನಲ್ಲಿ ಹುಟ್ಟಿ ತೋರುವದ ರಿಂದ ನೀನೇ ಪರಿಪೂರ್ಣನು ಹೀಗೆ ವಿಚಾರಿಸಿ ನಿನ್ನ ಸ್ವರೂಪ ದೃಢಪಡಿಸಿ ಕೊಳ್ಳು'' ಎಂದು ಪುನೀತನಾದ ಮಾರನಾಡಿಗೆ ಸದ್ಗುರು ಸಿದ್ಧನು ಉಪದೇಶಿಸಿದನು.

ಆಗ ಮಾರವಾಡಿಯು "ಹೇ, ಕಂತುಹರನ, ಅವತಾರಿಯಾದ ಶಾಂತ ಮೂರ್ತಿಯೇ ! ನಿನ್ನ ಬೋಧೆಯಿಂದ ಮತ್ತು ನಿನ್ನ ಅನಂತ ಮಹಿಮೆಯಿಂದ ನಿರುತ ಬಿಡದಿರುವ ನನ್ನ ಸ್ಥೂಲ, ಸೂಕ್ಷ್ಮ ತನುಗಳ ಮಮಕಾರರೂಪ ದುಃಖವನ್ನು ದೂರ ಮಾಡಿದಿರಿ. ಪರಮ ಕರುಣಿಯೇ ಮೂಲಪುರುಷನೇ ನಿನ್ನಿಂದ ಧನ್ಯನಾದೆನು'' ಎನ್ನುತ್ತ ಕೃತಜ್ಞತಾಭಾವದಿಂದ ನೇತ್ರಗಳ ಆನಂದಾಶ್ರುಗಳನ್ನು ಸದ್ಗುರುಗಳ ಚರಣಗಳ ಮೇಲೆ ತುಳಿಕಿಸುತ್ತ ನಮಿಸಿ ಬೀಳ್ಕೊಟ್ಟನು.

ಮಂಗಲ— ಪರಮ ಮುಖದೊಳ್ ಪೊಳೆವ ಮಾರವು ।
ಚರಣಗಳ ಹೆಬ್ಬೆರಳ ಮಧ್ಯದೊ ।
ಳಿರುತ ಪೊಳೆಯುವದೊಂದು ಹೀಗೀ ನಾಲ್ಕರಿಂ ತಾನು ||

ಮೆರೆವ ನಾಗಣ್ಣಂಗೆ ಬಳಿಕಂ |
ಭರದಿ ಪೂಜಿಸಿ ಯಿಶ್ಟು ರಕ್ತವ |
ಹರುಷದಿಂ ಸುರಿಸುತಿರು ವೊಕ್ಕಣ್ಣಂಗೆ ನತನಪ್ಪೆ ||

ಇತಿ ಶ್ರೀಮತ್ ಸಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರಲೀಲಾ ಚರಿತ್ರ ಕಲ್ಪದ್ರುಮದೊಳು ಪರಮಾತ್ಮನ ಪ್ರಸನ್ನತೆ ಮಾರವಾಡಿಯ ರೋಗ ನಿವಾರಣೆ ಮತ್ತು ತತ್ವಜ್ಞಾನ ಬೋಧವೆಂಬ
— ೨೩ ನೇ ಅಧ್ಯಾಯ ಸಮಾಪ್ತಿ

---

|| ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ||



# ಸಂಚಾರ ಸಂಭ್ರಮ ಕಾಂಡ

## ಅಧ್ಯಾಯ ೨೪

ಈ ಅಧ್ಯಾಯದಲ್ಲಿ ಸಿದ್ಧರು ವಿಜಯ ನಗರದಲ್ಲಿ ಬೈರಾಗಿಗಳಿಗೆ ಉಂಡ ಅನ್ನವು ದೇಹದಲ್ಲಿ ಏನಾಗುವದೆಂಬುದನ್ನು ನಿರ್ಣಯಿಸಿ ಹೇಳಿದ್ದು ಮತ್ತು ನಾನಾದೇಶಗಳನ್ನು ಸಂಚರಿಸುತ್ತ ಅಲ್ಲಲ್ಲಿ ಜನರು ಏನು ಕೇಳುತ್ತಾರೋ ಅದಕ್ಕೆ ಸರಿಯಾಗಿ ಉತ್ತರವನ್ನು ಕೊಡುತ್ತ ಬಿಜಾಪುರದ ಹತ್ತಿರ ಕೃಷ್ಣಾ

ತೀರದಲ್ಲಿ ಒಂದು ವೃಕ್ಷದ ಕೆಳಗೆ ಒಬ್ಬ ಸ್ತ್ರೀಯಳಿಗೆ ದ್ರೌಪದಿಯ ಪತಿವ್ರತಾ ಧರ್ಮವನ್ನು ಸಿದ್ಧಮಾಡಿ ತೋರಿಸಿದ್ದು.

ಮಂಗಳ ಗಿರಿಯಲ್ಲಿ ದೇವನು, ಮಹಾತ್ಮರ ಆಶೀರ್ವಾದದಿಂದ ಸಂತೃಪ್ತ ನಾಗುವನೆಂದು ಸಿದ್ದಮಾಡಿದ ವಿಷಯಗಳು ಬಂದಿರುವವು.

ಸ್ತುತಿಪದ— ಪಾವನಾತ್ಮಕನಿದ್ದು ಜಗವಂ |
ಪಾವನಂ ಗೊಳಿಸಲ್ಕೆ ಜವದಿಂ |
ಭಾವ ಜನನುರ ಅಗ್ನಿನೇತ್ರದಿ ನರುಹಿ ಭಸಿತವನು ||
ಓವಿ ಧರಿಸುವ ವಿಷವ ಕುಡಿಯುತ |
ಸಾವವಿಲ್ಲದೆ ತೊಗಲ ಪೊದೆಯುತ |
ಪಾವತೊಡಗೆಯ ಮಾಡಿಕೊಂಡೀಶಂಗೆ ನತನಪ್ಪೆ ||

**ಪದ— ೧–೯ ಬೈರಾಗಿಗಳಿಗೆ ಉಂಡಂಥ ಅನ್ನದ ಪರಿಣಾಮ ಏನಾಗುವದೆಂಬುದನ್ನು ತಿಳಿಸಿದ್ದು**

ಚರಿತ್ರನಾಯಕನು ಮಾರವಾಡಿಯ ಮನೆಯಿಂದ ಹೊರಟು ನೃಪರೊಳು ಅತಿ ಪರಾಕ್ರಮಿ ಎಂದು ಪ್ರಸಿದ್ಧನಾದ ಪ್ರತಾಪಸಿಂಹನ ರಾಜಧಾಯಾದ ವಿಜಯ ನಗರಕ್ಕೆ ಬಂದನು. ಅಲ್ಲಿ ಹೊಳೆಯುತ್ತಿರುವ ಸಿಂಹಾಸನವನ್ನು ನೋಡಿಕೊಂಡು ಸಮೀಪದಲ್ಲಿ ಹೆಗ್ಗುಂಡವೆಂಬ ಹಿರಿದಾದ ಯಂತ್ರವ ಬಳಿಗೆ ಬಂದು ವಿಶ್ರಮಿಸಿಕೊಂಡನು. ಆಗ ಹನ್ನೊಂದು ಜನ ಬೈರಾಗಿಗಳು ಧರಣಿಪನ ಅನ್ನಛತ್ರದಲ್ಲಿ ಹಿಟ್ಟು–ಅಕ್ಕಿಗಳನ್ನು ತಕ್ಕೊಂಡು ಅಲ್ಲಿಗೆ ಬಂದರು. ಬಳಿಕ ಅಡಿಗೆಯನ್ನು ಮಾಡಿ ಊಟಮಾಡುವ ಕಾಲಕ್ಕೆ ಅಲ್ಲಿಯೇ ಕುಳಿತಿರುವ ಸಿದ್ಧ ಯತಿಯನ್ನು ಊಟಕ್ಕೆ ಕರೆದರು. ಕೂಡಲೆ ಅವನೂ ಬಂದು ಪಂಕ್ತಿಗೆ ಕುಳಿತನು. ಎಲ್ಲರೂ ಸಂತೋಷದಿಂದ ಊಟ ಮಾಡುತ್ತಿರುವಾಗ ಸಿದ್ಧನು ಬೈರಾಗಿಗಳನ್ನು ಕುರಿತು "ನೀವು ಚಂದದಿಂದ ಉಂಡ ಅನ್ನವು ಉದರದಲ್ಲಿ ಏನಾಗುವದು ?" ಎಂದು ಕೇಳಿದನು.

ಕೂಡಲೆ ಅದರೊಳಗೋರ್ವನು "ಉಂಡ ಅನ್ನವು ಒಡಲಲ್ಲಿ ಸಪ್ತ ಧಾತುಗಳಾಗುವದು. ಇದಕ್ಕೂ ಹೆಚ್ಚಿಗೆ ಏನಾದರೂ ಇದ್ದರೆ ಅದನ್ನು ತಾವೇ ತಿಳಿಸಬೇಕು" ಎಂದನು. ಒಡನೆ ಸಿದ್ಧನು ಕವಳ ನುಂಗುತ್ತ ಕೈದೊಳೆದು

ನೀರ್ಗುಡಿದು ನಿಪಾನಗೊಂಡು ಮರದ ನೆರಳಿಗೆ ಕುಳಿತು ಪೇಳತೊಡಗಿದನು. "ಉಂಡ ಅನ್ನದ ರಸದಲ್ಲಿ ತಾಮಸ ಅಂಶವು ಮಲವಾಗಿ ಗುದದ್ವಾರದಿಂದ ಹೊರಗೆ ಹೋಗುವದು. ಅನ್ನದ ರಾಜಸ ಅಂಶವು ಸಪ್ತಧಾತುಗಳಾಗಿ ಶರೀರಕ್ಕೆ ಸ್ಥಿತಿಗೊಡುವದು, ಬಳಿಕ ಅದರ ಸತ್ವಾಂಶವು ಮನಸಾದಿ ಕರಣಗಳಾಗಿ ತುಷ್ಟಿ, ಪುಷ್ಟಿ ಮತ್ತು ಶಾಂತಿಯ ನೀವುದು. ಪರಮ ಸಾತ್ವಿಕ ಅನ್ನವನ್ನು ಉಣ್ಣುವ ಕಾಲಕ್ಕೆ ಹರನ ನೆನೆಯುತ್ತ ಸಮಬುದ್ಧಿಯಿಂದಿದ್ದರೆ ಅದು ಶುದ್ಧ ಮನಸ್ಸಾಗಿ ಹರುಷದಿಂದ ಬ್ರಹ್ಮವಿದ್ಯೆಯನ್ನು ಅರಿಯಬೇಕೆಂಬ ಇಚ್ಛೆಯುಂಟಾಗುವದು. ಆವಾಗ್ಗೆ ಸದ್ಗುರುವರನಿಂದ ಸದ್ಬೋಧೆಯನ್ನು ಪಡೆದು ತಾನು ಧನ್ಯನಾಗುವನು. ಇಂಥ ಸಾತ್ವಿಕ ಅನ್ನವನ್ನು ದಾನ ಮಾಡಿದ ಧಾರ್ಮಿಕನಿಗೂ ಕೊಡಾ ಸದ್ಗತಿಯ ಫಲವು ದೊರೆಯುವದು. ಇದನ್ನರಿಯದೇ ಭ್ರಷ್ಟಾಚಾರದಿಂದ ತಿರಿದು ತಂದ ಅನ್ನವನ್ನು ಭುಂಜಿಸಿದ್ದಾದರೆ, ತಾವು ಅಧೋಗತಿಗೆ ಹೋಗುವರಲ್ಲದೆ ಅನ್ನ ಕೊಟ್ಟವರನ್ನೂ ಸಹ ನರಕಕ್ಕೆ ತಳ್ಳುವದು. ಇದನ್ನು ನೀವೆಲ್ಲರೂ ಚೆನ್ನಾಗಿ ಅರಿತುಕೊಳ್ಳಿರಿ'' ಎಂದನು.

ಯತಿ ಸಿದ್ಧನ ಈ ಭೋದೆಯನ್ನು ಕೇಳಿ ಅಂದು ಅವರೆಲ್ಲರೂ ಪ್ರೇಮದಿಂದ ಅಲ್ಲಿಯೇ ಉಳಿದುಕೊಂಡು ತಮಗೆ ಬಂದಿರುವ ಎಲ್ಲ ಸಂಶಯಗಳನ್ನು ಸಿದ್ಧನಮುಂದಿಡುತ್ತ ಅವನಿಂದ ತಮ್ಮೆಲ್ಲರ ಸಂಶಯಗಳನ್ನು ಪರಿಹರಿಸಿಕೊಳುತ್ತ ಆನಂದದಿಂದ ಮಲಗಿ ಬೆಳಗಾದಕೂಡಲೆ ಸಿದ್ಧನಿಗೆ ನಮಿಸಿ ಹೊರಟು ಹೋದರು.

## ಪದ—೧೦-ಕ್ಕೆ ಭಾರತಿಯ ಸಂಚಾರ ಮತ್ತು ದ್ರೌಪದಿಯ ಪತಿವ್ರತಾ ಧರ್ಮದ ವಿವರಣೆ

ಬಳಿಕ ಸಿದ್ಧ ಭಾರತಿಯು ಭದ್ರಾಚಲಕ್ಕೆ ಬಂದನು ಅಲ್ಲಿ ಪರಮ ಸಜ್ಜನರಾದ ಶ್ರೀ ರಾಮ ದಾಸರು ಜೀರ್ಣೋದ್ಧಾರ ಮಾಡಿರುವ ಗುಡಿಗಳನ್ನು ಕಂಡನು. "ಇದು ಈಶ ಮಹಿಮೆ" ಎಂದುಕೊಂಡು ಅಲ್ಲಿಂದ ಹೊರಟು ಗೋದಾವರಿ ತೀರಕ್ಕೆ ಬಂದನು. ಅಲ್ಲಿ ಮೊದಲಿಗೆ ರಾಮದಾಸ ಅನುಷ್ಠಾನಕ್ಕೆ ಕುಳಿತುಕೊಂಡಿದ್ದ ಕಟ್ಟೆಯ ಮೇಲೆ ಕುಳಿತುಕೊಂಡನು. ಅದೇ ಸಮಯಕ್ಕೆ ಅಲ್ಲಿಗೆ ಅರ್ಚಕರಾದ ಐವರು ವಿಪ್ರರು ಬಂದರು. ಅವರು ಸಿದ್ಧರನ್ನು ಕುರಿತು "ತಾವು ಎಲ್ಲಿಯವರು ? ತಮ್ಮ ಸ್ಥಿತಿಗತಿಗಳೇನು?''

ಎಂದು ಪ್ರಶ್ನೆ ಮಾಡಿದನು, ಅದಕ್ಕೆ ಆರೂಢರು "ಸಲ್ಲುತಿಹ ನಿಸ್ಸಂಗವೇ ನಮ್ಮ ದೇಶವು. ಎಲ್ಲಕ್ಕೂ ಅಧಿಷ್ಠಾನವೆಂಬುದೇ ನಮ್ಮ ಸ್ಥಿತಿಯು. ಸಡಗರದ ನಿರ್ಗತಿಯೇ ನಮ್ಮ ಗತಿಯು. ದೇಶ, ಕಾಲ ವಸ್ತು ಪರಿಚ್ಛಿನ್ನ ರಹಿತನಾದ ಆತ್ಮನಿಗೆ ಯಾವ ದೇಶವೆಂದು ಹೇಳಬೇಕು ? ಆಗಸದಂತೆ ಪರಿಪೂರ್ಣನಾದ ಆತ್ಮನಿಗೆ ಗಮನಾಗಮನ ಎಲ್ಲಿರುವದು ಎಂದು ಸಿದ್ಧನು ಸಹಜವಾಗಿ ನುಡಿದನು. ಅದನ್ನು ಅರ್ಚಕರಾದ ಆ ಬ್ರಾಹ್ಮಣರು ಕೇಳಿ, ಬಾಯಿ ತೆರೆಯದೆ ಸುಮ್ಮನಾದರು. ಆರೂಢರು ಅದನ್ನು ಅರಿತು ''ವಿಪ್ರರೇ, ನಿಮ್ಮೆಲ್ಲರ ಚಿತ್ತವು ಪರಿಶುದ್ಧವಾಗಿರುವದು. ಅದುಕಾರಣ ಈ ಸಿದ್ಧಾಂತವು ಬಿಡದೆ ನಿಮ್ಮೆಲ್ಲರ ಚಿತ್ತವನ್ನು ಸೆಳೆಯಲು, ನಿಮ್ಮ ಅಂತಃಕರಣವು ತದಾಕಾರವಾಯಿತು ಕೂಡಲೇ ನೀವು ಆನಂದಪರವಶರಾಗಿ ಸುಮ್ಮನಾದಿರಿ" ಎಂದರು. ವಿಪ್ರರೆಲ್ಲರು ಮಮತೆಯಿಂದ "ತಾವು ನಮ್ಮೆಲ್ಲರ ಹೃದಯವನ್ನು ಗುರ್ತಿಸಿದಿರಿ. ಸರ್ವರ ಹೃದಯದ ಅಂತರ್ಯಾಮಿಯೇ ತಾವಿರುವಿರಿ'' ಎಂದು ಎಲ್ಲರೂ ನಮಿಸಿ ಗಮಿಸಿದರು.

ಬಳಿಕ ಸಿದ್ಧನು ಅಲ್ಲಿಂದ ಹೊರಟು ಭರದಿಂದ ಸಜ್ಜನಗಡಕ್ಕೆ ಬಂದನು. ಅಲ್ಲಿ ರಾಮದಾಸರು ಸ್ಥಾಪನೆ ಮಾಡಿರುವ ಮನೋಹರ ರಾಮ ಮೂರ್ತಿಯನ್ನೂ, ಅವರ ಸಮಾಧಿಯನ್ನೂ ಕಂಡು ಸಂತೋಷ ಹೊಂದಿದನು. ಅಲ್ಲಿಂದ ಹಾಗೆಯೇ ಬಿಜವಾಡದ ಕಡೆಗೆ ಸಾಗಿ ಬರುವಾಗ ಮಾರ್ಗದಲ್ಲಿ ಎಲ್ಲ ಕ್ಷೇತ್ರಗಳನ್ನು ನಿರೀಕ್ಷಿಸುತ್ತ ಕೃಷ್ಣಾನದಿ ತೀರಕ್ಕೆ ಬಂದನು. ಅಲ್ಲಿ ವಿಶ್ರಾಂತಿ ಗೋಸುಗ ಒಂದು ವೃಕ್ಷದ ಛಾಯೆಗೆ ಕುಳಿತುಕೊಂಡನು. ಅದೇ ಸಮಯಕ್ಕೆ ಓರ್ವ ಸ್ತ್ರೀಯಳು ಅಲ್ಲಿಗೆ ಬಂದು ಸಿದ್ಧರನ್ನು ಕಂಡು, ಪರಮ ಪುರುಷರೇ, ತಾವು ಪರಮ ಜ್ಞಾನಿಗಳಂತೆ ತೋರುವಿರಿ. ತಮ್ಮ ದರ್ಶನದಿಂದ ಇಂದು ನನಗೆ ಪರಮಾನಂದವಾಯಿತು. ನಾನು ಧನ್ಯಳಾಗುವ ಪಥವ ಪೇಳಿ ನನ್ನನ್ನು ಮುಕ್ತಳನ್ನಾಗಿ ಮಾಡಿರಿ'' ಎಂದು ಬಹು ವಿನಯದಿಂದ ಪ್ರಾರ್ಥಿಸಿ ಕೊಂಡಳು.

ಆಗ ಸಿದ್ಧಯತಿಯು ''ತಾಯಿ, ಸ್ತ್ರೀಯರು ಚಂಚಲ ಚಿತ್ತುಳ್ಳವರು. ಅವರಿಗೆ ಜ್ಞಾನ ಪಥವು ಯೋಗ್ಯವಲ್ಲವು. ಅದುಕಾರಣ ನೀನು ಸೋಮವಾರದ ಪಯೋನಿಧಿ (ಕುಡಿಯುವ ನೀರು ಹಾಲು ಕೊಡುವ) ವ್ರತವನ್ನು

ಭಕ್ತಿಯುಕ್ತಳಾಗಿ ಆಚರಿಸಿದ್ದಾದರೆ ನೀನು ಧನ್ಯಳಾಗುವಿ'' ಎಂದರು. ''ಹಾಗಾದರೆ ಮೊದಲು ಈ ವ್ರತವನ್ನು ಯಾವ ಸಾಧ್ವಿಯು ಸಾಧಿಸಿ ಪಾವನಳಾದಳು ? ಅವಳ ಕಥಾಸಾರವನ್ನು ಸಾದರದಿಂದ ತಾವು ನನಗೆ ಹೇಳಿ ಶಾಂತಿ ಪಡಿಸಬೇಕು'' ಎಂದು ಅರಿಕೆ ಮಾಡಿಕೊಂಡಳು.

## ದ್ರೌಪದಿಯ ವರ್ಣನೆ

ಸಿದ್ಧಭಾರತಿಯು ಆ ಸಾಧ್ವಿಯನ್ನು ''ಕುರಿತು ಹೇಳಲನುವಾದನು. ''ಶಶಿಮುಖಿ, ಕಮಲಾಂಬಕಿಯಾದ ಪಾಂಚಾಲಿಯು, ಇಂದ್ರಚಾಪದಂತೆ ಹುಬ್ಬು, ಥಳಥಳಿಸುವ ಕನ್ನಡಿಯ ಹೊಳಪುಳ್ಳ ಕಪೋಲ, ಸಂಪಿಗೆಯ ಮೊಗ್ಗೆಯಂತಿರುವ ನೀಟಾದ ನಾಶಿಕ, ಭ್ರಮರದಂತೆ ಕಪ್ಪಾಗಿರುವ ಸುಳಿ ಮುಂಗುರುಳುಗಳು, ತೊಂಡಿ ಹಣ್ಣಿನಂಥ ಕೆಂದುಟಿ, ಲಲಿತ ಕಂಬುಗ್ರೀವ (ಕಂಠ), ಪೊಂಗಲಶ (ಚಿನ್ನದ ಕೊಡ)ದಂತೊಪ್ಪುವ ಕುಚಗಳು, ಮರಿಯಾನಿ ಸೊಂಡಿಲದಂತಿರುವ ತೋಳುಗಳು, ಬಾಳೆಯ ದಿಂಡಿನಂತೆ ಒಪ್ಪುತ್ತಿರುವ ತೊಡೆಗಳು, ಕೆಂಬಣ್ಣದಂತಿರುವ ಮೈಬಣ್ಣ, ಕೋಗಿಲೆಯ ಧ್ವನಿಯುಂತಿರುವ ಮಂಜುಳ ಸ್ವರ, ಮದ್ದಾನೆಯಂತೆ ಗಂಭೀರ ಗಮನ, ಸಿಂಹದಂತಿರುವ ಸಣ್ಣಾದ ನಡ, ಕದಳಿದಳದಂತಿರುವ ತಿಳುವಾದ ಉದರ, ತಳಿರದಂತೆ ಮೃದುವಾದ ಪಾದಗಳು, ದಾಡಿಮಫಲದಂತಿರುವ ದಂತಪಕ್ತಿಗಳು, ಇವೆಲ್ಲವುಗಳಿಂದ ಶೋಭಿಸುತ್ತಿರುವ ಪರಮ ಸುಂದರಿಯನ್ನು ಯಾರು ವರ್ಣಿಸಬಲ್ಲರು ? ಅವಳು ಝುಗಝುಗಿಸುವ ಮಣಿ, ಮುತ್ತು, ರತ್ನಗಳನ್ನು ಧರಿಸಿ, ಜರಿಯ ಪೀತಾಂಬರವನ್ನುಟ್ಟು, ಗಿಳಿ ಹಸರು ಬಣ್ಣದ ಕುಪ್ಪಸತೊಟ್ಟು, ನವರತ್ನಗಳಿಂದೊಪ್ಪುವ ವಡ್ಯಾಣವನ್ನಿಟ್ಟು, ಕಡೆಗಣ್ಣಗಳಿಗೆ ಕಾಡಿಗೆ ತೀಡಿ, ಜಡಿಗೆ ಕೇತಕಿ ಹೆಣೆದು, ಅದರ ತುದಿಗೆ ಜರಿ ಗೊಂಡೆಗಳನ್ನು ಜೋಲು ಬಿಟ್ಟು, ಅದರ ಮೇಲ್ಭಾಗದಲ್ಲಿ ನಾಗರತ್ನವನ್ನಿಟ್ಟು, ಹಣೆಗೆ ಪರಿಮಳ ಕಸ್ತೂರಿ ಕುಂಕುಮ ತಿಲಕವನ್ನಿಟ್ಟು, ಕಪೋಲಕ್ಕೆ ಅರಿಷಣ ಬಳಿದು, ಪುಂದಿರುವ ಮುಂಗೈಗೆ ಗಂಧವನು ತೀಡಿ, ಮೂಗಿನಲ್ಲಿ ವಜ್ರದ ಮುಕುರವನ್ನಿಟ್ಟು, ಮುತ್ತೈದೆಯರ ಲಕ್ಷಣಗಳಿಂದಲೂ, ರಾಜವೈಭವದಿಂದಲೂ ಮೆರೆಯುವ ದ್ರೌಪದಿಯು, ತನ್ನ ವೈರಿಗಳಾದ ಕಾಮಾದಿಗಳನ್ನು ತನ್ನ ಉನ್ನತರದ ಪಾತಿವ್ರತ್ಯದ ಪ್ರಭಾವದಿಂದ ಜಯಿಸಿದಳು. ಆಗ ಆ ಕಾಮಾದಿ

ಅರಿಗಳು ಮನ್ಮಥನಿಗೆ ಮರೆಹೊಕ್ಕವು. ಕೂಡಲೆ ಮನ್ಮಥನ ಉರುವಣೆ ಯಿಂದ ಇಕ್ಷು ಚಾಪವನ್ನು (ಕಬ್ಬಿನ ಬಿಲ್ಲನ್ನು) ಕೈಯಲ್ಲಿ ಧರಿಸಿ ಬಹು ದರ್ಪ ದಿಂದ ಹೂಂಕರಿಸಿ ಎದುರಿಗೆ ಹಾರಿ ಬಂದು ಮಂಡೆಯನೂರಿ ಚೀರುತ್ತ ಅವಳ ಹೃದಯಕ್ಕೆ ಪುಷ್ಪಬಾಣ ಗುರಿ ಇಟ್ಟನು. ಆಗ ದ್ರೌಪದಿಯು ಸುಮನದಿಂದ ತನ್ನ ತನು ಮನಗಳನ್ನು ಮೀರಿ, ಪತಿ ಧ್ಯಾನದಲ್ಲಿ ಲೀನಳಾದಳು. ಮನ್ಮಥನು ಮತ್ತಷ್ಟು ಅವಳ ಸಮೀಪಕ್ಕೆ ಸಾಗಿ ಕೂಗಿದನು. ಆಗ ಆ ಪತಿವ್ರತೆಯು ಅವನ ರಭಸಕ್ಕೆ ಕಣ್ದೆರೆದು “ಛೀ ಪರಮ ಪಾಪಿಯೇ ! ಲಜ್ಜಗೇಡಿಯೇ ನೀನು ಹರನ ನೇತ್ರದಿಂದ ಉರಿದು ಬಿದ್ದಿರಲು ಕರುಣದಿಂದಾತನು ಮರಳಿ ನಿದಗೆ ತನುವ ಕೊಟ್ಟದ್ದನ್ನು ಮರೆತು ಪುನಃ ಸರಲರಿಗೂ ಕೈತೋರಿಸುತ್ತನೀನು ಲಜ್ಜಗೆಟ್ಟವ ನಾಗಿರುವಿ ಈಗ ನಿನ್ನ ಸುಂದರದೇಹವು ಉರುತಕದ ಪಾತಿವ್ರತ್ಯದಶಿಖಿಯಿಂದ ಉರಿದು ಹೋಗಲಿ ! ಇಂದಿನಿಂದ ನೀನು ಅನಂಗನಾಗು’’ ಎಂದು ಶಪಿಸಿದಳು. ಅವಳ ಶಾಪದಿಂದ ಕಾಮನು ಅಂದಿನಿಂದ ಅನಂಗನಾದನು. ಭಕ್ತಳೇ ಕೇಳು. ಇಂಥ ಪಾತಿವ್ರತ್ಯದಿಂದ ತಾನಿದ್ದ ದ್ರೌಪದಿಯು ಪಂಚ ಪಾಂಡವರಿಗೆ ಅರಸಿ ಯಾಗಿದ್ದಳು. ಅವಳು ಉರುತರಭಕ್ತಿಯಿಂದೊಡಗೂಡಿ ಪೊಂದಳಿಗೆಯಲ್ಲಿ ರಸ ಭರಿತ ಪಕ್ವ ಫಲಗಳನ್ನೂ, ಗಂಧಯುಕ್ತ ಪತ್ರ, ಪುಷ್ಪ, ದವನಾದಿ ಪರಿಮಳ ಗಳನ್ನೂ, ಗಂಧ, ಅರಿಷಣ, ಕುಂಕುಮ ಮೊದಲಾದ ಪೂಜಾ ದ್ರವ್ಯಗಳನ್ನೂ ಸುವ್ಯವಸ್ಥೆಯಿಂದಿಟ್ಟುಕೊಂಡು ಸುಂದರ ಮಂದಹಾಸ ವದನವುಳ್ಳವಳಾಗಿ, ಮಂದಗಮನದಿಂದ ಸಾಗಿಬಂದು ತಾನು ತಂದ ದ್ರವ್ಯಾದಿಗಳನ್ನು ಶ್ರೀಕೃಷ್ಣನ ಮುಂದಿರಿಸಿ, ಸಾಷ್ಟಾಂಗದಿಂ ವಂದಿಸಿ ‘ಪರಮ ಗುರುವೇ, ನನಗೆ ಆತ್ಮವಿದ್ಯೆ ಯನ್ನು ಬೋಧಿಸು’ ಎಂದು ಪ್ರಾರ್ಥಿಸಿಕೊಂಡಳು.

ಆಗ ಶ್ರೀ ಹರಿಯು ‘ದ್ರೌಪದಿ’ ಲೌಕಿಕ ಸ್ತ್ರೀಯರಿಗೆ ಬ್ರಹ್ಮವಿದ್ಯೆ ಯನ್ನು ಹೇಳಬಾರದು. ಅವರು ಅನಧಿಕಾರಿಗಳು. ಆದರೆ ನೀನು ಗಾರ್ಗಿ, ಮೈತ್ರೇಯಿ ಗಳವರ ಉದಾಹರಣೆ ಕೊಡಬಹುದು. ಅದು ಅವರಿಗೆ ಮಾತ್ರ ಯೋಗ್ಯವು. ಈಗ ನೀನು ನಿಜವಾಗಿ ನಿನ್ನ ಪಾತಿವ್ರತ್ಯದ ಪ್ರಭಾವದಿಂದ ಪರಮ ಧನ್ಯಳೇ ಇರುವಿ. ಆದರೂ ನೀನು ಸೋಮವಾರದ ಪಯೋವ್ರತ ವನ್ನು ಆಚರಿಸು’ ಎಂದು ಉಪದೇಶ ಮಾಡಿದನು. ಅದರಂತೆ ಆಚರಿಸಿ

ದ್ರೌಪದಿಯು ಸದ್ಗತಿ ಹೊಂದಿದಳು'' ಎಂದು ಸಿದ್ಧನು ಆ ಸಾಧ್ವಿಗೆ ಅರುಹಿದನು.

ಆ ಸ್ತ್ರೀಯಳು ತನಗೆ ಸಂಶಯವುಂಟಾಗಿ ಪುನಃ ಪ್ರಶ್ನೆ ಮಾಡುತ್ತಾಳೆ. "ಸ್ವಾಮೀ, ಪಾಂಚಾಲಿಯು ಪುರುಷರೈವರಿಗೊಲಿದು ತಾನು ಸತಿಯಾದರೆ ಅವಳ ಮಹಾ ಪತಿವ್ರತಾ ಶೀಲವು ಅದೆಂತು ಉಳಿವುದು ? ಇದನ್ನು ತಾವು ಬೇಗನೆ ಮುದದಿಂದ ಅರುಹಬೇಕು" ಎಂದಳು.

### ದ್ರೌಪದಿಯು ಮಹಾಪತಿವ್ರತಳು ಎಂದು ಸಿದ್ಧ ಮಾಡಿದ್ದು

"ಸದ್ಭಕ್ತಳೇ ಕೇಳು. ಹಿಂದಕ್ಕೆ ದ್ವಾಪಾರ ಯುಗದಲ್ಲಿ ಸದ್ಗುಣ ಸಂಪನ್ನನಾಗಿ ಮಂಡಲೇಶ್ವರನೆಂದು ಪ್ರಖ್ಯಾತಹೊಂದಿದ ಕುಂತೀಭೋಜನೆಂದು ಅರಸನು ತನ್ನ ಎಲ್ಲ ಪ್ರಜೆಗಳನ್ನು ಹೊಟ್ಟೆಯ ಮಕ್ಕಳಂತೆ ಮಮತೆಯಿಂದ ಪರಿಪಾಲಿಸುತ್ತ ಕೀರ್ತಿವಂತನಾಗಿದ್ದನು. ಬೆಳವಣಿಗೆಯಲ್ಲಿ ಶಶಿಯಂತೆಯೂ, ಲಾವಣ್ಯದಲ್ಲಿ ರತಿಯಂತೆಯೂ, ಇನಿಮಾತಿನಲ್ಲಿ ಗಿಳಿಯಂತೆಯೂ, ಶಾಂತಿಯಲ್ಲಿ ಜಾಹ್ನವಿ (ಗಂಗೆ) ಯಂತೆಯೂ, ಶುಭದಲ್ಲಿ ಗೌರಿಯಂತಯೂ, ಸುಖ ಸಂಪತ್ತಿನಲ್ಲಿ ಲಕ್ಷ್ಮಿಯಂತೆಯೂ, ವಿದ್ಯೆಯಲ್ಲಿ ಭಾರತಿಯಂತೆಯೂ, ಚತುರತೆಯಲ್ಲಿ ಕೌಶಲ್ಯೆಯಂತೆಯೂ, ಸತ್ಕೀರ್ತಿಯಲ್ಲಿ ಅರುಂಧತಿಯಂತೆಯೂ, ಸದ್ಗುಣದಲ್ಲಿ ಜಾನಕಿಯಂತೆಯೂ, ಗುರುಸೇವೆಯಲ್ಲಿ ದಾಸಿ ಎನ್ನುವಂತೆ ಆ ರಾಜನಿಗೆ ಕುಂತಿ ಎಂಬ ಓರ್ವ ಸುಕುಮಾರಿ ಇದ್ದಳು. ಒಂದು ಸಮಯದಲ್ಲಿ ದುರ್ವಾಸ ಮುನಿವರನು ರಾಜ ಸದನಕ್ಕೆ ಬಂದನು. ಆಗ ಕುಂತಿಯು ಭಯ-ಭಕ್ತಿ ವಿನಯಾದಿಗಳಿಂದೊಡಗೂಡಿ ಮುನಿಪುಂಗವರ ಪಾದಕಮಲಗಳಿಗೆರಗಿ ಅವರನ್ನು ಆದರದಿಂದ ಸತ್ಕರಿಸಿ ಒಳಗೆ ಕರೆತಂದು ಅರ್ಘ್ಯಪಾದ್ಯಗಳಿಂದ ಪೂಜಿಸಿ, ಷಡ್ರಸಾನ್ನಗಳಿಂದ ತೃಪ್ತಿಗೊಳಿಸಿದನು. ಬಳಿಕ ಹಂಸತಲ್ಪದ ಸುಪ್ಪತ್ತಿಗೆಯ ಮೇಲೆ ಮಲಗಿಸಿದಳು. ಮತ್ತು ಅವರ ಮೇಲೆ ರೇಶಿಮೆಯ ಶಾಲನ್ನು ಹೊದಿಸಿ, ಅವರ ಪಾದಸೇವೆಯಲ್ಲಿ ನಿರತಳಾದಳು. ಅವರ ಮುಖದಿಂದ ಧರ್ಮಶಾಸ್ತ್ರದ ಮರ್ಮವನ್ನು ಅರಿತುಕೊಳ್ಳಬೇಕೆಂಬ ಹಂಬಲದಿಂದ ಅವರ ಬಳಿಯಲ್ಲಿಯೇ ನಿರಂತರ ಕಾಲ ಕಳೆಯಹತ್ತಿದಳು. ಹೀಗೆ ಸದ್ಗುರು ಸೇವೆಯಲ್ಲಿಯೇ ಕೆಲವು ದಿವಸಗಳು ಗತಿಸಿಹೋದವು. ಮುನಿವರನು ಅವಳ ಉರುತರದ ಪರಮ ಭಕ್ತಿಗೆ ಪ್ರಸನ್ನನಾಗಿ ಒಂದು ದಿವಸ ಕುಂತಿಯನ್ನು ಏಕಾಂತದಲ್ಲಿ ಕರೆದು

ನಿನಗೆ ಪುತ್ರಸಂತಾನಕ್ಕಾಗಿ ಪರಮ ಸಂತೋಷದಿಂದ ಶ್ರೇಷ್ಠ ವರಗಳನ್ನು ಕೊಡುವೆನು' ಎಂದು ಹೇಳಿ, ಅವಳಿಗೆ ಆರು ಮಂತ್ರಗಳನ್ನು ಉಪದೇಶಿಸಿ ಆಶೀರ್ವದಿಸಿ ತಾನು ಅಲ್ಲಿಂದ ಬಿಜಯಂಗೈದನು.

ಕೆಲವು ದಿವಸಗಳು ಗತಿಸಿದ ಮೇಲೆ ಒಂದು ದಿವಸ ಕುಂತಿಯು ನದಿಯ ಸ್ನಾನಕ್ಕೆಂದು ಹೋಗುವಾಗ್ಗೆ ಮಾರ್ಗದಲ್ಲಿ ಕೆಲವು ಹುಡಿಗೆಯರು ಗೊಂಬೆಗಳನ್ನು ಕೂಸುಗಳನ್ನಾಗಿ ಮಾಡಿಕೊಂಡು ಆಡುತ್ತಿರುವದನ್ನು ಕಂಡಳು. ಆಗ ಅವಳು ತನ್ನ ಮನದೊಳಗೆ "ನನಗೆ ಮುನಿಪುಂಗವರು ಮಕ್ಕಳ ಪಡೆಯಲೋಸುಗ ಸೂರ್ಯ, ಯಮ, ವಾಯು, ಇಂದ್ರ ಮತ್ತು ಅಶ್ವಿನೀಕುಮಾರರು ಈ ದೇವತೆಗಳ ಮಂತ್ರಗಳನ್ನು ದಯಪಾಲಿಸಿರುವರು. ಅವುಗಳನ್ನು ಪಠಿಸಿ ಮಗುವನ್ನು ಪಡೆಯಬೇಕು,'' ಎಂಬ ಆತುರ ಉಳ್ಳವಳಾದಳು. ಕೂಡಲೇ ನದಿಯಲ್ಲಿ ಸ್ನಾನಮಾಡಿ ಹಿಂದು ಮುಂದು ವಿಚಾರಿಸದೆ ಸೂರ್ಯಮಂತ್ರವನ್ನು ಪಠಿಸಿದಳು. ತತ್‌ಕ್ಷಣವೇ ಗಗನದಿಂದ ಸೂರ್ಯನಾರಾಯಣನು ನರರೂಪದಿಂದ ಬಂದು ಕನ್ಯೆಯಾದ ಕುಂತಿಯನ್ನು ಕರೆದು ಸಂತೋಷದಿಂದ ಆಕೆಯ ಕೋರಿಕೆಯನ್ನು ಈಡೇರಿಸಿದನು. ಆಗ ಕುಂತಿಯು ಭಯಗೊಂಡವಳಾಗಿ "ಇದೇನು ಸ್ವಾಮಿ; ಲಗ್ನವಾಗದಿರುವ ನನಗೆ ಗರ್ಭವಾಯಿತು ! ಹರಹರಾ ! ಇನ್ನೇನು ಗತಿ ?" ಎಂದು ವ್ಯಸನಕ್ಕೊಳಗಾದಳು. ಆಗ ಪ್ರಭಾಕರನು "ಕುಂತೀ, ನೀನು ಚಿಂತಿಸಬೇಡ. ಕರ್ಣ ಎಂದು ಕರೆ, ಕೂಡಲೇ ಅವನು ನಿನ್ನ ಕಿವಿಯೊಳಗಿಂದ ಬರುವನು. ನೀನು ನಿರ್ದೋಷಿಯಾಗಿ ಮೊದಲಿನಂತಿರುವಿ'' ಎಂದು ಹೇಳಿ ಗಗನಕ್ಕೆ ಹಾರಿದನು. ಬಳಿಕ ಕುಂತಿಯು ತನ್ನ ಗರ್ಭದಲ್ಲಿರುವ ಶಿಶುವನ್ನು ಕೂಗಿ ಅದನ್ನು ಕರ್ಣದಿಂದ ಕೆಳಗಿಳಿಸಿದಳು. ಮತ್ತು ಒಂದು ವಟವೃಕ್ಷದ ದೊನ್ನಿಯಲ್ಲಿ ಪಿಂಡವನ್ನಿರಿಸಿ ಹೊಳೆಯಲ್ಲಿ ಸೆಳವುನೋಡಿ ತೇಲಿಸಿದಳು. ಆಗ ಮನಸ್ಸಿಗೆ ಸಮಾಧಾನವಾಗಲು ಪುನಃ ಸ್ನಾನಮಾಡಿ ಮಡಿಯನ್ನುಟ್ಟು ಮುನಿವರರನ್ನು ನೆನೆಯುತ್ತ ಮನೆಗೆ ಬಂದಳು.

ಹೀಗೆ ಕೆಲವು ದಿವಸಗಳು ಗತಿಸಲು, ಆ ಕುಂತಿ ಎಂಬ ಕನ್ಯಾರತ್ನ ರೂಪಕ್ಕೆ ಪಾಂಡು ನೃಪಾಲನು ಮನಸೋತು ತನ್ನ ಸುಕೃತ ಬಲದಿಂದ ಅವಳನ್ನು ಮದುವೆಯಾದನು. ಬಳಿಕ ತಾನು ಅಲ್ಲಿಂದ ಕುಂತಿಸಮೇತನಾಗಿ ಹಸ್ತಿನಾಪಟ್ಟಣಕ್ಕೆ ಬಂದನು. ಅಲ್ಲಿ ಸುಖವಾಗಿ ಕಾಲಕಳೆಯುತ್ತಿರಲು

ಕರ್ಮ-ಧರ್ಮ ಸಂಯೋಗದಿಂದ ಪಾಂಡುರಾಜನು ಬೇಟೆಯಾಡಲೋಸುಗ ಒಂದು ದಿವಸ ಅರಣ್ಯಕ್ಕೆ ಹೋದನು. ಆ ಸಮಯದಲ್ಲಿ ಅಲ್ಲೊಂದು ಚಮತ್ಕಾರ ಜರುಗಿತು. ಅದೇನಂದರೆ ಮುನಿದಂಪತಿಗಳೀರ್ವರು ಮೃಗರೂಪವ ಧರಿಸಿ, ಮೈಥುನಾನಂದದಲ್ಲಿ ತಲ್ಲೀನರಾಗಿದ್ದರು. ರಾಜನು ಅದನ್ನು ಕಂಡು ಬಾಣದಿಂದ ಹೊಡೆದನು. ಕೂಡಲೇ ಆ ಮುನಿಯು ಚೀರುತ್ತ ನರರೂಪವನ್ನು ತಾಳಿ ಪಾಂಡುನೃಪನಿಗೆ ''ನನ್ನ ಹಾಗೆ ನಿನಗೂ ನಿನ್ನ ನಿಜ ಸತಿಯ ರತಿಕ್ರೀಡೆ ಕಾಲದಲ್ಲಿ ಮರಣವಾಗಲಿ'' ಎಂದು ಶಪಿಸಿ ಸ್ವರ್ಗಕ್ಕೆ ತೆರಳಿದನು.

ಬಳಿಕೆ ಧರಣಿಪಾಲನು ಅಲ್ಲಿಂದ ಬೇಗನೆ ಹಸ್ತಿನಾಪಟ್ಟಣಕ್ಕೆ ಬಂದು ಒಡನೆ ಅಡವಿಯೊಳಗೆ ತನಗಾದ ಶಾಪವನ್ನು ಭೀಷ್ಮರಿಗೆ ಅರುಹಿದನು. ಮತ್ತು 'ನಿಮ್ಮ ಒಡೆತನವನ್ನು ನೀವು ತಕ್ಕೊಳ್ಳಿರಿ. ಶಾಪ ವಿಮೋಚನೆಗಾಗಿ ಈಗ ನಾನು ಮುನಿಗಳ ಸೇವೆಗೋಸುಗ ಕಾಡಿಗೆ ಹೋಗುವೆನು' ಎಂದು ಹೇಳಿ ತನ್ನ ಪತ್ನಿಯರನ್ನೊಳಗೊಂಡು ಅರಮನೆಯನ್ನು ತ್ಯಜಿಸಿ ಅಡವಿಗೆ ಹೋದನು. ಋಷಿಗಳು ವಾಸಮಾಡಿರುವ ಸ್ಥಾನದಲ್ಲಿ ತಾನೂ ವಾಸಮಾಡಿದನು. ಪತಿ ಸೇವೆಯಲ್ಲಿ ನಿರತಳಾದ ಕುಂತೀದೇವಿಯು ಒಂದು ಸಮಯ ಸಾಧಿಸಿ ತನ್ನಲ್ಲಿರುವ ಮಂತ್ರದ ಘನತೆಯಿಂದ ತನ್ನ ನಿಜಪತಿಗೆ ಅರುಹಿದಳು ನೃಪಾಲನು ಅದಕ್ಕೆ ಸಮ್ಮತಿಸಿ ''ಪತ್ನಿಯರಾದ ನೀವಿಬ್ಬರೂ ಆ ಮಂತ್ರಗಳ ಫಲವನ್ನು ಪಡೆಯಿರಿ'' ಎಂದು ಮುದದಿಂದ ಪೇಳಿದನು. ಅವರೀರ್ವರು ಅದಕ್ಕೆ ಸಮ್ಮತಿಸಿ ಮಂತ್ರವನ್ನು ಉಚ್ಚರಿಸಿದರು. ಕುಂತಾದೇವಿಯ ಉದರದಿಂದ ಧರ್ಮ, ಭೀಮ, ಅರ್ಜುನ ಮತ್ತು ಮಾದ್ರಾದೇವಿಯ ಗರ್ಭದಿಂದ ನಕುಲ, ಸಹದೇವರು ಹೀಗೆ ಐವರು ಜನಿಸಿದರು.

ಪಾಂಡುರಾಜನು ಕಾಮಾಂಧನಾಗಿ ತನ್ನ ಪ್ರೀತಿಯ ಚಿಕ್ಕ ಹೆಂಡತಿಯಾದ ಮಾದ್ರಾದೇವಿಯ ರತಿಸುಖದ ಸಮಕ್ಕೆ, ಒದಗಿದ ಮುನಿ ಶಾಪದಿಂದ ಸ್ವರ್ಗಸ್ಥನಾದನು. ಆಗ ಅವರೆಲ್ಲರೂ ಉಪಾಯಗಾಣದೆ ಹಸ್ತಿನಾಪುರಕ್ಕೆ ಬಂದು ಸೇರಿದರು.

'ಭಕ್ತಳೇ, ಮತ್ತೂ ಕೇಳು. ಇತ್ತ ಪಾಂಚಾಲ ದೇಶಕ್ಕೆ ಅಧಿಪತಿಯಾದ ದ್ರುಪದರಾಜನು ಅಹಿಂಸೆ, ಪರೋಪಕಾರ, ಸತ್ಯ, ಶಾಂತಿ, ದಾಂತಿ, ದಯೆ, ದಾಕ್ಷಿಣ್ಯ, ವಿವೇಕ, ವಿರಕ್ತಿ, ಪುಣ್ಯ ಶ್ರವಣಾದಿ ಸಾಧನ ಸದ್ಗುಣಗಳಿಂದೊಡಗೂಡಿ ರಾಜ್ಯ ಪರಿಪಾಲಿಸುತ್ತಿದ್ದನು. ಆದರೆ ಅವನಿಗೆ ಸಂತಾನ ಮಾತ್ರವಿರಲಿಲ್ಲ. ಅದುಕಾರಣ ಪುತ್ರಕಾಮೇಷ್ಠಿ ಯಜ್ಞವನ್ನು ನೆರವೇರಿಸ ಲೋಸುಗ ಒಳ್ಳೇ ಸಂಭ್ರಮದಿಂದ ತಾನೂ ಹೋತೃಕರಿಂದ (ಯಜ್ಞದಲ್ಲಿ ಭಾಗ ವಹಿಸಿ ಮಂತ್ರ ಅನ್ನುವವರ ಕಡಿಯಿಂದ) ಯಮ, ವಾಯು, ಇಂದ್ರ ಮತ್ತು ಅಶ್ವಿನಿಯು ಈರ್ವರು ಪುತ್ರರು, ಅವರವರ ಪತ್ನಿಸಮೇತರಾಗಿ ಶೋಭಾಯಮಾನರಾಗಿರುವ ಪಂಚ ಮೂರ್ತಿಗಳನ್ನು ಸ್ಥಾಪಿಸಿ ಯಜ್ಞವನ್ನು ಸುಮುಹೂರ್ತದಲ್ಲಿ ಸಾಂಗಗೊಳಿಸಿದನು. ರಾಜನ ಭಕ್ತಿಗೆ ಯಜ್ಞೇಶ್ವರನು ಒಲಿದು ಅಲ್ಲಿಯೇ ಪ್ರಕಟನಾಗಿ ನೃಪಾಲನೇ, ನಿನ್ನಿಷ್ಟವೇನಿರುವದು ?' ಹೇಳೆಂದನು. ದ್ರುಪದರಾಜನು ಆ ಸಮಯಕ್ಕೆ ಆನಂದಾಶ್ಚರ್ಯಗಳೆರಡನ್ನೂ ಏಕಕಾಲಕ್ಕೆ ಅನುಭವಿಸಿ, "ಹೇ ಭಕ್ತವತ್ಸಲಾ, ಕರುಣಾನಿಧಿಯೇ, ನನಗೆ ಓರ್ವ ಪುತ್ರನನ್ನೂ ಮತ್ತು ಐವರು ಪುತ್ರಿಯರನ್ನೂ ದಯಪಾಲಿಸಬೇಕು'' ಎಂದು ಕೈಜೋಡಿಸಿ ಬೇಡಿಕೊಂಡನು.

ಆಗ ಯಜ್ಞೇಶ್ವರನು 'ದ್ರುಪದನೇ ನೀನು ಮುದದಿಂದ ಸ್ಥಾಪಿಸಿರುವ ಪಂಚ ಮೂರ್ತಿಗಳಾದ ಅವರ ಸತಿಯರೈವರ ಶಕ್ತಿಯುಕ್ತಳಾದ ಓರ್ವ ಸುಪುತ್ರಿಯು ಮತ್ತು ನಿನ್ನ ವಂಶೋದ್ಧಾರಕ್ಕಾಗಿ ಕೀರ್ತಿವಂತನಾದ ಒಬ್ಬ ಸುಪುತ್ರನು ನಿಮ್ಮೀರ್ವರ ಉದರದಿಂದ ಜನಿಸುವರು' ಎಂದು ಆಶೀರ್ವದಿಸಿ ಅದೃಶ್ಯನಾದನು.

ಬಳಿಕ ದ್ರುಪದ ರಾಣಿಯು ಗರ್ಭಧರಿಸಿ ಗಂಡು ಮಗುವನ್ನು ಹೆತ್ತಳು. ಮತ್ತೆ ಎರಡನೇ ಗರ್ಭವಾಗಲು ಹೆಣ್ಣು ಶಿಶುವಿಗೆ ಜನ್ಮವಿತ್ತಳು. ಶಿಶುಗಳಿಗೆ ಮುದದಿಂದ ದ್ರುಷ್ಟದ್ಯುಮ್ನ, ದ್ರೌಪದಿ ಹೀಗೆ ನಾಮಕರಣ ಮಾಡಿದರು. ಅವರಿಬ್ಬರನ್ನು ವೈಭವದಿಂದ ಲಾಲನೆ–ಪಾಲನೆಗೊಳಿಸುತ್ತ ಬೆಳೆಸಿದರು. ಅವರೀರ್ವರು ಬಿದಿಗಿಯ ಚಂದ್ರನಂತೆ ಬೆಳೆದರು. ದ್ರೌಪದಿಯು ಯೌವನಾವಸ್ಥೆಗೆ ಬರಲು ದ್ರುಪದರಾಜನು ಸ್ವಯಂವರ ಮಂಟಪವನ್ನು ರಚಿಸಿ, ಸಕಲ

ನೇಶಾಧಿಪತಿಗಳಿಗೆ ಆಮಂತ್ರಿಸಿದನು. ಅದೇ ಸಮಯಕ್ಕೆ ಪಂಚ ಪಾಂಡವರು ವಂಚಿಸಿ ಬ್ರಾಹ್ಮಣರ ವೇಷದಿಂದ ಆ ಮಂಗಲ ಕಾರ್ಯವನ್ನು ನೋಡಲೋಸುಗ ಅಲ್ಲಿಗೆ ಆಗಮಿಸಿದ್ದರು.

ದ್ರುಪದರಾಜನು ಸ್ವಯಂವರದಲ್ಲಿ ಪಣಕ್ಕಿಟ್ಟ ಧನುಷ್ಯನ್ನು ಎತ್ತಿ ಹೊಡೆಯುವ ಸಾಮರ್ಥ್ಯವು ಯಾರಿಗೂ ಇಲ್ಲದಿರಲು ಎಲ್ಲರೂ ತಟಸ್ಥವಾಗಿ ಸುಮ್ಮನೆ ಕುಳಿತರು. ಆಗ ಕಲಿಪಾರ್ಥನು (ಅರ್ಜುನನು) ಸಭೆಯ ಮಧ್ಯದಲ್ಲಿದ್ದು ಬಂದು ಧನುಷ್ಯನ್ನು ಠೇಂಕರಿಸಿ ಬಾಣವನ್ನು ಹೂಡಿ ಕೆಳಗೆ ಕೊಪ್ಪರಿಗೆಯಲ್ಲಿ-ರುವ ತೈಲದಲ್ಲಿ ತೋರುವ ಮತ್ಸ್ಯದ ಕಣ್ಣನ್ನು ಈಕ್ಷಿಸುತ್ತ ಮೇಲೆ ತಿರುಗು-ತ್ತಿರುವ ಚಕ್ರಕ್ಕೆ ಅಂಟಿಸಿದ ಮೀನದ ನೇತ್ರಕ್ಕೆ ಗುರಿಯಿಟ್ಟು ಹೊಡೆದನು. ನೋಡಿದವರೆಲ್ಲರೂ ಬೆರಳು ಕಚ್ಚಿದರು. ದ್ರುಪರಾಜನು ಹರುಷಯುಕ್ತನಾಗಿ ಪರಾಕ್ರಮಿಗಳಾದ ಪಾಂಡವರೈವರಿಗೆ ತನ್ನ ಕುವರಿಯಾದ ಕನ್ಯಾರತ್ನ ದ್ರೌಪದಿಯನ್ನು ಶಾಸ್ತ್ರ ವಿಧಿವತ್ ಆನಂದಪೂರಿತನಾಗಿ ಲಗ್ನಮಾಡಿಕೊಟ್ಟನು. ಬಳಿಕ ಪಾಂಡವರು ದ್ರೌಪದಿ ಸಮೇತರಾಗಿ ತಮ್ಮ ಸ್ಥಾನಕ್ಕೆ ಬಂದರು. ನಂತರ ಪತಿವ್ರತೆಯಳಾದ ದ್ರೌಪದಿಯು, ಧರ್ಮನ ಸೇವೆಗೈಯುವಲ್ಲಿ ಶಾಮಲೆಯಾಗಿಯೂ, ಭೀಮನಿಗೆ ಸಲ್ಲಿಸುವ ಸೇವೆಯಲ್ಲಿ ಅಂಜನೆಯಳಾಗಿಯೂ, ಅರ್ಜುನನಲ್ಲಿ ವರ್ತಿಸುವಾಗ ಶಚಿಯಾಗಿಯೂ ಮತ್ತು ನಕುಲ–ಸಹದೇವರಲ್ಲಿ (ಅಶ್ವಿನಿ ಕುಮಾರರ ಪತ್ನಿಯರಾದ) ನಳಿನ, ನೇತ್ರಿಯರಂತೆ ಅವರವರ ಆಜ್ಞಾನುಸಾರ ಅವರೆಲ್ಲರಿಗೂ ಸರಿಯಾಗಿ ಸೇವೆ ಸಲ್ಲಿಸುತ್ತಿದ್ದಳು. ಇಂಥ ದ್ರೌಪದಿಯ ಪತಿವ್ರತವು ಅದೆಂತು ಕೆಡುತಿಹುದು ? ಜಾಣೆಯಾದ ನೀನು ಇದನ್ನು ಚೆನ್ನಾಗಿ ಅರಿತುಕೊಳ್ಳು.

ಇಂಥ ಪರಮ ಪವಿತ್ರಳಾದ ದ್ರೌಪದಿಯ ಸುರಸಕಥೆಯನ್ನು ಯಾರು ಕೇಳುವರೋ "ಅವರ ಪಾಪವು ಪರಿಹಾರವಾಗುವವು" ಎಂದು ಆ ಸಾಧ್ವಿಗೆ ಬೋಧಿಸಿದನು.

ಪರಮ ಸದ್ಗುರುವಿನ ಮುಖದಿಂದ ಆ ಸಾಧ್ವಿಯು ದ್ರೌಪದಿಯ ಕಥೆಯನ್ನು ಶ್ರದ್ಧೆಯಿಂದ ಶ್ರವಣ ಮಾಡಿಕೊಂಡು ಸಂತೋಷ ಹೊಂದಿದಳು. ಸದಮ ಸದ್ಗುರುವೇ, ತಮ್ಮಿಂದ ನಾನು ಧನ್ಯಳಾದೆನು ! ಆದರೆ ತಾವು

ಮುದದಿಂದ ಪೇಳಿದ ಸೋಮುವಾರ ವೃತದಲ್ಲಿ ಎನ್ನ ಮನಸ್ಸು ಸ್ಥಿರವಾಗಿ ನಿಲ್ಲುವಂತೆ ಆಶೀರ್ವದಿಸಬೇಕು'' ಎಂದು ಬಿನ್ನೈಸಿಕೊಂಡರು ಸದ್ಗುರುವರನು ನೀನು ಧನ್ಯಳಾಗು ಎಂದು ಹರಿಸಿದನು. ಬಳಿಕ ಹರುಷದಿಂದ ಅವಳು ಸಾಷ್ಟಾಂಗ ಹಾಕಿ ಮನೆಗೆ ಹೋದಳು.

ಇತ್ತ ಸಿದ್ಧನು ಅದೇ ಕೃಷ್ಣಾನದಿಯ ದಡದಲ್ಲಿ ಕೆಲವು ವರುಷ ಕುರುಬರ ಸಂಗದಲ್ಲಿದ್ದು ಕುರಿಗಳನ್ನು ಕಾಯುತ್ತ, ಹಾಲು ಕುಡಿಯುತ್ತ, ಆವು ಸಿಗದಿದ್ದರೆ ತಿಳಿ ಮಣ್ಣಿನ ರ್‍ಯಾವಿಯನ್ನು ತಿನ್ನುತ್ತ ಕಾಲ ಕಳೆದನು.

## ಪದ— ೬೮-೬೫ ದೇವರು ಮಹಾತ್ಮರ ಆಶೀರ್ವಾದದಿಂದ ಸಂತೃಪ್ತನಾಗುವನು

ಮುಂದೆ ಅವನು ಮಂಗಳ ಗಿರಿಗೆ ಬಂದನು. ಅಲ್ಲಿರುವ ದೇವಾಲಯ ದೊಳಗೆ ಪ್ರವೇಶ ಮಾಡಿ, ಪೂಜಾರಿಗೆ ಪ್ರಸಾದ ಕೊಡು ಎಂದು ಕೇಳಿದನು. ಕೂಡಲೆ ಅರ್ಚಕನು ಸಿದ್ಧನಿಗೆ ಪಾನಕವನ್ನು ಕೊಟ್ಟನು. ಅದನ್ನು ಕುಡಿದು ಸಿದ್ಧನು ಸಾವಧಾನದಿಂದ ಅಭಯ ಹಸ್ತವನ್ನೆತ್ತಿ, ''ದೇವನೆ ನಿನಗೆ ಯಾವ ಕೊರತೆ ಬಾರದೆ ಸದಾ ಜಯನಾಗಲಿ!" ಎಂದು ಆಶೀರ್ವಾದ ಮಾಡಿ ದನು. ಅದನ್ನು ಪೂಜಾರಿಯು ಕಂಡು "ಚದುರನೇ, ನೀನು ಹೀಗೆ ದೇವರಿಗೆ ಆಶೀರ್ವಾದ ಮಾಡುವದು ಯೋಗ್ಯವೇನಯ್ಯಾ?'' ಎಂದನು. ಅದಕ್ಕೆ ಸಿದ್ಧನು ''ವಿಪ್ರನೇ, ಕೇಳು ಸ್ವಗತಾದಿ ಭೇದರಹಿತ ಅಖಂಡ ಅದ್ವೈತ ಬ್ರಹ್ಮನು, ಸಗುಣರೂಪದಿಂದ ಸಾವಯುವನೆನಿಸಿಕೊಂಡು ಜಗದುತ್ಪತ್ತಿ, ಸ್ಥಿತಿ ಲಯಾದಿಗಳನ್ನು ಮಾಡುವನು. ಜಗತ್ತಿಗೆ ಆಧಾರಭೂತ ಪರಬ್ರಹ್ಮನನ್ನು ಯಾರು ಸಾಕ್ಷಾತ್ಕಾರ ಮಾಡಿಕೊಂಡು ಬ್ರಹ್ಮನೇ ತಾನೆಂಬ ದೃಢ ನಿಶ್ಚಯ ವುಳ್ಳವರಾಗಿರುವರೋ, ಅಂಥ ಮಹಾತ್ಮರ ಚರಣ ಸ್ಪರ್ಶವನ್ನು ಗಂಗೆಯು ಇಚ್ಛಿಸುವಂತೆ ಮುಖ್ಯಾಮುಖ್ಯರಾದ ಎಲ್ಲ ದೇವತೆಗಳೂ ಬ್ರಹ್ಮವಿದ್ವರೇಣ್ಯರ ಆಶೀರ್ವಾದವನ್ನು ಅಪೇಕ್ಷಿಸುವದು ಯೋಗ್ಯವೇ ಇರುವದು'' ಎಂದನು. ಅರ್ಚಕನು ಪ್ರೇಮದಿಂದ ಅದನೊಪ್ಪಿ ನಮಿಸಿದನು.

ಮಂಗಲ— ಐದು ತಲೆಯುವ ಪತ್ತು ತಲೆಯುವ
ನಾದಸುರಗಂ ಸತಿಯನೀಯಲ್ ।

ಸಾಧಿಸುತವಳನೊಂದು ತಲೆಯವನುಳಿಸಲವನಿವನಂ ||
ಮೋದದಿಂ ತಬ್ಬಲ್ಕೆ ಬಾಲಕ |
ನಾದವನು ನಿಜಮಾತೆಗೆನ್ನೋ |
ಲಾದಿವನನೆಂದು ಪಡೆದಿಹೆ ಯೆಂದನ ಪಿತಗೆ ನಮಿಪೆಂ ||

ಇತಿ ಶ್ರೀ ಸಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರಲೀಲಾ
ಚರಿತ್ರಕಲ್ಪದ್ರುಮದೊಳು ಪತಿವ್ರತಾ ಮಹಿಮೆ ಬೋಧವೆಂಬ
೨೪ ನೇ ಅಧ್ಯಾಯ ಸಮಾಪ್ತಿ

---

|| ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ||



# ಸಂಚಾರ ಸಂಭ್ರಮ ಕಾಂಡ

## ಅಧ್ಯಾಯ ೨೫

ಈ ಅಧ್ಯಾಯದಲ್ಲಿ ಮಂಗಳ ಗಿರಿಯಲ್ಲಿ ಕ್ಷುದ್ರ ಸಿದ್ಧಿಗಳನ್ನು ಸಾಧಿಸುವ ಒಬ್ಬ ಬ್ರಾಹ್ಮಣನಿಗೆ ಅದನ್ನು ಬಿಡಿಸಿ ಅವನಿಗೆ ವಿಧಿವತ್ ನಾಲ್ಕು ವರ್ಣಾ–ಶ್ರಮಗಳ ಧರ್ಮಗಳನ್ನು ಹೇಳಿ ಆಶೀರ್ವದಿಸಿ ಕಳಿಸಿದ್ದು ಮತ್ತು ನಾನಾದೇಶ

ಕೋಶಗಳನ್ನು ತಿರುಗುತ್ತ ಆದವಾನೆಯಲ್ಲಿರುವ ಬಾಳೇಕೊಳ್ಳಕ್ಕೆ ಬಂದು ಅಲ್ಲಿ ಇಳಿದಿರುವ ಸಾಧುಗಳಿಗೆ ದೇಹದ ಭ್ರಾಂತಿ ಅಳಿಯುವದಕ್ಕೆ ಸಾಧನ-ಮಾದ ಭೂತ ಪಂಚೀಕರಣವನ್ನು ತಿಳಿಸಿ ಬಳಿಕ ಆತ್ಮವನ್ನು ಸಿದ್ಧಮಾಡಿ ಅನುಭವಕ್ಕೆ ತಂದು ಕೊಟ್ಟದ್ದು ಮತ್ತು ಒಬ್ಬ ಕುಷ್ಟರೋಗಿಯ ರೋಗವನ್ನು ಪರಿಹರಿಸಿ ವಿಜಾಪುರಕ್ಕೆ ತೆರಳಿದ ವಿಷಯವಿರುವದು.

ಸ್ತುತಿ ಪದ—ಹರನೆ ನಾನಿಷ್ಟಾರ್ಥವಂ ಕೊಡು ।
ತಿರುವೆನೆಂಬುವ ನಿನ್ನ ಬಿರುದದು ।
ನರಸುರಾಸುರರಿಂಗೆಯಲ್ಲದೆ ಜ್ಞಾನಿಗಳಿಗದನು ॥

ಒರೆಯಲವರುಜೆ ಜ್ಞಾನ ಶಿಖಿಯಿಂ ।
ದುರಿದು ಭಸ್ಮವ ಮಾಳ್ಪರದರಿಂ ।
ತೊರೆದು ಬಿಡು ನೀನವರ ಗೊಡವೆಯನೆಂದು ನತನಪ್ಪೆ ॥

## ಪದ— ೧-೪೭ ಕ್ಷುದ್ರ ಸಿದ್ಧಿಗಳನ್ನು ನಿರಾಕರಿಸಿ ನಾಲ್ಕು ವರ್ಣಾಶ್ರಮ ಧರ್ಮಗಳನ್ನು ವಿಧಿವತ್ ತಿಳಿಸಿದ್ದು.

ಬಳಿಕ ಸಿದ್ಧಭಾರತಿಯು ಮಂಗಳಗಿರಿಯಿಂದ ಕೆಳಗಿಳಿದು ಬರುವಾಗ್ಗೆ ಮಾರ್ಗದಲ್ಲಿ ಹಳೆಯದೊಂದು ಗವಿಯನ್ನು ಕಂಡನು. ಕೂಡಲೆ ಅದರಲ್ಲಿ ಪ್ರವೇಶ ಮಾಡಲು, ಅಲ್ಲಿ ಓರ್ವ ಬ್ರಾಹ್ಮಣನಿದ್ದನು. ಅವನು ಕುಕ್ಕುಟ, ನಾಥಕಲ್ಪ, ಸರ್ವತಕಲ್ಪ (ವೇದಾಂಗ) ಇವುಗಳಲ್ಲಿರುವಂಥಾ, ಮೂಲಿಕಾದಿಗಳ ರಸಗಳಿಂದ ಸ್ಥಂಬನ, ವಶೀಕರಣ, ಪಾದುಕೆ ಮತ್ತು ಅಂಜನಾ ಘುಟಿಕಾದಿ ಸಿದ್ಧಿಗಳನ್ನು, ಇಹಲೋಕ ಸುಖಕ್ಕಾಗಿ ಅತಿ ಶ್ರದ್ಧೆಯಿಂದ ಹಸನ್ಮುಖನಾಗಿ ಪಠಣ ಮಾಡುತ್ತಿದ್ದನು. ಅದನ್ನು ಸಿದ್ಧಯತಿಯು ಕಂಡು ಆ ವಿಪ್ರನಿಗೆ ಪ್ರೀತಿಯಿಂದ ನೀತಿಯನ್ನು ಪೇಳಲಾರಂಭಿಸಿದನು.

"ಎಲೈ ವಿಪ್ರನೇ, ನೀನು ನಡೆಸಿರುವದು ಯಾವ ಕಾರ್ಯವು? ನೀನಾರು? ನೀನು ಸಾಧಿಸಿರುವ ಉದ್ದೇಶವೆಂಥಾದ್ದು? ವಿಚಾರಿಸು. ನೀನು ಕೇವಲ ಬ್ರಾಹ್ಮಣನಿದ್ದು, ಅತಿ ಹೇಯವಾದ ಕ್ಷುದ್ರ ಶಾಸ್ತ್ರಗಳನ್ನು, ಅತಿ

ಭಕ್ತಿಯುಕ್ತನಾಗಿ ಹರುಷದಿಂದ ಪಠಿಸಬಹುದೋ ? ಮನೆಯ ಮುಂದಿರುವ ಕಲ್ಪವೃಕ್ಷವನ್ನು ಛೇದಿಸಿ ಈಚಚ ಮರವನ್ನು ಬೆಳೆಸುತ್ತಿರುವ ಮೂರ್ಖನಂತೆ, ಸತ್ಕರ್ಮಗಳನ್ನು ತ್ಯಜಿಸಿ, ಇಂಥ ದುಷ್ಟವಾದ ಹೀನ ಕರ್ಮಕ್ಕೆ ಕೈ ಹಾಕಿ-ರುವಿ, ಇಂಥ ಅನೀತಿ ಮಾರ್ಗದಿಂದ ನಡೆಸುವವರಿಗೆ ಇಹದಲ್ಲಿ ನಿಂದೆಯು, ಪರದಲ್ಲಿ ಅತಿಶಯ ದುಃಖವುಃಗುವದೆಂಬ ನೀತಿಶಾಸ್ತ್ರ ವಚನವನ್ನು ನೀನು ಇನ್ನು ಕೇಳಿಲ್ಲವೇನಯ್ಯಾ ? ಪೊಡವಿಯಲ್ಲಿ ವೇದೋಕ್ತವಾಗಿರುವ ಶ್ರೌತ, ಸ್ಮಾರ್ತ ಮೊದಲಾದ ವಿಹಿತ ಕರ್ಮಗಳನ್ನು ಆಚರಿಸಿ, ಆ ಕರ್ಮದ ಪುಣ್ಯವೆಂಬ ರೊಕ್ಕವನ್ನು, ತನ್ನ ಲಿಂಗದೇಹವೆಂಬ ಜೇಬಿನಲ್ಲಿ ಹಾಕಿಕೊಂಡು, ಪರಲೋಕವೆಂಬ ಕಾಫಿ ಹೋಟಲ್ಲಿಗೆ ಹೋಗಿ, ಅಲ್ಲಿ ಉಡುಪಿ ಬ್ರಾಹ್ಮಣರಂತಿರುವ ಆ ದೇವತೆಗಳಿಗೆ ತನ್ನ ಪುಣ್ಯವೆಂಬ ರೊಕ್ಕವನ್ನು ಕೊಟ್ಟು, ಅಲ್ಲಿರುವ ಸೂಕ್ಷ್ಮ ಭೋಗಗಳೆಂಬ ತಿಂಡಿಯನ್ನು ತಿಂದು, ರೊಕ್ಕ ತೀರಿಸಿ ಮನೆಗೆ ಬಂದವನಂತೆ, ಕ್ಷೀಣೇ ಪುಣ್ಯೇ ಮೃತ್ಯುಲೋಕೆ ವಿಶಂತಿ'' ಪುಣ್ಯ ತೀರಿದ ಕೂಡಲೆ ಪುನಃ ಮೃತ್ಯುಲೋಕಕ್ಕೆ ಬರಬೇಕಾಗುವದು. ಸತ್ಕರ್ಮಗಳೇ, ಇಂಥ ಬಳಲಿಕೆಯನ್ನು ಕೊಡುತ್ತವೆಂದಮೇಲೆ, ಕ್ಷುದ್ರವಾಗಿರುವ ಇಂಥ ಶಾಸ್ತ್ರಗಳಿಂದ ನಿನಗೆಂಥ ಸುಖ ಸಿಕ್ಕೀತು ? ಪರಮ ಶಿಷ್ಯನಾದವನು, ತನ್ನ ಅಂತಃಕರಣದಲ್ಲಿರುವ ಮಲ, ವಿಕ್ಷೇಪ ದೋಷಗಳನ್ನು ಕಳೆದುಕೊಂಡು, ಶುದ್ಧಾಂತಕರಣವುಳ್ಳವನಾಗಿ, ಅಜ್ಞಾನವೆಂಬ ಆವರಣದ ಮುಸುಕನ್ನು ಕಿತ್ತೊಗೆದು, ''ತತ್ವಮಸಿ'' ಮಹಾವಾಕ್ಯವನ್ನು ಸದ್ಗುರುವಿನ ಮುಖದಿಂದ ಶ್ರವಣ ಮಾಡಬೇಕು. ಆಗ ಆ ಪರಮನೆ, ನೀನಿರುವಿ ಎಂದು ಶಿಷ್ಯನನ್ನು ತನ್ನ ನಿಜ ಸ್ವರೂಪದಲ್ಲಿ, ನೆಲೆಯಾಗಿ ಯಾವನು ನಿಲ್ಲಿಸುವನೋ, ಅವನೇ ಜಗತ್ತಿನಲ್ಲಿ ಶ್ರೋತ್ರಿಯ ಬ್ರಹ್ಮನಿಷ್ಠ ಸದ್ಗುರುವರನೆಂದು ಹೇಳಿಸಿಕೊಳ್ಳುವನು.

## ನಾಲ್ಕು ವರ್ಣಾಶ್ರಮಿಗಳ ಧರ್ಮ

ನಿರಂತರ ತನ್ನ ಸ್ವಾರ್ಥವನ್ನು ತೊರೆದು, ಅಂತಃಕರಣಶುದ್ಧಿಗಾಗಿ ಷೋಡಶ ಕರ್ಮಗಳನ್ನು ಮಾಡುತ್ತ, ಸದಾ ಸರ್ವರಲ್ಲಿ ಸಮತ್ವಭಾವದಿಂದಿದ್ದು ವಿಧಿವತ್ ಸಕಲ ಕರ್ಮಗಳನ್ನು, ನರ–ಸುರರ ಸುಖಕ್ಕಾಗಿ, ಯಾವನು ಆಚರಿಸುವನೋ ಅವನೇ ಬ್ರಾಹ್ಮಣನು. ಬಳಿಕ ನೀತಿ, ಧರ್ಮಶಾಸ್ತ್ರಗ-

ಳನ್ನರಿತು ದ್ವಿಜ, ಮುನಿ ಮತ್ತು ಗುರುಗಳು ಇವರೆಲ್ಲರು ದೇವರೆಂಬ ಸದ್ಭಾವನೆ ಯನ್ನಿಟ್ಟುಕೊಂಡು ತನ್ನ ಸಾಮರ್ಥ್ಯವನ್ನು ತೋರೆದು, ಧರ್ಮದಿಂದ ಪ್ರಜರೆಲ್ಲ ರನ್ನು ತನ್ನ ಮಕ್ಕಳೆಂದು ತಿಳಿದು, ಧರ್ಮಜನಂತೆ ಸಮದೃಷ್ಟಿಯಿಂದ ಸಲಹುತ್ತ ಪರಮ ಕೀರ್ತಿಯನ್ನು ಗಳಿಸುವವನೇ **ಕ್ಷತ್ರಿಯನು.**

ಇನ್ನು ಅರಸರ ಹಾಗೂ ಬ್ರಾಹ್ಮಣರ ಸೇವೆಗೈಯುತ್ತ ಯಜ್ಞಕ್ಕೂ, ಪ್ರಜೆ ಗಳಿಗೂ ಬೇಕಾಗುವ ಎಲ್ಲ ಸರಕುಗಳನ್ನು ಸಂಗ್ರಹಿಸಿ ಹೆಚ್ಚಿನ ಲಾಭಕ್ಕೆ ಆಶೆ ಪಡೆದ ಧರ್ಮದಿಂದ ಸಂಗ್ರಹಿಸಿದ ಧನವನ್ನು ಸತ್ಪಾತ್ರಕ್ಕೆ ವೆಚ್ಚ ಮಾಡವವನೇ **ವೈಶ್ಯನು.**

ಮೇಲಿನ ಮೂರು ವರ್ಣದವರಿಗೆ ಕಡು ಮುದದಿಂದ ಸೇವಕನಾಗುತ್ತ ರಾಷ್ಟ್ರದ ರಕ್ಷಣೆ ಮಾಡುತ್ತ, ವಿಪ್ರರ ಅನುಗ್ರಹದಿಂದ ಸರ್ವರಲ್ಲಿ ದೇವರೆಂಬ ಪೂಜ್ಯ ಭಾವನೆಯನ್ನಿಟ್ಟುಕೊಂಡು, ವಿನೀತನಾಗಿ ಸೇವೆಗೈಯ್ಯುವವನೇ **ಶೂದ್ರನು.**

ಬಾಲ್ಯದಲ್ಲಿ ಗುರುಕುಲ ವಾಸದಲ್ಲಿದ್ದು, ಭಕ್ತಿ ಭಾವದಿಂದ ಅವರ ಸೇವೆಗೈಯುತ್ತ, ಸ್ನಾನ, ಸಂಧ್ಯಾ, ವಂದನಾದಿ ಎಲ್ಲ ಕರ್ಮಗಳನ್ನು ಅರಿತು, ಕಾಲಕ್ಕನುಸರಿಸಿ ಆಚರಿಸುತ್ತ, ಸತತ ಗಾಯತ್ರಿ ಮಂತ್ರವನ್ನು ಉಚ್ಚರಿಸುತ್ತ, ಹರ್ಷದಿಂದ ಭಿಕ್ಷಾನ್ನವನ್ನು ಭುಂಜಿಸುತ್ತ ವೇದಾಧ್ಯಯನ ಮಾಡುವವನೇ **ಬ್ರಹ್ಮಚಾರಿಯು.**

ಬಳಿಕ ತಾನು ತಿಳಿದುಕೊಳ್ಳಬೇಕಾದ ವಿಷಯಗಳನ್ನು ಅರಿತುಕೊಂಡು ಮುದದಿಂದ ಗುರುಗಳಿಗೆ ದಕ್ಷಿಣೆಯನ್ನಿತ್ತು, ಗುರುವಿನ ಅನುಗ್ರಹ ಪಡೆದು ಸ್ವಗೃಹಕ್ಕೆ ಬಂದ ಪಿತೃಋಣ ತೀರಿಸುವದಕ್ಕಾಗಿ ಶ್ರುತಿಮತವಿಡಿದು, ಸದ್ಗುಣಗಳಿಂದೊಡಗೂಡಿದ ಸಲಕ್ಷಣವಾದ ಕುಲೀನ ಕನ್ಯೆಯನ್ನು ಶೋಧಿಸಿ, ವಿಧಿವತ್ ಲಗ್ನವಾಗಿ ವೇದ ಆಗಮಗಳಲ್ಲಿ ಹೇಳಿರುವ ಸೂಕ್ತ ಪ್ರಮಾಣ ವಾಕ್ಯಗಳನ್ನು ನಿರುತ ಸ್ಮರಿಸುತ್ತ, ನಿತ್ಯ ನೈಮಿತ್ಯಕಾದಿ ಸುಕರ್ಮ ಗಳನ್ನೆಸಗುತ್ತ, ಗುರುವಿನ ಮತ್ತು ಮಾತಾ–ಪಿತೃಗಳ ಸೇವೆಯನ್ನು ಮಾಡುತ್ತ, ಭಕ್ತಿಯಿಂದ ಬ್ರಹ್ಮರೂಪ ಯಜ್ಞ, ಮೃಡನ ಪೂಜೆ, ಅಗ್ನಿ ಹೋತ್ರಾದಿ ದೈವಿಕ ಕರ್ಮಗಳನ್ನು ಎಸಗುತ್ತ, ಒಂದಂಥ ಅತಿಥಿ ಅಭಾಗತ್ಯ

ರನ್ನು, ಆದರಸತ್ಕಾರಗಳಿಂದ ತೃಪ್ತಿಗೊಳಿಸುತ್ತ, ಮಾನುಷ್ಯ ಪೈತೃಕ, (ಪಿತೃಗಳ ಶ್ರಾದ್ಧ) ಭೌತಿಕ, ಇತ್ಯಾದಿ ಕರ್ಮಗಳಲ್ಲಿ ನಿರತನಾಗುತ್ತ, ಮುಟ್ಟಾದ ತನ್ನ ಸತಿಯಳನ್ನು ೫ ದಿವಸಗಳಿಂದ ೧೬ ದಿವಸಗಳವಳಗಾಗಿ ಸಂತಾನಕ್ಕೋಸ್ಕರ ಋತುಕಾಲವನ್ನು ಮೀರದೆ ವಿಷ್ಣುರ್ಯೋನಿಯಂತೆ ("ಸತಿಯ ಜನನೇಂದ್ರಿಯವೇ ಗೋಮುಖದ ವರ್ತುಲಾಕಾರವು, ಪತಿಯ ಪುಲ್ಲಿಂಗವೇ ನಾಳಪೀಠವು, ಇವೆರಡು ಕೂಡಿದ್ದೆ ಲಿಂಗವು") ಎಂಬ ಭಾವನೆ ಯಿಂದ ಸೂಕ್ತ ಮಂತ್ರವನ್ನು ಪಠಿಸುತ್ತ ಭೋಗವನ್ನು ಸುಖವನ್ನು ತೊರೆದು, ಗರ್ಭದಾನಕ್ಕಾಗಿ ಸತಿಯೊಡನೆ ಪ್ರೇಮದಿಂದ ರಮಿಸಿ (ಸುಖಿಸಿ) ಪುತ್ರನನ್ನು ಪಡೆದು, ಪಿತೃ ಋಣವನ್ನು ತೀರಿಸುತ್ತ ತಾನು ಏಕಪತ್ನಿವ್ರತಸ್ಥನಾಗಿ ತನ್ನ ನಿಜಧರ್ಮವನ್ನು ಬಿಡದಲೆ ನಡೆಸುತ್ತ ಗುರು, ಮಾತಾ–ಪಿತೃ ಮತ್ತು ಅರಸರಲ್ಲಿ ದಿಟ, ವಿನೋದಕರ ವಚನಗಳನ್ನಾಡುತ್ತ, ಪರಮ ಸಜ್ಜನರ ಸಂಗದಿಂದೊಡಗೂಡಿ, ಸರಳ ಸ್ವಭಾವದಿಂದ ಭೂತದಯ, ಶಾಂತಿ, ಕ್ಷಮೆ, ವರ ವಿವೇಕಾದಿ ಶೀಲಗಳಿಂದ, ಕಾಮಾದಿಗಳನ್ನು ಜಯಿಸಿ, ಸತ್ಕೀರ್ತಿ ಯನ್ನು ಪಡೆದು, ಕಡು ಧೈರ್ಯದಿಂದ ಹರಿಹರರೊಳು ಭೇದವನ್ನೆಣಿಸದೆ, ಸಕಲ ಸದ್ಗುಣಗಳಿಂದೊಡಗೂಡಿರುವ ಪುರುಷನೇ **ಗೃಹಸ್ಥನು** ಮತ್ತು ತನ್ನ ಪರಮ ಪತಿವ್ರತವನ್ನು ಕಾಪಾಡಿಕೊಂಡಿರುವವಳೇ **ಗೃಹಿಣಿಯು**.

ಇನ್ನು ಕೈಯಾಶೆ ಇಲ್ಲದೆ ದೇಶ ಹಿತ ಸಾಧಿಸುವಾತನೇ ಶ್ರೇಷ್ಠ ಮಂತ್ರಿಯು. ಸಂತೋಷದಿಂದ ತಂದೆ–ತಾಯ್ಗಳನ್ನು ಸಲಹುವವನೇ ಧರ್ಮ ವಂತನು. ದೇವರನು ಸತತ ಭಜಿಸುವವನೇ ಭಕ್ತನು. ಒಡಲಾಶೆ ದೊರೆದು ಕಡು ನಿರ್ಭಯದಿಂದ ಇರುವವನೇ ಬಲವಂತನು. ಬಡವರನ್ನು ಬಳಲಿಸದೆ, ಅವರ ಒಡವೆಗೆ ಆಶೆ ಮಾಡದೆ, ಧರ್ಮವನ್ನರಿತು ಸರ್ವರೊಡನೆ ಸರಳವಾಗಿ ವ್ಯವಹಾರ ಮಾಡುವವನೇ ಧನಿಕನು.

## ಮುನಿಗಳಾರು ?

ಬಳಿಕ ಗೃಹಕೃತ್ಯಗಳನ್ನು ಪೂರ್ಣಗೊಳಿಸಿ, ತಡಮಾಡದೆ ವಿರಕ್ತಿಯಿಂದ ಗೃಹದ ಎಲ್ಲ ಭಾರವನ್ನು ತನ್ನ ಪುತ್ರನಿಗೆ ಒಪ್ಪಿಸಿ ತನ್ನ ಪತ್ನಿಯ ಅನುಮತಿ ಪಡೆದು, ಸದನವನ್ನು ತೊರೆದು, ಸಂಗರಹಿತನಾಗಿ ತಾನು ತಪಸ್ಸಿಗೋಸುಗ ಶುಕ್ಲಪಕ್ಷ, ಶುಭನಕ್ಷತ್ರ, ಶುಭತಿಥಿ, ಶುಭಶಕುನಾದಿಗಳಲ್ಲಿ ಉತ್ತರ ದಿಕ್ಕಿಗಿರುವ

ಅಡವಿಗೆ ಹೋಗಿ ಸಂಸ್ಕಾರ ಪೂರ್ವಕ ವರ ಜಟ, ಯಜ್ಞೋಪವೀತ, ವೇಣು (ಬೆತ್ತ), ಕೃಷ್ಣಾಜಿನ ವಲ್ಕಲ (ನಾರಬಟ್ಟೆ), ರುದ್ರಾಕ್ಷಿ, ತ್ರಿಪುಂಡ್ರ ಧರಿಸಿ, ಪಯಃ (ನೀರಿರುವ) ಸ್ಥಾನದಲ್ಲಿ ಇದ್ದುಕೊಂಡು ಮೂರು ಹೊತ್ತು ಸ್ನಾನ ಶಿವಾರ್ಚನೆ, ಮಂತ್ರ, ಜಪ, ಶಾಂಭವಿ ವ್ರತವನ್ನು ಮಾಡುತ್ತ, ಕೃಚ್ಛ್ರ ಚಾಂದ್ರಾಯಣಾದಿ ಉಪಾಸನಗಳನ್ನು ಆಚರಿಸುತ್ತ, ಫಲ, ಕಂದ ಮೂಲಾದಿಗಳನ್ನು ಹುಡುಕಿ ತಂದು, ಅವುಗಳನ್ನೇ ಸೇವಿಸುತ್ತ, ಬೆಳೆದ ಗಡ್ಡ, ಮೀಸೆ, ಜಡೆ ಮತ್ತು ಉಗುರುಗಳನ್ನು ಕತ್ತರಿಸದೆ, ಗ್ರಾಮ ಪಟ್ಟಣಗಳಿಗೆ ಹೋಗದೆ, ಯಾರನ್ನೂ ಏನನ್ನೂ ಬೇಡದೆ, ತಾವಾಗಿ ತಿಳಿದು ಕೊಟ್ಟರೂ, ಅದನ್ನು ತಕ್ಕೊಳ್ಳದೆ, ಛಳಿ, ಮಳೆ, ಗಾಳಿ, ಬಿಸಿಲು ಮೊದಲಾದವುಗಳಿಂದೊದಗುವ ತೊಂದರೆ, ಕಷ್ಟ ನಷ್ಟಗಳನ್ನು ಸಹಿಸುತ್ತ, ತಾನು ಪಂಚಾಗ್ನಿ ಮಧ್ಯದೊಳು ಕುಳಿತು, ಶಿವನಲ್ಲಿ ಮನಸ್ಸಿಟ್ಟು, ದೇಹವನ್ನು ಕ್ಷೀಣಿಸುತ್ತ, ವಿಧಿವತ್ ತಪಸ್ಸನ್ನು ಮಾಡುವವರೆ **ಮುನಿಗಳು.** ಇಂಥ ಮುನಿಗಳಲ್ಲಿ ಔದುಂಬರ, ಪಾರ್ಣಮ, ವೈಯಿಸಂಪ್ರಾಸಕ, ಪ್ರಕ್ಷಾಳಿಕ, ಹೀಗೆ ನಾಲ್ಕು ಪ್ರಕಾರದ ಸನ್ಯಾಸಿಗಳುಂಟು.

ಬಳಿಕ ಗೃಹಸ್ಥ, ವಾನಪ್ರಸ್ಥ, ಬ್ರಹ್ಮಚಾರಿ, ಸನ್ಯಾಸಿ ಯಾರೇ ಆಗಲಿ ದೃಢತರವಾದ ವಿರತಿಯನ್ನು ಬೆಳೆಸಿಕೊಂಡು, ಅತ್ಯಾಶ್ರಮವನ್ನು ಕೈಕೊಳ್ಳಬೇಕು. ಈಗ ನಾಲ್ಕು ಪ್ರಕಾರದ ಸನ್ಯಾಸಿಗಳ ಇರವನ್ನು ವಿವರಿಸುವೆನು ಕೇಳು. ಶಿಖಾ, ಯಜ್ಞೋಪವಿತ, ಕಾಷಾಯ, ಕಮಂಡಲ, ತ್ರಿಪುಂಡ್ರ ಪಾದುಕೆ ಇವುಗಳಿಂದ ಭೂಷಿತನಾಗಿ, ಗಾಯಿತ್ರಿ ಇಲ್ಲವೇ ಪಂಚಾಕ್ಷರಿ ಮಂತ್ರವನ್ನು ಜಪಿಸುತ್ತ, ಭಕ್ತಿಯಿಂದ ಪೂಜೆಮಾಡುತ್ತ, ಭಿಕ್ಷಾನ್ನದಿಂದ ಜೀವಿಸಿಕೊಂಡಿರುವ ಯೋಗಿಯು **ಕುಟೀಚಕಯತಿ** ಎಂದು ಹೇಳಿಸಿಕೊಳ್ಳುವನು. ಯಾವನು ಮಣ್ಣಿನ ಪಾತ್ರೆಯನ್ನು ಕರದಲ್ಲಿ ಪಿಡಿದು, ಕೈಪ, ಕಪನಿ, ಪಾದರಾಕ್ಷಿ, ಕೃಷ್ಣಾಜಿನ, ಯೋಗದಂಡ, ರುದ್ರಾಕ್ಷಿ ಇವುಗಳಿಂದ ಭೂಷಿತನಾಗಿ, ಪ್ರಣವ ಇಲ್ಲವೆ ಸಾವಿತ್ರಿ ಜಪವನ್ನು ಜಪಿಸುತ್ತ, ಹರನ ಪೂಜಾ ಹೋಮಾದಿಗಳನ್ನು ಮಾಡುತ್ತ ಒಂದೇ ಮನೆಯ ಅನ್ನವನ್ನು ತಕ್ಕೊಳ್ಳದೆ ಪುತ್ರ, ಮಿತ್ರ, ಬಂಧು-ಬಳಗದವರ ಮನೆಗಳಿಗೆ ಹೋಗದೆ, ತನಗ

ಸಾಧಿಸಿದ ಏಳು ಮನೆಗಳಲ್ಲಿ ಬೇಡಿ ತಂದ ಭಿಕ್ಷಾನ್ನವನ್ನು ಉಂಡು, ತಿತಿಕ್ಷೆ ಯಿಂದ ಪರಮ ವಿರಕ್ತನಾಗಿರುವ ಶಿವಯೋಗಿಗೆ **ಬಹೂದಕ ಯತಿ** ಎಂದು ಹೇಳುವರು.

ನಂತರ ಸೂತ್ರ, ಶಿಖಿಗಳನ್ನು ತ್ಯಜಿಸಿ, ದಂಡ ಪಿಡಿದು, ಕರಪಾತ್ರೆ ಮಾಡಿಕೊಂಡು, ಲಂಗೋಟಿ ಹಾಕಿ, ಕಾಷಾಯಾಂಬರ ಹೊದ್ದುಕೊಂಡು ಕಂಠದಲ್ಲಿ ರುದ್ರಾಕ್ಷಿ ಮಾಲೆಗಳನ್ನು ಧರಿಸಿ, ಪ್ರಣವ, ಸಾವಿತ್ರಿ, ಪಂಚಾಕ್ಷರಿ ಹಂಸ ಮೊದಲಾದ ಜಪಗಳನ್ನೂ ಪೂಜಾ ವಂದನಾದಿಗಳನ್ನೂ ತಪ್ಪದೆ ಕಾಲ-ಕ್ಕನುಸರಿಸಿ ಮಾಡುತ್ತ ದಿನಕ್ಕೊಂದು ಸಲ ತಿರಿದು ತಂದ ಅನ್ನದಲ್ಲಿ ಎಂಟು ತುತ್ತು ಮಾತ್ರ ಸಂತೋಷದಿಂದ ಸೇವಿಸುತ್ತ, ಉಳಿದದ್ದನ್ನು ಬದಿರ, ಕುರುಡ, ಕುಂಟರಿಗೆ ಕೊಡಬೇಕು. ಮೈಥುನವನ್ನು ತ್ಯಜಿಸಿ ವಿರತಿಯಿಂದ ಮೋಕ್ಷಕ್ಕೆ ಅಧಿಕಾರತ್ವವನ್ನು ಪಡೆದು, ನಿರಂತರ ಅಧ್ಯಾತ್ಮವನ್ನು ನೆನೆಯುತ್ತ ಇರುವವನೇ **ಹಂಸ ಯತಿಯು.**

ಸೂತ್ರ ಶಿಖಾದಿಗಳಿಂದ ಶೋಭಿಸಿ, ಕರದೊಳು ಕಮಂಡಲ ಪಿಡಿದು ತ್ರಿದಂಡ (ಒಂದು ಬಗೆಯ ಸನ್ಯಾಸ) ಆಗ್ನೆಯ ಮತ್ತು ಮಾನಸಿಕವೆಂಬ ಎರಡು ಸ್ನಾನಗಳನ್ನು ಮಾಡಿ ಸಂತೋಷದಿಂದ ಹಂಸ, ಪ್ರಣವ ಮಂತ್ರಗಳಿಂದ ಭಸ್ಮ ರುದ್ರಾಕ್ಷಿಗಳನ್ನು ಧರಿಸಿ ಕಂದುಗೊರಗಳನ್ನು ಧ್ಯಾನಿಸುತ್ತ ಏಕಾಂತದಲ್ಲಿ ಜಪ ಮತ್ತು ಪ್ರಾಣಾಯಾಮ ಮಾಡುತ್ತ, ತಾನು ತಿರಿದು ತಂದ ಅನ್ನವನ್ನು ಮಿತಿಯಾಗಿ ಉಣ್ಣುತ್ತ, ಗುರು ಪ್ರಾಪ್ತಿಯನ್ನು ಮಾಡಿಕೊಂಡು ಅವರ ಕರುಣೆಯಿಂದ ಆತ್ಮಜ್ಞಾನವನ್ನು ದೃಢಮಾಡಿಕೊಳ್ಳುತ್ತ ಕಾಮಾದಿ ಅರಿ ಗಳನ್ನು ವಿರತಿ ಎಂಬ ಶಸ್ತ್ರದಿಂದ ಸಂಹರಿಸಿ, ಧೀರನಾದವನೇ **ಪರಮಹಂಸ.**

## ಅವಧೂತನ ಲಕ್ಷಣ

ಮೇಲೆ ಹೇಳಿರುವ ಎಲ್ಲ ಆಶ್ರಮಗಳನ್ನು ತಾನು ಸರಿಯಾಗಿ ಆಚರಿಸು ವದರಿಂದ ಅಂತಃಕರಣವು ಪರಿಶುದ್ಧವಾಗಿ ಸಾಧನ ಚತುಷ್ಟಿ ಸಂಪನ್ನನಾಗು ವನು. ಬಳಿಕ ಎಲ್ಲ ಆಶ್ರಮಗಳನ್ನು ತೊರೆದು ವಿಧಿನಿಷೇಧಗಳಿಗೆ ಒಳಗಾ ಗದೆ ನಿಸ್ತ್ರೈಗುಣ್ಯ ಪದವನ್ನು ಹೊಂದಿ ಭಿನ್ನಾಭಿನ್ನ ಭಾವನೆಗಳನ್ನು ಅಳಿದು ಪರಮ ಗುರುವಿನ ಉಪದೇಶದ ಬಲದಿಂದಲೂ, ವೇದಾಂತ ಸಿದ್ಧಾಂತಗಳ ನೆರವಿ

ಸಿಂದಲೂ ಜೀವ-ಬ್ರಹ್ಮೈಕ್ಯ ಜ್ಞಾನ ಪಡೆದ ನಾನೇ ಬ್ರಹ್ಮನೆಂಬ ದೃಢ ಅಪರೋಕ್ಷಜ್ಞಾನ ಉಳ್ಳವನಾಗಿ ಸರ್ವರಿಗೂ ಪರಮ ಪೂಜ್ಯನೆನಿಸಿ ಸಂತೋಷ ದಿಂದ ಮೆರೆಯುವವನೇ ಅವಧೂತನೆಂದೂ, ಜೀವನ್ಮುಕ್ತನೆಂದೂ, ಪರಮ ಭಗವದ್ಭಕ್ತನೆಂದೂ ಪರಮ ಪ್ರಜ್ಞನೆಂದೂ, ಜ್ಞಾನಘನವೆಂದೂ ಹೊಗಳಿಸಿ ಕೊಳ್ಳುವವನೇ **ಅತ್ಯಾಶ್ರಮಿಯು ಅವನೇ ಅವಧೂತನು.**

ತಿಳಿಯಿತೇ? ನೀನು ಬ್ರಾಹ್ಮಣನೇ ನಿಜವಾಗಿದ್ದರೆ ಸಂತೋಷದಿಂದ ಈ ಕ್ಷುದ್ರ ಶಾಸ್ತ್ರಗಳನ್ನು ಬೀಸಾಕು. ವೇದ ಸಮ್ಮತವಾದ ಇವುಗಳನ್ನು ಸಾಧಿಸಿದ್ದಾದರೆ, ನೀನು ಮೇದಿನಿಯೊಳಗೆ ಪೂಜ್ಯವೆನಿಸಿ, ಧನ್ಯನಾಗುವಿ" ಎಂದು ಸಿದ್ಧಾರೂಢರು ಆ ಬ್ರಾಹ್ಮಣನಿಗೆ ಕ್ರಮದಿಂದ ಶ್ರುತಿಯ ಎಲ್ಲ ಸತ್ಪಥ ವನ್ನು ಅರುಹಿದರು.

ಆಗ ದ್ವಿಜನು ಪಶ್ಚಾತ್ತಾಪ ಹೊಂದಿದವನಾಗಿ "ತಂದೆಯೇ ತಮ್ಮಂತೆ ಶಾಸ್ತ್ರಗಳ ರೀತಿಯನು ಇಲ್ಲಿಯವರೆಗೂ ನನಗೆ ಯಾರೂ ಬಂದು ಪೇಳಲಿಲ್ಲ ಅಕಟಕಟಾ ! ಎಂದು ಮರಗುತ್ತ, ತೀವ್ರ ಸ್ವಾಮಿಗಳವರ ಚರಣಕ್ಕೆ ಎರಗಿದನು. ನಾನು ಕಡುಪಾಪಿಯು. ನನ್ನ ಈ ಪಾಪವು ಹುರಿದು ಹೋಗುವ ಉಪಾಯವನ್ನು ಪೇಳಿ ನನ್ನನ್ನು ಉದ್ಧರಿಸಿರೆಂದು" ವಿನಯದಿಂದ ಬೇಡಿ ಕೊಂಡನು. ಆಗ ಸಿದ್ಧಯತಿಗಳು "ನೀನು ಶುದ್ಧ ಮನಸ್ಸಿನಿಂದ ಒಂದು ಅಕ್ಷರಕ್ಕೆ ಸಾವಿರದಂತೆ ಹನ್ನೆರಡು ಸಾವಿರ ಗಾಯಿತ್ರಿ ಜಪವನ್ನು ಮಾಡಿದ್ದಾ-ದರೆ, ನಿನ್ನ ಎಲ್ಲ ಪಾಪವು ನಶಿಸುವದು," ಎಂದು ಉಪದೇಶಿಸಿದರು.

ಕೂಡಲೇ ಆ ದ್ವಿಜನು ತನ್ನ ಮೊದಲಿನ ಎಲ್ಲ ಶಾಸ್ತ್ರಗಳನ್ನು ಕಟ್ಟಿ ಜಲಾರ್ಪಣ ಮಾಡಿ ಭಯಭಕ್ತಿಯಿಂದ ಸ್ವಾಮಿಗಳಿಗೆ ವಂದಿಸಿದನು. ಆಗ ಅವರು ಧನ್ಯನಾಗೆಂದು ಆಶೀರ್ವದಿಸಿದರು. ಗುರುವೇ ನಾನು ಧನ್ಯನಾದೆನು ಎಂದು ತನ್ನ ಗೃಹಕ್ಕೆ ತೆರಳಿದನು.

ಬಳಿಕ ಭಾರತಿಯು, ಅಲ್ಲಿಂದ ಹೊರಟು ಪುರ ಪಟ್ಟಣಗಳನ್ನು ನೋಡುತ್ತ ಕಾಡು ಬಿದ್ದು ಹೊಳೆ, ಹಳ್ಳ, ಗಿರಿ, ಗುಡ್ಡ, ಕೊಳ್ಳಗಳನ್ನು ದಾಟುತ್ತ, ಛಳಿ, ಮಳೆ, ಗಾಳಿ, ಬಿಸಿಲುಗಳಿಗೆ ಝುಳುಕದೆ ಕಾಡ ಮರದಂತಿದ್ದು ಹಸಿವು ತೃಷೆಗಳಿಗೆ ಬಳಲದೆ, ಬಂಡೆಗಲ್ಲಿನಂತೆ ಧೈರ್ಯದಿಂದ ತಾನು

ಆದವಾನಿಯ ಹತ್ತಿರಿರುವ ದೊಡ್ಡ ಗುಡ್ಡದ ಕೆಳಗಿರುವ ಬಾಳೇಕೊಳ್ಳಕ್ಕೆ ಬಂದನು. ಅಲ್ಲಿ ಕೆಲವು ಸಾಧುಗಳು ವಸತಿ ಮಾಡಿದ್ದರು. ಸಿದ್ಧಾರೂಢರೂ ಕೂಡ ಅವರೊಡನೆ ಕೆಲವು ದಿವಸ ಅಲ್ಲಿಯೇ ಉಳಿದುಕೊಂಡರು. ದಿನಾಲು ಆತ್ಮಚರ್ಚೆ ಮಾಡುತ್ತ, ಅವರಿಗೆ ಬಂದ ಎಲ್ಲ ಸಂಶಯಗಳನ್ನು ಪರಿಹರಿಸುತ್ತ, ಅವರೆಲ್ಲರಿಗೆ ಆತ್ಮಜ್ಞಾನವನ್ನು ದೃಢಪಡಿಸುತ್ತಿದ್ದರು. ಆ ಸಮಯಕ್ಕೆ ಅಲ್ಲಿಗೆ ಓರ್ವ ಯತಿಯು ಬಂದು ಸಿದ್ಧರಿಗೆ ನಮಿಸಿ, "ಈ ಶರೀರವನ್ನು ಲಕ್ಷಿಸಿ ಲಿಂಗ ಭೇದದಿಂದ ನಾನು ಪುರುಷನು, ನಾನು ಸ್ತ್ರೀಯಳು, ನಾನು ಹುಡುಗನು, ನಾನು ಮುದುಕನು, ನಾನು ಬಲವಾನನು, ನಾನು ಬಲಹೀನನು ಹೀಗೆ ದೇಹಬುದ್ಧಿ ಎಲ್ಲರಿಗೂ ಇರುತ್ತಿರಲಾಗಿ ಇದುವೇ ಆತ್ಮವೆಂಬುವದನ್ನು ಬಿಟ್ಟು ಬೇರಾಗಿ ಆತ್ಮನನ್ನು ಅರಿತುಕೊಳ್ಳುವದೆಂತು ? ತಾವು ಇದನ್ನು ದಯವಿಟ್ಟು ತಿಳಿಸಬೇಕು" ಎಂದು ಕೇಳಿಕೊಂಡನು.

ಆಗ ಸಿದ್ಧನು—"ಪಂಚಾತ್ಮಕಂ ಪಂಚಸುವರ್ತಮಾನಂ |
ಷಡಾಶ್ರಯಂ ಷಡ್ಗುಣ ಯೋಗಯುಕ್ತಂ ||
ತಂ ಸಪ್ತ ಧಾತುಂ ತ್ರಿಮಲಂ ತ್ರಿಯೋನಿಂ |
ಚತುರ್ವಿಧಾಹಾರಮಯಂ ಶರೀರಂ ||"

ದೇಹದ ಬಗ್ಗೆ ಹೇಗೆ ಪ್ರಮಾಣವುಂಟು. ನಿಜವಾಗಿ ಹೀಗೆ ದೇಹದ ಎಲ್ಲ ತತ್ವಗಳನ್ನು ನೇತಿಗಳೆಯುತ್ತ ಕಡೆಗೆ ಕಳೆಯಲಿಕ್ಕೆ ಬಾರದ ಶೇಷರೂಪವಾಗಿ ಉಳಿದ, ಉಳಿಮೆಯನ್ನು ಅರಿಯುವ ಚೇತನಾತ್ಮನೇ ಬ್ರಹ್ಮವೆಂದು ತಿಳಿ. ಅದು ಹೇಗೆಂದರೆ ಪರಮಾತ್ಮನನ್ನು ಮೊದಲು ಈ ದೇಹ ರಚಿಸುವ ಪೂರ್ವದಲ್ಲಿ ಪಂಚ ಮಹಾಭೂತಗಳನ್ನು ರಚಿಸಿದನು. ಮತ್ತು ತನ್ನ ಸ್ವಲೀಲೆಗೋಸುಗ ಅವುಗಳಲ್ಲಿ ಒಂದೊಂದು ಭೂತವನ್ನು ತಕ್ಕೊಂಡು ಅದರೊಳಗೆ ಸರಿಯಾಗಿ ಎರಡು ಭಾಗಮಾಡಿ, ಅರ್ಧ ಭಾಗವನ್ನು ಹಾಗೆಯೇ ಬೇರಿಟ್ಟು ಉಳಿದ ಅರ್ಧಾರ್ಧ ಭಾಗಗಳಲ್ಲಿ ಸಮನಾಗಿ ನಾಲ್ನಾಲ್ಕು ಭಾಗಗಳನ್ನು ಮಾಡಿದನು. ಬಳಿಕ ವಿಜಾತಿ ಭಾಗವಾಗಿರುವ ಪಾದಾಂಶಗಳಲ್ಲಿ, ಮುಖ್ಯವಾಗಿರುವ ಅರ್ಧಾರ್ಧ ಭಾಗಗಳನ್ನು ಬೆರಸುತ್ತ ಹೋಗಲು, ಅವು ಇಪ್ಪತ್ತು, ಬಳಿಕ ನಿಜಾಂಶಗಳು ಐದು, ಇವೆಲ್ಲವು ಕೂಡಿ ಇಪ್ಪತ್ತೈದು ತತ್ವಗಳಾದವು.

ಇವುಗಳಿಂದ ಈ ಜಡತನುವನ್ನು ರಚಿಸಿದನು. ಆದರೆ ಅದು ಚಲಿಸದಿರಲು, ಅದನ್ನು ರಚಿಸಿದ ಪರಮಾತ್ಮನೇ, ಅದರ ಕಪಾಲವನ್ನೊಡೆದು ಬ್ರಹ್ಮರಂಧ್ರದಲ್ಲಿ ಜೀವರೂಪದಲ್ಲಿ ತನುವಿನಲ್ಲಿ ತಾನೇ ಪ್ರವೇಶಿಸಿದನು. ಬಳಿಕೆ ಅದರ ಅಭಿಮಾನದಿಂದ ತಾನು ಜಾಗ್ರಾವಸ್ಥೆಯಲ್ಲಿ ಸ್ಥೂಲ ಭೋಗಕ್ಕಡರಿ ಅದನ್ನು ಭೋಗಿಸುತ್ತ ಅದರಿಂದಾದ ಅನೇಕ ಸೂಕ್ಷ್ಮ ಸಂಸ್ಕಾರಗಳಿಂದೊಡಗೂಡಿ, ಸ್ವಪ್ನದಲ್ಲಿ ಸೂಕ್ಷ್ಮ ಭೋಗಗಳನ್ನು ಭೋಗಿಸಿ, ಪುನಃ ನಿದ್ರೆಯಲ್ಲಿ ಅಡಗಲು ಅಲ್ಲಿರುವ ಸೂಕ್ಷ್ಮ ತ್ರಿಪುಟಿಗಳಲ್ಲಿ ಹೊಳೆದು ತೋರುವ ನಿಜ ಸುಖವನ್ನು ಅನುಭವಿಸುವನು. ವಿಚಾರಿಸಲು ಈ ಮೂರು ಅವಸ್ಥೆಗಳನ್ನೂ, ಆ ಅವಸ್ಥೆಗಳಲ್ಲಿರುವ ಮೂರು ತನುಗಳನ್ನೂ, ಅಲ್ಲಿರುವ ಸ್ಥೂಲ, ಸೂಕ್ಷ್ಮ, ಆಜ್ಞಾನಾನಂದ ಭೋಗಗಳನ್ನೂ ಅರಿಯುವ ಮೂರು ಜೀವರುಗಳಿಗೆ ಬೇರಾಗಿ ಬೆಳಗುವ ಪರಮಾತ್ಮನೇ ನೀನಾಗಿರುವಿ. ಅಂದ ಮೇಲೆ ನಿನಗೆ ತನುವಿನ ಸಂಗವು ಅದೆಂತು ಹತ್ತುವದು ? ನೋಡಯ್ಯಾ, ಎಂದನು. ಆಗ ಯತಿಯು ಸಿದ್ಧರನ್ನು ಕುರಿತು "ಈ ೨೫ ತತ್ವಗಳನ್ನು ಸರಳ ರೀತಿಯಿಂದ ದೇಹದಲ್ಲಿ ಹೇಗೆ ಬೇರ್ಪಡಿಸಬೇಕು ? ಎಂಬುದನ್ನು ಈ ದಿನ ನನ್ನ ಮೇಲೆ ದಯೆ ತೋರಿ ಅರುಹಬೇಕು" ಎಂದು ವಿನಯದಿಂದ ಕೇಳಿಕೊಂಡನು.

ಆಗ ಸಿದ್ಧಭಾರತಿಯು "ಯತಿಯೇ ಕೇಳು, ಒಡಲೊಳಿರುವ ಕಠಿಣ ಭಾಗಗಳೆಲ್ಲವೂ ಭೂಮಿಯ ಅಂಶವು. ದ್ರವಿಸುವ ಅಂಶಗಳೆಲ್ಲವೂ ನೀರಿನ ಅಂಶವು. ಶರೀರದಲ್ಲಿರುವ ಉಷ್ಣವು ಅಗ್ನಿಯ ಅಂಶವು. ನಡೆಯುವ ಚಲನವೆಲ್ಲವೂ ವಾಯುವಿನ ಅಂಶವು. ಸುಷಿರವೆಲ್ಲವೂ ಗಗನದ ಅಂಶವು. ಹೀಗೆ ಪಂಚಭೂತಗಳಿಂದ ದೇಹದ ರಚನೆಯಾಗಿರುವದು. ಇದನ್ನರಿತು ಆಯಾಯ ಭೂತಗಳ ಅಂಶಗಳನ್ನು ಆಯಾಯ ಭೂತಗಳಿಗೆ ಹಂಚಿ ಬಿಡು, ಅಂದರೆ ಮುಂಚಿನ ದೇಹವು ಮಿಂಚಿನಂತೆ ಮಿಥ್ಯೆಯಾಗಲು, ಅದಕ್ಕೆ ಸಾಕ್ಷಿ ಚೇತನವೇ, ನೀನಾಗಿ ಉಳಿಯುವಿ. ಇದನ್ನು ವಿಚಾರಿಸಿ ತಿಳಿದುಕೋ" ಎಂದರು

ಆಗ ಯತಿಯು ಅತಿ ನಮ್ರಭಾವದಿಂದ, "ಪರಮ ಯತಿವರನೇ, ತಮ್ಮ ಬೋಧದ ಪ್ರಕಾರ ತತ್ವಗಳನ್ನು ಬೇರ್ಪಡಿಸಲಾಗಿ, ಬೇರ್ಪಡಿಸಲಿಕ್ಕೆ ಬಾರದಿ-

ರುವ ಉಳುಮೆಯಾದ ಚೈತನ್ಯವೇ, ನಾನೆಂಬ ಅಪರೋಕ್ಷ ಜ್ಞಾನದಿಂದ ನಾನು ಧನ್ಯನಾದೆನು," ಎಂದು ಪರಮ ಹರುಷದಿಂದ ನಮಿಸಿದನು. ಆಗ ಗುರುವರನು, ಅವನಿಗೆ ಆಶೀರ್ವದಿಸಿ ಕಳುಹಿಸಿದನು.

## ಕುಷ್ಟರೋಗ ಪರಿಹಾರ

ಇದೆಲ್ಲವನ್ನು ಕೇಳುತ್ತ ಅಲ್ಲಿ ನಿಂತಿದ್ದ ಒಬ್ಬ ಕುಷ್ಟರೋಗಿಯು, ಅತಿ ಬಳಲುತ್ತ ಮುಂದೆ ಬಂದು, ಸ್ವಾಮಿಗಳಿಗೆ ನಮಿಸಿ ಅತಿ ದೀನವಾಣಿಯಿಂದ "ಪರಮ ಸದ್ಗುರು ದಯಾಳುವೇ, ಆ ಯತಿಗೆ ಒಲಿದು, ಅವನ ಸೂಕ್ಷ್ಮ ಶರೀರಕ್ಕೆ ಅಂಟಿಕೊಂಡಿದ್ದ ಮನದ ರೋಗವನ್ನು ಪರಿಹರಿಸಿದಂತೆ, ನನ್ನ ಸ್ಥೂಲ ದೇಹಕ್ಕೆ ಹಬ್ಬಿಕೊಂಡ ಕಡು ಕಷ್ಟಕೊಡುತ್ತಿರುವ ಈ ರೋಗವನ್ನು ನಷ್ಟ ಮಾಡಿ ನನ್ನನ್ನಷ್ಟು ಉದ್ಧಾರ ಮಾಡಿರಿ" ಎಂದು ಬೇಡಿಕೊಂಡನು.

ಕೂಡಲೆ ಮಹಿಮಾ ಪುರುಷರಾದ ಸಿದ್ಧರು "ಶಿವ ಪಂಚಾಕ್ಷರಿಯನ್ನು ಜಪಿಸಿದರೆ ಭವರೋಗವೇ ಹರಿದು ಹೋಗುತ್ತಿರಲಿಕ್ಕೆ ನಿನ್ನ ಇಂಥ ಕ್ಷುಲ್ಲಕ ಕುಷ್ಟರೋಗವು ನಷ್ಟವಾಗದೆ ಉಳಿದೀತೆ ? ಬಾ" ಎಂದು ಹತ್ತರ ಕರೆದು ಅವನಿಗೆ ತಮ್ಮ ಪಾದತೀರ್ಥದಿಂದ ಸ್ನಾನ ಮಾಡಿಸಿ ಪರಮ ಪಂಚಾಕ್ಷರಿಯನ್ನು ಉಪದೇಶಿಸಿದರು. ತಕ್ಷಣವೇ ಅವನ ಕುಷ್ಟರೋಗವು ನಷ್ಟವಾಗಿ ಸುಂದರ ಶರೀರವುಳ್ಳವನಾದನು. ಆತನು ಮಹದಾನಂದದಿಂದ ಗುರು ಪಾದಕ್ಕೆರಗಿ ತನ್ನ ಸದನಕ್ಕೆ ತೆರಳಿದನು. ಅಲ್ಲಿರುವ ಆ ಊರ ಜನರು ಅವನ ಸುಂದರ ಶರೀರವನ್ನು ಕಂಡು ಎಲ್ಲ ಸಂಗತಿಯನ್ನು ಅವನ ಮುಖದಿಂದ ಅರಿತುಕೊಂಡು ಕೂಡಲೆ ಆ ಮಹಿಮರ ಬಳಿಗೆ ಓಡಿ ಬರಹತ್ತಿರುವ ಜನರ ದಟ್ಟಣೆಗೆ ಸಿದ್ಧನು ಸೇರದೆ ಮೌನವನ್ನು ತಾಳಿದನು. ಆದರೂ ವಾಯುವು ತರಗೆಲೆಯನ್ನು ಹಾರಿಸಿಕೊಂಡು ಹೋದಂತೆ, ವಾಯುರೂಪ ಸಿದ್ಧನ ಪ್ರಾರಬ್ಧವು, ತರಗೆಲೆಯಂತಿರುವ ಅವನ ದೇಹವನ್ನು ಊರು, ಗುಡ್ಡ, ಗಂವಾರಗಳನ್ನು ತಿರುಗಿ ಸುತ್ತ ವಿಜಾಪುರಕ್ಕೆ ತಂದು ಚೆಲ್ಲಿತು. ಅಲ್ಲಿ ಅವನು ನಡೆಸಿದ ಲೀಲಾದಿ ವಿಷಯುಗಳನ್ನು ಮುಂದಿನ ಅಧ್ಯಾಯದಲ್ಲಿ ಹೇಳಲಾಗುವದು.

ಮಂಗಲ— ಬೆಸದಲೆಯು ಬಿಸಿಗಣ್ಣು ಮಸಗುವ ।
ದಶ ಭುಜವು ಪಸಿದೊಗಲ ವಸನವು ।
ಶಶಿಯುಗಟ್ಟಿದ ಜಡೆಯ ಮುಕುಟ ಗುಡ್ಡಣಿಗೆ ಮತ್ತೆ ॥
ಎಸೆಯುತಿಹ ಮುಗಿಲಣುಗೆ ಹೆಂಡರು ।
ಮಸಣ ಮನೆ ಪೆಣಬೂದಿ ಭಸಿತವು ।
ಕುಶಲ ಸುತರಿಂತೀಸು ವೈಭವಿಯಾದಗಂ ನಮಿಪೇಂ ॥

ಇತಿ ಶ್ರೀ ಮದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರಲೀಲಾ ಚರಿತ್ರ ಕಲ್ಪದ್ರುಮದೊಳು ವರ್ಣಾಶ್ರಮ ಧರ್ಮನೀತಿ ಮತ್ತು ಆತ್ಮಜ್ಞಾನ ಬೋಧವೆಂಬ ೨೫ ನೇ ಅಧ್ಯಾಯ ಸಮಾಪ್ತಿ.

---

॥ ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ॥



# ಸಂಚಾರ ಸಂಭ್ರಮ ಕಾಂಡ

## ಅಧ್ಯಾಯ ೨೬

ಈ ಅಧ್ಯಾಯದಲ್ಲಿ ಚರಿತ್ರ ನಾಯಕನಿಂದ ವಿಜಾಪುರದಲ್ಲಿ ಕಟುಕರು ದನಗಳ ವಧಸ್ಥಾನದಲ್ಲಿ ಶೆಗಣೆಯನ್ನು ಹೊತ್ತು ಚಲ್ಲಿದ್ದು.

ಮತ್ತೊಂದು ಓಣಿಯಲ್ಲಿ ಒಬ್ಬಗ್ರಹಸ್ಥನು, ಸಿದ್ಧರಿಂದ ಕೆಸರನ್ನು ತೆಗೆಸಿದ್ದು ಮುಸಲ್ಮಾನರ ಉರುಸಿನಲ್ಲಿ ಹಿಲಾಲು ಹಿಡಿಸಿದ್ದು.

ಬಿನ್‌ಚೀಪ್ ಮಸೀದೆಯಲ್ಲಿರುವಾಗ್ಗೆ ನೀರಿಗೆ ಬಂದ ಸ್ತ್ರೀಯರು ತನ್ನನ್ನು ಕುರಿತು ಮರಗುವದನ್ನು ಕೇಳಿ. ಬದ್ವೇಲಿ ಕಷ್ಟಕ್ಕಿಂತ ಇದೇನು ಅಷ್ಟು ಹೆಚ್ಚಿನದಲ್ಲೆಂದು ಅವರಿಗೆ ಹೇಳಿದ್ದು.

ವಿಜಾಪೂರದಲ್ಲಿ ಲೊಹರಂ ಹಬ್ಬದಲ್ಲಿ ಕೆಲವು ಮುಸುಲರು ಸಿದ್ಧನನ್ನು ನೊಗದ ಮೇಲೆ ಕುಳ್ಳಿರಿಸಿ ಹೊತ್ತುಕೊಂಡು ಸಂಜೆಯವರೆಗೆ ಊರಲ್ಲೆಲ್ಲಾ ತಿರುಗಾಡಿಸಲು, ತೊಡೆಗಳು ಬಾತು ಏಳಲಿಕ್ಕೆ ಬಾರದಷ್ಟು ಬಹಳ ನೋವಾ-ದದ್ದು. ಇವೆಲ್ಲ ವಿಷಯಗಳು ಬಂದಿರುವವು.

ಸ್ತುತಿ ಪದ—ಹರನ ಭಕ್ತನ ಪತ್ನಿಯಂ ಮೇಣ್ ।
ಪರಮ ವಾಚಸ್ಪತಿಯ ಬಳಿಕಂ ।
ಶಿರದ ಗಂಗೆಯ ಸದನವನ್ನು ತಯಾರದರ್ಥವನು ॥
ಅರಿಯುತಂ ಮಿಗೆ ವಿಪ್ರ ಭುವಿಯೆಂ ।
ಬೆರಡರೊಳ ಗಂತ್ಯಾದಿಗಳ ನಿಂ ।
ತಿರಿಸಲಾಪ್ಪವರೊ ಆ ಸ್ವಾಮಿಗಳಿಗಂ ನಮಿಪೆಂ ॥

ಪದ—೧-೬ ಕಟಕರ ದನಗಳ ವಧಸ್ಥಾನದಲ್ಲಿ ಶಗಣಿ ಹೊತ್ತು ಹಾಕಿದ್ದು ಕೆಸರು ತೆಗೆದದ್ದು.

ಪರಮಪೂಜ್ಯ ಶ್ರೀ ಸಿದ್ಧಭಾರತಿಯು, ವಿಜಾಪುರದಲ್ಲಿ ಕೆಲವು ದಿನ ಕಾಲ ಕಳೆಯುತ್ತಿರುವಾಗ, ಒಂದು ದಿನ ಒಂದು ಬೈಲಲ್ಲಿ ನಿಂತಿದ್ದನು. ಅದು ಕಟುಕರ ಓಣಿ ಇದ್ದು ಒಂದು ಕಡೆ ಯಮಧೂತರಂತೆ ಹಲ್ಲು ಕಚ್ಚಿ ಚೂರಿಯನ್ನು ಮಸೆಯುತ್ತಿದ್ದರು. ಮತ್ತೊಂದು ಕಡೆ ಕತ್ತನ್ನು ಕತ್ತರಿಸಲಿಕ್ಕೆ ತಂದು ಬಂಧಿಸಿರುವ ಉತ್ತಮ ತುರುಗಗಳು 'ಅಂಬಾ' ಎಂದು ಒದರುತ್ತಿದ್ದವು. ಮತ್ತು ಎಡಬಲದಲ್ಲಿ ರಕ್ತದಿಂದ ತುಂಬಿದ ಹತ್ತು ಕುಂಡಗಳಿದ್ದವು ದನಗಳನ್ನು ಕಡಿಕಡಿದು ಚಲ್ಲಿದ ಎಲುಬು, ಮೂಳೆ ಮಾಂಸಗಳಿಂದ ತುಂಬಿದ ಆ ಸ್ಥಳದಲ್ಲಿ ಸಜ್ಜನರು ಹೋಗುವಂತಿದ್ದಿಲ್ಲ.

ಸಿದ್ಧ ಭಾರತಿಯು ಹಾಗೇ ಸ್ವಲ್ಪ ಮುಂದಕ್ಕೆ ಬರಲು ಅಲ್ಲಿ ಓರ್ವ ಕಟುಕನು ಸಿದ್ಧರ ಕೈ ಹಿಡಿದು ಎಳೆದೊಯ್ದು ದನದ ಶಗಣೆಯನ್ನು ಹೊತ್ತು ಚಲ್ಲಲಿಕ್ಕೆ ಹಚ್ಚಿದನು. ಸಿದ್ಧನು ನಾಲ್ಕೈದು ಬುಟ್ಟಿ ಶಗಣೆಯನ್ನು ತಿಪ್ಪೆಗೆ ಚಲ್ಲುತ್ತ ಆ ಕಟುಕನ ಕಣ್ಣು ತಪ್ಪಿಸಿ ಮತ್ತೊಂದು ಮಾರ್ಗದಿಂದ ಊರೊಳಗೆ ಬಂದನು. ಹಸಿವೆಯಿಂದ ಒಂದು ಮನೆಯ ಮುಂದೆ ಭಿಕ್ಷಕ್ಕೆ ನಿಂತನು. ಆ ಮನೆಯ ಮಾಲಕನು ಹೊರಗೆ ಬಂದು ಇವನ ಕೈಯಿಂದ ಅಂಗಳನಲ್ಲಿಯ ಕೆಸರನ್ನು ತೆಗೆಯಿಸಬೇಕೆಂದು ಯೋಚಿಸಿ, ಸಿದ್ಧನಿಗೆ "ನಿನಗೆ ರೊಟ್ಟಿ ಬೇಕೇನು?" ಎಂದು ಕೇಳಿದನು. ಸಿದ್ಧನು ಅದಕ್ಕೆ ಗೋಣು ಹಾಕಲು, ಮನೆಯುವನು ಕೂಡಲೆ ಮುದದಿಂದ ಅರ್ಧ ರೊಟ್ಟಿಯನ್ನು ತಂದು ಕೊಟ್ಟನು. ಮತ್ತು ಅದನ್ನು ತಿಂದ ನಂತರ "ಈ ಕೆಸರನ್ನು ನೀನು ಕಿತ್ತು ಹಾಕು" ಎಂದನು. ಆಗ ಭಾರತಿಯು ಆ ಕೆಸರನ್ನು ತೆಗೆಯುತ್ತಿರುವಾಗ ಮಾಲಕನು ಮನೆಯೊಳಗೆ ಹೋದನು. ಕೂಡಲೆ ಚತುರ ಯತಿಯು "ತಾಸ ಬಾವಿಯು" ಕಡೆಗೆ ಬಂದು ಅಲ್ಲಿಯೇ ಇರಹತ್ತಿದನು.

### ಪದ—೭-೧೮ ಮುಸಲ್ಮಾನರ ಉರುಸಿನಲ್ಲಿ ದೀವಟಿಗೆಯನ್ನು ಹಿಡಿದದ್ದು.

ಒಂದು ದಿನ ಹೈದರಸಾಬನೆಂಬವನು ಸೆರೆಯ ನಿಶೆಯಲ್ಲಿ ಅಲ್ಲಿಗೆ ಬಂದನು. ಅವನು ಭಾರತಿಯನ್ನು ಕಂಡು "ಈ ಹುಚ್ಚನನ್ನು ನಮ್ಮ ಉರುಸಿನ ಉತ್ಸವದಲ್ಲಿ ಹಿಲಾಲು ಹಿಡಿಯಲಿಕ್ಕೆ ಕರೆದೊಯ್ಯಬೇಕು" ಎಂದು ಮನಸ್ಸು ಮಾಡಿ. "ಎಲೋ ನೀನು ಊಟ ಮಾಡಿರುವಿಯೋ ?" ಎಂದು ಕೇಳಿದನು. ಅದಕ್ಕೆ ಸಿದ್ಧನು ಇಲ್ಲೆಂದು ತಲೆ ಹಾಕಿದನು. "ಹಾಗಾದರೆ ನಿನಗೆ ಊಟ ಮಾಡಿಸುವೆ ಬಾ" ಎಂದು ತನ್ನ ಮನೆಗೆ ಕರೆದೊಯ್ದು ತುಸು ತಂಗಳ ಅನ್ನವನ್ನು ಉಣಿಸಿ ಅವನನ್ನು ಬಿಡದೆ ಹಾಗೆಯೇ ಉರುಸು ನೋಡವಿಯಂತೆ ಬಾ, ಎಂದು ಮಸೀದಿಗೆ ಕರೆತಂದನು. ಮತ್ತು ಉರಿಯುತ್ತಿರುವ ಒಂದು ಹಿಲಾಲನ್ನು ಸಿದ್ಧನ ಕೈಯಲ್ಲಿ ಕೊಟ್ಟು, ಈ ನರ್ತಕಿಯರ ಬಲಬದಿಯಲ್ಲಿ ಇದನ್ನು ಹಿಡಿದುಕೊಂಡು ಕುಳಿತಿರಬೇಕು ತಿಳಿಯಿತೇ," ಎಂದು ಕಟ್ಟಪ್ಪಣೆ ಮಾಡಿ ತಾನು ಬೇರೆ ಕಡೆಗೆ ಹೋದನು. ಕೂಡಲೆ ಸಿದ್ಧನು ದಿಗ್ಗನೆ ಎದ್ದು ಪಶ್ಚಿಮದ ಕಡೆಗೆ ನಡೆದನು. ಅದನ್ನು ಓರ್ವನು ಕಂಡು

ಅವನನ್ನು ಪುನಃ ಹಿಡಿತಂದು ಅಲ್ಲಿಯೇ ನಿಲ್ಲಿಸಿ, ಇಲ್ಲಿ ಕತ್ತಲೆ ಮಾಡಿ ಅಲ್ಲಿ-ಗೇಕೆ ಹೋದಿ ?" ಎಂದು ಕೇಳಿದನು. ಅದಕ್ಕೆ ಸಿದ್ಧನು "ನಾನೇ ಸೂರ್ಯನು. ನೀವೆಲ್ಲರೂ ನನ್ನ ಬೆಳಕಿನಲ್ಲಿ ವ್ಯವಹರಿಸುವಿರಿ. ಭಾಸುರ ಭಾಸ್ಕರನಿಗೆ ಒಂದೇ ಎಡೆಯಲ್ಲಿ ನಿಲ್ಲುವ ಹಾಗೆ ಅಲ್ಲಾನ ಆಜ್ಞೆ ಇಲ್ಲ" ಎಂದನು. ಅದನ್ನು ಕೇಳಿ ಎಲ್ಲರೂ ಗೊಳ್ಳನೆ ನಕ್ಕರು. ಮತ್ತು ವವನನ್ನು ಅಲ್ಲಿಯೇ ಕುಳ್ಳಿರಿಸಿದರು.

ಬಳಿಕ ನೃತ್ಯವು ಪ್ರಾರಂಭವಾಯಿತು. ಅವರ ಪೈಕಿ ಹಿಂದಿರುವ ಒಬ್ಬ ಮುದುಕಿಯು ಬಾಯ್ದೆರೆದು ತಲೆ ಹಾಕಿ ಗಾನ ಮಾಡಲಾರಂಭಿಸಿದಳು. ಸಿದ್ಧನು ಅವಳನ್ನು ಬಾಗಿ ನೋಡಿ "ಅಲೆಲೆಲೆ, ಈಕೆಗೆ ರೋಗ ಬಂದಿರುವದು, ಸಾಹೇಬರೇ, ಬೇಗನೆ ಕಾಸಿದ ಕುಡದಿಂದ ನೀವು ಇವಳ ಹಣೆಗೂ, ಪಕ್ಕಡೆಗೂ ಮೂರು ಮೂರು ಬರೆಗಳನ್ನು ಎಳೆಯಿರಿ. ಅಂದರೆ ಮಾತ್ರ ಇವಳು ಉಳಿಯುವಳು" ಎಂದು ಕುಣಿದಾಡ ಹತ್ತಿದನು. ಸರ್ವರಿಗೂ ನಗೆ ತಡೆಯದೆ ಹಾರಾರಿ ಬಿದ್ದು ಹೊಟ್ಟೆ ಹುಣ್ಣಾಗುವಂತೆ ಹೊಟ್ಟೆಯನ್ನು ಹಿಡಿದುಕೊಂಡು ನಗಹತ್ತಿದರು.

ಬಳಿಕ ಅವರೊಳಗೋರ್ವನು ಸಿದ್ಧನ ಕೈಹಿಡಿದು, "ತಮ್ಮಾ ನೀನು ಈ ಮೊದಲು ಇಂಥ ರೋಗವನ್ನು ಎಲ್ಲಿ ನೋಡಿರುವಿ ? ಇದಕ್ಕೆ ಪರಿಹಾರವನ್ನು ನಿನಗಾರು ಹೇಳಿದರು?" ಎಂದು ಕೇಳಿದನು. ಆಗ ಸಿದ್ಧನು "ನಾನು ಮೊದಲು ಕೆಲವು ದಿನ ಕೃಷ್ಣಾನದಿ ತೀರದಲ್ಲಿ ಕುರಿ ಕಾಯತ್ತಿದ್ದೆನು. ಒಮ್ಮೊಮ್ಮೆ ಆ ಕುರಿಗಳಿಗೆ ಇಂಥ ಕೆಡಕು ರೋಗ ಬಂದಕೂಡಲೆ, ಕುರುಬರು ಕಾದ ಕುಡದಿಂದ ಅವುಗಳಿಗೆ ಬರೆ ಎಳೆಯುತ್ತಿದ್ದರು. ಅಲ್ಲಿ ನಾನು ನೋಡಿದ್ದನ್ನು ಈಗ ನಿಮ್ಮ ಮುಂದೆ ಹೇಳಿದೆನು" ಎಂದನು. ಆಗ ಆ ಪುರುಷನು "ಇಂಥ ಈ ಸತ್ಕಾರ್ಯ ಸಮಯದಲ್ಲಿ ನೀನು ಇಂಥ ಕೆಡಕು ನುಡಿಯನ್ನು ನುಡಿಯಬಹುದೇ ?" ಎಂದು ಗದ್ದರಿಸಿದನು. ಅದಕ್ಕೆ ಸಿದ್ಧನು "ಹಾಗಾದರೆ, ಪುಂಶ್ಚಲಿಯಾದ ಈ ಬಚ್ಚ ಮುದುಕೆಯ ಅಪಸ್ವರಕ್ಕೆ ಅಲ್ಲಾನು ಹೀಗೆ ಒಪ್ಪು-ವನು ?" ಹೇಳಿರೆಂದನು. ಆಗ ಉಳಿದ ಜನರು ಏನಿದು ಸುಮ್ಮನೆ ಹಾಳು ಗದ್ದಲ ? ಆ ಹುಚ್ಚನ ಮಾತನ್ನು ಬಿಟ್ಟು ಬಿಡಿರಿ. ಮುಂದೆ ಕಾರ್ಯ

ಸಾಂಗವಾಗಲಿ" ಎಂದರು. ಆಗ ನರ್ತಕಿಯರು, ನರ್ತನ ಮಾಡುತ್ತ ಹಾಡ ಲಾಂಭಿಸಿದರು.

ಕೆಲ ಹೊತ್ತಿನ ಮೇಲೆ ಸಿದ್ಧನು ಮತ್ತೆ ದಿಗ್ಗನೆ ಎದ್ದು "ಅಲೆಲೆಲೆ ! ಲಲಿತವಾದ ಈ ಗಾನವನ್ನು ಕೇಳಲಿಕ್ಕೆ ಅಲ್ಲಾ ಬರುವನು" ಎಂದು ಕುಣಿಯ ಲಾರಂಭಿಸಿದನು. ಕೂಡಲೇ ಕೆಲವರು "ಪದೇ ಪದೇ ಏನಿದು ಹಾಸ್ಯವು ? ಥಳಸಿರವನನ್ನು" ಎನ್ನಲು ಅವರೊಳಗೋರ್ವನು ಹೊಡೆಯ ಹೋದನು. ಅಷ್ಟರಲ್ಲಿ ಒಂದು ಘಟಸರ್ಪವು ಭೋರ್ಗರಿಯುತ್ತ ಭರದಿಂದ ಮಂದಿಯೊಳಗೆ ನುಸುಳಿತು. ಕೂಡಲೇ ಸಿದ್ಧನು ಅಲ್ಲಾ ಬಂದನು !" ಎಂದು ಪಂಜನ್ನೊ ಗೆದು ಗಹಗಹಿಸುತ್ತ ಹಿಂದಕ್ಕೆ ಸರಿದನು. ಆಗ ಮುಂದಿದ್ದವರೆಲ್ಲರೂ ಮನ ಬಂದತ್ತ ಓಡುತ್ತ ತಮ್ಮ ತಮ್ಮ ಮನೆಗಳಿಗೆ ಹೋದರು. ಉಳಿದವರು ಹಾವು ಹೊಡೆಯ ಹೋಗಲು ಅದು ಮಾಯವಾಯಿತು.

ಎಲ್ಲ ಜನರು ಹೋದ ಬಳಿಕ ಸಿದ್ಧಭಾರತಿಯು ಅಲ್ಲಿಯೇ ಪವಡಿಸಿದರು. ಮರುದಿವಸ ಅಲ್ಲಿಂದ ಬೇಗನೆ ಎದ್ದು, ಊರೊಳಗೆ ಹೋಗಿ ಭಿಕ್ಷೆ ಬೇಡುವಾಗ್ಗೆ ಕೆಡಕು ಜನರ ಕಾಟವು ಹೆಚ್ಚಾಗಹತ್ತಿತು. ಆಗ ಹಾಳು ಬಿದ್ದಿರುವ ಒಂದು ಕೋಟೆಯನ್ನು ಕಂಡು "ನನಗೆ ಇರಲಿಕ್ಕೆ ಇದೇ ಯೋಗ್ಯ ಸ್ಥಳವೆಂದು ತಿಳಿದು ಬಿನ್‌ಚೀಫ್ ಮಶೀದೆಯಲ್ಲಿ" ಉಳಿದುಕೊಂಡನು.

ತಾನು ಅಲ್ಲಿ ಶೀತೋಷ್ಣಗಳನ್ನು ತಡೆದುಕೊಳ್ಳುತ್ತ, ಬಾಲಕನಂತೆ ಹಣ್ಣು ಹಂಪಲಗಳನ್ನು ತಿನ್ನುತ್ತ ಕಾಲ ಕಳೆಯಹತ್ತಿದನು. ಅನ್ನ-ವಸನಾದಿ ಗಳ ಆಶೆ ತೊರೆದು ನಿರಾಶೆಯಿಂದ ನಿರಂತರ ದೃಢ ವೈರಾಗ್ಯದ ಘನತೆಯೊಳಿದ್ದು ಏಕಾಗ್ರ ಚಿತ್ತದಿಂದ ಸರ್ವವೂ ತಾನೇ ತಾನಾಗಿ, ತನ್ನ ಶರೀರವೆಂಬ ರಾಜ್ಯಕ್ಕೆ ತಾನೇ ಅರಸನೆನಿಸಿ, ಪೂರ್ಣಾನಂದ ಸಂಪತ್ತನ್ನು ಉಪಭೋಗಿಸುತ್ತ, ಅಜಾತ ಶತ್ರುವಾಗಿ ಮದಗಜದಂತೆ ಸಂಚರಿಸುತ್ತಿದ್ದನು. ಇವನ ಚರ್ಯವನ್ನು ಅರಿಯದ ಪಾಮರರು ಇವನಿಗೆ ಹೊಲೆಯನೆನ್ನುತ್ತಿದ್ದರು. ಮಾನವಂತರು ಹುಚ್ಚನೆನ್ನುತ್ತಿದ್ದರು. ನೀರಿಗೆ ಬಂದ ಸ್ತ್ರೀಯರು ಯೋಗಿವರ್ಯನನ್ನು ಕಂಡು, ಕನಿಕರದಿಂದ ಈ ಮಗನ ಕೆಟ್ಟ ಪ್ರಾರಬ್ಧ ನೋಡಿರೆ ! ಜನಸಂಗದಿಂದ ಇವನನ್ನು ದೂರ ಮಾಡಿಸಿ, ಅನ್ನ ವಸ್ತ್ರವಿಲ್ಲದೆ ಅಡವಿ ಅಡವಿ ತಿರುಗ ಹಚ್ಚಿರು

ಪದು. ಯತಿವರನು, ಅವರು ಆಡುವ ಮಾತನ್ನು ಆಲಿಸಿದ ಕೂಡಲೆ ತನಗೆ ಮೊದಲು ಒದಗಿದ ಸಂಕಷ್ಟವನ್ನು ನೆನಪಿಗೆ ತಂದುಕೊಂಡನು.

## ಪದ—೧೯-೩೮ ಬದ್ವೇಲಿಯಲ್ಲಿ ತಾನು ಅನುಭವಿಸಿದ ಕಷ್ಟದ ಸ್ಮರಣೆ

ಕೆಲವು ವರುಷಗಳ ಹಿಂದೆ ತಾನು ವಿರತಿಯಿಂದ ಕಾಡು, ಗಿರಿ, ಗುಡ್ಡ, ಗುಹೆಗಳನ್ನು ತಿರುಗುತ್ತ ಶ್ರೀ ಗಿರಿಯ ಪೂರ್ವದಿಕ್ಕಿಗಿರುವ, ಬದ್ವೇಲಿ ಎಂಬ ಗ್ರಾಮಕ್ಕೆ ಬಂದನು. ಅಲ್ಲಿ ಒಂದು ದೇವಸ್ಥಾನದಲ್ಲಿ ಕುಳಿತು, ಬಾಹ್ಯ ವೃತ್ತಿಯನ್ನೆಲ್ಲ ತೊರೆದು, ಮೌನಾವಸ್ಥೆಯಿಂದ ತನ್ನ ಸ್ವರೂಪದಲ್ಲಿ ಮೈಮರೆ-ತನು. ಆಗ ಓರ್ವ ತಳವಾರನು, ಸಿದ್ಧನನ್ನು ಕಂಡು, “ಎಲವೋ, ನೀನಾರು?” ಎಂದು ಕೇಳಿದನು. ಅದಕ್ಕೆ ಯತಿಯು ಪ್ರತ್ಯುತ್ತರವನ್ನು ಕೊಡದೆ, ಶಾಂತ ಚಿತ್ತದಿಂದ ಸುಮ್ಮನಿದ್ದನು. ತಳವಾರನು ಬಲುಮೆಯಿಂದ ಮುಟ್ಟಿ, ದೂಡಿ, ಮಾತನಾಡಿಸಿದರೂ ಮಾತನಾಡದೆ ಸಿದ್ಧನು ಮೌನವಾಗಿಯೇ ಇದ್ದನು. ಆಗ ತಳವಾರನು, ಅವನನ್ನು ಒದ್ದು ಚಾವಡಿಗೆ ಎಳೆದೊಯ್ದನು. ಅಲ್ಲಿ ಕೊತವಾಲನ ಮುಂದೆ ನಿಲ್ಲಿಸಿ, ಅವನ ಫಿರ್ಯಾದಿ ಹೇಳಿದನು. ಕೊತವಾಲನು ಯತಿಯನ್ನು ಮಾತಾಡಿಸದೆ, ಅವನನ್ನು ಚಿಕ್ಕಾಡು, ಗುಂಗಾಡುಗಳುಳ್ಳ, ಕತ್ತಲಕೋಣೆಯಲ್ಲಿ ಹಾಕಿಸಿದನು. ಇತ್ತ ತಾನು ತನ್ನ ಸಡಗರದ, ಬೇರೊಂದು ಕಾರ್ಯದಲ್ಲಿ ತೊಡಗಿದನು. ಮೂರು ದಿವಸಗಳವರೆಗೆ ಅವ–ನನ್ನು ಮರೆತು ಬಿಟ್ಟನು. ನಾಲ್ಕನೇ ದಿವಸಕ್ಕೆ, ಸಿದ್ಧನ ನೆನಪಾಗಲು, ಕೂಡಲೆ ಅವನನ್ನು ಕೋಣೆಯಿಂದ ಹೊರಗೆ ಹಿಡತರಿಸಿದನು. ನಂತರ ಕೊತವಾಲನು, ಯತಿಯ ಸಮೀಪಕ್ಕೆ ಬಂದು “ಎಲೆ ಹುಡುಗಾ, ನೀನ್ಯಾರು ? ನಿನ್ನೂರು ಯಾವದು ?” ಎಂದು ಪರಿಪರಿಯಿಂದ ಕೇಳಿದರೂ ಯತಿಯು ಮಾತನಾಡದೆ ಮೌನವಾಗಿಯೇ ಇದ್ದನು. ಕೊತವಾಲನು ಅತಿ ಕೋಪಿಷ್ಟನಾಗಿ, ಈ ಕಳ್ಳ ಸೂಳೇಮಗನು ನಾರುತ್ತಿರುವನು” ಎಂದು ಹಿಂದಕ್ಕೆ ಸರಿದು, “ಮರ್ದನಂ ಗುಣವರ್ಧನಂ” ಎಂಬಂತೆ, ಇಂಥವರಿಗೆ ಮರ್ದನ ಮಾಡುವದೇ ಲೇಸು, ಇವನನ್ನು ಥಳಿಸಿರೆಂದನು. ಆಗ ತಳವಾರ

ರೀರ್ವರು, ಕ್ಷಣಕಾಲ ಹೊಡೆಯಹತ್ತಲು, ಹೊಡೆತದ ಪೆಟ್ಟಿಗೊಮ್ಮೆ "“ಶಿವಾರ್ಪಣಂ" ಎನ್ನುತ್ತಿದನು. ಇದನ್ನು ಅಲ್ಲಿರು ಓರ್ವ ದ್ವಿಜನು ಕಂಡು, ಅಲ್ಲಿಗೆ ಓಡಿ ಬಂದು, “ಈ ಹೊಡೆತ ಇವನಿಗೆ ಸಲ್ಲದು, ಇವನು ಬ್ರಹ್ಮ-ಜ್ಞಾನಿಯಂತೆ ತೋರುವನು. ಇವನನ್ನು ಬಿಟ್ಟುಬಿಡಿರಿ," ಎಂದು ಹೇಳಿ ಅವನನ್ನು ತನ್ನ ಮನೆಗೆ ಕರೆತಂದನು. ನಂತರ ಆಬ್ರಹ್ಮವೇತ್ತನಿಗೆ ಅಭ್ಯಂಗ ಸ್ನಾನ ಮಾಡಿಸಿ, ಮಡಿಯ ಬಟ್ಟೆಯನ್ನು ಹೊದಿಸಿದನು. ಅಲ್ಲಿಂದ ವಿಜೃಂಭಣೆಯಿಂದ ಪಾದ ಪೂಜೆ ತೀರಿಸಿ, ಬಹು ಪ್ರೇಮದಿಂದ ಷಡ್ರಸ ಪಕ್ವಾನ್ನವನ್ನು ಉಣಬಡಿಸಿ, ತೃಪ್ತಿಗೊಳಿಸಿದನು. ಸದ್ಭಕ್ತರಾದವರು ಇದನ್ನು ಕೇಳಿ ಶೀಘ್ರ-ವಾಗಿ ಅಲ್ಲಿಗೆ ಬಂದು ದರುಶನಗೊಂಡು ನಮಿಸಿ ಕುಳಿತರು. ಮತ್ತು ಅವರ ಮುಖದಿಂದ ಧರ್ಮಪರ ನೀತಿ ವಾಕ್ಯಗಳನ್ನು ಕೇಳಿ ಕಡು ಶಾಂತರಾದರು. ಇದು ಇಲ್ಲದೆ ಇಂತಪ್ಪ ಪ್ರಜ್ಞಾನ ಮೂರ್ತಿಯನ್ನು ಹೊಡಿಸಿದ ಆ ಮೂರ್ಖ ಕೊತವಾಲನನ್ನು ನಿಂದಿಸುತ್ತ ಅವನ ಮೇಲೆ ಕ್ಷೋಭೆಯುಳ್ಳವರಾದರು. ಈ ವಾರ್ತೆಯು, ಗ್ರಾಮದ ತುಂಬೆಲ್ಲಾ ಹಬ್ಬಿ ಕೊತವಾಲನಿಗೂ ಮುಟ್ಟಿತು. ಕೊಡಲೇ ತಾನು ಮಾಡಿದ ಅಪರಾಧಕ್ಕೆ, ಆ ಮಹಿಮರನ್ನು ಕಂಡು ಕ್ಷಮೆ-ಯನ್ನು ಬೇಡಿಕೊಳ್ಳಬೇಕು, ಎಂದು ತನ್ನ ತಾಮಸ ಗುಣವನ್ನು ಬಿಟ್ಟು, ವಿನಯ ಶೀಲನಾಗಿ, ಭಯಭಕ್ತಿಯಿಂದ ಬಂದು, “ಪರಮ ಸ್ವಾಮಿಯೇ, ತಮ್ಮನ್ನು ಹೊಡೆಸಿದ್ದು, ನನ್ನಿಂದ ಮಹದಪರಾಧವಾಯಿತು ಬಹು ಪಾಪಾ-ತ್ಮನಾದ ನನ್ನನ್ನು, ಕ್ಷಮಿಸಿ ಕೃಪೆದೋರಿ ಕಾಪಾಡಬೇಕು” ಎಂದು ಅವರ ಪಾದಕ್ಕೆ ಬಿದ್ದನು.

ಆ ದಯಾಘನರಾದ ಸಿದ್ಧರು “ದಯಾಳನೇ. ಇಲ್ಲಿ ಕೇಳು. ನನ್ನ ಕರ್ಮವನ್ನು ನೀನೇ ಈ ರೀತಿ ಕಳೆದ ಕಾರಣ ನೀನು ನನಗೆ ನಿಜವಾದ ಗುರುವು” ಎಂದು ಕೊತವಾಲನಿಗೆ ನಮಿಸಿದರು. “ಅಯ್ಯೋ ! ಸ್ವಾಮಿ, ಇದೇನು ಮಾಡಿದಿರಿ ? ಪರಮ ಪಾಪಿಯಾದ ನನ್ನನ್ನು ಪೊರೆಯಿರೆಂದು ಶರಣು ಬಂದರೆ, ಕಾರುಣ್ಯಸಾಗರರಾದ ತಾವು ಮರಳಿ ನನಗೆ ನಮಿಸಿ ನನ್ನನ್ನು ಇನ್ನೂ ಯಾವ ನರಕಕ್ಕೆ ತಳ್ಳುವಿರಿ ? ಇದು ತಮಗೆ ಸರಿ ಕಾಣಬಹುದೆ ?” ಎಂದು ಕಣ್ಣೀರು ಸುರಿಸಹತ್ತಿದನು.

ಆಗ ಕೃಪಾಳು ಸಿದ್ಧರು, ಕೊತವಾಲರೇ ಕೇಳಿರಿ, ನನ್ನ ಕರ್ಮವು ನಿಮ್ಮ ದೃಷ್ಟಿದ್ವಾರದಿಂದ ನಿಮ್ಮ ಮನಸ್ಸಿನಲ್ಲಿ ಸೇರಿತು. ಅಲ್ಲಿ ಅಂತರ್ಯಾಮಿಯಾದ ಗುರುವು ನಿಮ್ಮನ್ನು ಪ್ರೇರಿಸಿ ನಿಮ್ಮಿಂದ ಈ ಕೃತಿಯನ್ನು ಮಾಡಿಸಿರುವನು. ನನ್ನ ಕರ್ಮವನ್ನು ನನಗೆ ಉಣಿಸಿ ತೀರಿಸಿದ, ಆ ಗುರುವಿಗೆ ನಿಶ್ಚಯವಾಗಿ ನನ್ನ ನಮನವಿರುವದು. ನಿಮಗೆ ಇದರಿಂದ ಯಾವ ಬಾಧಕವೂ ಇರುವದಿಲ್ಲ" ಎಂದು ಹೇಳಿ ಪ್ರಸಾದನನ್ನು ತಮ್ಮ ಅಮೃತ ಹಸ್ತದಿಂದ ಕೊತವಾಲನ ಬಾಯಲ್ಲಿ ಹಾಕಿ ಆಶೀರ್ವದಿಸಿ ಅವನ್ನು ಸಮಾಧಾನ ಪಡಿಸಿದರು.

ಅಲ್ಲಿದ್ದವರೆಲ್ಲರೂ ಅದನ್ನು ಕಂಡು ಬಹು ಆಶ್ಚರ್ಯಚಕಿತರಾದರು. ಮತ್ತು "ಕಡು ನಿರ್ಧಯದಿಂದ ತಮ್ಮನ್ನು ಮನಬಂದಂತೆ ಹೊಡಿಸಿದರೂ, ತಾವು ಅವನ ಮೇಲೆ ಕ್ರೋಧವಾಗದೆ, ಶಾಂತರೀತಿಯಿಂದ ಅದು ಪ್ರಾರಬ್ಧವೆನ್ನುತ್ತ, ಗುರುಭಾವದಿಂದ ಅವನನ್ನು ಸತ್ಕರಿಸಿ ಆಶೀರ್ವದಿಸಿದರು. ಇವರಲ್ಲಿ ವಿರತಿ ಎಂಥಾದ್ದು ! ಅದೆಂತ ಅನುಭವ ! ಇಂಥ ತಿತಿಕ್ಷಾದಿಗಳು ಸಲೆ ಇರ್ವಲ್ಲಿ ನೆಲಸಿರಲು, ಇವರು ಹರನಲ್ಲದೆ ನರರಲ್ಲ" ಎಂದು ಎಲ್ಲರೂ ಪರಮ ಸಿದ್ಧರ ಚರಣಕ್ಕೆರಗಿದರು. ಮತ್ತು "ಗುರುವೇ, ತಮ್ಮ ಹೆಸರಿನಿಂದ ಇಲ್ಲಿ ಒಂದು ಮಂದಿರವನ್ನು ರಚಿಸಬೇಕೆಂದು ಯೋಚಿಸಿರುವೆವು. ಅದಕ್ಕಾಗಿ ತಾವು ನಮಗೆ ಅಪ್ಪಣೆ ಕೊಡಿಸಬೇಕು" ಎಂದು ಬಿನ್ನವಿಸಿಕೊಂಡರು. ಕೂಡಲೇ ಸದ್ಗುರು ಸಿದ್ಧನು ಅವರಿಗೆ ಅಭಯವನ್ನಿತ್ತು ಆಶೀರ್ವದಿಸಿ ತಾನು ಹೊರಟು ಬಂದ ನೆನಹು ತನ್ನ ಸ್ಮರಣೆಗೆ ಬಂದದ್ದನ್ನು ಆ ಸ್ತ್ರೀಯರಿಗೆ "ಮಾನವಂತರಾದ ಮಾತೆಯರೇ, ಬದ್ವೇಲಿಯಲ್ಲಿ ಒದಗಿದ ಹೀನ ಪ್ರಾರಬ್ಧಕ್ಕಿಂತಲೂ ಇದೇನು ಅಷ್ಟು ಕಷ್ಟದಾಯಕವಲ್ಲ" ಎಂದು ಹೇಳಿ, ಸಿದ್ಧನು ಸ್ವರೂಪದಲ್ಲಿ ಮನವ ನಿಲ್ಲಿಸಿ ನ್ಯೂನತೆವಿಲ್ಲದ ಸಹಜಾನಂದದಲ್ಲಿ ಕುಳಿತನು.

## ಪದ—೩೯—೪೪ ಮೋಹರಮ್ಮ ಹಬ್ಬದಲ್ಲಿ ನೊಗದ ಮೇಲೆ ಕುಳ್ಳಿರಿಸಿ ಕಷ್ಟ ಕೊಟ್ಟದ್ದು

ಮಲಗಿದ ಮಗನನ್ನೆಬ್ಬಿಸಿ ಮೊಲೆಯನುಣಿಸುವ ತಾಯಿಯಂತೆ, ಸಿದ್ಧನ ಪ್ರಾರಬ್ಧವು, ದುಃಖವನ್ನುಣಿಸುವದಕ್ಕಾಗಿ, ಸಮಾಧಿಸ್ಥನಾದ ಅವನನ್ನು

ಸಮಾಧಿಯಿಂದ ಹೊರದೂಡಿತು. ಮೊಹರಂ ಹಬ್ಬ ಬಂದಿತು. ಆಗ ಕೆಲವು ಸೆರೆಗುಡುಕರು, ಹೆಂಡವನ್ನು ಕುಡಿದು ಸಿದ್ಧನ ಬಳಿಗೆ ಬಂದರು. ಅವನ ಕೈಹಿಡಿದು, ಬಂಡಿಯ ನೊಗದ ಮೇಲೆ ಅವನನ್ನು ಕುಳ್ಳಿರಿಸಿ ನಾಲ್ಕು ಮಂದಿ ಹೆಗಲ ಮೇಲೆ ಹೊತ್ತರು. ಅಲ್ಲಿಂದ ಊರಲ್ಲಿ ಓಣಿ ಓಣಿ ತಿರುಗುತ್ತ, ಅಂಗಡಿ ಮನೆ ಮನೆಗೆ ಹೋಗಿ ರೊಕ್ಕ ಎತ್ತಹತ್ತಿದರು. ಅಲಾವಿ ಕುಣಿಯ ಸುತ್ತಲೂ ಕುಣಿದಾಡಿದರು. ಸಿದ್ಧನ ತೊಡೆಗಳು ನೋವಾಗಿ ಕೆಳಗಿಳಿಯ-ಹೋಗಲು, ಅವನನ್ನು ಹೊಡೆದು ಅಲ್ಲಿಯೇ ಕುಳ್ಳಿರಿಸಿ, ತಿಂಡಿ ತಿನಸು ಕೊಟ್ಟು ನೀರು ಕುಡಿಯುತ್ತ, ಇಡೀ ದಿವಸ ಆ ನಿಷ್ಕರುಣೆ ಜನರು, ಸಿದ್ಧನಿಗೆ ಕಡು ಕಷ್ಟ ಕೊಟ್ಟರು. ಸಾಯಂಕಾಲವಾಗಲು, ಅವರೆಲ್ಲರೂ ಸಿದ್ಧನನ್ನು ಅಲ್ಲಿಯೇ ಬಿಟ್ಟು ಹೋದರು ಅವನ ಎರಡೂ ತೊಡೆಗಳು ಕೆತ್ತಿ, ಕೆಂಪಾಗಿ ಬಾತು, ನಡೆಯಲಿಕ್ಕೆ ಬಾರದಾದವು. ಆಗ ಅಲ್ಲಿಯೇ ಬಿದ್ದುಕೊಂಡು, ಹೀಗೆ ಯೋಚಿಸುತ್ತಾನೆ. "ನಾನು ಹೀಗೆಯೇ ತಿರುಗುತ್ತಿದ್ದರೆ ಕರಣಗಳು, ವಿಕ್ಷೇಪಹೊಂದುವವೆಂದು ತಿಳಿದು ಗುರುನಾಥನು ಒಂದೇ ಸ್ಥಾನದಲ್ಲಿರು ವಂತೆ ಉಪಕಾರ ಮಾಡಿರುವನು," ಎಂದು ನಿರ್ವಿಕಲ್ಪ ಸ್ಥಿತಿಯಿಂದ ಅಲ್ಲಿಯೆ ಕೆಲವು ದಿವಸ ಕಾಲ ಕಳೆದನು. ಅಲ್ಲಿಗೆ ಅನೇಕ ಹುಡುಗರು ಬಂದು ಸಿದ್ಧನ ಕೂಡ ಪಟ, ಚಿಣಿಪಣಿ, ಚಂಡು, ಗುಂಡು, ಬೊಗರೆ, ತಿಳ್ಳಿ, ಹುಡ್ತುತಿ, ಮೊದಲಾದ ಆಟಗಳನ್ನಾಡುತ್ತ ಬೀದಿಯನ್ನು ಅಂದಗೊಳಿಸಹತ್ತಿದನು.

ಮಂಗಲ— ಧರೆಯ ನೆಲ್ಲಂ ನಿಲ್ಲದೇ ತಾಂ ।
ತಿರುಗುವನಣುಗನನ್ನು ನೆರೆಗೆಲೆ ।
ದಿರುವವನ ಗೆಲೆದವನ ಪತ್ನಿಯ ಮಾನ ಕಾಯ್ದುವನ ॥
ಅರಸಿಗಂ ಭಾವನೆನಿಸಿಪ್ಪನ ।
ಕರದಶಸ್ತ್ರಕೆ ಕೊರಳಮಂ ಗೊಡು ।
ತಿರುವವನ ಬೆನ್ನೇರಿದನ ಚರಣಕ್ಕೆ ನತನಪ್ಪೇಂ ॥

ಇತಿ ಶ್ರೀ ಸಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರಲೀಲಾ ಚರಿತ್ರಕಲ್ಪದ್ರುಮದೊಳು ದುಃಖ ಸಹನ ಬಳಿಕ ಹಾಸ್ಯವೆಂತೆಂಬ ೨೬ ನೇ ಅಧ್ಯಾಯ ಸಮಾಪ್ತಿ.

————

|| ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ||



# ಸಂಚಾರ ಸಂಭ್ರಮ ಕಾಂಡ

## ಅಧ್ಯಾಯ ೨೭

ಈ ಅಧ್ಯಾಯದಲ್ಲಿ ವಿಜಾಪುರದಲ್ಲಿ ತುಳಜಪ್ಪನೆಂಬ ಸದ್ಭಕ್ತನ ಮನೆಯಲ್ಲಿ ಕೆಲವು ದಿವಸವಿದ್ದು ಶಾಸ್ತ್ರ ನಡಿಸಿ ಬಳಿಕ ಬಿನ್‌ಚೀಫ್ ಮಸೀದಿಗೆ ಹೋದದ್ದು. ಮತ್ತು ಅಲ್ಲಿ ಮತವಾದ ಮಾಡುವ ಜನರಿಗೆ ಸರ್ವರೂ ಸಮಾನಿಕರೆಂದು ನಿರ್ಣಯ ಮಾಡಿ ತೋರಿಸಿದ್ದು.

ಜಮುಖಂಡಿಯ ಹತ್ತರ ಸಿದ್ಧಾಪುರದಲ್ಲಿ ಒಬ್ಬ ಹಟಯೋಗಿ ಜಂಗಮನ ಹಠವನ್ನು ಬಿಡಿಸಿದ್ದು.

ಯಾದವಾಡದಲ್ಲಿ ಪುರಾಣಿಕನಿಗೆ ಅಲಂಕಾರಸೊಳಗಿನ ಅರ್ಥವನ್ನು ಸಮನ್ವಯ ಮಾಡಿ ಕೊಟ್ಟು ಅವನಿಗೆ ಕಾಶಿಗೆ ಹೋಗಲು ಅಪ್ಪಣೆ ಕೊಟ್ಟದ್ದು. ಬಳಿಕ ಅದೇ ಊರ ಕೊತವಾಲನು ಸಿದ್ಧನನ್ನು ದೂಡಿಸಿ ಊರಿಂದ ಹೊರಗೆ ಹಾಕಿದ ವಿಷಯಗಳಿರುವವು.

ಸ್ತುತಿ ಪದ—ಸರುವ ಜೀವರ ದೇಹದೊಳಗಂ |
ಪರಮ ವೈಶ್ವಾನರನ ರೂಪಂ |
ಧರಿಸಿ ನಾಲ್ದೆರದನ್ನವಂ ಪಚನವನು ಗೈಯುತ್ತಾ ||
ಕರಣದಿಂದ್ರಿಯ ಪ್ರಾಣಗಳಿಗಂ |
ನೆರೆ ಸುಚೇತನವನ್ನು ಗೊಡುತಿರು |
ತಿರುತಲಂತರ್ಯಾಮಿ ಯೆನಿಸಿಹ ನಿನಗೆ ನತನಪ್ಪೇಂ ||

ಬಳಿಕ ಸಿದ್ಧಭಾರತಿಯು ವಿಜಾಪುರದಲ್ಲಿ ಅನೇಕ ಹುಡುಗರೊಂದಿಗೆ ಆಟವಾಡುತ್ತ ಕಾಲ ಕಳೆಯಹತ್ತಿದನು. ಒಂದು ದಿವಸ ತುಳಜಪ್ಪನೆಂಬ ಓರ್ವ ಸದ್ಭಕ್ತನು ಅನೇಕ ಜನರ ಮುಖದಿಂದ ಸಿದ್ಧರ ವಾರ್ತೆಯನ್ನು ಕೇಳಿ ಅವರಿರುವಲ್ಲಿಗೆ ಬಂದನು. ಕೃಶವಾಗಿ ಬಳಲಿರುವ ಸಿದ್ಧಯೋಗಿಯ ಶರೀರವನ್ನು ಕಂಡು ತನ್ನ ಮನಸ್ಸಿನಲ್ಲಿ "ಶಮಾದಿ ಷಡ್ಗುಣಭರಿತ ಬ್ರಹ್ಮಜ್ಞಾನ ಸಾಗರನಾದ ಇಂಥ ಶಾಂತಮೂರ್ತಿಯನ್ನು ಮನೆಗೆ ಕರೆದೊಯ್ದು ಭಕ್ತಿಯಿಂದ ಇವರ ಸೇವೆ ಮಾಡಿದ್ದಾದರೆ, ನಾನು ಜನ್ಮವೆತ್ತಿದ್ದಕ್ಕೆ ಸಾರ್ಥಕವಾಗುವದು," ಎಂದು ತಿಳಿದು. ಅವರೊಳಗಿನ ಕೆಲವು ಹುಡುಗರಿಗೆ, ಈ ಹುಚ್ಚನನ್ನು ಆಡುತ್ತಾಡುತ್ತ ನಮ್ಮಮನೆಯ ಮುಂದೆ ಕರೆತಂದರೆ ನಿಮಗೆ ಕೊಬ್ಬರಿ–ಬೆಲ್ಲವನ್ನು ಕೊಡುವೆನು ಎಂದು ಹೇಳಿ ಅವರಿಗೆ ತನ್ನ ಮನೆಯನ್ನು ತೋರಿಸಿದನು.

ಪದ—೧–೧೧ **ತುಳಜಪ್ಪನ ಮನೆಯಲ್ಲಿ ಶಾಸ್ತ್ರಪ್ರವಚನ ನಡಿಸಿದ್ದು**

**ಆಗ** ಆ ಎಲ್ಲ ಹುಡುಗರು ಸಿದ್ಧನನ್ನು ಕೊಡಿಕೊಂಡು ಆಡುತ್ತಾಡುತ್ತ ತುಳಜಪ್ಪನ ಮನೆಯ ಮುಂದಿನ ಅಂಗಳದಲ್ಲಿ ಆಡಹತ್ತಿದರು. ಆಗ ತುಳಜಪ್ಪನು ಯತಿವರನನ್ನು ಕಂಡು ಕಡು ಹರುಷಗೊಂಡು ಓಡಿ ಬಂದು ಸಿದ್ಧರ ಪಾದಕ್ಕೆ ಬಿದ್ದನು. ಮತ್ತು ಅವರ ಕರಪಿಡಿದು ಮನೆಯೊಳಗೆ ಕರೆದೊಯ್ದನು. ಅಲ್ಲಿ ಯೋಗಿವರನನ್ನು ಕೂಡ್ರಿಸಿ, ಕ್ಷೌರಿಕನನ್ನು ಕರೆತಂದು ಕ್ಷೌರ ಮಾಡಿಸಿದನು. ನಂತರ ತೈಲವನ್ನು ಮೈಗೆಲ್ಲ ತೊಡೆದು ತಿಕ್ಕಿ ಉಷ್ಣೋದಕದಿಂದ ಅಭ್ಯಂಗ ಸ್ನಾನ ಮಾಡಿಸಿ ಮಡಿಯನ್ನು ಹೊದಿಸಿದನು ನಂತರ ಗದ್ದುಗೆ ಹಾಕಿ, ಅದರ ಮೇಲೆ ಕೂಡ್ರಿಸಿ ಷೋಡಶೋಪಚಾರದಿಂದ ಪೂಜಿಸಿ

ಪಕ್ವಾನ್ನದ ಎಡೆಮಾಡಿ ಉಣ್ಣಿಸಿ ಕೋಣೆಯೊಳಗೆ ಮೃದುವಾದ ಹಾಸಿಗೆ ಹಾಸಿ ಮಲಗಿಸಿದನು. ನಂತರ ಆ ಪರಮ ಸದ್ಭಕ್ತನಾದ ತುಳಜಪ್ಪನು, ತನ್ನ ಆಪ್ತೇಷ್ಟರು, ಗೆಳೆಯರು, ಬಂಧು. ಬಳಗದವರೆಲ್ಲರಿಗೂ ಈ ವಾರ್ತೆ, ಅರಿಕೆಯಾಗುವಂತೆ ಮಾಡಿದನು. ಈ ಶುಭವಾರ್ತೆಯನ್ನು ಅವರೆಲ್ಲರೂ ಕೇಳಿ ಆನಂದಭರಿತರಾಗಿ, ಸದ್ಭಕ್ತರಾದ ಸ್ತ್ರೀ-ಪುರುಷರೆಲ್ಲರೂ ಹಣ್ಣು-ಕಾಯಿಗಳನ್ನು ತಕ್ಕೊಂಡು ಸಂಜೆಯ ಸಮಯಕ್ಕೆ ಬಂದು ಸದ್ಗುರುವಿನ ಮುಂದಿಟ್ಟು ನಮಿಸಿ ಕುಳಿತುಕೊಂಡರು

ಬಳಿಕ ಅವರಲ್ಲಿ ಯಾರ್ಯಾರಿಗೆ ಏನೇನು ಸಂಶಯಗಳಿದ್ದವೋ, ಅವುಗಳನ್ನು ಸಿದ್ಧರ ಮುಂದಿಟ್ಟು, ಅವರ ಮುಖದಿಂದ ತಮ್ಮೆಲ್ಲ ಸಂಶಯಗಳನ್ನು ಪರಿಹರಿಸಿಕೊಂಡು, ನಿಃಸಂಶಯವುಳ್ಳವರಾಗುತ್ತಿದ್ದರು. ಅವರೆಲ್ಲರೂ ಕೂಡಿ ವಚನ ಶಾಸ್ತ್ರವನನ್ನು ಸದ್ಗುರುಗಳ ಮುಖದಿಂದ ಶ್ರದ್ಧೆಯಿಂದ ಶ್ರವಣ ಮಾಡಿಕೊಂಡರು. ಇದು ಅಲ್ಲದೆ ಮೇಘರೂಪ ವೇದಗರ್ಭಿತ ತತ್ವವೇತ್ತರ ಮುಖದಿಂದ ಸ್ವಾತೀ ಮಳೆಯಂತೆ ಸುರಿಯುತ್ತಿರುವ ನೀತಿ, ಭಕ್ತಿ, ವಿರತಿ ಜ್ಞಾನವೆಂಬ ಬೋಧಪರ ವಾಕ್ಯಗಳು ಅವರೆಲ್ಲರ ಮನಸ್ಸನ್ನು ತಣಿಸಿ ತೃಪ್ತಿಗೊಳಿಸುತ್ತಿದ್ದವು. ಈ ವಾರ್ತೆಯು, ಪುರದ ಎಲ್ಲ ಜನರಿಗೂ, ಅರಿಕೆಯಾಗಲು, ಅನೇಕರು ಬಂದು ಬಂದು ದುರುಶನಗೊಂಡು ಹೋಗಹತ್ತಿದರು. ಹೀಗೆ ಕೆಲವು ದಿನಗಳು ಗತಿಸಲು, ಸಿದ್ಧನು, ಒಂದುದಿನ ಉದಯದೊಳು ಎದ್ದು, ಸೌಮ್ಯದಿಂದ ತುಳಜಪ್ಪನಿಗೆ, ತನ್ನ ಮನದ ಒಲವನ್ನು ತಿಳಿಸಿದ್ದೇನಂದರೆ "ನಿರುತ ತನ್ನ ಮನಸ್ಸಿನ ಇಚ್ಛಾನುಸಾರವಾಗಿ, ಹಾರಾಡುತ್ತಿರುವ ಹಕ್ಕಿಯನ್ನು ಹಿಡಿದು ಪಂಜರದಲ್ಲಿಟ್ಟು ಎಷ್ಟು ಮಮಕಾರದಿಂದ ಸಲುಹಿದರೂ, ಅದಕ್ಕೆ ಸುಖಮಾತ್ರ ಎಷ್ಟೂ ದೊರೆಯಲಾರದು. ಅದರಂತೆ ನೀನು ನನ್ನನ್ನು ನಿನ್ನ ಮನೆಯಲ್ಲಿ ಅದೆಷ್ಟೋ ಪ್ರೀತಿಯಿಂದ ಇರಿಸಿಕೊಂಡರೂ, ನನ್ನ ಮನಸ್ಸು ಹರುಷದಿಂದ ರಮಿಸಲೊಲ್ಲದು. ಅದುಕಾರಣ ನೀನು ಈಗಲೆ ನನ್ನನ್ನು ಆ ಬಿಸ್-ಚೀಪ್ ಮಸೀದಿಗೆ ಕಳುಹಿಸಿಕೊಡಬೇಕು," ಎಂದು ಆಜ್ಞಾಪಿಸಿದನು. ಅದಕ್ಕೆ ಸರ್ವರೂ ಸಮ್ಮತಿಸಿ ಪುನಃ ಆ ಮಸೀದಿಗೆ ಕಳುಹಿಸಿಕೊಟ್ಟರು.

**ಪದ—೧೨.೨೫ ಅಲ್ಲಿಯು ಮತವಾದ ಮಾಡುವ ಜನರಿಗೆ ಸರ್ವರೂ ಸಮಾನಿಕರೆಂದು ನಿರ್ಣಯ ಮಾಡಿ ತೋರಿಸಿದ್ದು**

ಆ ಸ್ಥಾನಕ್ಕೆ ಅನೇಕ ಬ್ರಾಹ್ಮಣರು, ಲಿಂಗಾಯತರು ಮೊದಲಾದ ಎಲ್ಲ ಜಾತಿಯ ಜನರೂ, ಪಂಡಿತರೂ, ಪಾಮರರೂ, ರಾಜ್ಯಾಧಿಕಾರಿಗಳೂ, ಸ್ತ್ರೀಯರೂ, ಬಾಲ-ಬಾಲಕೆಯರೂ, ಸರ್ವರೂ ಸಿದ್ಧರ ವಾರ್ತೆಯನ್ನು ಕೇಳುತ್ತ ಬಂದು ಮಹಾತ್ಮರ ದರುಶನ ಮಾಡಿಕೊಂಡು ಹೋಗುತ್ತಿದ್ದರು. ತತ್ವವೇತ್ತರು ಮಾತ್ರ ಸಿದ್ಧ ಸದ್ಗುರುವಿನ ಮೇಲೆ ಶ್ರದ್ಧೆಯನ್ನಿಟ್ಟು, ಹರುಷ-ದಿಂದ ಶಾಸ್ತ್ರಶ್ರವಣ ಮಾಡಹತ್ತಿದರು. ಸಿದ್ಧಮೂರ್ತಿಯ ಈ ಪ್ರಭಾವವು, ವಿಜಾಪುರದ ತುಂಬೆಲ್ಲ ಹಬ್ಬತೊಡಗಿತು. ಮೊದಲು ಇವನನ್ನು ಪರಿಪರಿಯಿಂದ ಕಾಡಿದ ದುರ್ಜನರೆಲ್ಲರೂ, ತಮ್ಮ ತಮ್ಮ ಮನದೊಳು ನೊಂದು ಪಶ್ಚಾತ್ತಾಪ ಹೊಂದಿದವರಾಗಿ ತಮ್ಮ ಡಂಭ ಚಾರವನ್ನು ಬಿಟ್ಟು, ಅವನ ಪಾದಕ್ಕೆ ಬಿದ್ದು ನಮ್ಮ ಅಪರಾಧ ಮನ್ನಿಸಬೇಕೆಂದು, ಪ್ರಾರ್ಥಿಸಿಕೊಳ್ಳ-ಹತ್ತಿದರು. ಮತ್ತೆ ಕೆಲವರು ತಮ್ಮ ಮಕ್ಕಳನ್ನೆತ್ತಿಕೊಂಡು ಬಂದು, ಅವು-ಗಳ ರೋಗ ನಿವಾರಣೆ ಮಾಡಿಕೊಳ್ಳುತ್ತಿದ್ದರು. ಇದು ಅಲ್ಲದೆ ಗಾಳಿ, ಭೂತ, ಪಿಶಾಚಿ, ದೆವ್ವ, ಬಡೆದವರನ್ನು ಕರತಂದು ಸಿದ್ಧರ ಪಾದಕ್ಕೆ ಕೆಡವಿ, ಅವರೆನ್ನು ಗುಣಪಡಿಸುತ್ತಿದರು. ಇನ್ನೂ ಅನೇಕರು ತಮ್ಮ ಗ್ರಹ ಪೀಡಾದಿಗಳ ನಿವೃತ್ತಿಗಾಗಿಯೂ, ಮತ್ತೆ ಕೆಲವರು ದಾರಿದ್ರ ಪರಿಹಾರಕ್ಕಾಗಿಯೂ, ಬಂದು ತಮ್ಮ ಇಷ್ಟಾರ್ಥವನ್ನು ಪೂರ್ತಿಮಾಡಿಕೊಳ್ಳುತ್ತ, "ಇವನು ಕಂತು ಹರನೇ ಹೌದು," ಎಂದು ಸಂತೋಷದಿಂದ ನಮಿಸುತ್ತ ಪಾದತೀರ್ಥ ತೆಗೆದುಕೊಂಡು ತೃಪ್ತಿಹೊಂದಿ ಹೋಗುತ್ತಿದ್ದರು. ಅಲ್ಲಿಗೆ ಬಂದ ಸದ್ಭಕ್ತರೆಲ್ಲರೊ, ಆ ಶಾಂತ ಮೂರ್ತಿಗೆ ತೃಪ್ತಿಗೊಳಿಸುತ್ತ, ಸಂತೋಷದಿಂದ ಸೇವಸಲ್ಲಿಸುತ್ತಿದ್ದರು.

**ಸರ್ವಮತ ಸಮನ್ವಯ ಮಾಡಿದ್ದು**

ಒಂದು ದಿವಸ ಆ ವಿಜಾಪುರದಲ್ಲಿರುವ, ಹದಿನೆಂಟು ಕುಲದ ವಾದಿಗಳು ಬಂದು, ಸಿದ್ಧ ಸದ್ಗುರುಗಳ ಮುಂದೆ ತಮ್ಮ ತಮ್ಮ ಜಾತಿಯ, ಶ್ರೇಷ್ಠತ್ವವನ್ನು ಎತ್ತಿ ಹೇಳುತ್ತ, ತಮ್ಮ ತಮ್ಮೊಳಗೆ ಕಲಹ ನಡಿಸಿದರು. ಸದ್ಗುರು ಸಿದ್ಧನು ಅವರ ಕಲಹವನ್ನು ಕೇಳಿ ಅವರೆಲ್ಲರಿಗೂ, ಬೋಧಿಸಿದ್ದೇನೆಂದರೆ.

"ಜಗತ್ತಿಗೆ ತಂದೆಯಾಗಿ, ಒಬ್ಬನೇ ದೇವರಿರುವನು. ಅವನು ಹೆಚ್ಚು ಕಡಿಮೆ ಜಾತಿಗಳುಳ್ಳ, ತನುಗಳಲ್ಲಿ ಪಂಚಜ್ಞಾನೇಂದ್ರಿಯ, ಪಂಚ ಕರ್ಮೇಂದ್ರಿಯ, ಪಂಚ ಪ್ರಾಣ, ಪಂಚ ಅಂತಃಕರಣ ಮೊದಲಾದ ಇಂದ್ರಿಯ ಗಳನ್ನು ರಚಿಸಿದನು. ಇದು ಅಲ್ಲದೆ ಮೂರು ಅವಸ್ಥೆಗಳನ್ನೂ, ಹಸಿವೆ, ತೃಷೆ, ಖೇದ,ಮೋದ,ಆಲಸ್ಯ ಮೊದಲಾದವುಗಳನ್ನು ರಚಿಸಿದನು. ಶರೀರವು ಜಡವಾದ ಮೂಲಕ ಅದು ಚಲಿಸದಿರಲು, ತಾನೇ ಜೀವರೂಪದಿಂದ, ಸರ್ವಶರೀರಗಳಲ್ಲಿ ಪ್ರವೇಶಿಸಿರುವನು. ಅದು ಕಾರಣ, ಭ್ರಾಂತಿಮಯನಾದ ನಿಮ್ಮೆಲ್ಲರ ವಾದವು ದುಃಖಕ್ಕೆ ಕಾರಣವಾಗಿದೆ. ಒಂದು ದೇಹದಲ್ಲಿ ಇಂದ್ರಿಯಗಳು, ಬೇರೆ ಬೇರಾಗಿದ್ದು ಅವುಗಳು ತಮ್ಮ ತಮ್ಮ ಬೇರೆ ವ್ಯವಹಾರಗಳನ್ನು ಮಾಡು ತ್ತಿರುವಂತೆ, ಜಗತ್ತೆಂಬ ದೇಹಕ್ಕೆ, ಬೇರೆ ಬೇರೆ ಜಾತಿ, ವರ್ಣಾಶ್ರಮಗಳು ಇಂದ್ರಿಯಗಳಂತೆ ಇರುವವು. ನೀವು ನಿಮ್ಮ ಬೇರೆ ಬೇರಾಗಿರುವ, ಇಂದ್ರಿಯ ಗಳ ಮೇಲೆ ಸಮನಾದ ಪ್ರೀತಿ ಇಟ್ಟಿರುವಂತೆ, ಪರಸ್ಪರರಾದ ನೀವೆಲ್ಲರು ಸಮ ಚಿತ್ತದಿಂದ ಪ್ರೀತಿಯುಳ್ಳವರಾದರೆ, ದೇವರು ನಿಮಗೆ ಒಲಿಯುವನು. ಬುದ್ಧಿ ವಂತರೆ ? ನಿಮ್ಮ ಅನುಭವಕ್ಕೆ ಬರುವ ದೃಷ್ಟಾಂತವನ್ನು ಕೇಳಿರಿ,' ನಿಮ್ಮ ದಶೇಂದ್ರಿಯಗಳೆಲ್ಲವೂ, ತಮ್ಮ ತಮ್ಮೊಳಗೆ ನಾಹೆಚ್ಚು,ನಾಹೆಚ್ಚು ಎಂದು ಬಡಿದಾ ಡದೆ ಒಂದಕ್ಕೊಂದು ಅನುಕೂಲವಾಗಿ ಹೊಂದಿಕೊಂಡು ಹೇಗೆ ಹೋಗುವವೋ ಅದರಂತೆ ನೀವೆಲ್ಲರೂ ಸಹಕಾರದಿಂದ ಇರಬೇಕು," ಎಂದು ಬೋಧಿಸಿದನು.

ಸದ್ಗುರುವಿನ ಬೋಧೆಯು, ಎಲ್ಲರ ಮನಸ್ಸಿನ ಮೇಲೆ ಪರಿಣಾಮವಾಗಿ ಅವರು ತಮ್ಮ ಕಲಹವನ್ನು ಬಿಟ್ಟು, ಶುದ್ಧಮನದಿಂದ ಸರ್ವರೂ ಶಾಂತರಾಗಿ, ಸಿದ್ಧರ ಚರಣಕ್ಕೆ ಬಿದ್ದು ಭಕ್ತಿಯಿಂದ ನಮಿಸುತ್ತ ತಮ್ಮ ಮನೆಗಳಿಗೆ ಹೋದರು.

ಇತ್ತ ಸಿದ್ಧರು ಕೆಲವು ದಿವಸಗಳಿದ್ದು, ಅಲ್ಲಿಂದ ಮುಂದೆ ಸಂಚಾರಕ್ಕೆ ಹೊರಡಲು ಸಿದ್ಧರಾದರು. ಆಗ ಪುರದ ಸದ್ಭಕ್ತರೆಲ್ಲರು ಬಂದು ಸ್ವಾಮಿಗಳನ್ನು ಕುರಿತು "ತಾವು ಇಲ್ಲಿಂದ ಪಯಣ ಬೆಳಸದೆ ಇಲ್ಲಿಯೇ ಇದ್ದು ಕರುಣೆಯಿಂದ ನಮ್ಮೆಲ್ಲರನ್ನು ಪೊರೆಯಬೇಕು" ಎಂದು ಬೇಡಿಕೊಂಡರು.ಅದಕ್ಕೆ ಸಿದ್ಧಾರೂಢರು "ಭಕ್ತರೇ ಕೇಳಿರಿ, ಇನ್ನು ಮುಂದೆ ಸ್ವಲ್ಪದಿವಸಕ್ಕೆ ಈ ದೇಶಕ್ಕೆ ಕ್ಷಾಮಕಾಲ ಬರು ವದು. ಅದರಿಂದ ನೀವೆಲ್ಲರೂ ಅನ್ನವಿಲ್ಲದೆ ಬಹಳ ಬಳಲುವಿರಿ. ಅದನ್ನು ನಾನು

ಈಕ್ಷಿಸಲಾರೆ" ಎಂದರು. ಅದನ್ನು ಓರ್ವ ಧನಿಕನು ಕೇಳಿ, "ಕರುಣಾಳುವೇ, ಇಪ್ಪತ್ತು ವರುಷಕ್ಕೆ ಆಗುವಷ್ಟು ಧನ-ಧಾನ್ಯ ಸಂಗ್ರಹ ಮಾಡಿರುವೆನು. ಅದರ ಬಲದಿಂದ ತಮ್ಮನ್ನು ಪೊರೆಯುವೆನು" ಎಂದು ಸಂತೋಷದಿಂದ ಒಂದು ಧೋತರವನ್ನು ಹೊದಿಸಿ ನಮಿಸಿದನು.

ಅದಕ್ಕೆ ಸ್ವಾಮಿಗಳು "ನೀನು ನನ್ನೋರ್ವನನ್ನು ಬಿಡದೆ ರಕ್ಷಿಸುವಿ, ಇದು ನಿಜವು. ಆದರೆ, ಈಶ್ವರನ ಕ್ಷೋಭಾಗ್ನಿಯನ್ನು ನಿನ್ನಿಂದ ನಿವಾರಿಸಲಾಗುವದುಂಟೇ ? ಮೊದಲಿಗೆ ಹರಿಶ್ಚಂದ್ರ, ನಳ, ಮಾಂಧಾತ ಮೊದಲಾದವರು ಭೂತದಯೇ, ಸದ್ವಚನ, ಸದ್ಧರ್ಮ, ಸುನೀತಿಗಳಿಂದೊಡಗೂಡಿ, ಸಾರ್ವಭೌಮರಾಗಿ, ಅಜಾತಶತ್ರುಗಳೆನಿಸಿಕೊಂಡಂಥವರಿಗೂ ಕೂಡ ಅಸಾಧ್ಯವಾಯಿತು. ಅಂದ ಮೇಲೆ ನಮ್ಮ ನಿಮ್ಮಿಂದ ಸಾಧ್ಯವಾಗಬಹುದೇ ? ನೀನು ನನ್ನ ಮೇಲಿನ ಪ್ರೀತಿಯಿಂದ ಹೀಗೆ ನುಡಿದಿರುವದು ಯೋಗ್ಯವು. ಆದರೆ ಸಜ್ಜನರೇ ಕೇಳಿರಿ, ಯಾವಾಗಲೂ ಸ್ವಚ್ಛಂದವಾಗಿ ಸಂಚರಿಸುತ್ತ ಸಂತೋಷದಿಂದಿರುವ ನನಗೆ ಮರ್ತ್ಯ, ಸರ್ಗಾದಿಗಳು ಸಮವಾಗಿರುವವು; ಇದಕ್ಕೆ ನೀವು ಚಿಂತಿಸುವ ಕಾರಣವಿಲ್ಲ" ಎಂದನು. ಆಗ ಎಲ್ಲ ಸದ್ಭಕ್ತರು ನಿರುಪಾಯರಾಗಿ "ತಮ್ಮ ಚಿತ್ತ, ಸ್ವಾಮಿ !" ಎಂದು ನಮಿಸುತ್ತ ತಮ್ಮ ತಮ್ಮ ಮನೆಗಳಿಗೆ ಗಮಿಸಿದರು.

ಬಳಿಕ ಭಾರತಿಯು ಮನದೊಳಗೆ ಸದ್ಗುರುವಿನ ನೆನೆಯುತ್ತ, ಅಲ್ಲಿಂದ ಹೊರಟು ಊರೂರು ತಿರುಗುತ್ತ, ಭಿಕ್ಷೆಯಿಂದ ತೃಪ್ತಿಹೊಂದುತ್ತ, ಗೋಪಾಲಕರ ಕೂಡ ಆಟಗಳನ್ನಾಡುತ್ತ, ಸಪ್ತ ಭೂಮಿಕೆಗಳನ್ನು ಸಾಧಿಸುವ ಯೋಗಿವರನಂತೆ, ಒಂದೊಂದು ಪುರವನ್ನು ನೋಡುತ್ತ ಅವೆಲ್ಲವನ್ನು ದಾಟಿ, ಅನೇಕ ದೇಶ-ಕೋಶಗಳನ್ನು ಸಂಚರಿಸುತ್ತಿರಲು ಹೇಮಂತ ಋತುಕಾಲ ಬಂದೊದಗಿತು. ಸಿದ್ಧನು ತನ್ನ ಮನದಲ್ಲಿ "ಯೋಗಿಯ ಮನವು ಧ್ಯಾನ ಬಲದಿಂದ ನಿರ್ಮಲವಪ್ಪಂತೆ, ಈ ಋತುವಿನಲ್ಲಿ ನೀರು ತಿಳಿಯಾಗುತ್ತವೆ" ಎಂದುಕೊಂಡನು. ಮಾರ್ಗದಲ್ಲಿ ಒದಗುತ್ತಿರುವ ಕಷ್ಟ–ನಷ್ಟಗಳನ್ನು ಚದುರ ಸಿದ್ಧನು ದೇಹಕ್ಕೊಪ್ಪಿಸಿ, ತಾನು ಸಂತೋಷದಿಂದ ಜೀವನ್ಮುಕ್ತಿ ಸುಖವನ್ನು ಅನುಭವಿಸುತ್ತ ಜಮುಖಂಡಿ ಹತ್ತರಿರುವ ಸಿದ್ಧಾಪುರವೆಂಬ ಗ್ರಾಮಕ್ಕೆ ಬಂದನು.

ಪದ–೨೬–೩೫ **ಹಠಯೋಗಿ ಜಂಗಮನ ಹಠ ಬಿಡಿಸಿದ್ದು**

ಅಲ್ಲಿ ಓರ್ವ ಹಠಯೋಗಿ ಜಂಗಮನು ಆ ಊರ ಜನರಿಗೆ "ನೀವೆಲ್ಲರೂ ಕೂಡಿ ಸಾವಿರದಾ ಒಂದು ಜಂಗಮಾರ್ಚನೆಯನ್ನು ಮಾಡಿಸುತ್ತೇವೆಂದು ನನಗೆ ವಚನ ಕೊಟ್ಟದ್ದಾದರೆ, ನಾನು ಗಜಮು ಇಳಿಸುವೆನು" ಎಂದು ಹೇಳಿ ತನ್ನ ಎರಡೂ ಕೈಗಳನ್ನು ನೆಲಕ್ಕೂರಿ, ಕಾಲುಗಳನ್ನು ಮೇಲೆ ಮಾಡಿ ವೃಕ್ಷಾಸನದಲ್ಲಿ ನಿಂತು ಬಿಟ್ಟನು. ಆಗ ಊರೊಳಗಿನ ಪ್ರಮುಖರೆಲ್ಲರು "ಈ ಜಂಗಮನನ್ನು ಊರೊಳಗೆ ಉಪವಾಸದಿಂದಿಟ್ಟು, ನಾವು ಇವನನ್ನು ಬಿಟ್ಟು ಊಟ ಮಾಡುವದೆಂತು ?" ಎಂದು ಚಿಂತಿಸುತ್ತ ತಾವೆಲ್ಲರೂ ಉಪವಾಸದಿಂದ ಆ ಜಂಗಮನ ಹತ್ತರ ಕುಳಿತುಕೊಂಡಿದ್ದರು.

ಅದೇ ಸಮಯಕ್ಕೆ ಸಿದ್ಧರು, ಸಂಚರಿಸುತ್ತ ಅಲ್ಲಿಗೆ ಬಂದರು. ಜನರ ಮುಖದಿಂದ ಅಲ್ಲಿ ನಡೆದಿರುವ ಎಲ್ಲ ಸಂಗತಿಯನ್ನು ಕೇಳಿ ತಿಳಿದುಕೊಂಡು, "ನಾವೆಲ್ಲರೂ ತಪ್ಪದೆ ಜಂಗಮಾರ್ಚನೆಯನ್ನು ಮಾಡಿಸುತ್ತೇವೆಂದು, ಆ ಜಂಗಮಯೋಗಿಗೆ ಹೇಳಿ ಅವನ ಗಜಮನ್ನು ಇಳಿಸಿರಿ, ಮುಂದೆ ನೋಡುವಾ," ಎಂದರು. ಅದರಂತೆ ಊರ ಹಿರಿಯರೆಲ್ಲರೂ, ಸಂಗರಹಿತನು ನುಡಿದ ನುಡಿಯನ್ನೇ ಆ ಜಂಗಮನಿಗೆ ಹೇಳಿದರು. ಕೂಡಲೆ ಜಂಗಮನು ಗಜಮು ಇಳಿಸಿ ಕುಳಿತನು ಆಗ ಸಿದ್ಧಯೋಗೀಶ್ವರನು, ಜಂಗಮನ ಬಳಿಗೆ ಬಂದು, "ಜಂಗಮ ಯೋಗಿಯೇ, ! ಜಂಗಮ ಪದವು, ನಿರುತ ಜಗದ್ಭರಿತವಿರುವದು. ಇನ್ನಾವ ಜಂಗಮನಿಗೆ ನೀನು ಸಂತೋಷದಿಂದ ತೃಪ್ತಿಗೊಳಿಸುವಿ ? ವಿಚಾರ ಮಾಡಿ ಹೇಳು. ಜಂಗಮನು, ಕ್ಷುದಾದಿ ಷಡೂರ್ಮಿಗಳಿಂದ ಕೂಡಿರುವನೋ, ಇಲ್ಲವೆ ಅವುಗಳಿಂದ ರಹಿತನಾಗಿರುವನೋ ? ಒಂದು ವೇಳೆ, ಷಡೂರ್ಮಿಗಳಿಂದ ಕೂಡಿರುವನೆಂದು ಹೇಳಿದರೆ, ಅವನು ಪೂಜೆಗೆ ಯೋಗ್ಯನಲ್ಲ. ಅವನು ಸಾಮಾನ್ಯ ಜೀವನೆನಿಸಿಕೊಳ್ಳುವನು. ಇನ್ನು ಷಡೂರ್ಮಿಗಳಿಂದ ರಹಿತನು ಎಂದು ಹೇಳಿದರೆ, ಅವನು ಸದಾ ತೃಪ್ತನಾಗಿರಲು ಅಂಥವನಿಗೆ ಅನ್ನಾದಿಗಳಿಂದ ಏನು ಪ್ರಯೋಜನ ? ಎಂದು ಸಿದ್ಧರು ನುಡಿದ ನುಡಿಗಳನ್ನು ಕೇಳಿ ಜಂಗಮನು ಸುಮ್ಮನಾದನು. ಆಗ ಜಂಗಮನು ಯೋಗಿವರನ ಚಿತ್ರದಿಂದ ನಿಸ್ತೇಜನಾಗಿ ತೋರಿದನು.

ಪುನಃ ಸಿದ್ಧರು ಜಂಗಮನಿಗೆ "ಈಗ ನಿನ್ನ ಈ ಡಾಂಭಿಕತನವು ಜನರಿಗೆ ತಿಳಿಯಿತೆಂದರೆ ಅವರು ನಿನ್ನ ಮರ್ಯಾದೆಯನ್ನು ತೆಗೆಯದೆ ಬಿಟ್ಟಾರೆಯೇ ?"

ಎಂದು ಉದ್ವೇಗದಿಂದ ನುಡಿದರು. ಜಂಗಮನು ಇದೆಲ್ಲವನ್ನು ಕೇಳಿ ತಿಳಿದು ಚಕಿತನಾಗಿ "ನನಗೆ ಹಸಿವೆಯಾಗಿದೆ'' ಎಂದನು. ಆಗ ಆರೂಢರು, ಹಾಲು ಸಕ್ಕರೆ ತರಿಸಿ ಜಂಗಮನಿಗೆ ತೃಪ್ತಿಗೊಳಿಸಿ ಕಳುಹಿಸಿದರು. ಇತ್ತ ಊರ ಜನರಿಗೆ ಊಟಕ್ಕೆ ಅಪ್ಪಣೆಯನ್ನಿತ್ತರು.

## ಸಾಧ್ವಿಯೊಡನೆ ಹಾಸ್ಯ

ಅಲ್ಲಿಂದ ಬ್ರಹ್ಮವೇತ್ತನು, ಉನ್ಮತ್ತನಂತೆ ತಿರುಗುತ್ತ ಬ್ರಹ್ಮಾಕಾರ ವೃತ್ತಿಯಲ್ಲಿ ಸ್ಥಿತಪ್ರಜ್ಞನಾಗಿ ಗ್ರಾಮಗಳನ್ನು ತಿರುಗುತ್ತ "ಯಾದವಾಡಕ್ಕೆ" ಬಂದನು. ಹಸಿವಿಗಾಗಿ ಓರ್ವ ಬಡವಿಯ ಮನೆಯ ಮುಂದೆ ಭಿಕ್ಷೆ ಬೇಡಲು ನಿಂತನು. ಆಗ ಆ ಮನೆಯ ಸಾಧ್ವಿಯು ಸಿದ್ಧನನ್ನು ಕಂಡು, ಒಂದು ರೊಟ್ಟಿಯಲ್ಲಿ ತುಸು ಪುಂಡೀಪಲ್ಲೆ ಹಚ್ಚಿ ಕೊಟ್ಟಳು. "ಪುಂಡೀಪಲ್ಲೆ ರೊಟ್ಟಿ ತುಂಬ ಇಲ್ಲವಲ್ಲ !'' ಎಂದನು. ಆಗ ಅವಳು ಚಂಡಿಯೇ, ''ತಾ ಇಲ್ಲಿ" ಎಂದು ರೊಟ್ಟಿಯನ್ನು ಕಸಿದುಕೊಂಡು, ಅದೇ ಪುಂಡೀಪಲ್ಲೆಯನ್ನು ರೊಟ್ಟಿ ತುಂಬ ಸವರಿ ಕೊಟ್ಟಳು. ಆಗ ಪಂಡಿತನಾದ ಸಿದ್ಧನು ''ಮುರಿಯಲಿಕ್ಕೆ ರೊಟ್ಟಿಯೇ ಇಲ್ಲವಲ್ಲವ್ವಾ !'' ಎಂದನು. ಅವಳು ನಗುತ್ತ ಒಳಗೆ ಹೋದಳು.

## ಪದ—೩೬–೫೧ ಪುರಾಣಿಕನಿಗೆ ಅಲಂಕಾರದೊಳಗಿನ ಅರ್ಥವನ್ನು ಸಮನ್ವಯ ಮಾಡಿದ್ದು

ಬ್ರಹ್ಮವಿದ್ವರನು, ಬೀದಿಯಲ್ಲಿ ಕಂದನಂತೆ ರೊಟ್ಟಿಯನ್ನು ತಿನ್ನುತ್ತ, ಹಾಸ್ಯಮಾಡುತ್ತ ಜನರನ್ನು ನಗಿಸುತ್ತ ಬರಹತ್ತಿದನು. ಪುರಾಣ ಹೇಳುವದರಲ್ಲಿ ಪ್ರಖ್ಯಾತನಾದ ಆಲಮಯ್ಯನೆಂಬವನು ಒಂದು ಮನೆಯಲ್ಲಿ ಸ್ಕಂದಪುರಾಣವನ್ನು ಚಂದವಾಗಿ ಸಾಧಿಸಿದ್ದನು. ಉನ್ಮತ್ತನಾದ ಸಿದ್ಧನು, ಆ ಮನೆಯೊಳಗೆ ಧಾವಿಸಿ ಹೋಗಲು, ಪುರಾಣಿಕನು ಅವನ ಉನ್ಮತ್ತ ಚರ್ಯವನ್ನು ಕಂಡು, ''ಆ ಭವಿಯನ್ನು ಬಾಗಿಲೊಳಗೆ ಬರಗೊಡದೆ ಹಾಗೆಯೆ ಹೊರಗೆ ತಳ್ಳಿರಿ,'' ಎಂದನು. ಸಿದ್ಧನು ಯಾರನ್ನು ಲೆಕ್ಕಿಸದೆ, ಬಲುಮೆಯಿಂದ ಒಳಗೆ ಪೋಗಿ ಕುಳಿತನು. ಅಲ್ಲಿ ಪೌರಾಣಿಕನು, ತನ್ನ ಎಲ್ಲ ಭಕ್ತಮಂಡಳಿಯನ್ನು ಕೂಡ್ರಿಸಿ–ಕೊಂಡು. ಪ್ರತಿನಿತ್ಯವು, ''ಚನ್ನ ಬಸವ ಪುರಾಣ''ವನ್ನು ಎಲ್ಲ ಜನರಿಗೆ, ಮೆಚ್ಚಿಗೆಯಾಗುವಂತೆ ಭಿನ್ನಭಾವನೆಯಿಲ್ಲದೆ, ಪ್ರೀತಿಯಿಂದ ಪೇಳುತ್ತಿದ್ದನು

ಅದರಲ್ಲಿ ಈಶ್ವರನ ಪಂಚ ವಿಂಶತಿಯು, ಘನತರ ಲೀಲೆಯೊಳಗೆ ಅಂಧಕನ ಹಗೆತನವೆಂಬುದೊಂದು, ಕಥೆಯನ್ನು ಹೇಳಹತ್ತಿದನು. ಅದರೊಳಗೆ ಒಂದು ಅಲಂಕಾರ ಬಂದಿತು. ಅದೇನಂದರೆ, ''ಮನಸಿಜಾರಿಯ ಮುಂದೆ, ಎಸೆದುದು ಮನಸಿಜನ ಸೊಕ್ಕಾನೆ, ಅದುವೇ ಮಾಮರವಾಗಿ ಎಸೆದುದು" ಇದರಲ್ಲಿ ಮಳಕ್ಕೂ ಮತ್ತು ಆನೆಗೂ ಉಪಮೇಯ ಉಪಮಾನ ಇರುವದೆಂದೂ, ಮತ್ತು ಆ ಮರದ ಮೇಲೆ ಮಧು-ಮಿತ್ರರೆಂಬ ಎರಡು ಚದುರ ಪಕ್ಷಿಗಳು ಸಂತೋಷದಿಂದ ಮಾತನಾಡುತ್ತಿದ್ದವು ಆ ಮೃದು ಭಾಷಣದೊಳಗಿಂದ ಒಂದು ಉರುತರದ ವಿದ್ಯುತ್ ಶಬ್ದವು ಹೊರಟಿತು. ಎನ್ನಲು ಭಾರತಿಯು ಅದನ್ನು ಕೇಳಿ, ''ಶಾಸ್ತ್ರಕೋವಿದರೆ, ನೀವು ಮರಕ್ಕೂ ಆನೆಗೂ ಹೋಲಿಸಲು ಅದು ಸರಿ ಹೋಯಿತು. ಪರಂತು ವಿದ್ಯುತ್ ಎಂಬುದನ್ನು ಮರಕ್ಕೋ ಗಜಕ್ಕೋ ? ಯಾವುದಕ್ಕೆ ಹೋಲಿಸುವಿರಿ"? ಎಂದು ಕೇಳಿದನು. ಪೌರಾಣಿಕನು ಮೌನವಾಗಲು, ಅದಕ್ಕೆ ಜ್ಞಾನ ಯತಿಯು, ''ಶಾಸ್ತ್ರಿಗಳೆ ! ನೀವು ಆ ವಿದ್ಯುತ್ ಶಬ್ದವನ್ನು ಮರಕ್ಕೆ ಹೋಲಿಸುತ್ತೇವೆಂದರೆ, ಅದು ಜಡವಲ್ಲವು. ಅದು ಕಾರಣ ಅದು ಸಲ್ಲದು. ಇನ್ನು ಗಜಕ್ಕೆ ಹೋಲಿಸುವದು ಅದೆಂತು ಸಲ್ಲುವದು ?'' ಹೇಳಿರೆಂದರೆನು.

ಆಗ ಶಾಸ್ತ್ರಿಯು ಎಚ್ಚತ್ತನು. ''ನಾನು ತಿಳಿದುಕೊಂಡಂತೆ ಇವನು ಹುಚ್ಚನಲ್ಲ ಈತನು ಶೀಲಗುಣ ಸಂಪನ್ನ ವಿದ್ಯಾಧರ ಯತೀಶ್ವರನಿರುವನು'' ಎಂದು ಅಂದು ಕೊಂಡು ಇದಕ್ಕೆ ಪರಿಹಾರ ತಾವೇ ಹೇಳಬೇಕೆಂದು ಬಿನ್ನವಿಸಿ-ಕೊಂಡನು.

ಆಗ ತತ್ವಜ್ಞಾನಿ ಸಿದ್ಧನು, ''ಶಾಸ್ತ್ರಿಯೇ, ಇರಿವೆ ಮೊದಲು ಆನೆ ಕಡೆ-ಯಾಗಿ ಎಲ್ಲ ಪ್ರಾಣಿಗಳ ತನುಭಾವ ದರ್ಪಣದಲ್ಲಿ ಬಿಂಬಿಸಿರುವ ಚಿದಾಭಾಸನಿಗೆ ನೀನು ಹೇಳುವ ವಿದ್ಯುತ್ತನ್ನು ಹೋಲಿಸಿದರೆ, ಅದು ಸರಿ ಹೋಗುವದು. ಹೇಗಂದರೆ ಮೇಘದಲ್ಲಿಯ ವಿದ್ಯುತ್ತಿನಿಂದ ಮಿಂಚು ಹುಟ್ಟಿ ಪೃಥ್ವಿ ಮೇಲಿರುವ ಸಮಸ್ತ ವಸ್ತುಗಳನ್ನು ಪ್ರಕಾಶಿಸಿ, ಬಳಿಕ ತಕ್ಷಣ ತನ್ನ ನಿಜಾಶ್ರಯವಾದ ಮೇಘದಲ್ಲಿ ಲಯಿಸುವಂತೆ, ಚಿದಾಭಾಸನು ಕೂಟಸ್ಥನಲ್ಲಿ ಕಲ್ಪಿತವಾದ ಬುದ್ಧಿ ಎಂಬ ದರ್ಪಣದಲ್ಲಿ ಹೊಳೆದು, ಹದಿನಾಲ್ಕು ಅಧಿ-ದೇವತೆಗಳಿಂದ ಭಾಸಿತಗಳಾದ, ಭೌತಿಕ ವಸ್ತುಗಳನ್ನು ಮತ್ತು ತ್ರಿಪುಟ

ಗಳನ್ನು, ಏಕಕಾಲಕ್ಕೆ ಪ್ರಕಾಶಿಸಿ, ಆ ಬಳಿಕ ತಾನು ತನ್ನ ಆಶ್ರಯವೆನಿಪ ಕೂಟಸ್ಥನಲ್ಲಿ ಕೂಡುವನು. ಅದು ಕಾರಣ, ವಿದ್ಯುತ್ತಿನ ಉಪಮಾನವು, ಆ ಮತ್ತೇಭ (ಮದಗಜ) ನಲ್ಲಿ ಅಡಗಿದ ಚಿದಾಭಾಸನಿಗೆ ಹೋಲಿಸಿದರೆ, ಅದು ಸರಿಹೋಗುವದು, ಎಂದು ಹೇಳಿ ತನ್ನ ಕೈಯಲ್ಲಿದ್ದ ಪುಂಡೀಪಲ್ಲೆ ತೊಡೆದ ರೊಟ್ಟಿಯನ್ನು ಪುರಾಣದ ಹೊತ್ತಿಗೆಯ ಮೇಲೆ ನಸುನಗುತ್ತ ಇಟ್ಟುಬಿಟ್ಟನು. ಕೂಡಲೇ ಪುರಾಣಿಕನು, ಅದನ್ನು ಎತ್ತಿಕೊಂಡು ಇದು ಮಹಾಪ್ರಸಾದವೆಂದು, ತನ್ನ ತಲೆಯಮೇಲೆ ಹೊತ್ತುಕೊಂಡನು. ಮೊದಲು ತಾನು ಆ ಯತಿವರಗೆ ಜರೆದುದು ನೆನಪಾಗಿ, "ನಾನು ಈ ಸತ್ಯಶಾಂತಿ ಮೂರ್ತಿಗೆ, ನಿಂದಿಸಿದೆನಲ್ಲಾ ! ಅಯ್ಯೋ ! ನಾನು ಎಂಥ ಕಡುಪಾಪ'' ಎಂದು ಪಶ್ಚಾತ್ತಾಪ ಪಡುತ್ತ, ಅದರ ಪ್ರಾಯಶ್ಚಿತ್ತ ಮಾಡಿಕೊಳ್ಳುವದನ್ನು ಮನಸ್ಸಿನಲ್ಲಿಯೇ ನಿರ್ಧರಿಸಿ, ದೈನ್ಯ ಭಾವದಿಂದ, ಸ್ವಾಮಿಗಳವರ ಪಾದಕ್ಕೆ ಬಿದ್ದು ನಮಿಸಿದನು ಮತ್ತು ನಾವು ನನಗೆ ಕಾಶಿಗೆ ಹೋಗಲು, ಅಪ್ಪಣೆ ಕೊಡಿಸಬೇಕು'' ಎಂದು ಕೇಳಿಕೊಂಡನು. ಅದಕ್ಕೆ ಅರೂಢರು, ''ಕಾಶಿಗೆ ಹೋದವರು, ತಿರುಗಿ ಬರುವದಿಲ್ಲ ಅಂದಮೇಲೆ ಕಾಶಿಗೆ ಏತಕ್ಕೆ ಹೋಗುತ್ತಿ'' ? ಎಂದರು. ಶಾಸ್ತ್ರಿಯು, ''ಅದು ಏನೇ ಇರಲಿ, ನಾನು ಮಾತ್ರ ಹೋಗುವದನ್ನು ನಿಶ್ಚಯಿಸಿದ್ದೇನೆ'' ಎಂದನು. ''ಹಾಗಾದರೆ ನೀನು ತೀವ್ರ ಹೋಗು, ತಿರುಗಿ ಬರಬೇಡ'' ಎಂದು ಆ ಅಲಮಯ್ಯನಿಗೆ ಆಶೀರ್ವಾದ ಮಾಡಿದರು.

### ಪದ— ೫೨–೬೬ ಕೊತವಾಲನು, ಕಳ್ಳನೆಂದು ಸಿದ್ಧನನ್ನು ಹೊಡಿಸಿ, ಊರಿಂದ ಹೊರಗೆ ದೂಡಿಸಿದ್ದು.

ಅಲ್ಲಿಂದ ಸಿದ್ಧಭಾರತಿಯು ಹಾಗೇ ತಿರುಗುತ್ತ ಹೊರಟು, ತನ್ನ ತನುವೆಂಬ ಉಪವನದೊಳಗೆ ಮದ್ದಾನೆಯಂತೆ ಅಲ್ಲಿ ಬೆಳೆದಿರುವ ಷಡೂರ್ಮಿಗಳೆಂಬ ಕದಳಿಯ ಬನವನ್ನು ಕಿತ್ತೊಗೆಯುತ್ತ ಮುಂದಿರುವ ಕೋಟೆಯೊಳಗೆ ಪ್ರವೇಶ ಮಾಡಲು ಕತ್ತಲಾಯಿತು. ಅತ್ತಲಿಂದ ತಳವಾರರು ಕತ್ತಿಯನ್ನು ಹಿಡಿದು ಗಸ್ತಿ ತಿರುಗುತ್ತ ಬರಲು ಸಿದ್ಧನು ಅವರ ಕೈಗೆ ಸಿಕ್ಕನು. ತಳವಾರರು ''ನೀನಾರು ? ಎಲ್ಲಿಯವನು ? ಸತ್ಯವಾಗಿ ಹೇಳು'' ಎಂದು ಗದ್ದರಿಸಿದನು. ಸಿದ್ಧ ಯತಿಯು ಏನೊಂದು ಮಾತನಾಡದಿರಲು ''ಇವನು ಕಳ್ಳನಿರುವನು

ಇವನನ್ನು ಕೋಲಿನಿಂದ ಚನ್ನಾಗಿ ಥಳಿಸಿರಿ'' ಎಂದು ಕೊತವಾಲನು ಹೇಳಿದನು. ಕೊಡಲೆ ದಯವಿಲ್ಲದ ತಳವಾರರೀರ್ವರು ತಮ್ಮ ಕೈಯಲ್ಲಿದ್ದ ಬಡಿಗೆಯಿಂದ ಹೊಡೆಯಲಾರಂಭಿಸಿದರು. ಅಷ್ಟರಲ್ಲಿ ದೈವಯೋಗದಿಂದ ಅದೇ ಸ್ಥಳಕ್ಕೆ ಈರ್ವರು ಬಂದು ''ಇವನು ಕಳ್ಳನಲ್ಲ, ಭಿಕ್ಷುಕನು ಇವನ ಪರಿಚಯು ನಮಗೆ ಉಂಟು. ಇವನನ್ನು ಹೊಡೆಯಬೇಡಿರಿ, ಬಿಟ್ಟು ಬಿಡಿರಿ'' ಎಂದು ಹೇಳಿದರು. ಆಗ ಕೊತವಾಲನು "ಇವನನ್ನು ಊರು ಬಿಡಿಸಿ ದೂರ ತಳ್ಳಿ ಬಿಡಿರಿ'' ಎಂದು ಹೇಳಿದನು. ಕೂಡಲೆ ತಳವಾರರು ಹಾಗೆ ಮಾಡಲು, ಸಿದ್ಧನು ಅರ್ಧ ಮೈಲು ದೂರ ಹೋಗಿ ಅಲ್ಲಿರುವ ಮಾರುತಿ ಗುಡಿಯಲ್ಲಿ ವಿಶ್ರಾಂತಿ ಹೊಂದಿದನು.

ಇತ್ತ ಊರಲ್ಲಿ ಸ್ವಾಮಿಯನ್ನು ಹೊಡೆದರೆಂಬ ವಾರ್ತೆಯನ್ನು ಕೇಳಿ ಅಲಮಯ್ಯ ಶಾಸ್ತ್ರಿಯು, ತನ್ನ ಎಲ್ಲ ಸದ್ಭಕ್ತರನ್ನೊಡಗೊಂಡು ಸಿದ್ಧರನ್ನು ಹುಡುಕುತ್ತ, ಮನದೊಳು ಮಿಡುಕುತ್ತ ಮಾರುತಿಯ ಗುಡಿಗೆ ಬಂದರು. ಕಳೆದುದನ್ನೆಲ್ಲ ಕಳೆದು, ಕಳೆಯಲಿಕ್ಕೆ ಬಾರದಿರುವ ಉಳುಮೆ ಸ್ವರೂಪ ಪರಮಾತ್ಮನೇ ತಾನೆಂದು ತಿಳಿದು ಪೂರ್ಣಾನುಭವದಲ್ಲಿ ಮನವನಳಿದು, ಮೈಮರೆದು ಮಹದಾನಂದದಲ್ಲಿ ಲೋಲಾಡುವ ಸಿದ್ಧಯತಿಯನ್ನು ಕಂಡ ಕೂಡಲೆ ಅವರಿಗೆ ಪರಮಾನಂದವಾಯಿತು. ಆನಂದಾಶ್ರುಗಳನ್ನು ಸುರಿಸುತ್ತ ''ತಂದೆಯೇ, ನಿಮಗೆ ಹೊಡೆದು ಬಹಳ ತೊಂದರೆ ಕೊಟ್ಟರೇ ?'' ಎಂದು ವಿನೀತರಾಗಿ ಕೇಳಿಕೊಂಡರು.

## ಬಳ್ಳಾರಿಯಲ್ಲಿ ಒದಗಿದ ದುರ್ಧರ ಪ್ರಸಂಗ ನೆನಪಿಗೆ ತಂದು ಹೇಳಿದ್ದು

ಆಗ ಸಿದ್ಧ ಯತಿಯು ಹೇಳಲಾರಂಭಿಸಿದನ. ''ಒಂದು ದಿನ ಬಳ್ಳಾರಿಯ ಪೇಟೆಯಲ್ಲಿ ಕೌಲಬಜಾರದಲ್ಲಿರುವ, ಚಿತ್ತೂರ ಧನಿಕನಾದ ಹನಮಂತ ಶೆಟ್ಟಿಯ ಮನೆಯ ಬಾಗಿಲದಲ್ಲಿ ಗುರು ಧ್ಯಾನದಿಂದ ಭಿಕ್ಷಕ್ಕೆ ನಿಂತನು. ಬಾಗಿಲಕಾಯುವ ಬಡೇಸಾಬನೆಂಬವನು ಬಂದು 'ನೀನಾರೆಂದು ಕೇಳಿದನು'. ನಾನು ಮಾತನಾಡದೆ ಮೌನದಿಂದಿರಲು, ಬಡೇಸಾಬನು 'ಮೊನ್ನೆ ನೀನೇ ಬಂದು ಕನ್ನವನ್ನಿಕ್ಕಿದ್ದಿಲ್ಲವೆ ? ನೀನು ಕೊರಸರವನಲ್ಲವೆ ?' ಎಂದು ಸನ್ನಿ ಹಿಡಿದವನಂತೆ ಬಡಿಗೆಯಿಂದ ಹೊಡೆದು, ಐದು ಪಾವಟಿಗೆಗಳ

ಮೇಲಿಂದ ನನ್ನನ್ನು ದೂಡಿದನು, ಆಗ ನಾನು ಪಾವಟಿಗೆಗಳ ಮೇಲಿಂದ ಉರುಳುತ್ತ ಪೆಟ್ಟು ತಗಲಿ ಕೆಳಗೆ ಬಿದ್ದು ಬಿಟ್ಟೆನು. ನಡಕ್ಕೆ ಪೆಟ್ಟುಹತ್ತಿ, ಮೊಳಕಾಲಿಗೆ ಘಾಯವಾಗಿ ರಕ್ತ ಸುರಿಯಹತ್ತಿತು. ಅದನ್ನು ಕಂಡು ಹೊಟ್ಟೆ ಯೊಳಗೆ ಸಂಕಟವಾಯಿತು. 'ಶಿವಾಶಿವಾ' ಎಂದು ಶಿವಧ್ಯಾನ ಮಾಡುತ್ತ ಗದ್ದಲಿಲ್ಲದ ಸ್ಥಾನದಲ್ಲಿ ಹೋಗಿ ಕುಳಿತುಕೊಂಡೆನು ಅನ್ನುತ್ತ, ತನ್ನ ಮೊಳ ಕಾಲಿನ ಹಳೆ ಘಾಯದ ಕಲೆಯನ್ನು ತೋರಿಸುತ್ತ ಅಲ್ಲಿ ಒದಗಿದ ದುಃಖಕ್ಕೇನೂ ಈ ದುಃಖವು ಸರಿಯಲ್ಲ. ಇದಾದರೂ ಶಿವನಿಗೆ ಸಲ್ಲಲಿ'' ಎಂದನು. ಆಗ ಅವರೆಲ್ಲರೂ ತಲ್ಲಣಿಸುತ್ತ ''ತಾವು ಇಲ್ಲಿರುವದು ಸರಿಯಲ್ಲ. ಬಲ್ಲವರಾದ ತಾವು ಊರೊಳಗೆ ಬರಬೇಕು. ಅಲ್ಲಿ ನಾವೆಲ್ಲರೂ ಸಂತೋಷದಿಂದ ತಮಗೆ ಸೇವೆ ಸಲ್ಲಿಸುತ್ತೇವೆ'' ಎಂದು ಭಕ್ತಿಯುಕ್ತರಾಗಿ ಸಿದ್ಧರನ್ನು ಪರಿಪರಿಯಿಂದ ಪ್ರಾರ್ಥಿಸಿಕೊಂಡರು.

ಭಾರತಿಯು ಊರೊಳಗೆ ಬರಲು ಒಪ್ಪಲಿಲ್ಲ.ಆಗ ಸದ್ಭಕ್ತರು ತಮ್ಮಲ್ಲಿಯ ಕೆಲವರನ್ನು ಊರೂಳಗೆ ಕಳುಹಿಸಿ ಅನ್ನವನ್ನು ತರಿಸಿ ಸಿದ್ಧರಿಗೆ ಉಣ್ಣಿಸಿ ತೃಪ್ತಿಗೊಳಿಸಿದರು. ಬಳಿಕ ತಾವೆಲ್ಲರೂ ಇದು ಮಿಕ್ಕ ಮಹಾಪ್ರಸಾದವೆಂದು ಸ್ವೀಕರಿಸಿದರು ಮತ್ತು ತಮಗೆ ಬಂದ ಸಂಶಯಾದಿಗಳನ್ನು ಮಹಾತ್ಮರ ಮುಖದಿಂದ ಪರಿಹರಿಸಿಕೊಳ್ಳುತ್ತ, ಬ್ರಹ್ಮಜಿಜ್ಞಾಸಾ ನಡೆಸುತ್ತ, ಮನಸ್ಸನ್ನು ಬ್ರಹ್ಮಾಕಾರ ಮಾಡುತ್ತ, ಬೆಳಗಿನವರೆಗೂ ಸದ್ಗುರುವಿನ ಕೂಡ ಬ್ರಹ್ಮಾನಂದ ದಲ್ಲಿ ಕಾಲ ಕಳೆದರು. ಬೆಳಗಾದ ಕೂಡಲೆ ಸ್ವಾಮಿಗಳಿಗೆ ನಮಿಸಿ, ಅವರಿಂದ ಆಶೀರ್ವಾದ ಪಡೆದು ತಮ್ಮ ಮನೆಗಳಿಗೆ ಹೋದರು.

ಬಳಿಕ ಚರಿತ್ರನಾಯಕನು ಅಲ್ಲಿಂದ ಹೊರಟು ದೇಹದ ಎಲ್ಲ ಭೋಗಕ್ಕೂ ತಾನು ಸಾಕ್ಷಿಕನಾಗಿ, ಬಂದ ಭೋಗಗಳನ್ನು ಭೋಗಿಸುತ್ತ ನಡೆದನು.

ಇತ್ತ ಪೌರಾಣಿಕನಾದ ಅಲಮಯ್ಯನು ತಡಮಾಡದೆ ಕಾಶಿಗೆ ಹೋಗಿ ಅಲ್ಲಿ ಸದ್ಗುರುವರನನ್ನು ಶೋಧಿಸಿ ವಿನಯ ಮತ್ತು ಭಕ್ತಿಪೂರ್ವಕ ಅವರ ಸೇವೆ ಮಾಡುತ್ತ, ಅವರಿಂದ ಧೃಡಾಪರೋಕ್ಷಜ್ಞಾನ ಮಾಡಿಕೊಂಡನು. ಬಳಿಕ ಸಿದ್ಧರು ಹೇಳಿದಂತೆ ಗಂಗಾನದಿ ತಟಾಕದಲ್ಲಿ ಪ್ರಾರಬ್ಧ ತೀರಿಸಿ ಪ್ರಾಣಕ್ಕೆ ಅಪ್ಪಣೆ ಕೊಟ್ಟು ಕೈ ಮುಗಿದನು.

ಮಂಗಲ— ಹರಿಯ ಕೆಂಗಳ ಹರಿಯ ದೊಡೆಗಳ ।
ಹರಿಯ ಕೊರಳನು ಮಾಡಿಕೊಂಡನ ।
ಹರಿಯ ನುಣ್ಣುವ ಹರಿಯ ಮೇಲೊರಗಿದನ ನಿಜಸುತನ ॥
ಹರಿಯ ನೇತ್ರದಿ ಸುಟ್ಟು ಮೆರೆದನ ।
ಹರಿಸುವಂದ್ಯನ ಹರಿಯ ಗೆಲೆದನ ।
ಹರಿಯಪಗೆ ಯೆದೆಯನ್ನು ತುಳಿದನ ಚರಣಕಾಂ ನಮಿಪೇಂ॥

ಇತಿ ಶ್ರೀ ಸಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ ಲೀಲಾ ಚರಿತ್ರ ಕಲ್ಪದ್ರುಮದೊಳು ಪೌರಾಣಿಕನ ಪವಿತ್ರತೆ ಎಂಬ ೨೭ ನೇ ಅಧ್ಯಾಯ ಸಮಾಪ್ತಿ

---

॥ ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ॥



# ಸಂಚಾರ ಸಂಭ್ರಮ ಕಾಂಡ

## ಅಧ್ಯಾಯ ೨೮

ಈ ಅಧ್ಯಾಯದಲ್ಲಿ ಸಿದ್ಧನು ಸಂಚರಿಸುತ್ತ ಗೋಕಾವಿಗೆ ಬಂದು, ಹೊಳೆಯ ದಡದಲ್ಲಿರುವ ನಾವೆಯನ್ನು ಎಳೆದು ನೀರೊಳಗೆ ಬಿಟ್ಟದ್ದು.

ಅಲ್ಲಿಂದ ಹುಬ್ಬಳ್ಳಿಗೆ ಬಂದು ಶಿವಾಲಯದಲ್ಲಿರುವಾಗ ಹನ್ನೆರಡುಮಠದವರು ಸಿದ್ಧನನ್ನು ಹಿಡಿತಂದು, ಕ್ಷೌರ ಮಾಡಿಸಿ ತೃಪ್ತಿಗೊಳಿಸಿದ್ದು ಮತ್ತೆ

ಚನ್ನಪ್ಪನ ಚೌಕಿನಲ್ಲಿ ಶರಣಪ್ಪನು, ಶಾಸ್ತ್ರಹೇಳುವಾಗ ಅವನ ತಪ್ಪು ತೆಗೆದು, ಅದನ್ನು ಸರಿಯಾಗಿ ಹೇಳಿದ್ದು. ತೊರವಿಯವರ ಬಾವಿಯಲ್ಲಿದ್ದು, ಕ್ಷೀರಸಾಗರದವರ ಮನೆಯಲ್ಲಿ ಯೋಗವಾಶಿಷ್ಠ ಹೇಳಿದ್ದು ಮತ್ತು ಚಿದ್ಘನ ಸ್ವಾಮಿಯ ಸಮಾಧಿಯ ಹತ್ತರ ಇದ್ದಾಗ ಹಲಸಿನಕಾಯಿ ಕದ್ದನೆಂದು ಹೊಡಿಸಿಕೊಂಡು ಶಮಂತಕಮಣಿಯ ಕಥೆಯನ್ನು ಹೇಳಿದ ವಿಷಯ ಗಳಿರುವವು.

ಸ್ತುತಿಪದ— ಚೊರನೂರಂ ವಾರಿಧಿಯ ನುರೆ |
ಪಾರಿಸಾರುತ ಸುಟ್ಟು ಕಡುಗಂ |
ಭೀರರಂ ಯಮುನೂರ ಜಾತ್ರೆಗೆ ಕೆಳುಹಿಸುತ ಪರಮ ||
ನಾರಿಯುಂ ತಂದವನುಪಾಶ್ಯನ |
ಚೋರ ಬೇಡಗೆ ಮೊದಲಿಗಿತ್ತವ |
ನಾರೊ ಆತನ ಪಿತನ ತಲೆದೆ ಶಿವನಿಗಾಂ ನಮಿಪೇಂ ||

### ಪದ— ೧-೮ ಗೋಕಾವಿ ಘಡದಲ್ಲಿರುವ ನಾವೆಯನ್ನೆಳೆದು ನೀರಲ್ಲಿ ಬಿಟ್ಟದ್ದು.

ಬಳಿಕ ಸಿದ್ಧಭಾರತಿಯು, ತಾನು ಸುಲಭದಿಂದ ಗಿರಿ, ಅರಣ್ಯ, ಹಳ್ಳ ಕೊಳ್ಳಗಳನ್ನು ದಾಟುತ್ತ ಪುರ ಪಟ್ಟಣಗಳನ್ನು ನೋಡುತ್ತ, ಶರೀರಕ್ಕೆ ರೋಗಾದಿಗಳು ಬಂದರೆ, ಮೂರುದಿನ ಲಂಘನಮಾಡಿ, ಅವುಗಳನ್ನು ತಡೆ ಗಟ್ಟುತ್ತ, ತಾಪದಳದ ಮೇಲಿರುವ ಮನವನ್ನು ಸೆಳೆದು ಅದರ ಕೆಸ್ಟವನ್ನು ಪ್ರಾರಬ್ಧರೂಪ ಪರಿಚಾರಕನಿಗೆ ಒಪ್ಪಿಸುತ್ತ ತಾನು ಸುಖದಿಂದ ಕಾಲಕಳೆ ಯುತ್ತಿದ್ದನು.

ಆದರೆ ಪ್ರಾರಬ್ಧ ಪರಿಚಾರಕನೆಂಬ ವಾಯು, ಒಂದು ದಿನ ಸಿದ್ಧನ ದೇಹವೆಂಬ ತರಗಲೆಯನ್ನು ಹಾರಿಸಿ ಗೋಕಾವಿಪುರಕ್ಕೆ ತಂದು ಚಲ್ಲಿತು. ಸಿದ್ಧನು ಊರೊಳಗೆ ತಿರಿದುಂಡು, ನದಿಯಲ್ಲಿ ನೀರು ಕುಡಿದು, ವೃಕ್ಷದ ಛಾಯದಲ್ಲಿ ವಿಶ್ರಮಿಸಿದ್ದನು. ಆಗ ನದಿಯಲ್ಲಿ ನಿಂತಿದ್ದ ಅಂಬಿಗನು ಸಿದ್ಧನನ್ನು ಕಂಡು, ''ಎಲೋ ಹುಡುಗಾ ಬಾ ಇಲ್ಲಿ'' ಎಂದು ಕರೆದನು.

ಸಿದ್ಧನು ಕೇಳದವನಂತೆ, ಅವನ ಕಡೆಗೆ ಬೆನ್ನು ಮಾಡಿದನು. ಅಂಬಿಗನು ಅವನ ಸಮೀಪಕ್ಕೆ ಬಂದು, "ನಿನ್ನನು ನದಿಯ ಆಚೆಗೆ ದಾಟಿಸುವೆನು ಬಾ'' ಎಂದನು. ಸಿದ್ಧನು ಹೋಗದಿರಲು, ಜುಲುಮೆಯಿಂದ ಅವನ ಕೈಯನ್ನು ಹಿಡಿದು ಕರೆತಂದು ನಾವೆಯ ಹತ್ತರ ನಿಲ್ಲಿಸಿ, ''ನೀನು ಈ ನಾವೆಯನ್ನು ಜಗ್ಗಿ ಹೊಳೆಯಲ್ಲಿ ಬಿಡಬೇಕು'' ಎಂದು ಹೇಳಿ ಅದರ ಹಗ್ಗವನ್ನು ಅವನ ಕೈಯಲ್ಲಿ ಕೊಟ್ಟನು. ಸಿದ್ಧಯತಿಯು, ಆ ಡೋಣಿಯನ್ನು ಎಳೆದು ನೀರೊಳಗೆ ತೇಲಿಸಿದನು, ಆಗ ನಾವಿಕನು ಅದನ್ನು ಕಂಡು ಆಶ್ಚರ್ಯಗೊಂಡವನಾಗಿ ಅಬ್ಬಬ್ಬಾ ! ಹತ್ತು ಜನರಿಂದ ಎಳೆಯಲಿಕ್ಕಾಗದ, ನಾವೆಯನ್ನು ಇವನೊಬ್ಬನೆ ಎಳೆದು ಬಿಟ್ಟನು ! ಇವನು ಯಾರಿರಬಹುದು ?'' ಎಂಬುದನ್ನು ತಾನು ತಿಳಿದುಕೊಳ್ಳುವದಕ್ಕಾಗಿ, ''ನೀನು ಯಾರಯ್ಯಾ ?'' ಎಂದು ಕೇಳಿದನು ಅದಕ್ಕೆ ಭವಸಾಗರ ತರಣಿರೂಪ ಸಿದ್ಧನು ''ಸಂಸಾರವೆಂಬ ಜಲನಿಧಿಯಲ್ಲಿ, ಮೋಹವೆಂಬ ಶೆಳವಿಗೆ ಸಿಕ್ಕು ಬಳಲುತ್ತಿರುವವರನ್ನು, ವೇದವೆಂಬ ದಡದಲ್ಲಿ ಶೋಭಿಸುತ್ತಿರುವ ಮಹಾವಾಕ್ಯವೆಂಬ ಡೋಣಿಯಿಂದ ದಾಟಿಸಲಿಕ್ಕೆ ಮೊದಲು ಯಾವನು ನಿಂತಿರುವನೋ ಅವನೇ ನಾನಿರುವೆನು'' ಎಂದನು. ನಾವಿಕನು ಸಿದ್ಧನನ್ನು ಗುರುಭಾವದಿಂದ ಪೂಜಿಸಿ, ಹೊಳೆಯ ಆಚೆಯ ದಡಕ್ಕೆ ಒಯ್ದು ಇಳಿಸಿದನು. ಆಗ ಸಿದ್ಧ ಯೋಗಿಯು "ಡೋಣಿ ಸಾಗಿಸುವ ಋಣವು ಇಲ್ಲಿಗೆ ತೀರಿತು''. ತಲೆಯ ಮೇಲಿನ ಭಾರವು ಹೆಗಲಿಗೆ ಇಳಿಯಿತು. ನಾನೇ ಪರಮ ಧನ್ಯನು'' ಎನ್ನುತ್ತ ಅಲ್ಲಿಂದ ತೀವ್ರ ಹೊರಟು ಹುಬ್ಬಳ್ಳಿ ಶಹರಕ್ಕೆ ಬಂದು ಮುಟ್ಟಿದನು.

ಪದ— ೯-೭೪ **ಸಿದ್ಧನು ಸಂಚಾರ ನಿಲ್ಲಿಸಿ ಹುಬ್ಬಳ್ಳಿಯಲ್ಲಿಯೇ ನೆಲೆಯಾಗಿ ನೆಲೆಸಿದ್ದು. ಹನ್ನೆರಡು ಮಠದವರು ಸಿದ್ಧನನ್ನು ಉಪಚರಿಸಿದ್ದು.**

ಸಿದ್ಧಾರೂಢರು ಹುಬ್ಬಳ್ಳಿಗೆ ಬಂದ ಮೇಲೆ ಮೌನದಿಂದಿದ್ದು, ಗೋಪಾಲಕರ ಕೂಡ ಗುಂಡು, ಚಂಡು, ಬಗರಿ, ಚಿಣಿಕೋಲು, ಸರಮನೆ, ಹುದ್ರಿತಿ, ಆನಿಕಿರಿ, ಗಿಡಮಂಗ ಮೊದಲಾದ ಅನೇಕ ಆಟಗಳನ್ನು ಆಡಹತ್ತಿದನು. ಯಾರನ್ನು ಪೀಡಿಸದೆ, ಪುರದೊಳು ತಿರುಗುತ್ತ, ಗಂಡ ಮನೆಯ ಮುಂದೆ ಕಡು ಉದ್ದಂಡ

ದಿಂದ ಕೈ ಬೊಗಸೆಯನ್ನೊಡ್ಡಿ ಸುಮ್ಮನೆ ನಿಲ್ಲುತ್ತಿದ್ದನು. ಮನೆಯವರು ತಡ ಮಾಡದೆ ಏನಾದರೂ ತಂದು ಹಾಕಿದರೆ ಅದನ್ನು ಅಲ್ಲಿಯೇ ತಿನ್ನುತ್ತಿದ್ದನು. ಅವರು ತೀವ್ರ ತರದಿದ್ದರೆ ಹಾಗೆಯೇ ಮುಂದೆ ಸಾಗುತ್ತಿದ್ದನು. ಕೆಲವರು ಇವನಿಗೆ ಹುಚ್ಚನೆಂದೂ, ಹೊಲೆಯನೆಂದೂ, ಮೂಕನೆಂದೂ, ಮೂರ್ಖ ನೆಂದೂ, ಪಿಶಾಚಿಯೆಂದೂ ಸಿಕ್ಕವರು ಸಿಕ್ಕಹಾಗೆ ತಿರಸ್ಕರಿಸುತ್ತಿದ್ದರು. ಅವನು ನಿತ್ಯ ಕೆರ್ಜಗಿ ಪರಪ್ಪನವರ ಹೊಲದಲ್ಲಿರುವ ಚಿಕ್ಕದೊಂದು ಶಿವಾಲಯದಲ್ಲಿ ಸಂತೋಷದಿಂದ ರಾತ್ರಿ ಕಾಲ ಕಳೆಯುತ್ತಿದ್ದನು. ಒಂದು ದಿನ ಜಡಿಮಠದ ಶ್ರೀ ಶಿವಲಿಂಗಯ್ಯ ಸ್ವಾಮಿಗಳು ಇವನ ವೈರಾಗ್ಯಾದಿ ಲಕ್ಷಣಗಳನ್ನು ಕಂಡು ಇವನು ಸತ್ಪುರುಷನಿರುವದೇ ನಿಜವೆಂದು ತಿಳಿದು, ಹನ್ನೆರಡು ಎತ್ತಿನ ಮಠದ ಸ್ವಾಮಿಗಳಾದ ಶ್ರೀ ಸಿದ್ಧವೀರಯ್ಯನವರಿಗೆ ಸಿದ್ಧನ ಸ್ಥಿತಿಯನ್ನು ತಿಳಿಸಿದರು. ಕೂಡಲೆ ಶ್ರೀ ಸ್ವಾಮಿಗಳು ಗುರುಪಾದಪ್ಪ ಯರನಾಳ, ನಡುಮನೆಯ ವೀರಪ್ಪ ಹಾಗೂ ಗುರುಸಿದ್ದಪ್ಪ ಮುದಗಲ್ಲ ಮೊದಲಾದ ಮುಖಂಡ ಶಿಷ್ಯ ಮಂಡಳಿ ಯನ್ನು ಕೂಡಿಕೊಂಡು ಸಿದ್ಧನಿರುವ ಶಿವಾಲಯಕ್ಕೆ ಬಂದರು. ಅಲ್ಲಿ ಆರೂಢನು ಒಂದು ಹರಕು ಕೌದಿಯ ತುಂಡನ್ನು ಪ್ರೀತಿಯಿಂದ ಮುಸುಗಿಕ್ಕಿಕೊಂಡು ಚಿನುಮಯಾತ್ಮಕ ಸರ್ಪಭೂಷಣನನ್ನು ನೆನೆಯುತ್ತ, ತದಾಕಾರ ವೃತ್ತಿಯಿಂದ ಅಲ್ಲಿರುವ ಶಿವಲಿಂಗಕ್ಕೆ ಆತು ಕುಳಿತಿದ್ದನು. ಅವನ ತಲೆಯ ಮೇಲೆ ವಿಲಾಸ ದಿಂದ ತನ್ನ ಹೆಡೆಯನ್ನು ತೆಗೆದು ಆಡುತ್ತಿರುವ ಘಟಸರ್ಪವನ್ನು ಅವರೆಲ್ಲರ ಮುಂದಿದ್ದುದನು ನೋಡಿ ಹೆದರಿ ''ಅಯ್ಯೋ ! ಹಾವು ಹಾವು'' ಎಂದು ಚೀರಿ ದನು. ಜನರ ಗದ್ದಲಕ್ಕೆ ಸರ್ಪವು ಅಲ್ಲಿಂದ ಜಲಹರಿಯೊಳಗೆ, ಸರಿದು ಮಾಯ-ವಾಯಿತು ಅವರೆಲ್ಲರೂ, "ಇವನು ಮಹಾತ್ಮನೇ ನಿಜವೆಂದು'' ಅಂಜಂಜುತ್ತ ಗುಡಿಯೊಳಗೆ ಹೊಕ್ಕರು. ಅವನನ್ನು ಒಲುಮೆಯಿಂದ ಮಾತನಾಡಿಸಿದರೂ ಅವನು ಮಾತನಾಡುತ್ತ ಮೌನವಾಗಿದ್ದನು. ಕಡೆಗೆ ಎಲ್ಲರೂ ಆತನ ಎರಡೂ ತೋಳುಗಳನ್ನೂ ಹಿಡಿದೆತ್ತಿ ಹನ್ನೆರಡು ಎತ್ತಿನ ಮಠಕ್ಕೆ ಕರ ತಂದರು. ಕ್ಷೌರಿಕನನ್ನು ಕರೆಯಿಸಿ, ಕ್ಷೌರ ಮಾಡಿಸಿದರು. ನಂತರ ತೈಲು ಹಚ್ಚಿ ಈರ್ವರು ಅಡರಿ ಮೈ ತಿಕ್ಕಹತ್ತಿದರು. ಮೈಯಲ್ಲಿ ಅಡರಿದ ಮಣ್ಣು ಸುರುಳಿಯಾಗಿ ಬೀಳಹತ್ತಿತು ಒಂದು ಸೇರು ಎಣ್ಣೆ ಯನ್ನು ಮೈಯಲ್ಲಿ ಅಟ್ಟಿಸಿ, ಬಿಸಿನೀರಿನಿಂದ ಎರೆದು, ಮಡಿ ಧೋತರವನ್ನು

ಹೊದಿಸಿ, ಶೇವಿಗೆಯನ್ನು ಉಣಿಸಿ, ಮೃದು ಹಾಸಿಗೆಯ ಮೇಲೆ ಆ ಶಿವ-ಯೋಗಿಯನ್ನು ಮಲಗಿಸಿದರು. ಆಗ ಅವನಿಗೆ ಅಲ್ಲಿಯೇ ನಿದ್ರೆ ಹತ್ತಿತು. ಮರುದಿವಸ ಬೆಳಿಗ್ಗೆ ಆರೂಢರು, ಎದ್ದು ಹಾಸಿಗೆಯ ಮೇಲೆ ಕುಳಿತಾಗ ಮಠದೊಡೆಯರು, ಅವರ ಬಳಿಗೆ ಬಂದು, ''ಸದಯನೆ, ಬಹಿರ್ದೇಶಕೆ ಹೋಗುವಿಯಾ ?'' ಎಂದು ಕೇಳಿದರು. ಅದಕ್ಕೆ ಸಿದ್ಧನು, ತಲೆ ಹಾಕುತ್ತ ಎದ್ದು, ''ಸೆರೆಮನೆಯ ಬಿಡುಗಡೆ ಎನಗಾಯಿತು'' ಎಂದುಕೊಂದು ಅಲ್ಲಿಂದ ಕದಲುತ್ತ, ಯಾರ ಕೈಗೂ ಸಿಗದಂತೆ ನಡೆದನು. ಅಂದಿನಿಂದ ತಾನು ಯಾರಿಗೂ ಕಾಣಿಸಿಕೊಳ್ಳದಂತೆ ಅಡವಿಯಲ್ಲಿ ಇದ್ದುಕೊಂಡು, ದನ ಕುರಿಗಳನ್ನು ಕಾಯುವ ಬಾಲ-ಬಾಲಕಿಯರ ಕೂಡ, ಸಲುಗೆಯಿಂದ ಆಡುತ್ತ ಅವರಿಂದ ರೊಟ್ಟಿಯನ್ನು ಬೇಡಿ ತಿನ್ನುತ್ತ, ಅವರಿಗೆ ಕಟ್ಟಿಗೆ ಮುರಿದು, ಕುಳ್ಳ-ಆರಿಸಿ, ಶಗಣಿ ಹೊತ್ತಲ ಹಿಡಿದು ಕೊಡುತ್ತಿದ್ದನು. ಹೀಗೆ ಆರು ತಿಂಗಳವರೆಗೆ ಕಾಲ ಕಳೆದನು.

## ಚನ್ನಪ್ಪನ ಚೌಕಿನಲ್ಲಿ ಶಾಸ್ತ್ರಚರ್ಚೆ

ಅಲ್ಲಿಯೇ ಸಮೀಪದಲ್ಲಿ ಗಾಣಿಗೇರ ಚನ್ನಪ್ಪನ ಚೌಕಿಯ ಮೇಲೆ ಕಡ್ಡಿ ಪರಪ್ಪ ಮತ್ತು ಉಜ್ಜಣ್ಣನವರ ಭೀಮಪ್ಪ ಮೊದಲಾದ ನಾಲ್ಕಾರು ಜನರನ್ನು ಕೂಡಿಸಿಕೊಂಡು ಶರಣಪ್ಪನೆಂಬವನು ಪ್ರತಿದಿನ ಸಾಯಂಕಾಲಕ್ಕೆ **ನಿಜಗುಣರ** ಪರಮಾನುಭವ ಬೋಧೆಯನ್ನು ನಡೆಸುತ್ತಿದ್ದರು. ಒಂದು ದಿನ ಸಿದ್ಧನು ಅಕಸ್ಮಾತ್ ಬಂದು ಆ ಕಟ್ಟೆಯ ಮರೆಗೆ ಕುಳಿತನು. ಆಗ ಶಾಸ್ತ್ರವು ನಡೆದಿತ್ತು. ಶರಣಪ್ಪನು ಪರಮಾನುಭವ ಬೋಧೆಯಲ್ಲಿ ಮೂರನೇ ಸಂಧಿ ಐದನೇ ಸೂತ್ರದೊಳಗಿನ ಎರಡನೇ ಗದ್ಯದಲ್ಲಿರುವ ಚಿತ್ತು ಶಬ್ದಕ್ಕೆ ''ಕರಣ'' ಎಂದು ಅರ್ಥಮಾಡಿ ಹೇಳಿದನು.

"ತೋರುವ ಸಕಲ ಜಂಡಗಳ ಧರ್ಮವಾ |
ಬೇರೆನಿಸಿದ ಚಿತ್ತಿಗೆನಲುಂಟೆ ? ||''

ಇದನ್ನು ಸಿದ್ಧಯೋಗಿಯು ಕೇಳಿ ''ಚಿತ್ತು ಶಬ್ದಕ್ಕೆ ಆತ್ಮನೆಂದು ಅರ್ಥ ಮಾಡಬೇಕು ಕರಣವೆಂಬ ಅರ್ಥ ಮಾಡಬಾರದು'' ಎಂದು ಹೇಳಿ

ತಾನು ಆ ಸೂತ್ರದ ಅಭಿಪ್ರಾಯವನ್ನು ಎಲ್ಲರ ಮನ ಮೆಚ್ಚಿಗೆಯಾಗುವಂತೆ ಹೇಳಿ ಸಂತೋಷದಿಂದ ಸಮಾಪ್ತಿಗೊಳಿಸಿದನು. ಹೀಗೆ ಆರೂಢ ಸಿದ್ಧನು ಹೇಳಿದ್ದನ್ನು ಕೇಳಿ ಎಲ್ಲರೂ ತಲೆದೂಗಿ ಶೀಘ್ರವಾಗಿ ಆ ಯೋಗಿವರನನ್ನು ಮೇಲಕ್ಕೆ ಕರೆತಂದು ಕುಳ್ಳಿರಿಸಿದರು.

ಅವರಲ್ಲಿ ಕೆಲವರು ಮನೆಗೆ ಹೋಗಿ ಅನ್ನವನ್ನು ತಂದು ಸಿದ್ಧರನ್ನೊಡಗೂಡಿ ಊಟ ಮಾಡಿ ಅಲ್ಲಿಯೇ ಮಲಗಿಕೊಂಡರು. ಆಗ ಸಿದ್ಧ ಯತಿಯು ಅವರಿಗೆ ಅರಿಯದಂತೆ (ಸದ್ದು ಮಾಡದೆ) ಎದ್ದು ಹೋದನು. ಮರುದಿವಸ ಬೆಳಿಗ್ಗೆ ಎದ್ದು ನೋಡಲು ಸಿದ್ಧರು ಕಾಣದಿರಲು, ''ಅಯ್ಯೋ ! ಅನಾಯಾಸವಾಗಿ ಪ್ರಾಪ್ತವಾಗಿದ್ದ ಚಿನ್ನದ ಮುದ್ದಿಯು ಇಟ್ಟಲ್ಲಿಯೇ ಮಾಯವಾದಂತೆ ಸಿದ್ಧಾರೂಢನು ಎದ್ದು ಹೋದನಲ್ಲಾ ! ನಾವೆಲ್ಲರು ಬುದ್ಧಿಗೇಡಿಗಳಾಗಿ ಯತಿವರನನ್ನು ಕಾಯದಲೆ ಕಳೆದುಕೊಂಡೆವು'' ಎಂದು ಎಲ್ಲರೂ ಮಿಡುಕಹತ್ತಿದರು. ಆಗ ಅವರು ಹನ್ನೆರಡೆತ್ತಿನ ಮಠಕ್ಕೆ ಹೋಗಿ ಸಿದ್ಧನು ನಿನ್ನೆ ನಡೆದ ಶಾಸ್ತ್ರ ವಿಚಾರವನ್ನು ಸಾಂಗವಾಗಿ ಸ್ವಾಮಿಗಳವರಿಗೆ ತಿಳಿಸಿದರು

"ಪನ್ನಗವು ತಲೆಯ ಮೇಲೆ ಆಡಿದ ಸನ್ಮುತನನ್ನು ಚನ್ನಾಗಿ ವಿಚಾರಿಸಲಾಗಿ ಆ ಫಣಿದರನೇ, ಆ ಯತಿರೂಪದಿಂದ ಬಂದಿರುವದು ಸತ್ಯವು. ಅವನನ್ನು ಹುಡುಕಿ ತನ್ನಿರಿ, ಬಿಡಬೇಡಿರಿ'' ಎಂದು ಸ್ವಾಮಿಗಳು ಆಜ್ಞಾಪಿಸಿದರು. ಆಗ ಅವರೆಲ್ಲರು ಬೀದಿ ಬೀದಿ ಸಂದಿಗೊಂದಿ ಎಲ್ಲಿ ಹುಡುಕಿದರೂ, ಆತನು ಸಿಗದಿರಲು ಎಲ್ಲರೂ ನಿರಾಶೆಹೊಂದಿದರು.

### ತೊರವೀಯವರ ಭಾವಿಯಲ್ಲಿ ವಾಸ

ಆರೂಢರು ಅಲ್ಲಿಂದ ಬೇಗನೆ ಹೊರಟು ಕಡಜೀರಿಗಿಹುಳ, ಹುಪ್ಪಡಿ, ಮುಳ್ಳುಕಂಟಿಗಳಿಂದ ಕೂಡಿರುವ ತೊರವೀಯವರ ಹಾಳು ಭಾವಿಯೊಳಗಿಳಿದು "ಇದು ನನಗೆ ಇರಲಿಕ್ಕೆ ಅನುಕೂಲವಾಗಿರುವದು'' ಎಂದು ತಿಳಿದು ಅಲ್ಲಿಯೇ ಇರಹತ್ತಿದರು. ಇತ್ತ ಊರಲ್ಲಿ ಸತ್ಪುರುಷನ ಸುಕೀರ್ತಿಯು ಬೆಳೆಯಹತ್ತಿತು. ತಾರೆಗಳ ಅರಸನಾದ ಚಂದ್ರನ ಕಲೆಯಂತಿರುವ ಈತನನ್ನು ಕೆಲವರು ಭಾವಿಯಲ್ಲಿ ಕಂಡರು. ಅವರು ಭರದಿಂದ ಊರೊಳಗೆ ಓಡಿ ಬಂದು, ಪೇಟಿಯೊಳ

ಗಿರುವ ಮದಲೇಟಪ್ಪನೆಂಬವನಿಗೆ ಅರುಹಿದರು ಕೂಡಲೆ ಆ ವೈಶ್ಯನು ಭಾವಿಗೆ ಬಂದು ನೋಡಿದನು. ಸೂರ್ಯನ ಕಿರಣಕ್ಕೆ ಕಮಲವು ಅರಳಿದಂತೆ ಬ್ರಹ್ಮತೇಜದಿಂದ ಸಿದ್ಧರ ಮುಖವು ಪ್ರಕಾಶಿಸುತ್ತಿತ್ತು ಮತ್ತು ಖರ್ಜುರ ಫಲದಂತೆ ಸುಕ್ಕುಗಟ್ಟಿ ಒಣಗಿರುವ ಮೈಯಿಂದ ಚಿನುಮಯಾತ್ಮಕ ಸಿದ್ಧನ ದಿವ್ಯ ಮೂರ್ತಿಯನ್ನು ದಿಟ್ಟಿಸಿ ವಿನಯದಿಂದ ನಮಿಸಿ ಆತನ ಕರ ಪಿಡಿದು, ಉದಯದೊಳು ರವಿಯು ರಥವನ್ನು ಮೇಲಕ್ಕೆಳೆದು ತರುವ ವರುಣನಂತೆ ಮದಲೇಟಪ್ಪನು ಭಾವಿಯೊಳಗಿಂದ ಜ್ಞಾನಪ್ರಕಾಶ ಮೂರ್ತಿಯನ್ನು ಮೇಲಕ್ಕೆ ಕೆರೆತಂದನು ಮತ್ತು ಸಡಗರದಿಂದ ತನ್ನ ಮನೆಗೆ ಕರೆದೊಯ್ದು ಸೆರೆ ಪನ್ನೀರು ಕಾಸಿ ಅಭ್ಯಂಗ ಸ್ನಾನ ಮಾಡಿಸಿದನು. ನಂತರ ಗಂಧಾಕ್ಷತಿ ಪತ್ರಿ ಪುಷ್ಪಗಳಿಂದ ಪೂಜಿಸಿ ಮೃಷ್ಟಾನ್ನದಿಂದ ತೃಪ್ತಿಗೊಳಿಸಿ ಮೃದು ಹಾಸಿಗೆಯ ಮೇಲೆ ಶುಭ್ರ ವಸ್ತ್ರವನ್ನು ಹೊದಿಸಿ ಮಲಗಿಸಿದನು.

ಸಿದ್ಧನು ಮರುದಿವಸ ನಸುಕಿನಲ್ಲಿ ಎದ್ದು ತನ್ನ ಜೀರ್ಣವಾಗಿದ್ದ ಬಟ್ಟೆಗಳನ್ನು ಕಟ್ಟಿಕೊಂಡು ಉಳಿದವುಗಳನ್ನೆಲ್ಲ ಅಲ್ಲಿಯೇ ಬಿಟ್ಟು ತಾನು ಇಳಿದುಕೊಂಡಿದ್ದ ತೊರವೀಯವರ ಭಾವಿಗೆ ಬಂದು ಕುಳಿತುಕೊಂಡನು. ಮಾದಲೇಟಪ್ಪನು ಸಿದ್ಧನ ವಿರತಿಯನ್ನು ಕಂಡು ಆಶ್ಚರ್ಯಗೊಂಡನು. ಸಿದ್ಧನು ಅಲ್ಲಿಯೇ ಕಾಲ ಕಳೆಯುಹತ್ತಿದನು. ಒಂದು ದಿವಸ ಓರ್ವ ಗುರುಲಿಂಗಯ್ಯನೆಂಬುವನು ತನ್ನ ಶಿಷ್ಯರನ್ನೊಡಗೂಡಿಕೊಂಡು ಅವನಿರುವ ಭಾವಿಗೆ ಬಂದು, ತಮಗೆ ಬಾಧಿಸುತ್ತಿರುವ ಸಂಶಯಾದಿಗಳನ್ನು ಸತ್ಪುರುಷರ ಮುಖದಿಂದ ಕೇಳಿ ಅವುಗಳನ್ನು ಪರಿಹರಿಸಿಕೊಂಡು ಉಲ್ಹಾಸದಿಂದ ಸಿದ್ಧರನ್ನು ಕೊಂಡಾಡಿ ನಮಿಸಿ ಹೋದನು.

**ಕ್ಷೀರಸಾಗರದವರ ಮನೆಯಲ್ಲಿ ಯೋಗ ವಾಶಿಷ್ಠ ನಡೆಸಿದ್ದು**

ಹೀಗೆ ಕೆಲವು ದಿನಗಳು ಜಾರಿಹೋಗಲು ಶ್ರೇಷ್ಠತಮವಾದ ಸಿದ್ಧನ ಕೀರ್ತಿಯನ್ನು ಕೇಳಿದ ಕ್ಷೀರಸಾಗರದ ಬಸವಣ್ಣೆಪ್ಪನೆಂಬವನು ಅವನಿರುವ ಭಾವಿಗೆ ಬಂದು ನಮಿಸಿ, "ಸದ್ಗುರುವೇ, ತಮ್ಮ ಅವತಾರವು ಸಂಸಾರದಿಂದ ಬಳಲುತ್ತಿರುವ ಸದ್ಭಕ್ತರನ್ನು ತಾರಿಸುವದಕ್ಕಾಗಿ ಇರುವದು. ಅದುಕಾರಣ ನಮ್ಮ ಸದನದಲ್ಲಿ ಸದ್ಬೋಧವೆಂಬ ಯೋಗ ವಾಶಿಷ್ಠ ಶಾಸ್ತ್ರವನ್ನು ಹೇಳಲು ತಾವು ಪ್ರಾರಂಭ ಮಾಡಬೇಕು. ಅಡವಿಗೆ ಹೋದ ಗೋವನ್ನು ಪಾಲ್ಗುಡಿಸ

ಲಿಕ್ಕೆ ಹಾದಿ ಕಾಯುತ್ತಿರುವ ಕರುವಿನಂತೆ, ಸದ್ಭಕ್ತ ಮಂಡಳಿಯು ತಮ್ಮ ಮುಖದಿಂದ ಜ್ಞಾನಾಮೃತ ಪಾನ ಮಾಡುವದಕ್ಕಾಗಿ ತಮ್ಮ ಚರಣಾಗಮನ ವನ್ನು ನೆರೆನಂಬಿ ಈಕ್ಷಿಸುತ್ತ ತಮ್ಮ ಧ್ಯಾನದಲ್ಲಿಯೇ ಕುಳಿತಿರುವದು. ಅಲ್ಲಿಯು ವರೆಗೆ ತಾವು ಬಂದು ನಮ್ಮೆಲ್ಲರಿಗೆ ಜ್ಞಾನಾಮೃತವನ್ನು ಬೋಧಿಸಿ, ನಮ್ಮೆಲ್ಲ ರನ್ನು ಧನ್ಯರನ್ನಾಗಿ ಮಾಡುವದು ತಮ್ಮ ಕರುಣೆಯೇ ಸರಿ" ಎಂದು ಬಹು ದೈನ್ಯದಿಂದ ಪ್ರಾರ್ಥಿಸಿಕೊಂಡನು. ಅದಕ್ಕೆ ಸದ್ಗುರುನಾಥನು ಸಮ್ಮತಿಸಿ ದಿನಾಲು ಅವನ ಸಂಗಡ ಹೋಗಿ ಜ್ಞಾನ ಬೋಧಿಸಿ ಪುನಃ ತಾನಿರುವ ಭಾವಿಗೆ ಬರುತ್ತಿದ್ದನು.

ಹೀಗೆ ಪ್ರತಿದಿನ ಶಾಸ್ತ್ರವು ಬಹುಕಾಲ ನಡೆಯಹತ್ತಿತು. ಒಂದು ದಿನ ಗುರುಲಿಂಗಯ್ಯ ಶಾಸ್ತ್ರಿ ಎಂಬವನು ಮುಂದಕ್ಕೆ ಸರಿದು ಸ್ವಾಮಿಗಳಿಗೆ ನಮಿಸಿ, ಪ್ರಶ್ನೆ ಮಾಡಿದನು. "ಗುರುವೇ, ಆತ್ಮನು ದೇಹದೊಳಗಿರುವನೆಂದು ಹೇಳಿ ದಿರಿ. ನಮ್ಮ ದೇಹನೊಳಗೆ ಆತ್ಮವಿದ್ದರೂ, ನಮ್ಮ ದೃಷ್ಟಿಗೆ ಯಾಕೆ ಗೋಚರಿ ಸುವದಿಲ್ಲ'' ಎಂದು ಪ್ರಾರ್ಥಿಸಿಕೊಂಡನು. ಅದಕ್ಕೆ ಸದ್ಗುರುವರನು "ನೀನು ಕೇಳಿರುವ ಪ್ರಶ್ನೆ ಯೋಗ್ಯವಿರುವದು. ಆದರೆ ಶರೀರದೊಳಗಿರುವ ಆತ್ಮ ನನ್ನು ನೀವು ನಿಮ್ಮ ಹೊರಗಿನ ಕಣ್ಣಿನಿಂದ ನೂರು ಜನ್ಮ ತಿರುಗಿ ಬಂದು ನೋಡಿದರೂ ಆತ್ಮನು ನಿಮಗೆ ಗೋಚರಿಸನು. ಆತ್ಮನು ಹೊರಗಿರುವನೇ ? ಇದು ಶಾಸ್ತ್ರ ದೃಷ್ಟಿಯೇ ? ಇದೇ ಯೋಗ ವಾಶಿಷ್ಠ ಗ್ರಂಥದಲ್ಲಿ ಹೇಳಿದುದನ್ನು ವಿಚಾರಿಸಿರಿ. ಜಲದೊಳಗಿರುತಿಹ ಹುತಾಶನವು। ಸಲೆ ಲಘುರೂಪವನು ಲೋಕಕೆ। ಸುಲಭದಿಂ ತಾಂ ಭೀರುವಂದದಿ, ಎಂಬಂತೆ ಬಿಸಿನೀರಿನೊಳ ಗಿರುವ ಶಿಖಿಯು ಸ್ಪರ್ಶೇಂದ್ರಿಯಕ್ಕೆ ತಿಳಿಯುವದಲ್ಲದೆ, ಅದು ನೇತ್ರೇಂದ್ರಿ ಯಕ್ಕೆ ತಿಳಿಯಲಾರದು. ಆದರಂತೆ ನಿಜವಾಗಿ ತನ್ನ ದೇಹದಲ್ಲಿ ಪ್ರಕಾಶಮಾನ ವಾಗಿರುವ ಆತ್ಮನು- ಭ್ರಾಂತಿರಹಿತ ಜ್ಞಾನ ನೇತ್ರಕ್ಕೆ ಗೋಚರಿಪನಲ್ಲದೆ, ಸತತ ಬಹಿರಂಗ ವಸ್ತುವನ್ನು ಅರಿಯುವ ಅಜ್ಞ ನೇತ್ರಕ್ಕೆ ಗೋಚರಿಸಲಾರನು.

ಆತ್ಮಾನಾತ್ಮ ವಿವೇಕದಿಂದ ತತ್ವಮಸಿಮಹಾವಾಕ್ಯದ ಮುಖಾಂತರ 'ಅಹಂ ಬ್ರಹ್ಮಾಸ್ಮಿ' ಎಂಬ ಸುಜ್ಞಾನವು ದೃಢವಾಗುವದು ಪೂರ್ವದ ಅನಾತ್ಮ ವೃತ್ತಿಯನ್ನು ತೊರೆದ ಬಳಿಕ ಬ್ರಹ್ಮಾಕಾರ ವೃತ್ತಿಯನ್ನು ಬಲ

ಪಡಿಸಿಕೊಳ್ಳುವ ಅಭಿಸಂಧಿಯಲ್ಲಿ ಯಾವ ನಿರ್ವಿಕಲ್ಪ ಜ್ಞಾನವಾಗುವದೋ ಅಂಥ ಜ್ಞಾನ ನೇತ್ರಕ್ಕೆ ಆತ್ಮನು ಗೋಚರಿಸನು. ಅಂದರೆ ನಿರಾವರಣ, ನಿರ್ಮಲ ಜ್ಞಾನಕ್ಕೆ ಆತ್ಮನು ಗೋಚರಿಸನು. ಅವನು ಜಡವಾದ ಘಟದಂತೆ ಗೋಚರನಾಗುವನೆಂದು ತಿಳಿದಿರುವಿ ಏನು? ನಿನಗೆ ಶಬ್ದಜ್ಞಾನವಿದ್ದಂತೆ ಅನುಭವ ಜ್ಞಾನವಿಲ್ಲದ ಕಾರಣ 'ಆತ್ಮನು ತೋರನು' ಎಂಬ ಸಂಶಯವು ಬಂದಿರಬಹುದು ಎಂದರು.

ಆಗ ಶಾಸ್ತ್ರಿಯು, "ಗುರುಶ್ರೇಷ್ಠರೆ ತಮ್ಮ ಮುಖದಿಂದ ಬಂದ ಬೋಧಾಮೃತ ವಾಕ್ಯಗಳೆಲ್ಲವು ಸತ್ಯವಾಗಿ ನನ್ನ ಅನುಭವಕ್ಕೆ ಅಳವಟ್ಟು ನಾನು ಧನ್ಯನಾದೆನು" ಎಂದು ಹರುಷದಿಂದ ನಮಿಸಿದನು. ಈ ಪ್ರಕಾರ ಶಾಸ್ತ್ರವು ಕ್ರಮವಾಗಿ ನಡೆಯಹತ್ತಿತು. ಈ ವಾರ್ತೆಯನ್ನು ಕೇಳಿ ದಿನದಿನಕ್ಕೆ ಪುರ ಜನರ ಸಮೂಹವು ಹೆಚ್ಚುತ್ತ ನಡೆಯಿತು.

ಹೀಗಾಗಲು ಸಿದ್ಧನು, "ಈ ಗದ್ದಲದ ಸಮೂಹಕ್ಕಿಂತ ತನಗೆ ಏಕಾಂತವೇ ಲೇಸೆಂದು" ತಿಳಿದು ತೊರವಿಯವರ ಭಾವಿಯನ್ನು ತೊರೆದು, "ಡುಮರಿಗೆ" ಬಂದನು. ಅಲ್ಲಿ ಚಿದ್ಘನ ಸ್ವಾಮಿಗಳ ಸಮಾಧಿ ಕಂಡು ಸಂತೋಷದಿಂದ ಅಲ್ಲಿಯೇ ಇರಹತ್ತಿದನು. ದನ ಕಾಯುವ ಹುಡುಗರ ಕೂಡ ದಿನಾಲು ಆಟಗಳನ್ನಾಡುತ್ತ, ಜನರಿಗೆ ಲೀಲಾದಿಗಳನ್ನು ತೋರಿಸುತ್ತ. ಗೋಪಾಲಕರ ಸಂಗವೇ ಸರಸವೆಂದು ತಿಳಿದು, ಅಡವಿಯಲ್ಲಿರುವ ಕವಳಿ, ಕಾರಿ, ಬೋರೆ, ಪೇರಲ, ನೀರಲ, ಹಲಸು, ಮಾವು ಮೊದಲಾದ ಫಲಗಳನ್ನು ಸೇವಿಸುತ್ತಿದ್ದನು. ಬಾಲ–ಬಾಲಕಿಯರ ಕೂಡ ಆಡುವದು, ಅವರಿಗೆ ಕುಳ್ಳು, ಕಟ್ಟಿಗೆ, ಶಗಣಿ ಮೊದಲಾದವುಗಳನ್ನು ಕೂಡಿಸಿ ಕೊಡುವದು ಅವನ ದಿನ ಚರ್ಯದ ಕಾಯಕವಾಗಿತ್ತು. ಈ ಪ್ರಕಾರ ವಿನೋದದಿಂದ ಗೋಪಾಲಕರ ಕೂಡ ಕಾಲ ಕಳೆಯುತ್ತಿದ್ದನು. ರಾತ್ರಿ ಸಮಯದಲ್ಲಿ ಚಿದ್ಘನ ಸ್ವಾಮಿಗಳ ಸಮಾಧಿಯಲ್ಲಿ ಮಲಗುತ್ತಿದ್ದನು. ಒಂದು ದಿವಸ ಗೋಪಾಲಕರನ್ನೊಡಗೊಂಡು ಆಡುತ್ತ ಒಂದು ತೋಟವನ್ನು ಹೊಕ್ಕರು. ಸಿದ್ಧನು ತೋಟದ ಸೊಬಗನ್ನು ನಿರೀಕ್ಷಿಸುತ್ತ, ಕಂತುಹರನ ಉಪಕೃತಿಯನ್ನು ನೆನೆಯುತ್ತಿದ್ದನು. ಅದರೊಳಗೋರ್ವ ಬಾಲಕನು ಹಲಸಿನ ಹಣ್ಣನ್ನು ಹರಿದುಕೊಂಡು ಓಡ

ಹತ್ತಿದನು. ಅದನ್ನು ಕಂಡು ಎಲ್ಲ ಹುಡುಗರೂ ಸಿದ್ಧನೂ ಓಡಹತ್ತಿದರು, ತೋಟದವನು ಹಣ್ಣು ಹರಿದದ್ದನ್ನು ಕಂಡು "ಎಲೆ ಎಲೇ'' ಎನ್ನುತ್ತ ಓಡುತ್ತ ಬಂದನು. ಸಿದ್ಧನು ಅವನ ಕೈಗೆ ಸಿಕ್ಕಕೂಡಲೆ ಹಿಡಿದು ಗುದ್ದಿದನು. ಅದನ್ನು ಕಂಡು ಆ ಬಾಲಕನು ಹೆದರಿ ತನ್ನ ಕೈಯಲ್ಲಿದ್ದ ಹಣ್ಣನ್ನು ಚಲ್ಲಿ ಓಡಿದನು. ತೋಟಿಗನು ಅದನ್ನು ತಕ್ಕೊಂಡು ಅವರನ್ನು ಬೈಯುತ್ತ ಹೊರಟು ಹೋದನು. ಅದೇ ಸಮಯಕ್ಕೆ ಕೃಷ್ಣಾಪುರದ ಗುರುಪಾದಯ್ಯನೆಂಬವನು ಒಂದು ಗೋಪಾಲಕರ ಮುಖದಿಂದ ತೋಟಿಗನು ಸಿದ್ಧರಿಗೆ ಹೊಡೆದದ್ದನ್ನು ಕೇಳಿ ಮರಗುತ್ತ ಭಾರತಿಯ ಹತ್ತರ ಬಂದು "ತಮ್ಮನ್ನು ಕರುಣವಿಲ್ಲದೆ ಆ ಮುಸುಲನು ಹೊಡೆದನೇ ? ಹರಹರಾ !'' ಎಂದು ಚಿಂತಿಸಿದನು.

ಅದಕ್ಕೆ ಆರೂಢರು ''ಸ್ವಾಮಿಗಳೇ ! ಜ್ಞಾನಿಯ ಕರ್ಮಪಾಶವು ಒಂದು ನೆವದಿಂದ ಹರಿದು ಹೋಗಬೇಕಾಗಿದೆ. ಕೃಷ್ಣನು ತಾನು ಏನೊಂದು ತಪ್ಪು ಮಾಡದಿದ್ದರೂ ಅವನಿಗೆ ಅಪವಾದ ಬಂದಂತೆ ನನಗೂ ಬಂದಿರುವದು. ಕೃಷ್ಣನಿಗೆ ಬಂದ ಅಪವಾದ ಯಾವುದೆಂದರೆ" ಕೇಳಿರಿ.

## ಶಮಂತಕ ಮಣಿಯ ಉಪಾಖ್ಯಾನ

ದ್ವಾರಕೆಯಲ್ಲಿ ಒಂದು ದಿನ ಯದುಕುಲಾಗ್ರಣಿ ಶ್ರೀಕೃಷ್ಣಪರಮಾತ್ಮನು ತನ್ನ ಎಲ್ಲ ಪರಿವಾರದವರ ಸಭೆಯನ್ನು ಕರೆದನು. ಸೂರ್ಯನಾರಾಯಣನಿಂದ ಪಡೆದ ಶಮಂತಕಮಣಿಯನ್ನು ಸತ್ರಾಜಿತನು ತನ್ನ ಕಂಠದಲ್ಲಿ ಧರಿಸಿಕೊಂಡು ಆ ಸಭೆಗೆ ಬಂದು ಕುಳಿತನು ಆದರೆ ಶ್ರೀಕೃಷ್ಣ ಆ ಶಮಂತಕ ಮಣಿಯ ವಾರ್ತೆಯನ್ನು ಮೊದಲೇ ಕೇಳಿ ತಿಳಿದವನಾಗಿದ್ದನು. ಈಗ ಆ ಮಣಿಯು ಸತ್ರಾಜಿತನ ಕಂಠದಲ್ಲಿ ಶೋಭಿಸುತ್ತಿರುವದನ್ನು ಕಂಡು ''ಸತ್ರಾಜಿತನೆ; ಆ ಮಣಿಯನ್ನು ನಮಗೆ ಸಲ್ಲಿಸು'' ಎಂದು ಕೇಳಿದನು. ಸತ್ರಾಜಿತನು ಅದಕ್ಕೇನೂ ಪ್ರತ್ಯುತ್ತರಕೊಡದೆ ಸುಮ್ಮನೆ ಹೊರಟುಹೋದನು.

ಒಂದು ದಿವಸ ಸತ್ರಾಜಿತನ ತಮ್ಮನಾದ ಪ್ರಶೇನನು ಅಣ್ಣನಿಂದ ಹಟ ಮಾಡಿ ಪಡೆದ ಮಣಿಯನ್ನು ತನ್ನ ಕಂಠದಲ್ಲಿ ಧರಿಸಿ, ಬೇಟೆಯಾಡುವದಕ್ಕೋಸ್ಕರ ಅಡವಿಗೆ ನಡೆದನು. ಅಲ್ಲಿ ಒಂದು ಘೋರ ಸಿಂಹವು ಗರ್ಜಿಸುತ್ತ

ಬಂದು ಅವನ ಗಂಟಲಕ್ಕೆ ಹಾರಿ, ರಕ್ತವನ್ನು ಹೀರಿ, ಅವನ ಕಂಠದಲ್ಲಿರುವ ಶಮಂತಕ ಮಣಿಯನ್ನು ಕಿತ್ತುಕೊಂಡು ಹೋಯಿತು. ಅಷ್ಟರಲ್ಲಿ ಬಲು ಪರಾಕ್ರಮಿಯಾದ ಜಾಂಬುವಂತನೆಂಬ ಕರಡಿಯು, ಆ ಸಿಂಹವನ್ನು ಕೊಂದು, ಆ ಮಣಿಯನ್ನು ಅಪಹರಿಸಿಕೊಂಡು ತನ್ನ ಗವಿಯನ್ನು ಸೇರಿತು ಇತ್ತ ಸತ್ರಾಜಿತನು, ಮನೆಗೆ ಬಾರದಿರುವ ತನ್ನ ತಮ್ಮನ ವಿಷಯಕ್ಕೆ ದುಃಖಿಸಿದನು. ಮತ್ತು "ಹಿಂದೊಮ್ಮೆ ಕೃಷ್ಣನು, ನನ್ನ ಕಂಠದಲ್ಲಿರುವ ಮಣಿಹಾರವನ್ನು ಕೊಡೆಂದು ಕೇಳಿದ್ದನು. ಅವನು ನಾನು ಕೊಡದಿರಲು ಆ ಚೋರ ಕೃಷ್ಣನೇ ನನ್ನ ಅನುಜನ ಅಸುವನ್ನು ನೀಗಿ ಮಣಿಹಾರವನ್ನು ತಕ್ಕೊಂಡು ಹೋಗಿರುವನು" ಎಂದು ಶಂಕಿಸಿ ಕಂಡಕಂಡವರ ಮುಂದೆ ದೂರಹತ್ತಿದನು. ಕೃಷ್ಣನು ಆ ಅಪವಾದವನ್ನು ಕೇಳಿ, ಇದನ್ನು ತೆಗೆದು ಹಾಕದಿದ್ದರೆ, ನನ್ನ ಜನ್ಮ ವ್ಯರ್ಥವು" ಎನ್ನುತ್ತ ಕಳವಳ ಮನಸ್ಸುಳ್ಳವನಾಗಿ ಬೇಟೆಯನ್ನಾಡಲು, ತನ್ನ ಜೊತೆಗೆ ಅನುಚರರನ್ನೊಳಗೊಂಡು ಅಡವಿಗೆ ಹೋದನು. ಅಲ್ಲಿ ಕೃಷ್ಣನು, ಬೇಟೆಯ ಮೃಗಗಳನ್ನು ಹುಡುಕುತ್ತಿರಲು, ದೂರದಲ್ಲಿ ಒಂದು ಶವ ಬಿದ್ದಿರುವದನ್ನು ಕಂಡನು. ಅದನ್ನು ಪರೀಕ್ಷಿಸಲೋಸುಗ ಪರಿಚಾರಕರನ್ನು ಕಳುಹಿಸಿದನು. ಅದನ್ನು ಅವರು ಪರೀಕ್ಷಿಸಲಾಗಿ, ಅದು ಪ್ರಸೇನನ ದೇಹವೆಂದು ಕಂಡು ಬಂದದ್ದನ್ನು ಕೃಷ್ಣನಿಗೆ ತಿಳಿಸಿದರು. ಕೃಷ್ಣನು ಬಂದು ಶವದ ಕಂಠದಲ್ಲಿ ಮಣಿ ಇಲ್ಲದಿರುವದನ್ನು ಕಂಡನು ಮತ್ತು ಅವನಿಗೆ ಆಗಿರುವ ಘಾಯಗಳು, ಸಿಂಹದಿಂದ ಆಗಿರುವದೆಂದು ತಿಳಿದನು. ಹಾಗೆಯೇ ಅದರ ಹೆಜ್ಜೆಯನ್ನು ಹಿಡಿದು ನಡೆದರು. ಮಧ್ಯ ಅಡವಿಯಲ್ಲಿ ಮರಣ ಹೊಂದಿದ ಸಿಂಹವನ್ನು ಕಂಡರು. ಅದರ ಹತ್ತಿರ ಮಣಿ ಇಲ್ಲದಿರುವದನ್ನು ಕಂಡು ಅದಕ್ಕಾದ ಘಾಯವನ್ನು ಪರೀಕ್ಷಿಸಿದರು. ಅದು ಕರಡಿಯಿಂದಾದ ಗಾಯವೆಂದು ತಿಳಿದುಬಂದಿತು. ಕೂಡಲೆ ಅದರ ಹೆಜ್ಜೆಗಳನ್ನು ತುಳಿಯುತ್ತ ಹೋಗಲು ಅವು ಒಂದು ಗವಿಯನ್ನು ತೋರಿಸಿದವು. ಶ್ರೀಕೃಷ್ಣನು, ತನ್ನ ಸೇವಕರನ್ನು ಹೊರಗೆ ನಿಲ್ಲಿಸಿ, ನಿರ್ಭಯದಿಂದ ತಾನೊಬ್ಬನೆ ಒಳಗೆ ಪ್ರವೇಶ ಮಾಡಿದನು.

ಗವಿಯಲ್ಲಿ ಆ ಜಾಂಬುವಂತನು, ತಾನು ತಂದ ಮಣಿಯ ಪ್ರಕಾಶದಲ್ಲಿ ಸುಖವಾಗಿ ನಿದ್ರೆ ಮಾಡುತ್ತಿದ್ದನು. ಭಗವಾನನು, ಅವನು ಎಚ್ಚರವಾಗು–

ವಂತೆ ಗೀತೆಯನ್ನು ಪಾಡಿದನು. ಜಾಂಬುವಿಗೆ ಎಚ್ಚರಾಗಿ, ''ಎಲೋ ಹುಚ್ಚಾ, ನೀನಾವನಿರುವಿ'' ಎಂದು ಕೂಗಿದನು. "ನಾನು ಸ್ವಚ್ಛ ಹೃದಯದ ಅಚ್ಯುತನಿರುವೆನು. ನಿನ್ನ ಕೊರಳಲ್ಲಿ ನಿಚ್ಚಳವಾಗಿ ಹೊಳೆಯುತ್ತಿರುವ, ಮಣಿಗೆ ಇಚ್ಛಿಸಿ ಬಂದಿರುವೆನು. ಅದನ್ನು ನೀನು ಬಚ್ಚಿಟ್ಟುಕೊಳ್ಳದೆ, ಕಾಣಿಕೆಯಾಗಿ ಬಿಚ್ಚಿಕೊಡು'' ಎಂದು ಕೇಳಿದನು. ಜಾಂಬುವಂತನು, ''ಎಲೋ ಮಂದ ಮನುಜನೆ, ಇದು ನನ್ನದು. ಇದನ್ನು ಇಂದ್ರಾದಿ ದೇವತೆಗಳು ಕೂಡಾ ತಮ್ಮ ಕೈ ಸೇರಿಸಿಕೊಳ್ಳಲು ಸಾಧ್ಯವಿಲ್ಲ. ಅದನ್ನು ಯಾಚಿಸಿ ನಿರಾಶನಾಗ-ಬೇಡ, ನಡೆ'' ಎಂದು ಗದ್ದರಿಸಿದನು. ಕೃಷ್ಣನು, ಅದಕ್ಕೆ ಬೆದರದೆ, ''ನಾನು ಅದನ್ನು ಎಂದಿಗೂ ಬಿಟ್ಟು ಹೋಗಲಾರೆನು'' ಎಂದನು. ಕೂಡಲೆ ಜಾಂಬುವಂತನಿಗೆ ಕಡುಕೋಪವಡರಿತು. ಹೂಂಕರಿಸಿ, "ಭಾಪುನರನೆ !" ಎಂದು ತನ್ನಾಯುಧದಿಂದ ಕೃಷ್ಣನಿಗೆ ಹೊಡೆದನು.

ಕೃಷ್ಣನು ಹಲ್ಲುಗಚ್ಚಿ, ''ಎಲೋ ಕಾಲ ಪುರುಷನೆ (ಹೇಡಿಯೆ) ತಾಳು ನಿನ್ನ ಕೇಪು (ತುಬಾಕಿ) ಬಲವನ್ನು ಮುರಿದು ನಿನ್ನ ಗರ್ವವನ್ನು ಸಾಪುಗೊಳಿಸುವೆನು'' ಎಂದು ಅದನ್ನು ಗುದ್ದಿ ಮುರಿದನು. ಅಲ್ಲಿಂದ ಇಬ್ಬರಿಗೂ ಮುಷ್ಟಿಯುದ್ಧ ಪ್ರಾರಂಭವಾಯಿತು. ಶ್ರೀಕೃಷ್ಣನ ಪರಾಕ್ರಮಕ್ಕೆ, ತಲೆದೂಗಿ ಎಚ್ಚತ್ತು ಪೊಡವಿಯೊಳ್ ನನ್ನನ್ನು ಗೆಲೆಯುವ ನರರುಂಟೇ ? ಇವನು ನನ್ನೊಡೆಯ ಶ್ರೀ ರಾಮದೇವರೇ ಸತ್ಯವು" ಎಂದು ನುಡಿದನು. ಕೂಡಲೆ ಶ್ರೀಕೃಷ್ಣ ಪರಮಾತ್ಮನು ಜಾಂಬುವಂತನಿಗೆ ಮುದದಿಂದ ಶ್ರೀರಾಮರೂಪವನ್ನು ತೋರಿಸಿದನು. ಜಾಂಬುವಂತನು "ಶ್ರೀರಾಮಭದ್ರನೇ, ಹಿಂದಕ್ಕೆ ನನ್ನೊಡನೆ ಯುದ್ಧ ಮಾಡೆಂದು ಕೇಳಿಕೊಂಡಾಗ, 'ಕೃಷ್ಣಾವತಾರದಲ್ಲಿ ನಿನ್ನೊಡನೆ ಯುದ್ಧ ಮಾಡಿ, ನಿನಗೆ ಈಗಿನ ನನ್ನ ರಾಮದರುಶನ ಮಾಡಿಸುವೆನು' ಎಂದು ಹೇಳಿದ್ದಿರಿ. ಈಗ ಈ ಯುಗದಲ್ಲಿ ತಾವು ಹೇಳಿದಂತೆ ನನ್ನನ್ನು ರಕ್ಷಿಸಿದಿರಿ" ಎಂದು ಹರುಷದಿಂದ ನಮಿಸಿದನು ಮತ್ತು ತನ್ನ ಕುವರಿಯಾದ ಜಾಂಬುವತಿಯನ್ನು ಕೃಷ್ಣನಿಗೆ ಲಗ್ನ ಮಾಡಿದನು. ನಂತರ ಮುದದಿಂದ ಅಳಿಯನಿಗೆ ತನ್ನ ಮಣಿಯನ್ನು ಪಾರಿತೋಷಕವಾಗಿ ಕೊಟ್ಟು ''ಹರಿಯೇ, ಇನ್ನು ನನ್ನ ಅವತಾರವು ನಿನ್ನ ದಿವ್ಯಚರಣದಲ್ಲಿ ಐಕ್ಯವಾಗಲಿ'' ಎಂದು ಅಸುವನ್ನು ತೊರೆದನು.

ಶ್ರೀಕೃಷ್ಣ ಪರಮಾತ್ಮನು ಜಾಂಬವಂತನಿಗೆ ಮುಕ್ತಿಪದವನ್ನಿತ್ತು, ಜಾಂಬುವತಿಯನ್ನೊಡಗೊಂಡು ಬೇಗನೆ ದ್ವಾರಕಾಕ್ಕೆ ಬಂದನು. ಪುನಃ ಸಭೆಯನ್ನು ಸೇರಿಸಿ ವಿಪಿನದೊಳಗೆ ತನಗಾದ ಎಲ್ಲ ಕಷ್ಟವನ್ನು ಅರುಹಿದನು. ಸತ್ರಾಜಿತನನ್ನು ಬರಮಾಡಿಕೊಂಡು "ಸಭ್ಯಗೃಹಸ್ಥರೇ, ಈ ಸತ್ರಾಜಿತನು ಹಿಂದು-ಮುಂದು ವಿಚಾರಿಸದೆ, ತನ್ನ ತಮ್ಮನನ್ನು ವನದಲ್ಲಿ ಕೊಂದು ಮಣಿಯನ್ನು ನಾನು ಅಪಹರಿಸಿದೆನೆಂದು ನನಗೆ ಅಪವಾದ ಕೊಟ್ಟಿದ್ದಾನೆ. ಇವನ ವಿಚಾರಕ್ಕೆ ನಗೆ ಬಾರದಿರುವದೇ ?" ಎಂದು ಹೇಳಿ ಆ ಶಮಂತಕ ಮಣಿಯನ್ನು ಸಭೆಯೊಳಗೆ ಸತ್ರಾಜಿತನಿಗೆ ಕೊಟ್ಟನು.

ಸತ್ರಾಜಿತನು ಬೆದರಿ ಬೆಪ್ಪನಾಗಿ ವಿನಯದಿಂದ ನಮಿಸಿ, "ದೇವಾ, ನನ್ನಿಂದಾದ ಘನತರದ ಈ ಅಪರಾಧವನ್ನು ಮನ್ನಿಸಿ ಕ್ಷಮಿಸಬೇಕು" ಎಂದು ಕೈಜೋಡಿಸಿ ಭಿನ್ನವಿಸಿಕೊಂಡನು. ಅದಕ್ಕೆ ಶ್ರೀಕೃಷ್ಣನು ಸಮ್ಮತಿಸಿದನು. ಸತ್ರಾಜಿತನು "ಈ ಸಮ್ಮತವು ಬಹಿರಂಗವಾಯಿತಲ್ಲದೆ ನನ್ನ ಹೃದಯ ತಾಪವು ಶಾಂತವಾಗಲಿಲ್ಲ. ಕಾರಣ ತಮಗೆ ಚದುರ ಮಾತಿನ ನನ್ನ ಸುಪುತ್ರಿ ಸತ್ಯಭಾಮೆಯನ್ನು ಕೊಟ್ಟು ಈ ಮಣಿಯನ್ನು ಕಾಣಿಕೆಯಾಗಿ ಕೊಡುತ್ತೇನೆ. ಕರುಣವಿಟ್ಟು ಇವನ್ನು ತಾವು ಸ್ವೀಕರಿಸಿದರೆ ನನಗೆ "ಪರಮ ಸಂತೋಷ ವಾಗುವದು" ಎಂದು ಕೇಳಿಕೊಂಡನು. ಶ್ರೀಕೃಷ್ಣನು ಅದಕ್ಕೊಪ್ಪಲು ತನ್ನ ಸಿರಿಸಂಪತ್ತಿನ ಸೊಬಗಿನಿಂದ ತನ್ನ ಸುಪುತ್ರಿಯಾದ ಸತ್ಯಭಾಮೆಯನ್ನು ಕೃಷ್ಣನಿಗೆ ಲಗ್ನಮಾಡಿಕೊಟ್ಟು, ಅದೇ ಮಣಿಯನ್ನು ವರದಕ್ಷಿಣೆಯಾಗಿ ನೀಡಿದನು. ಕೃಷ್ಣನಿಗೆ ಅಪವಾದ ಬಂದದ್ದಲ್ಲದೆ, ಅದರ ಜೊತೆಗೆ ಎರಡು ಹೆಣ್ಣು ಗಂಟು ಬಿದ್ದವು. ನನಗೆ ಮಾತ್ರ ಎರಡು ಹೊಡೆತ ಬಿದ್ದವು. ನಾನೇ ಧನ್ಯನು ಎಂದು ಗಹಗಹಿಸುತ್ತ ತನ್ನ ಸ್ಥಳಕ್ಕೆ ತೆರಳಿದನು. ಗುರುಪಾದಯ್ಯನು ಸಿದ್ಧರ ಮುಖದಿಂದ ಇದೆಲ್ಲವನ್ನು ಕೇಳಿ ಅವನ ಸಮತೆಯನ್ನು ಅರಿತು ಪುರದಲ್ಲಿ ಬಂದು ಸಿದ್ಧರ ಕಥೆಯನ್ನು ಸರ್ವರಿಗೆ ಬೀರಿದನು.

ಮಂಗಲ— ಮೂರು ಗುಣದವರಾದ ಜನರಂ |
ಮೂರು ಬಗೆಯಿಂ ಪೊರೆವ ಶಿವನವ ।
ತಾರಿ ಯಹ ಸಿದ್ಧಂಗೆ ಕಾಡಿದ ಕಾಡುತಿರುತಿರ್ಪ ||

ಪುರ ಜನರೊಳಗಿರ್ದ ಹೀನ ವಿ ।
ಚಾರ ಗತ್ತಲೆ ಗಳೆದು ಜ್ಞಾನಂ ।
ಪ್ರೇರಿಸುತ ಮುಕುತಿಗೊಡು ಹರನೇ ನಿನಗೆ ನಾಂ ನಮಿಪೆ ॥

ಇತಿ ಶ್ರೀ ಸಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರಲೀಲಾ ಚರಿತ್ರ ಕಲ್ಪದ್ರುಮದೊಳು ಹುಬ್ಬಳ್ಳಿಯಲ್ಲಿ ನೆಲೆಗೊಂಡೆನೆಂಬ ೨೮ ನೇ ಅಧ್ಯಾಯ ಸಮಾಪ್ತಿ.

———

॥ ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ॥



# ಸದ್ಬೋಧ ಕಾಂಡ

## ಅಧ್ಯಾಯ ೨೯

ಈ ಅಧ್ಯಾಯವು ಸಿದ್ಧರು, ಆ ಚಿದ್ಘನಾನಂದ ಸ್ವಾಮಿಯ ಸಮಾಧಿಯ ಹಿಂದೆ ಮಲಗಿದಾಗ್ಗೆ, ಮಾತ್ಸರ್ಯದಿಂದ ಒಬ್ಬ ಬಣಜಿಗನು ಬಂದು, ಅವನನ್ನು ತಲೆಯುವರೆಗೆ, ಮೇಲಕ್ಕೆ ಎತ್ತಿ ಚಲ್ಲಿದ್ದು.

ಕೆಲವು ಸದ್ಭಕ್ತರು, ಆ ಘಾಯಗಳನ್ನು ಔಷಧೋಪಚಾರದಿಂದ, ಗುಣಪಡಿಸಿದ್ದು. ಬಳಿಕ ಕೆಲವರು ಮತ್ತೆ ಆ ಸಿದ್ಧರನ್ನು, ಹಾಳು ಭಾವಿ-

ಯಲ್ಲಿ ನೂಕಿದ್ದು. ಮತ್ತೆ ಕೆಲವು ದಿನಗಳ ಮೇಲೆ ಹಾಳು ಗುಡಿಯೊಳಗೆ, ಕರೆದೊಯ್ದು ಹೊಡೆದು, ಬಾಗಿಲನ್ನು ಭದ್ರಮಾಡಿ ಹೋಗಲು, ಪರಮಾತ್ಮನು ಪ್ರತ್ಯಕ್ಷನಾಗಿ, ಅಭಯಕೊಟ್ಟು ಅದೃಶ್ಯನಾದದ್ದು, ಅಲ್ಲಿಂದ ಮೂರು ದಿನದ ಮೇಲೆ ಯಾರೋ, ಬಾಗಿಲ ತೆರೆದು, ಸಿದ್ಧರನ್ನು ಸಿದ್ಧಾಶ್ರಮಕ್ಕೆ ಕಳುಹಿದ್ದು.

ಹಳಪೇಟೆ–ಹೊಸಪೇಟೆಯ, ಅನೇಕ ಸದ್ಭಕ್ತರು ಕೂಡಿ, ಅಲ್ಲಿರುವ ಮುಳಗಳ್ಳಿಯನ್ನು ಕಡಿಸಿ, ಹೂವಿನ ತೋಟವನ್ನು ಮಾಡಿ, ಹಂಚಿನ ಚಪ್ಪರವನ್ನು ಹಾಕಿಸಿ, ಭಾವಿಯನ್ನು ಕಡಿಸಿ, ಸಿದ್ಧಾಶ್ರಮವನ್ನು ಶೋಭೆಗೊಳಿಸಿದ್ದು. ಮತ್ತೆ ಕೆಲವು ದಿನಗಳ ಮೇಲೆ ಹಂದ್ರಯ್ಯನೆಂಬವನು, ಮಾತ್ಸರ್ಯದಿಂದ ಬಂದು ಹೊಡೆದದ್ದು.

ಸೀಗೀ ಹುಣ್ಣಿವೆಯ ದಿನ ಒಬ್ಬ ಒಕ್ಕಲಿಗನು, ಸಿದ್ಧರ ತಲೆಯ ಮೇಲೆ ಬೆಂಕಿಯನ್ನಿಟ್ಟದ್ದರಿಂದ ತನ್ನ ವಂಶ ಸಹ ತಾನೂ ನಾಶವಾದದ್ದು.

ಉಜ್ಜಣ್ಣನವರ ಭೀಮಪ್ಪನಿಗೆ ಮಗನಾದದ್ದು. ಇವೆಲ್ಲ ವಿಷಯಗಳನ್ನೊಳಗೊಂಡಿಥ.

ಸ್ತೋತ್ರಪದ—ಪರಮ ಸುಜ್ಞಾನಿಯೆನಿಸುವ ಬಹು ।
ಸರಸ ವಚನದ ಬುಧನೆ ನಿನ್ನ ।
ನ್ನರಸುತೀಶನೊಳಾವು ವಿಲಯಂ ಗೊಳ್ಳ ಸಾಹಸದೆ ॥
ಇರುವ ಶುಭ ಕಾಮಾದಿಯಾದೆನು ।
ಗರಿಗಳೆಂಬುವದೇಕೆನಲ್ಕು ।
ತ್ತರವ ಪೇಳುವ ಗುರುವಿಗಂ ನಾನೊಲೆದು ನತನಪ್ಪೆಂ ॥

### ಪದ— ೯–೧೦ ಸಿದ್ಧರು ಮಲಗಿದಾಗ ಮಧ್ಯರಾತ್ರಿಯಲ್ಲಿ ಒಬ್ಬ ಬಣಜಿಗನು ಅವರನ್ನು ತಲೆಯವರೆಗೆ ಮೇಲಕ್ಕೆತ್ತಿ ಚಲ್ಲಿದ್ದು ಸದ್ಭಕ್ತರು ಘಾಯ ಗುಣಪಡಿಸಿದ್ದು

ಕೃಷ್ಣಾಪುರದ ಗುರುಪಾದಯ್ಯನ ಮುಖದಿಂದ, ಸಿದ್ಧರ ಮಹಿಮೆಯನ್ನು ಎಲ್ಲರೂ ಅರಿತವರಾಗಿ, ನಿತ್ಯವೂ ಅವರ ಬಳಿಗೆ ಹೋಗಿ ಶಾಸ್ತ್ರ ಶ್ರವಣ

ಮಾಡುತ್ತಿದ್ದರು. ಹೀಗೆ ಪ್ರತಿದಿನವೂ, ಶಾಂತ ಮೂರ್ತಿಯಾದ ಸಿದ್ಧರ ಬಳಿಗೆ ಎಷ್ಟೋಜನ ವೀರಶೈವರು, ಸಂತೋಷದಿಂದ ಬಂದು, ಶಾಸ್ತ್ರಾಭ್ಯಾಸ ಮಾಡಹತ್ತಿದರು. ಅದನ್ನು ಅರಿತು, ಮತ್ಸರಿಯಾದ ಓರ್ವ ಬಣಜಿಗನು, ಭ್ರಾಂತಿಯಿಂದ ಜನರಿಲ್ಲ ರಾತ್ರಿ ಸಮಯದಲ್ಲಿ, ಶ್ರೀ ಚಿದ್ಘನಾನಂದಸ್ವಾಮಿ-ಗಳವರ ಸಮಾಧಿಯ ಹಿಂದೆ ಮಲಗಿರುವ, ಸಿದ್ಧರನ್ನು ಕಂಡು, "ಎಲೋ ನೀಚಾತ್ಮ ! ನೀನಾರು"? ಎಂದು ಗದ್ದರಿಸಿ ಕೇಳಿದನು. ಸಿದ್ಧನು, ಮಾತನಾಡದೆ ಮೌನದಿಂದಿರಲು, ಆ ಬಣಜಿಗನಿಗೆ ಸಿಟ್ಟು ತಲೆಗೇರಿ ನಿಂದಿಸಲು ಪ್ರಾರಂಭಿಸಿ-ದನು. "ಕಡುಪಾಪಿಯೇ, ಲಿಂಗವಿಲ್ಲದ ಭವಿಯೇ, ಲಿಂಗಾಯತ ಭಕ್ತರು ವಿನಯ ದಿಂದ ನಿತ್ಯವು ನಿನಗೆ ನಮಿಸಬೇಕೇ ? ಅಷ್ಟೊಂದು ಘನತೆಯು ನಿನ್ನಲ್ಲಿರು ವದೇ ?" ಎಂದು ಸಿದ್ಧರನ್ನು ಮೇಲಕ್ಕೆತ್ತಿ ಕಸುವಿನಿಂದ ಅಪ್ಪಳಿಸಿದನು. ಮತ್ತು ಕೋಲಿನಿಂದ ಮನಬಂದಂತೆ ಹೊಡೆಯಬೇಕೆನ್ನುವಷ್ಟರಲ್ಲಿ ಒಂದು ಅದ್ಭುತ ಶಬ್ದವಾಗಲು ಹೆದರಿ ಚಿಟ್ಟನೇ ಚೀರಿ ಓಡಿ ಹೋದನು. ಸಿದ್ಧನ ಮೊಳಕಾಲು ಮೊಳಕೈಗಳು ಕೆತ್ತಿ ರಕ್ತವು ದಳದಳನೇ ಹರಿಯ ಹತ್ತಿತು. ಅದನ್ನು ಒರೆಸಿಕೊಳ್ಳುತ್ತ, ನಡಕ್ಕೆ ಅತಿ ಪೆಟ್ಟು ತಗಲಿದ್ದರಿಂದ ಏಳಲಿಕ್ಕೆ ಬಾರದಾಯಿತು. ಮೆಲ್ಲನೆ ಹಾಗೇ ಸರಿಯುತ್ತ ತಾನು ಮೊದಲು ಮಲಗಿದ್ದ ಸ್ಥಳಕ್ಕೆ ಬಂದು ಗುರು ಧ್ಯಾನದಲ್ಲಿ ಕುಳಿತನು. ಸೂರ್ಯೋದಯವಾಗಲು ಊರೊಳಗಿಂದ ಉಜ್ಜಣ್ಣನವರ ಭೀಮಪ್ಪ ಮತ್ತು ಹನ್ನೆರಡು ಎತ್ತಿನ ಮಠದ ಪಟ್ಟದಸ್ವಾಮಿ ಮೊದಲಾದವರು ಬಂದರು. ಸಿದ್ಧರ ತನುವಿಗಾದ ಘಾಯಗಳನ್ನು ಕಂಡು ಅವರೆಲ್ಲರಿಗೆ ಅತಿ ಕಳವಳ ಉಂಟಾಯಿತು. "ಸ್ವಾಮೀ ! ಇದೇನು ಅನಾಹುತ ?" ಎಂದುಕೇಳಿದರು. ಸಿದ್ಧಭಾರತಿಯು ಅವರಿಗೆ ಸೌಮ್ಯವಾಗಿ ತಿಳಿಸಿದನು. "ಪ್ರಾರಬ್ಧವೆಂಬ ಫಲವನ್ನು ಉಂಡು ನಾಶಗೊಳಿಸಬೇಕು. ತನ್ನ ಕರ್ಮ ಕ್ಷೀಣವಾಗಲು, ಬೇಗನೆ ವಿದೇಹ ಮುಕ್ತಿಯಾಗುವ ಕಾಲವು ಒದಗು ವದು" ಎಂದು ಹೇಳಿದನು.

ಆಗ ಲಕ್ಕುಂಡಿ ಗುರಪ್ಪ, ಯರಗಲ್ಲ ಬಸಪ್ಪ, ನಾಗಪ್ಪ ಮತ್ತು ಎತ್ತಿನ ಮನಿ ಬಸಯ್ಯಸ್ವಾಮಿ ಇವರೇ ಅವರು "ಇವರನ್ನು ಇಲ್ಲಿ ಹೀಗೆಯೇ ಬಿಟ್ಟದ್ದಾದರೆ ಘಾಯಗಳು ಮಾಯದೆ ಹುಣ್ಣಾಗುತ್ತವೆ" ಎಂದು ತಿಳಿದು, ಸಿದ್ಧರನ್ನು

ಹನ್ನೆರಡು ಎತ್ತಿನ ಮಠಕ್ಕೆ ಕರೆತಂದರು. ಅಲ್ಲಿ ಕೆಲವು ದಿನಗಳವರೆಗೆ ಇರಿಸಿಕೊಂಡು, ಔಷಧೋಪಚಾರಗಳಿಂದ ಎಲ್ಲ ಘಾಯಗಳನ್ನು ಗುಣಪಡಿಸಿದರು.

## ಪದ—೧೧–೧೯ ಸಿದ್ಧರನ್ನು ಹಾಳು ಭಾವಿಯಲ್ಲಿ ನೂಕಿದ್ದು ಮತ್ತು ಹಾಳು ಗುಡಿಯಲ್ಲಿ ಹೊಡೆದದ್ದು ಪರಮಾತ್ಮನು ಪ್ರತ್ಯಕ್ಷವಾದದ್ದು

ಬಳಿಕೆ ಸಿದ್ಧಾರೂಢರು, ಪುನಃ ತಾವಿದ್ದ ಸ್ಥಳಕ್ಕೆ ಬಂದು, ಗೋಪಾಲಕರ ಕೂಡ ಸರಮುನಿ, ಚಿಣಿಕೋಲು, ಚೆಂಡು, ಗುಂಡು, ಬೊಗರಿ ಮೊದಲಾದ ಆಟಗಳನ್ನಾಡಹತ್ತಿದನು. ಮತ್ತು ರಾತ್ರಿ ಸಮಯದಲ್ಲಿ ಶಾಸ್ತ್ರ ಹೇಳುತ್ತ ಕಾಲ ಕಳೆಯುತ್ತಿದ್ದರು. ಇವರ ಕೀರ್ತಿಯು ಬಿದಿಗೆಯ ಚಂದ್ರನಂತೆ ದಿನ ದಿನಕ್ಕೆ ಬೆಳೆಯಹತ್ತಿತು. ಇದನ್ನು ಕಂಡು ಲಿಂಗಾಯತರ ಮತ್ಸರವು ಹೆಚ್ಚಾಗಿ ಅವರೆಲ್ಲರು ಕುದಿಯಹತ್ತಿದರು. ಜನರಿಲ್ಲದ ಸಮಯ ಸಾಧಿಸಿ ಒಬ್ಬ ದುಷ್ಟ ಬಣಜಿಗನು ಸಿದ್ಧನನ್ನು ಕರೆದೊಯ್ದು ಒಂದು ಹಾಳು ಭಾವಿಯಲ್ಲಿ ಬಲುಮೆಯಿಂದ ದಬ್ಬಿಬಿಟ್ಟನು.

ಅದನ್ನು ಓರ್ವ ಸಭ್ಯಗೃಹಸ್ಥನು ಕಂಡು ಮರುಗುತ್ತ ಓಡಿ ಬಂದು, ಅತಿ ಆಯಾಸದಿಂದ ಸಿದ್ಧರನ್ನು ಮೇಲಕ್ಕೆತ್ತಿ ತಂದನು. ಶರೀರಕ್ಕೆ ನಟ್ಟಿರುವ ಮುಳ್ಳುಗಳನ್ನು ಕಿತ್ತು ತೆಗೆದನು. ತಲೆಗೆ ತಗಲಿದ ಘಾಯದ ನೆತ್ತರವನ್ನು ಒರಿಸಿ ತಪ್ಪಲದ ರಸ ತಿಕ್ಕಿ ಹಚ್ಚಿ ಬಟ್ಟೆಯನ್ನು ಕಟ್ಟಿ ಕಳುಹಿಸಿದನು.

ಒಂದು ದಿನ ಈರ್ವರು ಸಿದ್ಧನನ್ನು ಎಳೆತಂದು ಒಂದು ಹಾಳು ದೇಗುಲದಲ್ಲಿ ನಿಲ್ಲಿಸಿ "ಎಲೋ ಹೀನ ಸೂಳೆಮಗನೇ, ಗೌಪ್ಯವಾಗಿರುವಂಥ ಪತಿವ್ರತವಾದ ಮತ್ತು ಶ್ರೇಷ್ಠವಾದ ಶಿವಮಂತ್ರಕ್ಕೆ ವೀರಶೈವರೇ ಅಧಿಕಾರಿಗಳಲ್ಲದೆ, ಉಳಿದವರೆಲ್ಲರೂ ಅನಧಿಕಾರಿಗಳು ಹೀಗಿದ್ದೂ, ನೀನು ಅದನ್ನು ಹೊಲೆ–ಮಾದಿಗರು ಮೊದಲಾದವರಿಗೆಲ್ಲರಿಗೂ, ಬೆದರಿಕಿಲ್ಲದೆ ಬೋಧಿಸಿ ಅವರ ಮುಖದಿಂದ ಬೊಗಳಿಸುವಿಯಾ ? ನಿನಗೆ ಜೀವ ಬೇಡಾಗಿದೆಯೋ ? ಸುಮ್ಮನೇಕೆ ನಿಂತೆ ಬೊಗಳು," ಎಂದು ಹೊಡೆದರು. ನೀನು ಇನ್ನು ಮೇಲೆ ನಿನ್ನ ಬಾಯಿಯಿಂದ ಎಂದೂ ಈ ಮಂತ್ರವನ್ನು ಉಚ್ಚರಿಸುವದಿಲ್ಲವೆಂದು ನಿನ್ನ ಗುರುವಿನ ಪ್ರತಿಜ್ಞೆಮಾಡು. ಎಂದರೆ ಮಾತ್ರ ನಿನ್ನನ್ನು ಬಿಡುವೆವು ಇಲ್ಲವಾದರೆ ಈಗಲೆ

ಇಲ್ಲಿಯೇ ಕೊಂದು ಹಾಕುವೆವು. ಇದಕ್ಕೆ ಏನು ಬೊಗಳುತ್ತಿ, ಬೊಗಳು" ಎಂದು ಗದ್ದರಿಸಿದರು. ಸಿದ್ಧನು ಏನೊಂದು ಮಾತನಾಡದೆ ಮೌನವಾಗಿಯೆ ಇದ್ದನು. ಅವರ ಪಿತ್ತ ನೆತ್ತಿಗೇರಿ ಕರುಣವಿಲ್ಲದೆ ಮತ್ತೆ ಹೊಡೆಯಹತ್ತಿದರು. ಆಗ ಹೊರಗೆ ಜನಗಳ ಕೂಗಾಟವು ಹೆಚ್ಚಾಗಿ ಕೇಳ ಬಂತು. ಕೂಡಲೆ ಅವರು, ಭರದಿಂದ ಬಾಗಿಲವನ್ನು ಮುಚ್ಚಿಕೊಂಡು, ಚಿಲಕಹಾಕಿ ಓಡಿ ಹೋದರು.

ಮರುದಿವಸ ಮಧ್ಯರಾತ್ರಿಯವರೆಗೂ, ಆರೂಢರು ಅಲ್ಲಿಯೇ ಉಳಿದರು. ಅಂದು ಜಂಗಮರೂಪದಿಂದ ಪರಮಾತ್ಮನು, ಪ್ರತ್ಯಕ್ಷನಾಗಿ ಆರೂಢರನ್ನು ಅಪ್ಪಿಕೊಂಡನು. "ಕಂದಾ, ನೀನು ನನ್ನ ಅಂಶಕತಾಗಿ, ಇಳೆಯೊಳು ಅವ-ತರಿಸಿರುವಿ. ನಿಜವಾದ ತಿತಿಕ್ಷೆಯು, ನಿನ್ನಲ್ಲಿರಲಿ ನಿನ್ನ ಕಾಯಕವನ್ನು ನೀನು ಬಿಡದೆಲೆ ನೆರವೇರಿಸು ನಿನ್ನನ್ನು ಸದಾ ನಾನು ಪೊರೆಯುವೆನು" ಎಂದು ಸಿದ್ಧರ ಶರೀರದ ಮೇಲೆ ಕೈಯಾಡಿಸಿ, ಅದೃಶ್ಯನಾದನು. ಆಗ ಆರೂಢರ ಶರೀರದ ನೋವೆಲ್ಲ ವಾಸಿಯಾಯಿತು. ಹರುಷದಿಂದ ಅಲ್ಲಿಯೇ ನಿರ್ವಿಕಲ್ಪ ಸಮಾಧಿಸ್ಥನಾದನು ಹೀಗೆ ಮೂರು ದಿನ ಗತಿಸಲು, ಓರ್ವನು ದೇವಾಲ-ಯಕ್ಕೆ ಬಂದು, ದ್ವಾರವನ್ನು ತೆರೆದನು. ಅಲ್ಲಿ ನಿರ್ವಿಕಲ್ಪ ಸಮಾಧಿಸ್ಥರಾದ, ಸಿದ್ಧರನ್ನು ಕಂಡು, ಅವರನ್ನು ಎಚ್ಚರಿಸಿ ಉಪಚರಿಸಿದನು. ಮತ್ತು ಅತಿ ಭಕ್ತಿಯಿಂದ ಯೋಗಿವರರನನ್ನು ಆದರಪೂರ್ವಕ ಸಿದ್ಧಾಶ್ರಮಕ್ಕೆ ಕರ-ದೊಯ್ದು ಮುಟ್ಟಿಸಿ ಆಶೀರ್ವಾದ ಪಡೆದು ಹೊರಟು ಹೋದನು.

ಮಹಾತ್ಮರನ್ನು ಪೊರೆಯುವ ಭಾರವು, ಪರಮಾತ್ಮನದು" ಎಂಬು-ದನ್ನು ಅಹಂಕಾರಯುಕ್ತರಾದ ನರರು, ಏನು ಬಲ್ಲರು ? ವೇದಾಂತ-ಸಿದ್ಧಾಂತ ಸಿದ್ಧಶಿಖಾಮಣಿ ಶಿವಯೋಗಿಯಾದ ಸಿದ್ಧಾರೂಢರ ಪ್ರಕಾಶವು ಕೆಲವರಿಗೆ ಶಾಂತಿಯನ್ನು ಕೆಲವರಿಗೆ ಚಿಂತೆಯನ್ನುಂಟು ಮಾಡಿತು.

### ಪ—೨೦-೩೦ ಹಳೆಪೇಟೆ ಹೊಸಪೇಟೆ ಸದ್ಭಕ್ತರು ಸಿದ್ಧಾಶ್ರಮವನ್ನು ಶೋಭೆಗೊಳಿಸಿದ್ದು

ಶ್ರೀ ಸಿದ್ಧರಲ್ಲಿಗೆ ಬೀಳ್ಗಿ ಸಾಂತಪ್ಪ, ಬಾಳಿಕಾಯಿ ಚನ್ನಪ್ಪ, ಗುಗ್ಗರಿ ಪರಪ್ಪ, ಗುಡ್ಡದ ಶಿವಪ್ಪ, ಜಾಲಿಬಡ್ಡಿ ಪರಪ್ಪ, ಶಿರಗುಪ್ಪಿ ಹೊಂಬಣ್ಣ

ಉಪ್ಪಿನ ಸಿದ್ಧಪ್ಪ, ದಿವಟೆ ತಿಪ್ಪಣ್ಣ ಮೊದಲಾದವರೆಲ್ಲರೂ ದಿನಾಲು ತಪ್ಪದೆ ಬಂದು ಶಾಸ್ತ್ರ ಶ್ರವಣ ಮಾಡಿಕೊಂಡು, ಭಜನೆ ಮಂಗಳಾರುತಿಗಳನ್ನು ನೆರ-ವೇರಿಸಿ, ಮನೆಗೆ ಹೋಗುತ್ತಿದ್ದರು. ಅವರೆಲ್ಲರೂ ಸದ್ಭಕ್ತಿಯಿಂದ ನಡಕಟ್ಟಿ ನಿಂತು, ಶ್ರೀ ಚಿದಘನ ಸ್ವಾಮಿಗಳವರ ಸಮಾಧಿ ಸುತ್ತಲೂ ಬೆಳೆದು ನಿಂತ, ಡಬಗಳ್ಳಿಯನ್ನು ಕೆಡಿದು ಹಸನ ಮಾಡಿದರು. ಆ ಸ್ಥಾನದಲ್ಲಿ ತರತರದ ಹೂವಿನ ಗಿಡಬಳ್ಳಿಗಳನ್ನು ನಾಟಿ ಬೆಳೆಸಿದರು. ಹೊಂಬಪ್ಪನು ತಾನಾಗಿ ಒಂದು ಭಾವಿ ಕಡಿಸಿದನು. ನಾಗಪ್ಪನು ಶ್ರದ್ಧೆಯಿಂದ ಒಂದು ಹಂಚಿನ ಚಪ್ಪರ ವನ್ನು ಹಾಕಿಸಿದನು. ಹೀಗೆ ಎಲ್ಲರೂ ನಿರುತ ಪರಮಭಕ್ತಿಯಿಂದ ಸೇವೆಮಾಡ ಹತ್ತಿದರು. ಒಂದೊಂದು ಸಲ ಎಲ್ಲರೂ ಕೂಡಿ ಪ್ರೀತಿಯಿಂದ ಆಶ್ರಮದಲ್ಲಿ ಅಡಿಗೆ ಮಾಡಿ ಸದ್ಗುರುಗಳನ್ನು ಕೂಡಿಕೊಂಡು ಊಟ ಮಾಡುತ್ತಿದ್ದರು.

ಈ ರೀತಿ ನಡೆಯುತ್ತಿರುವ ಸಿದ್ಧಾಶ್ರಮದ ಸೊಬಗನ್ನು ಅರಿತಜಂಗಮರು ಮತ್ಸರದಿಂದ ಸಭೆ ಸೇರಿಸಿ, "ಇನ್ನು ಮುಂದೆ ಲಿಂಗವಿಲ್ಲದ ಆ ಭವಿಯ ಮಠಕ್ಕೆ ಯಾರೂ ಹೋಗಕೂಡದು. ಮತ್ತು ಅವನಿಗೆ, ಬಾಗಿ ನಮಿಸ ಬಾರದು. ಈ ನೇಮಕ್ಕೆ ಹೊರತಾಗಿ ವರ್ತಿಸುವವರಿಗೆ ಖಂಡಿತವಾಗಿ ಯೋಗ್ಯ ಪ್ರಾಯಶ್ಚಿತ್ತ ಮಾಡಲಾಗುವದು" ಎಂದು ಕಟ್ಟಪ್ಪಣೆ ಮಾಡಿ ದರು. ಆದರೂ, ಸದ್ಭಕ್ತರಾದ ಲಿಂಗವಂತರು, ಅವರ ನೇಮಕ್ಕೆ ಒಳಗಾಗದೆ, ಪರಮ ಭಕ್ತಿಯಿಂದೊಡಗೂಡಿ ಸಿದ್ಧಾಶ್ರಮಕ್ಕೆ ಹೋಗಹತ್ತಿದ್ದರು.

## ಹಂದರಯ್ಯನು ಮಾತ್ಸರ್ಯದಿಂದ ಸಿದ್ಧರನ್ನು ಹೊಡೆದದ್ದು

ಒಂದು ದಿನ ರಾತ್ರಿ ಮೂರು ಘಂಟೆಯ ಸಮಯಕ್ಕೆ ಓರ್ವ ಹಂದರಯ್ಯ ನೆಂಬುವನು ಬಂದು ಮಲಗಿದ್ದ ಸಿದ್ಧರನ್ನು ಒದ್ದು ಎಬ್ಬಿಸಿ ಕೈಹಿಡಿದು ಮೇಲ-ಕ್ಕೆತ್ತಿ ಕುಳ್ಳಿರಿಸಿದನು. ತನ್ನ ಹೆಂಡದ ಮತ್ತು ಕುಲದ ಮದದಿಂದ ತನ್ನ ಮಚ್ಚಿಯನ್ನು ಸಿದ್ಧರ ಬೋಳತಲೆಯ ಮೇಲಿಟ್ಟನು. "ಇದನ್ನು ನೀನು ಕೆಳಗೆ ಕೆಡವಿದೆಯೆಂದರೆ, ನಿನ್ನ ಜೀವ ಹೋಗುವಂತೆ ಹೊಡೆಯುತ್ತೇನೆ ನೋಡು" ಎಂದು ಕಾಲನಂತೆ ಸಿದ್ಧರ ಮುಂದೆ ನಿಂತನು. ಆ ಮಚ್ಚಿಯು ತಲೆಯ ಮೇಲೆ ಸ್ವಲ್ಪಕಾಲವಿದ್ದು ಕೆಳಗೆ ಬಿದ್ದಿತು.

ಅದನ್ನು ಕಂಡು ಹೆಂಡಗುಡುಕನಾದ ಹಂದ್ರಯ್ಯನಿಗೆ ಕಡುಕೋಪ ತಲೆಗೇರಿತು. ಆ ದುರ್ಮಾರ್ಗಿ ಜಂಗಮನು ಸಿದ್ಧರನ್ನು ಬೈಯುತ್ತ "ನಿನ್ನ ರೂಪಗೆಡಿಸುವೆನು" ಎಂದು ಬಡಿಗೆಯಿಂದ ಕುಸುಬಿ ಬಡಿಯುವಂತೆ ಹೊಡೆಯಹತ್ತಿದನು. ಆರೂಢನು ಅದರ ತಾಪ ಸಹಿಸುತ್ತ ಬಡಿಗೆಯ ಹೊಡೆತಕ್ಕೊಮ್ಮೆ "ಪರಶಿವಗೆ ಅರ್ಪಿತವಾಗಲಿ" ಎಂದು ಅನ್ನುತ್ತಿ-ದ್ದನು. ಆ ಕ್ರೂರ ಜಂಗಮನು ಹೊಡೆಯುವದನ್ನು ನಿಲ್ಲಿಸಿ, ಸಿದ್ಧನಿಗೆ "ಎಲೋ ನೀಚಾತ್ಮಾ ! ನೀನು ಸಾಧುವೇ ? ಭೇದರಹಿತನೇ ಸಾಧುವಾಗ ಬಲ್ಲನು. ನೀನು ಖರೆ ಸಾಧುವಾದರೆ, ಸಂತೋಷದಿಂದ ಹೆಂಡವನ್ನು ಏಕೆ ಕುಡಿಯಲೊಲ್ಲೆ ? ಎಲೋ ಮಗನೆ ! ನೀನು ಸಾಧುವಾಗುವಂತೆ ನಿನಗೆ ಬೋಧ ಮಾಡುವೆನು. ಕುಡಿ ಈ ಶೆರೆಯನ್ನು" ಎಂದು ತನ್ನ ಜೇಬಿನೊಳಗಿನ ಬಾಟ್ಲಿ ಯನ್ನು ತೆಗೆದು, ಆ ಬಾಟ್ಲಿಯೊಳಗಿನ ಶೆರೆ ಕುಡಿಸ ಹೋದನು. ಸಿದ್ಧನು ಅದನ್ನು ಕುಡಿಯದಿರಲು, ಮತ್ತೆ ಹೊಡೆಯಹತ್ತಿದನು. ಆ ಮೂರ್ಖ ಜಂಗಮನ ಕ್ರೂರತನ ಕಂಡು, ಮೂಡಲ ದಿಕ್ಕು ಕೆಂಡವಾಯಿತು. ಆಗ ಕಾರುಣ್ಯಸಾಗರ ಆರೂಢರು, ಆ ದುಷ್ಟನಿಗೆ ಮರುಕದಿಂದ "ನಿಜವಾಗಿ ನೀನು ನನ್ನ ಗುರು ಇರುವಿ. ನಿನ್ನ ಉಪಕಾರ ನಾನು ಎಂದೂ ಮರೆಯೆನು. ಉಪಕಾರ ಮಾಡಿದವರಿಗೆ ಪ್ರತ್ಯುಪಕಾರ ಮಾಡದಿರಲಾರೆನು. ಕೇಳು, ಈಗ ಮೂಡಲ ಹರಿಯಿತು. ಇನ್ನು ಊರೊಳಗಿಂದ ಜನರು ಬರುವ ಹೊತ್ತಾ ಯಿತು. ಅವರು ನಿನ್ನ ಈ ಅಮಾನುಷ ಕೃತಿಯನ್ನು ಕಂಡರೆ ನಿನ್ನ ಜೀವ ಉಳಿಯಲಾರದು. ಅದು ಕಾರಣ, ಈಗ ನೀನು ನಿನ್ನ ತನುವಿನಾಶೆಯನ್ನು ಹಿಡಿದು ಬೇಗನೆ ಇಲ್ಲಿಂದ ನಿನ್ನ ಮನಬಂದತ್ತ ಕಾಲಿಗೆ ಬುದ್ಧಿ ಹೇಳು" ಎಂದರು. ಅದನ್ನು ಕೇಳಿ ಆ ದುಷ್ಟನು ದಿಕ್ಕೆಟ್ಟು ಓಡಿದನು.

## ನಿಗ್ರಹವೂ ಅನುಗ್ರಹವೆ

ಇತ್ತ ಬೆಳಗಾಗಲು ಊರೊಳಗಿಂದ ಭಕ್ತರು ಭಜನೆ ಮಾಡುತ್ತ ಬಂದರು ಸಿದ್ಧ ಸದ್ಗುರುವಿಗೆ ನಮಿಸ ಹೋಗಲು, ಅವರ ಮೈ ಬಾತಿರುವ ದನ್ನು ಕಂಡು ತಳಮಳಿಸುತ್ತ "ಗುರುವೇ, ತಮ್ಮನ್ನು ಈ ಪರಿ ಹೊಡೆದವ ರಾರು ? ಅದನ್ನು ತಾವು ತಿಳಿಸಬೇಕು," ಎಂದು ಅರಿಕೆ ಮಾಡಿಕೊಂಡರು. ಆಗ ಸದ್ಗುರುವರನು, ಕರ್ಮವೆಂಬ ಪ್ರಾರಬ್ಧರೂಪ ನಿಯಾಮಕನಿಗೆ, ಹೊಡೆ

ದವನು ಮತ್ತು ನೋಡುವ ನೀವು ಎಲ್ಲ ಸೇವಕರು ! ಅವನಿಚ್ಛೆಯಂತೆ ತಪ್ಪದೆ ಪ್ರೀತಿಯಿಂದ ನನ್ನ ಸೇವೆಯನ್ನು ಮಾಡುತ್ತಿರುವಿರಿ. ಅದು ಹೇಗಂದರೆ ಸಣ್ಣಮಗು ಹಸಿವೆ ಮತ್ತು ಹುಣ್ಣಿನ ತಾಪದಿಂದ ಅಳಲುತ್ತಿರುವದು, ತಂದೆಯು ಹುಣ್ಣು ತೊಳೆಯುವಾಗ, ಕಂದನು ಅಳಹತ್ತುವನು. ಆಗ ಸಿಟ್ಟುಮಾಡಿ ಹೊಡೆದು, ಹುಣ್ಣಿಗೆ ಔಷಧ ಹಚ್ಚುವನು. ಆ ಮೇಲೆ ಮಗುವಿನ ತಾಯಿಯು ಬಂದು ಮಗನನ್ನು ಎತ್ತಿಕೊಂಡು ರಮಿಸುತ್ತ, "ಅವರು ನಿನ್ನ ಹುಣ್ಣು ಕಟ್ಟಿದರೆ? ಅವರನ್ನು ಹೊಡೆಯೋಣ ಬಾ" ಎಂದು ಪ್ರೀತಿಯಿಂದ ಮೈ ಮೇಲೆ ಕೈಯಾಡಿಸುತ್ತ, ಮೊಲೆಯನ್ನು ಉಣ್ಣಿಸುವಳು. ನನ್ನನ್ನು ಹೊಡೆಯುವವರ ಮತ್ತು ಪ್ರೀತಿಸುವವರ ಕೃತಿಯಾದರೂ ಪಿತ-ಮಾತೆಯರಂತೆ ಇರುವರು. ನನ್ನನ್ನು ಸರ್ವರೂ ಸತತ ರಕ್ಷಣೆ ಮಾಡುವರಲ್ಲದೆ ನನಗೆ ಕೇಡು ಬಗೆಯುವವರು ಜಗತ್ತಿನಲ್ಲಿ ಯಾರೂ ಇಲ್ಲವೆ ಇಲ್ಲ" ಎಂದರು. ಅದನ್ನು ಕೇಳಿ ಅವರೆಲ್ಲರು ಕಡು ಆಶ್ಚರ್ಯಗೊಂಡು ಕಳವಳಿಸುತ್ತ ಮುಂದೆ ಅವರಿಗೆ ಏನೊಂದು ಉಪಾಯಗಾಣದೆ, ಯಾರೂ ಏನೂ ಮಾತಾಡದಂತಾಯಿತು.

### ಪದ—೩೧–೪೫ ಓರ್ವ ಒಕ್ಕಲಿಗನು ಸಿದ್ಧರ ತಲೆಯಮೇಲೆ ಬೆಂಕಿ ಇಟ್ಟಿದ್ದು

ಮುಂದೆ ಕೆಲವು ಕಾಲ ಗತಿಸಲು, ಸೀಗೀ ಹುಣ್ಣಿವೆ ಬಂದಿತು. ಆಗ ಆರೂಢರು ಊರೊಳಗೆ ತಿರಿದು ತಂದ ರೊಟ್ಟಿಯನ್ನು ತಿಂದು ಹೆಗ್ಗೆರೆಯಲ್ಲಿ ನೀರು ಕುಡಿದು, ಅದರ ಧಡದ ಮೇಲೆ ಕುಳಿತಿದ್ದನು. ಅದೇ ಸಮಯಕ್ಕೆ ಓರ್ವ ಒಕ್ಕಲಿಗನು, ತಲೆಯ ಮೇಲೆ ಚರಗದ ಬುಟ್ಟಿಯನ್ನು ಹೊತ್ತು, ಬಲಗೈಯಲ್ಲಿ ಹೊತ್ತಿದ ಕೆಂಡದ ಕುಳ್ಳನ್ನು ಹಿಡಿದುಕೊಂಡು ತಾಂಬೂಲ ಮೆಲ್ಲುತ್ತ ಹೊಲಕ್ಕೆ ಹೊರಟಿದ್ದನು. ಸಿದ್ಧರನ್ನು ಕಂಡು ಅವರ ಬಳಿಗೆ ಒಳ್ಳೇ ಪರಿಚಿತನಂತೆ ಬಂದು ಮಾತಾಡಿಸಿದನು. ಆಗ ಆರೂಢನು ಮೌನದಿಂದಿರಲು, "ನೀನು ಮಾತನಾಡಲೊಲ್ಲೆಯಾ ? ನಿನ್ನನ್ನು ಮಾತಾಡಿಸಿಯೇ ಬಿಡುವೆನು," ಎನ್ನುತ್ತ ಆತುರದಿಂದ ತನ್ನ ಕೈಯೊಳಗಿರುವ ಕುಳ್ಳಿನ ಕೆಂಡವನ್ನು, ಅವರ ಬೋಳತಲೆಯಮೇಲೆ ಇಟ್ಟು ಮರೆಯಾದನು. ಅದನ್ನು

ಓರ್ವ ಸದ್ಭಕ್ತನು ಕಂಡು, ಗಾಬರಿಯಿಂದ ಓಡಿ ಬಂದನು. ಆ ಬೆಂಕಿಯನ್ನು ತೆಗೆದು, ಮರುಗುತ್ತ, "ಗುರುನಾಥಾ, ಏನಿದು ನಿನ್ನ ಭೋಗ" ಎಂದು ನಮ್ರಭಾವದಿಂದ ನಮಿಸಿ ಕೇಳಿದನು.

ಆಗ ಸಿದ್ಧಯೋಗಿಯು ಆ ಭಕ್ತನಿಗೆ ಮುದದಿಂದ "ಕೆಲವು ದಿವಸಗಳ ಹಿಂದೆ ಈ ಊರ ಹೊರಗಿರುವ ಚಿಕ್ಕದೊಂದು ಶಿವಾಲಯದಲ್ಲಿ ಕುಳಿತಾಗ ಸರ್ಪವು ನನ್ನ ತಲೆಯ ಮೇಲೆ ತನ್ನ ಹೆಡೆಯನ್ನೆತ್ತಿ ಆಡುತ್ತಿತ್ತು. ಆಗ ನಾನು ಶೇಷಧರನೆಂದು ತಿಳಿದನು. ಇಂದು ಅದೇ ತಲೆಯ ಮೇಲೆ ನಿಗಿನಿಗಿ ಕೆಂಡವು ಹೊಳೆಯುತ್ತಿರಲು ಈಗನಾನು ಅಗ್ನಿಧರನೆಂದು ತಿಳಿಯುತ್ತೇನೆ" ಎಂದು ಗಹಗಹಿಸಿ ನಕ್ಕನು ಸಿದ್ಧಮೂರ್ತಿಯ ಶಾಂತ ಚಿತ್ತವನ್ನು ಕಂಡು, ಭಕ್ತನು ನಮಿಸಿ ಹೊಗಳುತ್ತ ಹೊರಟು ಹೋದನು. ಮುಂದೆ ಸ್ವಲ್ಪ ಕಾಲದಲ್ಲಿಯೇ ಆ ಒಕ್ಕಲಿಗನು ಬಂದು ಸಿದ್ಧರ ಮುಂದೆ ಕೈ ಜೋಡಿಸಿ ನಿಂತು ಪಶ್ಚಾತ್ತಾಪ ಹೊಂದಿದವನಾಗಿ "ಕಡುಪಾಪಿಯಾದ ನಾನು ನಿಮಗೆ ಬಹು ಕಷ್ಟಕೊಟ್ಟೆನು" ಎಂದು ಕ್ಷಮೆ ಯಾಚಿಸಿದನು.

## ಸಾಧುಗಳ ಕ್ಷೋಭೆಯಿಂದ ವಂಶನಾಶ

"ಇರಲಿ ತಮ್ಮಾ, ಯಾರು ಯಾವ ಬೀಜ ಬಿತ್ತುವರೋ, ಆ ತರದ ಫಲವನ್ನು ಅವರು ಉಣ್ಣಲೇಬೇಕು. ಇದು ತ್ರಿಕಾಲ ಸತ್ಯವು" ಎಂದು ಹೇಳಿ ಅಲ್ಲಿಂದ ಹೊರಟು ಸಿದ್ಧಾಶ್ರಮಕ್ಕೆ ಬಂದನು. ಇತ್ತ ಒಕ್ಕಲಿಗನು "ಸಾಧುವಿಗೆ ವ್ಯರ್ಥ ಕಷ್ಟವನ್ನು ಕೊಟ್ಟೆನು. ನಾನು ಕಡುಪಾಪಿ" ಎಂದು ವ್ಯಥೆ ಪಡಹತ್ತಿದನು. ಬಾಡಗಿ ಮನೆಯೊಳಗಿದ್ದವನನ್ನು ಮನೆ ಬಿಡಿಸಿ ಹೊರ ದೂಡಿದಂತೆ ಮೂರು ಮಾಸ ತುಂಬುವದರೊಳಗಾಗಿ ಯಮಧರ್ಮನು ಅವನ ಪ್ರಾಣವನ್ನು ಸೆಳೆದನು. ಬಳಿಕಅವನ ವಂಶದವರೆಲ್ಲರೂ ಕಾಲಾಂತರ ನರಕವಾಸಿಗಳಾದರು. ಪ್ರಾಣವಿಲ್ಲದ ತಿದಿಯು ಉಸುರುಬಿಡಲು ಕಬ್ಬಿಣವು ಕರಗುವದು. ಆದರೆ ಜ್ಞಾನಿಯು ಉಸುರುಗರೆಯಲು; ಅವರ ವಂಶ ಉಳಿಯುವದೆಂತು ? ಅದುಕಾರಣ **ಸಾಧುವಿನ ಕ್ಷೋಭವೇ ವಂಶ ನಾಶವು.** ಸಾಧುವಿನ ತೃಪ್ತಿಯೇ ವಂಶ ವೃದ್ಧಿಯು. ಸಾಧು ಸೇವೆಯೇ ಚಿತ್ತಶುದ್ಧಿಯು, ಸಾಧು ನಮನದಿಂದ ಸರ್ವ ಸಿದ್ಧಿಯು, ಸಾಧುವಿನ ಕರುಣದಿಂದ ಜ್ಞಾನಪ್ರಾಪ್ತವಾಗಿ

ತಾನೂ ಸಾಧುವಾಗುವನು. ಆ ಸಾಧುವೇ ಬ್ರಹ್ಮಸ್ವರೂಪನೂ, ಮುಕ್ತಿದಾಯಕನು ಆಗಿರುವನು. ಹೀಗಿದ್ದರೂ, ತಾಮಸವೃತ್ತಿಯ ಜನರು ಜ್ಞಾನಿಯನ್ನು ಪೀಡಿಸಿ ತಾವೇ ಕೆಡುವರು. ರಾಜಸಗುಣದವರು ಜ್ಞಾನಿಗೆ ತೃಪ್ತಿಗೊಳಿಸಿ ಸಕಲ ಭೋಗ ಭಾಗ್ಯವನ್ನು ಪಡೆದರು. ಆದರೆ ಸತ್ವಗುಣಿಗಳು ಜ್ಞಾನಿಗೆ ಬಾಗಿ ನಮಿಸಿ, ಸಾಧನಕ್ರಮದಿಂದ ಅವರ ಕೃಪೆಪಡೆದು ಮುಕ್ತರಾಗುವರು. ಇದು ತ್ರಿಕಾಲ ಸತ್ಯವು.

ಈ ಪ್ರಕಾರ ಸಿದ್ಧರು ಸಿದ್ಧಾಶ್ರಮದಲ್ಲಿದ್ದುಕೊಂಡು ಭಕ್ತರ ಕಷ್ಟದಲ್ಲಿ ಪಾಲುಗಾರರಾಗಿ, ನಿಜ ಶಾಂತಿಯನ್ನು ಬೀರುತ್ತಿದ್ದರು. ಸಿದ್ಧಸದ್ಗುರುಗಳು ಅವರೆಲ್ಲರ ಅಧಿಕಾರವನ್ನು ಪರೀಕ್ಷಿಸಿ, ಅವರಿಗೆ ಸೇವೆಯನ್ನು ನೇಮಿಸುತ್ತಿದ್ದರು. ಅನಧಿಕಾರಿಗಳಿಗೆ "ನೀವು ಸಂಚಾರ ಮಾಡಿಕೊಂಡು ಬರ್ರಿ" ಎಂದು ಹೇಳಿ ಮಂದಾಧಿಕಾರಿಗಳಿಗೆ ಅಡಿಗೆ ಮಾಡುವದು, ನೀರು ತರುವದು, ಕಟ್ಟಿಗೆ ಒಡೆಯುವದು, ಭಿಕ್ಷೆಬೇಡಿ ತರುವದು ಮೊದಲಾದ ಸೇವೆಗಳನ್ನು ಹಚ್ಚುತ್ತಿದ್ದರು ಮಧ್ಯಮ ಅಧಿಕಾರಿಗಳಿಗೆ ಕರ್ಮೋಪಾಸನೆಗಳನ್ನು ಹೇಳುತ್ತಿದ್ದರು. ಉತ್ತಮ ಅಧಿಕಾರಿಗಳಿಗೆ ತತ್ತ್ವಮಸಿ ಮಹಾವಾಕ್ಯವನ್ನು ಬೋಧಿಸುತ್ತ, ಅವರಮುಳ್ಳತನ ಜೀವತ್ವವನ್ನು ತಳ್ಳಿ ಉಳ್ಳಾತ್ಮನಿಜಾನಂದದ ಶಿಖರದ ನೆರಳಿನಲ್ಲಿ ಮೈಮರೆಸುತ್ತ ವಿಶ್ರಾಂತಿ ಪಡಿಸುತ್ತಿದ್ದರು.

## ೫೮— ೪೬—೫೭ ಉಜ್ಜಣ್ಣನವರ ಭೀಮಪ್ಪನಿಗೆ ಮಗನಾದದ್ದು

ಒಂದು ದಿನ ಭೀಮಪ್ಪ ಉಜ್ಜಣ್ಣನವರ ಎಂಬ ಸದ್ಭಕ್ತನು ತನ್ನಧರ್ಮಪತ್ನಿಯಾದ ಲಕ್ಷ್ಮವ್ವನನ್ನೊಳಗೊಂಡು ಸಿದ್ಧಸದ್ಗುರುಗಳ ಸನ್ನಿಧಿಗೆ ಬಂದನು. ದಂಪತಿಗಳೀರ್ವರು ಅವರ ಪಾದಪದ್ಮಂಗಳಿಗೆ ನಮಿಸಿ "ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿಗಳಿಗೆ ಮಿಗಿಲೆನಿಸಿದ ಸದ್ಗುರುವೇ, ಕಂದರಿಲ್ಲವೆಂದು ಹಂಬಲಿಸುವ ಈ ನನ್ನ ಹೆಂಡತಿಯ ಆಶೆಯನ್ನು ಪೂರ್ತಿಗೊಳಿಸಿ ಅವಳನ್ನು ತೃಪ್ತಿಗೊಳಿಸಬೇಕು" ಎಂದು ತನ್ನ ಹೆಂಡತಿಯನ್ನು ಪುನಃ ನಮನ ಮಾಡಿಸಿ ಈರ್ವರು ಸದ್ಗುರುವಿನೆದುರಿಗೆ ಕೈ ಜೋಡಿಸಿ ನಿಂತುಕೊಂಡರು. ಆಗ ನಿರ್ಮಲ ನಿರಾಶೆಯುಳ್ಳ ಸದ್ಗುರುವರನು, ಆ ಈರ್ವ ದಂಪತಿಗಳನ್ನು ಕುರಿತು,

"ಮಾನ್ಯರೆ, ನಿಮ್ಮ ಉಭಯ ಕುಲವನ್ನು ಉದ್ಧಾರಮಾಡುವ ಆತ್ಮಜ್ಞಾನಿಯಾದ ಸತ್ಪುತ್ರನು ಬೇಕೋ ? ಅಥವಾ ಸಂಸಾರದಲ್ಲಿ ಬಹು ವ್ಯಥೆಯುನ್ನುಂಟು ಮಾಡುವ ಕರ್ಮರಚಿತ ಚನ್ನಿಗನೆನಿಪ ಪುತ್ರನಾದರೆ ಸಾಕೋ ? ಹೇಳಿರಿ" ಎಂದನು. ಆಗ ದಂಪತಿಗಳೀರ್ವರು "ದೇವಾ, ನಮಗೆ ಜ್ಞಾನಿಗಳಿಂದ ಹೊಗಳಿಸಿಕೊಳ್ಳುವ ಸತ್ಪುತ್ರನೇ ಸಾಕು" ಎಂದು ಬಿನ್ನವಿಸಿಕೊಂಡರು. "ಹಾಗಾದರೆ ನಾನೇ ನಿಮಗೆ ಮಗನಾಗುವೆನು. ನನ್ನನ್ನೇ ನಿಮ್ಮ ಕುಲಪುತ್ರನೆಂದು ನಿಶ್ಚಯಿಸಿ ಪುತ್ರವಾತ್ಸಲ್ಯದಿಂದ ರಕ್ಷಿಸಿರಿ. ಇದರಿಂದ ನಿಮಗೆ ಇಹದಲ್ಲಿ ಸತ್ಸುಖ ಯಾವದುಂಟೊ ಅದರ ಶತಪಟ್ಟು ಸಡಗರದ ಸುಖವನ್ನು ಭೋಗಿಸಿ ಕಡೆಗೆ ಮುಕ್ತಿಯನ್ನು ಪಡೆಯುವಿರಿ. ಮತ್ತು ನಿಮ್ಮ ವಂಶವೇ ಮುಕ್ತಿ ಸಾಮ್ರಾಜ್ಯವನ್ನು ಹೊಂದುವದು" ಎಂದು ಅಪ್ಪಣೆ ಕೊಡಿಸಿದರು.

ಆಗ ದಂಪತಿಗಳೀರ್ವರು ಕಡುಹರುಷದಿಂದ ಸ್ವಾಮಿಗಳಿಗೆ ನಮಿಸಿದರು. ಅಂದು ಸಿದ್ಧಾರೂಢರನ್ನು ವಿಜೃಂಭಣೆಯಿಂದ ಮನೆಗೆ ಕರೆತಂದರು. ಮತ್ತು ಕೆಲ ಜನರಿಗೆ ಈ ವಾರ್ತೆಯನ್ನು ಅರುಹಿದರು. ಅವರು ಕೂಡಲೆ ಬಂದು ಮುತ್ತೈದಿಯರಿಗೆ ಉಡಿ ತುಂಬಿದರು. ಅವರು ಗಂಗೆಗೆ ಬಂದು ಸಂಭ್ರಮದಿಂದ ಪೂಜಿಸಿ, ಕುಂಭ ತುಂಬಿ ನೀರು ತಂದರು. ಹಲವರು ತೊಟ್ಟಿಲ ಕಟ್ಟಿ ಪೂಮಾಲೆಗಳಿಂದ ಶೃಂಗರಿಸಿದರು. ಎಲ್ಲರೂ ಕೂಡಿ ಸಡಗರದಿಂದ ಸಿದ್ಧರನ್ನೂ, ಲಕ್ಷ್ಮಮ್ಮನನ್ನೂ, ತಂದ ಕುಂಭವನ್ನೂ, ಪೂಜಿಸಿದರು. ನಂತರ ಸಿದ್ಧರನ್ನು ಶೃಂಗರಿಸಿದ ತೊಟ್ಟಿಲಲ್ಲಿ ಕುಳ್ಳಿರಿಸಿ, ಮಡಿಯನ್ನು ಹೊದಿಸಿ, ಚಿನ್ನದ ಕಂಟಿ, ಗೋಪು, ಸರಗಳನ್ನು ಕೊರಳಲ್ಲಿ ಹಾಕಿ, ಪುಷ್ಪಗಳಿಂದ ಎಲ್ಲರೂ ಪೂಜಿಸಿದರು. ಬಳಿಕ ಜೋಗಳ ಪಾಡಿ, "ಶ್ರೀ ಸಿದ್ಧಾರೂಢ"ನೆಂದು ಹೆಸರನ್ನಿಟ್ಟು ಆಶೀರ್ವದಿಸಿದರು. ಅಲ್ಲಿಂದ ಸರ್ವರೂ ಸಂತೋಷದಿಂದ ಊಟಮಾಡಿ ತಮ್ಮ ತಮ್ಮ ಮನೆಗಳಿಗೆ ಹೋದರು.

ಅಂದಿನಿಂದ ಸಿದ್ಧ ಭಾರತಿಯು ಸ್ವಶರೀರ ಬಿಡುವವರೆಗೂ ಸೂರ್ಯಾಸ್ತವಾದಕೂಡಲೆ ಮಠದಲ್ಲಿ ಮಂಗಳಾರತಿ ತೀರಿಸಿಕೊಂಡು ಉಜ್ಜಣ್ಣನವರ ಮನೆಗೆ ಬರುತ್ತಿದ್ದರು. ಮನೆಯಲ್ಲಿ ಮಾಸ್ತರರು, ಸಿದ್ಧವೀರಪ್ಪ ಗೋಪನಕೊಪ್ಪ ಮೊದಲಾದವರು ಬರುತ್ತಿರುವ ಎಲ್ಲ ಸದ್ಭಕ್ತರಿಗೆ ಸ್ವಮುಖದಿಂದ ಶಾಸ್ತ್ರ ಶ್ರವಣ

ಮಾಡಿಸುತ್ತಿದ್ದರು. ಮತ್ತು ಬೆಳಗಿನಜಾವಕ್ಕೆ ಒಮ್ಮನಸ್ಸಿನಿಂದ ಶಿವಭಜನೆ ಯೊಂದಿಗೆ ಮಂಗಳಾರತಿ ತೀರಿಸಿ ಮಠಕ್ಕೆ ಬರುವ ಸಾಂಪ್ರದಾಯವಿತ್ತು, ಪರಸ್ಥಳದಿಂದ ಸದ್ಭಕ್ತರು ಮಠಕ್ಕೆ ಬಂದಿದ್ದರೆ, ಅಂದು ಸ್ವಾಮಿಗಳು ಅಲ್ಲಿಯೇ ಉಳಿಯುತ್ತಿದ್ದರು.

ಮನೆಯೊಳಗೆ ಬಾಲಕನಂತೆ ಆಟ ಮಾಡುವ ಸಿದ್ಧನ ಚತುರತನದ ವಿನೋದ, ಚೇಷ್ಟೆ, ಹಾಸ್ಯ ಮೊದಲಾದವುಗಳನ್ನು ವರ್ಣಿಸಲು ಅಸಾಧ್ಯವು. ಅವನು ಭೀಮಪ್ಪನವರ ಅಕ್ಕನಕೂಡ, ಹುಡುಗಾಟಿಕೆ ಬಹಳ ಮಾಡುತ್ತಿದ್ದನು. ಇಬ್ಬರುಕೂಡ ಚಾವಂಗ ಆಡುತ್ತಿರಬೇಕು. ಆಟದಲ್ಲಿ ಏನಾದರೂ ತಗಲುಮಾಡಿ ತಂಟೆ ತೆಗೆಯುತ್ತಿದ್ದನು. ಲಕ್ಷ್ಮಮ್ಮನು ಊಟಕ್ಕೆ ನೀಡಿದಾಗ ಉಂಡಕೈಯನ್ನು ತಾನು ಹೊತ್ತಿದ್ದ ಮಡಿಗೆ ಒರಿಸಿಕೊಳ್ಳುತ್ತಿದ್ದನು. ಅದನ್ನು ಲಕ್ಷ್ಮಮ್ಮನು ಕಂಡು ಈಗ ಹೊಸ ಮಡಿಯನ್ನು ಹೊದಿಸಿದ್ದೆ ಮುಸುರೆ ತಿಕ್ಕಿ ಹೊಲಸು ಮಾಡಿದಿ ಎಂದು ಸಿದ್ಧನನ್ನು ಬಡಿಯುತ್ತಿದ್ದಳು. ಅವನು ಹೊರಗೆ ಬಂದು ಭಕ್ತರ ಮುಂದೆ ನಸುನಗೆಯಿಂದ ಹೇಳುತ್ತಿದ್ದನು. ಲಕ್ಷ್ಮಮ್ಮನು ಕರ್ಮ ನಿಷ್ಠಳು. ಆಕೆಗೆ ನೇಮ ನಿತ್ಯ ಬಹಳ ನಿತ್ಯ ಮಡಿ ಉಡಿಯಿಂದ ಅಡಿಗೆ ಮಾಡಿ ದೇವರಿಗೆ ಎಡೆ ಹಿಡಿಯುದ ಮುನ್ನ ಯಾರನ್ನೂ ಏನನ್ನೂ ಮುಟ್ಟ ಗೊಡುತ್ತಿದ್ದಿಲ್ಲ ಆಕೆಯು ದೇವರಿಗೆ ಎಡೆ ಮಾಡಿದ್ದನ್ನು ಸಿದ್ಧನು ಯಾವ ಮಾಯೆಯಿಂದಲೋ ಬಂದು ಉಣ್ಣುತ್ತಿದ್ದನು. ಅವಳು ಅದನ್ನು ಕಂಡು ಬೈಯುತ್ತಿದ್ದಳು. ಒಳಗೆ ಏನಾದರೊಂದು ಕಿಡಿಗೇಡಿತನ ಮಾಡಿ ಗೊತ್ತಿಲ್ಲ-ದವನಂತೆ ಹೊರಗೆ ಬರಬೇಕು. ಅವಳು ಒಳಗೆ ಬೈಯುತ್ತಿರಬೇಕು, ಇವನು ಹೊರಗೆ ನಗುತ್ತಿರಬೇಕು.

ಹೀಗೆ ಸದ್ಗುರುನಾಥನು ಬಾಲಕನಂತೆ ಮಾಡುವ ಅವನ ಆಟ-ಪಾಟ-ಗಳನ್ನು ಸದ್ಭಕ್ತರು ಕಂಡು, "ಪೂರ್ವಕಾಲದಲ್ಲಿ ಪ್ರತಿವ್ರತೆ ಅಮ್ಮವ್ವ ಮನೆಯಲ್ಲಿ ಶಂಕರನು ಆಕೆಗೆ ಮಗನಾಗಿ ಕ್ರೀಡೆ ಮಾಡಿದ್ದನ್ನು ಪುರಾಣ ಇತಿ-ಹಾಸಗಳಲ್ಲಿ ಕೇಳುತ್ತಿದ್ದೇವಷ್ಟೆ ! ಅದನ್ನು ನಾವು ಈಗ ಕಣ್ಣಾರೆ ಕಾಣುತ್ತಿ-ದ್ದೇವೆ. ಇಂಥ ಸದ್ಗುರುವರನನ್ನು ಪಡೆದ ದಂಪತಿಗಳೀರ್ವರೂ ಧನ್ಯರು. ನಾವೂ ಧನ್ಯರೆ," ಎಂದು ಕೊಂಡಾಡುತ್ತಿದ್ದರು. ಆದರೆ ಪಾಪಿಷ್ಠರು, ಮಾತ್ರ

ಮನಸ್ಸಿಗೆ ಬಂದಂತೆ ಬೊಗಳುತ್ತಿದ್ದರು. ಭೀಮಪ್ಪನಿಗೆ ಅತಿ ಕುಂದು ಹೊರಿಸುತ್ತ, ನಿಂದಿಸುತ್ತ, ಬಹು ಪ್ರಕಾರ ದುಃಖವಾಗುವಂತೆ, ಕಾಡಹತ್ತಿದರು. ಬಲಶಾಲಿಯಾದ ಭೀಮಪ್ಪನು, ಅವರ ಕುಂದುನಿಂದೆಗಳಿಗೆ ಎದೆಗುಂದದೆ, ಪೂರ್ವದಲ್ಲಿ ಪರಶಿವನು, ತನ್ನ ಪರಮ ಭಕ್ತರಾದ ಶಿರಿಯಾಳ ಮೊದಲಾದ ಪುರಾತನರನ್ನು ಪರೀಕ್ಷಿಸಿದಂತೆ, ಈಗ ನಮ್ಮ ಭಕ್ತಿ ಪರೀಕ್ಷಿಸುವನು," ಎನ್ನುತ್ತ ತಮ್ಮ ಹೃದಯದೊಳಗೆ ಮಾತ್ರ ಶ್ರೀ ಸಿದ್ಧನೇ ಪರಮ ಶಿವನೆಂದು ದೃಢನಿಶ್ಚಯವಾಗಿ ನಂಬಿದ್ದರು.

ಮಂಗಲ—ವರ ಪತಿವ್ರತರಾವೆನಿಪ ಸತಿ |
ಯರತಿ ಗರ್ವವ ಮುರಿಯಲೋಸುಗ |
ಹರಿಹರಾಜರು ಧರಣಿಯೋಳ್ ನಿಜ ಪಾತಿವೃತ್ಯದಲಿ ||

ಪಿರಿದೆನಿಸಿ ಶೋಭಿಪನುಸೂಯೆಯ |
ಪರಮ ಸದನಕೆ ಪೋಗಿ ಶಿಶುವಾ |
ಗಿರುವ ದತ್ತಾತ್ರಯಗೆ ನಾಂ ಮುದವೇರಿ ನಮಿಸುವೆನು ||

ಇತಿ ಶ್ರೀ ಸಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ ಲೀಲಾ
ಚರಿತ್ರ ಕಲ್ಪದ್ರುಮದೊಳುಜ್ಜಣ್ಣನವರ ಮನೆಗೆ ಮಗನಾದನೆಂಬ
೨೯ ನೇ ಅಧ್ಯಾಯ ಸಮಾಪ್ತಿ.



|| ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ||



# ಸದ್ಬೋಧ ಕಾಂಡ

## ಅಧ್ಯಾಯ ೩೦.

ಈ ಅಧ್ಯಾಯದಲ್ಲಿ ಹಳೇ ಹುಬ್ಬಳ್ಳಿಯಲ್ಲಿ ಗೌರಿಯ ತೇರಿನಲ್ಲಿ ಕೊತದ್ದು. ಸಿದ್ಧನು ಧಾತುನಾಮ ಸಂವತ್ಸರದ ಬರಗಾಲದಲ್ಲಿ ಬಡವರಿಗೆ ಅನ್ನವನ್ನು ಹಾಕಿಸಿದ್ದು ಸಿದ್ಧನನ್ನು ಕೊಲ್ಲಲಿಕ್ಕೆ ಕೌದಿಮಠಕ್ಕೆ ಕರೆದೊಯ್ದದ್ದು. ಸಿದ್ಧನು ಗನಗಕ್ಕೆ ಹೋದಾಗ್ಗೆ ಅಲ್ಲಿ ಮಡಿವಾಳ ಸ್ವಾಮಿಗಳ ಪ್ರಶ್ನೆಗೆ ಉತ್ತರ ಕೊಟ್ಟದ್ದನ್ನು ಒಂದು ದಿನ ಸರ್ವ ಭಕ್ತರು ಕೂಡಿದಾಗ ಅವರೆಲ್ಲರಿಗೂ ಹೇಳಿ ಅವರೆಲ್ಲರನ್ನು ಗರಗಕ್ಕೆ ಕರಕೊಂಡು ಹೋಗಿ ಆ ಸ್ವಾಮಿಗಳನ್ನು ದರ್ಶನ ಮಾಡಿಸಿದ ವಿಷಯಗಳು ತುಂಬಿರುವವು.

ಸ್ತೋತ್ರಪದ— ಪರಮ ಚಿಂತಾಮಣಿಗಳಿಂ ಸುರ |
ತರುಗಳಿಂ ಋಷ್ಯಾಶ್ರಮಗಳಿಂ |
ಪರಿಯುವಮೃತದ ಝುರಿಗಳಿಂದಿಹ ಹೇಮಕೂಟದಲಿ ||
ಮೆರೆಯುತಿಹ ವಟವೃಕ್ಷ ಮೂಲದೊ |
ಳಿರುವ ಪೀಠದೆ ನೆಲಸುತಮುಭಯ |
ಕರವನೆತ್ತಿಹ ದಕ್ಷಿಣಾ ಮೂರುತಿಗೆ ನಾಂ ನಮಿಪೆ ||

## ಪದ— ೧—೯ ಹಳೇಹುಬ್ಬಳ್ಳಿಯಲ್ಲಿ ಗೌರೀ ತೇರಿನಲ್ಲಿ ಕುಳಿತದ್ದು

ಹಳೇ ಹುಬ್ಬಳ್ಳಿಯಲ್ಲಿ ಗೌರೀ ಉತ್ಸವಕ್ಕೆಂದು ಅದನಾಗಿ ಒಂಭತ್ತು ಕಳಸದ ಒಂದು ತೇರನ್ನು ಕಟ್ಟಿದ್ದರು. ಆದರೆ ಒಂದು ಮಾತಿನ ಹಟಕ್ಕೆ ಬಿದ್ದು ಎಷ್ಟೋ ದಿನಗಳ ವರೆಗೆ ಆ ತೇರು ಎಳೆಯದೆ ಹಾಗೆಯೇ ನಿಂತು ಬಿಟ್ಟಿತ್ತು. ಒಂದು ದಿನ ಆ ಓಣಿಯೊಳಗಿನ ಕೆಲವು ಪ್ರಮುಖರು ಕೂಡಿ ಕೊಂಡು "ಈಗ ಗೌರೀ ಹುಣ್ಣಿವೆ ಬಂದಿರುವದು ಅದುಕಾರಣ ಭೇದರಹಿತ ನಾದ ಸಿದ್ಧರನ್ನು ಕರೆತಂದು ತೇರಿನಲ್ಲಿ ಕುಳ್ಳಿರಿಸಿ ಉತ್ಸವ ಮಾಡಬೇಕು" ಎಂದು ನಿಶ್ಚಯಿಸಿದರು. ಅವರಲ್ಲಿ ಕೆಲವರು ವಾದ್ಯಗಳನ್ನು ತರಲೊಪ್ಪಿ ಕೊಂಡರು. ಉಜ್ಜಣ್ಣನವರ ಭೀಮಪ್ಪನು ಅನ್ನಸಂತರ್ಪಣೆಯ ಕಾರ್ಯವನ್ನು ಕೈಗೊಂಡನು. ಅದಕ್ಕಾಗಿ ತನ್ನ ಮನೆಯಲ್ಲಿರುವ ಬದುಕನ್ನೆಲ್ಲ ಮಾರಿದನು.

ನಂತರ ಸಿದ್ಧರನ್ನು ಸಂಭ್ರಮದಿಂದ ಕರೆತಂದು ಆ ಶೃಂಗರಿಸಿದ ತೇರಿನಲ್ಲಿ ಕುಳ್ಳಿರಿಸಿದರು. ಸ್ವಾಮಿಗಳಿಗೆ ಜರದ ಪಿತಾಂಬರ ಹೊದಿಸಿ, ಹೂಮಾಲೆ ಹಾಕಿದರು. ನೊಸಲಿಗೆ ಹಸನಾಗಿ ವಿಭೂತಿ ಧರಿಸಿ, ಕಸ್ತೂರಿ ತಿಲಕವನ್ನಿಟ್ಟು ಸುಗಂಧದ್ರವ್ಯಗಳನ್ನು ಪ್ರೋಕ್ಷಿಸಿ ಪೂಜಿಸಿದರು. ಅದರೊಂದಿಗೆ ಸುಮಂಗಲೆ ಯರು ಮುದದಿಂದ ಮಂಗಳಾರತಿ ಪಾಡಿ ಆರತಿ ಬೆಳಗಿದರು. ಕೂಡಲೆ ಎಲ್ಲರೂ "ಪಾರ್ವತೀ ಪತಿ ಹರಹರ ಮಹಾದೇವ !" ಎಂದು ಚಪ್ಪಾಳೆಯನ್ನು ತಟ್ಟುತ್ತ, "ಸನ್ನುತಾಂಗನಿಗೆ, ಶ್ರೀಸಿದ್ಧಾರೂಢ ಸ್ವಾಮಿ ಮಹಾರಾಜನಿಗೆ ಜಯ ಜಯವಾಗಲಿ !" ಎಂದು ಘೋಷಿಸಿದರು.

"ಓಂ ಸ್ವಸ್ತಿ, ದೋಷಸಂಗವ ದಹಿಸಿ, ವಿಷವಕೊಡುವುದನರಿತು ದ್ವೇಷಮಂ ಮಾಡದೆ, ಲೇಸು ಘನವೆಂದರಿತು, ವಿಷವನ್ನು ಎರಡಾವರ್ತಿ ಯುಂಡು, ಮೃತ್ಯುವನ್ನು ಜಯಿಸಿ, ಬ್ರಹ್ಮಾನಂದವೆಂಬ ಮದ್ದಾನೆಯಂತೆ ಬಾಲ ಲೀಲೆನಾಡುತಿರುವ ಶ್ರೀಮಜ್ಜಗದ್ಗುರು ಸಿದ್ಧಾರೂಢಸ್ವಾಮಿನ್ ಬಹುಪರಾಕ್" ಎಂಬ ಜಯಘೋಷದೊಂದಿಗೆ ತೇರನ್ನೆಳೆದರು. ವಾದ್ಯ ಭಜನೆಗಳ ವೈಭವ ದೊಂದಿಗೆ, ಹಣ್ಣುಕಾಯಿಗಳನ್ನು ಸೂರೆಮಾಡುತ್ತ, ಸ್ವಲ್ಪ ದೂರ ಸಾಗಿಸಿ, ಮೊದಲು ನಿಂತ ಸ್ಥಳಕ್ಕೆ ತೇರನ್ನು ಎಳೆತಂದರು. "ಪ್ರಾರಬ್ಧಕ್ಕನುಸಾರ ವಾಗಿರುವ ಸುಖದುಃಖಾದಿಗಳನ್ನು ಶರೀರಕ್ಕೊಪ್ಪಿಸಿ, ತನ್ನ ನಿಜಸುಖದಲ್ಲಿರುವ

ವವನೇ ಸಾಧುವು" ಸಿದ್ಧಾರೂಢರು ತಮ್ಮ ಶಿರದೊಳು ಶಿಖಿಯನ್ನು ಇಟ್ಟಾಗಲೂ, ತೇರಿನೊಳು ಕುಳಿತು ಮೆರೆಯುವಾಗಲೂ ಒಂದೇ ಸಮಭಾವದಿಂದಿರುವದನ್ನು ಸಕಲರೂ ನೋಡಿ ನೆಚ್ಚಿ ನಲಿದಾಡಿದರು.

ನಂತರ ಸಿದ್ಧ ಭಾರತಿಯನ್ನು, ವೈಭವದಿಂದ ಸಿದ್ಧಾಶ್ರಮಕ್ಕೆ ಕರೆತಂದರು. ಆಗ ಕೆಲವರು ಅನ್ನ ಸಂತರ್ಪಣೆ ನಡೆಸಿದರು. ಓರ್ವನು, ಸಿದ್ಧರಿಗೆ ಒಂದು ಜರದ ಮಡಿಯನ್ನು ಹೊದಿಸಿ, ನಮಿಸಿದನು. ಕೆಲವರು ಅಂದವಾಗಿರುವ ಛತ್ರಚಾಮರಗಳನ್ನಿತ್ತರು. ಬಳಿಕ ಕಾರಡಗಿ ಮಲ್ಲಪ್ಪನೆಂಬವನು, ಅಲ್ಲಿ ಅಡಿಗೆ ಮಾಡಲಿಕ್ಕೆ ಸ್ಥಳ ಇಲ್ಲವೆಂದು, ಉದಾರ ಮನಸ್ಸಿನಿಂದ, ಮೂರು ಚಪ್ಪರಗಳನ್ನು ಹಾಕಿಸಿದನು. ಮುಂದೆ ಸ್ವಲ್ಪೇ ದಿನಗಳಲ್ಲಿ, ಧಾತುನಾಮ ಸಂವತ್ಸರ ಪ್ರಾರಂಭವಾಯಿತು. ಆಗ ನಾಡಿಗೆಲ್ಲ ಬರಬಿದ್ದು, ಅನ್ನವಿಲ್ಲದೆ ಹಾಹಾಕಾರವೆದ್ದಿತು. ಎಷ್ಟೋ ಜನಗು ತಮ್ಮ ಮಕ್ಕಳ ಮಮಕಾರ ತೊರೆದು, ಅವರನ್ನು ಮಾರಿ, ಹೊಟ್ಟೆತುಂಬಿಕೊಳ್ಳಹತ್ತಿದರು. ಆಗ ದಯಾಳು ಸಿದ್ಧಸದ್ಗುರುನಾಥನು, ಹಸಿವಿನಿಂದ ಸಂಕಟ ಪಡುತ್ತಿರುವ ದರಿದ್ರ ಜನ ಸಹಾಯಕ್ಕೆ, ತಾನು ಸ್ವತಃ ನಡಕಟ್ಟಿ ನಿಂತು ಸದ್ಭಕ್ತರಿಂದ ಅನ್ನದಾನ ಮಾಡಿಸಹತ್ತಿದನು.

## ಅನ್ನದಾನದ ಮಹಿಮೆ

ಸದ್ಗುರುನಾಥನು ಭಕ್ತರಿಗೆ ಉಪದೇಶಿಸಿದ್ದೇನಂದರೆ, "ಮೇರುಪರ್ವತದಷ್ಟು, ಹೊನ್ನರಾಶಿಯನ್ನೂ, ಕೋಟಿ ಕನ್ಯಾದಾನ, ಕೋಟಿ ಗೋದಾನ ಮಾಡಿದರೂ, ಅವು ಅನ್ನದಾನಕ್ಕೆ ಸರಿಯಾಗಲಾರವು. ಯಾಕೆಂದರೆ ಅನ್ನದಾನ ಮಾಡುವ ಸಮಕಾಲದಲ್ಲಿ, ಆಗುವ ತುಷ್ಟಿ, ಪುಷ್ಟಿ, ಶಾಂತಿ ಇವು, ಏಕಕಾಲಕ್ಕೆ ತೋರುವಂತೆ ಮತ್ತಾವ ದಾನದಿಂದಲೂ, ತೋರಲಾರವು," ಕರುಣದಿಂದ ಯಾರು ದ್ರವ್ಯದಾಶೆಯದೊರೆದು ಅನ್ನದಾನ ಮಾಡುವರೋ ಅವರು ನರರಲ್ಲ; ನನ್ನ ಪ್ರಾಣಸ್ವರೂಪರೆ ಎಂದು ಪರಮಾತ್ಮನು ಸಂತುಷ್ಟನಾಗಿ ಅವರಿಗೆ ಸುಖಸಂಪತ್ತನ್ನು ಕೊಟ್ಟು ಕಾಪಾಡುವನು. ಅದುಕಾರಣ ಧರೆಯೊಳು ಅನ್ನದಾನವೇ ಶ್ರೇಷ್ಠವಾಗಿರುವದು. ಇದನ್ನೇ ಪುಷ್ಟೀಕರಿಸುವದಕ್ಕಾಗಿ ದಾಸ ಸಾಹಿತ್ಯದಲ್ಲಿ ಹೀಗೆ ಹೇಳಿದ್ದಾರೆ.

ಊಟಕ್ಕೆ ಬಂದೆವೇಳವಮ್ಮಾ !
ನಿನ್ನ ಆಟ ಪಾಟವ ಬಿಟ್ಟು ಅಡಗಿಮಾಡವಮ್ಮಾ ||ಪ||

ಕಣ್ಣು ಕತ್ತಲಿಟ್ಟಾವವಮ್ಮಾ |
ಬಾಯಿ ಒತ್ತುತಲಿದೆ ಕೈಕಾಲು ಜುಮ್ಮಾ ||
ಹೊತ್ತುಗಳಿಯಲು ಬೇಡವಮ್ಮಾ |
ಒಂದು ತುತ್ತಾದರು ಇತ್ತು ಸಲಹುನಮ್ಮವಮ್ಮಾ ||೧||

ಒಡಲೊಳು ಉಸುರಿಲ್ಲವವಮ್ಮಾ |
ಒಂದು ಕ್ಷಣವಾದರು ಜೀವಾ ಉಳಿಸಬಾರವಮ್ಮಾ ||
ಮಡಿದರೆ ದೋಷ ನಿಮಗವಮ್ಮಾ |
ಒಂದು ಹಿಡಿಯಿಕ್ಕಿಯಿಂದಲಿ ಕೀರ್ತಿಬಹುದಮ್ಮ ||೨||

ಹೊನ್ನುರಾಶಿಯ ತಂದು ಸುರಿಯೇ |
ಕೋಟಿ ಕನ್ನಿಕೆಯರ ತಂದು ಧಾರಿಯೆರೆಯೇ ||
ಅನ್ನದಾನಿಕ್ಕದು ಸರಿಯೇ |
ಪುರಂದರ ವಿಠಲೆನ್ನ ದೊರೆಯೇ ||೩||

ಎಲ್ಲ ಭಕ್ತರು ಸದ್ಗುರುವಿನ ಬೋಧೆಯನ್ನು ಮನ್ನಿಸಿ, ನಾಮುಂದೆ ನೀಮುಂದೆ ಎಂದು ಅನ್ನದಾನ ನಡೆಸಿದರು. ಪರಮಾತ್ಮನು ಮೇದಿನಿಗೆ ಸಮಭಾವದಿಂದ ಅನ್ನವನ್ನಿತ್ತು, ರಕ್ಷಿಸುವಂತೆ ಸಿದ್ಧಾಶ್ರಮದಲ್ಲಿ ಬಡಜನಕ್ಕೆ ಮನಮುಟ್ಟಿ ಅನ್ನ ದಾನ ಮಾಡಹತ್ತಿದರು.

ಆ ಬೋಧೆಯನ್ನು ಕೇಳಿ ಸದ್ಭಕ್ತರು ಹರುಷದಿಂದ ದಿನಕೊಂದ್ಯ ಚಂದಾಗಿ ಸರಸವಾಗಿ ಅನ್ನಧಾನ ನಡಿಸಿದರು. ಶಿರಗುಪ್ಪಿ ಹೊಂಬಪ್ಪನೆಂಬ ವನು ತಾನೂ ಒಂದು ದಿವಸ ಅನ್ನದಾನ ಮಾಡುತ್ತಿದ್ದನು. ಈ ವಾರ್ತೆಯನ್ನು ರಾಜಾಧಿಕಾರಿಗಳು ಕೇಳಿ ಅದನ್ನು ನೋಡಲು ಬಂದರು. ನೋಡಿ ''ಹೊಂಬಣ್ಣ ನವರೆ, ಇವರಿಗೆ ಹೊಟ್ಟೆತುಂಬ ಊಟ ಹಾಕಬೇಡಿರಿ. ಯಾಕಂದರೆ ಅವರು ಇಷ್ಟುದಿವಸ ಅನ್ನವಿಲ್ಲದೆ ಬಳಲಿ, ಮಿತಿಮೀರಿ ಉಣ್ಣುವದರಿಂದ ಅನ್ನ ಜೀರ್ಣ ಮಾಡಿಕೊಳ್ಳುವ ಪಚನಶಕ್ತಿ ಇಲ್ಲದ ಮೂಲಕ ಸತ್ತು ಹೋಗುವರು ಅದು

ಕಾರಣ ಅರಹೊಟ್ಟೆಯಾಗುವಂತೆ ಅನ್ನಕೊಡುವದು. ಒಳಿತೆಂದು ಹೇಳಿ ಹೋದರು. ಆರು ತಾಸಿನ ಪರಿಯಂತ ಊಟದ ಪಂಕ್ತಿ ನಡೆದು, ನುತರ ಅನ್ನ ಸಾರು ಕಲಿಸಿ ಉಂಡೀ ಕಟ್ಟಿ ಕೊಡಹತ್ತಿದರು.

ಈ ಪ್ರಕಾರದ ವೈಭವದಿಂದ ಅನ್ನದಾನ ನಡೆದಿರಲು ಬಡಜನರು ಅನ್ನದಾತರನ್ನು ಕೊಂಡಾಡುತ್ತ, "ಪರಮಾತ್ಮನು ನಿಮಗೆ ಆಯುರಾರೋಗ್ಯ ಸಕಲ ಸಂಪತ್ತಾದಿಗಳನ್ನಿತ್ತು ಇತೋಪ್ಯತಿಶಯವಾಗಿ ಜಗದ ಹಿತಾರ್ಥವಾಗುವ ಇಂಥ ಕೃತ್ಯಗಳನ್ನು ರಚಿಸುವ ಶಕ್ತಿಯನ್ನು ನಿಮಗಿತ್ತು ಕಾಪಾಡಲಿ" ಎಂದು ಹಾರೈಸುತ್ತ ಸಿದ್ಧ ಸದ್ಗುರುಗಳಿಗೆ ನಮಿಸುತ್ತ ಹೋಗಹತ್ತಿದರು.

ಹೀಗೆ ಸಿದ್ಧರ ಕೀರ್ತಿಯು ಜಗತ್ತಿಗೆಲ್ಲ ಪಸರಿಸುತ್ತಿರಲು ಕೆಲವು ಜಂಗಮರಿಗೆ ಅಧಿಕ ಮತ್ಸರ ಉಂಟಾಯಿತು. "ಇವನು ಬಡತಕ್ಕೆ ಬಗ್ಗನು. ಹೇಗಾದರು ಮಾಡಿ ಇವನನ್ನು ನೀಗಿಬಿಟ್ಟದ್ದಾದರೆ, ನಮ್ಮ ಶ್ರೇಯಸ್ಸೂ ಮತ್ತು ಪಂಚಾಕ್ಷರಿಯ ಸತ್ವವೂ ಉಳಿಯುವದು" ಎಂದು ಕೆಲವರು ಕೂಡಿ ನಿಶ್ಚಯಿಸಿದರು.

ಪದ— ೧೯-೩೫ **ಕೌದಿಮಠದಲ್ಲಿ ಸಿದ್ಧನನ್ನು ಕೊಲ್ಲುವ ಪ್ರಯತ್ನ**

ಅಮವಾಸ್ಯೆ ದಿನ ರಾತ್ರಿ ಸಮಯಕ್ಕೆ ಸಿದ್ಧರನ್ನು ಕರೆತರುವದಕ್ಕಾಗಿ ನಾಲ್ಕು ಜನರನ್ನು ಹುರಿದುಂಬಿಸಿ ಕಳಿಸಿಕೊಟ್ಟರು. ಅವರು ಸಿದ್ಧಾಶ್ರಮಕ್ಕೆ ಬಂದು ಸಹಜಾನಂದದಲ್ಲಿ ಕುಳಿತಿರುವ ಪರಮ ಸದ್ಗುರುಗಳ ಮುಂದೆ, ಕಪಟದ ಭಯ ಭಕ್ತಿಯ ಸೋಗು ಹಾಕಿಕೊಂಡು ಬಂದರು. ಸ್ವಾಮಿಗಳಿಗೆ ನಮಿಸುತ್ತ "ಗುರುನಾಥಾ, ಈಗ ಕವದಿಮಠದಲ್ಲಿ ಮಹಾ ಪ್ರಸ್ತ ನಡೆದಿರುವದು. ನಮ್ಮೆಲ್ಲರ ಮೇಲೆ ಕೃಪೆದೋರಿ ಅಲ್ಲಿಯ ವರೆಗೆ ಬಂದು ಪಾದಪೂಜೆ, ಪ್ರಸಾದ ಬೇಗನೆ ತೀರಿಸಿಕೊಂಡು ಬರಬೇಕು" ಎಂದು ಪ್ರಾರ್ಥಿಸಿಕೊಂಡರು. ಭಾನುವಿನಂತೆ ಸಮಭಾವದಿಂದ ಪ್ರಕಾಶಬೀರುತ್ತಿರುವ ಸಿದ್ಧ ಸದ್ಗುರುವರನು, ಹೊರಗೆ ಕುಳಿತಿದ್ದ ಒಬ್ಬನಿಗೆ "ಈಗ ಭಕ್ತರು ಬರುವದು. ಅವರಿಗೆ 'ಸ್ವಾಮಿಗಳು ಕವದೀಮಠಕ್ಕೆ ಪ್ರಸಾದ ತೀರಿಸಿಕೊಂಡು ಬರಲಿಕ್ಕೆ ಹೋಗುವರು, ನಾನು (ಸ್ವಾಮಿ) ಬರುವವರೆಗೂ, ಬಂದವರಿಗೆ ಇಲ್ಲಿಯೇ ಕೂಡ್ರಲಿಕ್ಕೆ ಹೇಳು, ಎಂದು ಅವನಿಗೆ ತಿಳಿಸಿ" ಕರೆಯು ಬಂದವರೊಡನೆ ಹೋದರು.

ಪಾಂಡವರನ್ನು ನಾಶ ಮಾಡುವದಕ್ಕಾಗಿ ಕಡುಮೋಸದಿಂದ ರಾತ್ರಿ ಸಮಯಕ್ಕೆ ಅರಗಿನಮನೆಗೆ ಕರೆದೊಯ್ದಂತೆ, ಆ ವಂಚಕರು ಸಿದ್ಧರನ್ನು ಕರೆದೊಯ್ದು ಆ ಕೆವದೀಮಠದಲ್ಲಿ ಹೊಗಸಿದರು. ಸಿದ್ಧಾರೂಢರು ಆ ಘಾತಕರ ಘಾತ ಹಂಚಿಕೆಯನ್ನು ಕಂಡು, ಪೂರ್ವಕರ್ಮವಿದ್ದಂತಾಗಲಿ ಎಂದು ಕೊಂಡು ಅವರಿಗೆ "ಏನಿರಯ್ಯಾ, ಇಲ್ಲಿ ದೀಪವೇ ಮೊದಲಿಗಿಲ್ಲ; ನಿಮ್ಮ ಪ್ರಸ್ತ ಎಲ್ಲಿ ನಡೆದಿರುವದು ? ಏನಿದು ನಿಮ್ಮ ಮೋಸ'' ಎಂದು ಕೇಳಿದರು. ಅದಕ್ಕೆ ವಂಚಕರು ''ಎಲೋ ಲಿಂಗವಿಲ್ಲದ ನೀಚನೇ, ನೀನು ತುಂಗ (ಶ್ರೇಷ್ಠ) ತ್ರಿಕಾಲ ಜ್ಞಾನಿಯಾಗಿದ್ದರೆ, ಪರರ ಇಂಗಿತವು ನೀನು ತಿಳಿಯಲಿಲ್ಲವೇನೋ ಮೂರ್ಖ ! ಛೀ ಮಂಗನೇ ! ನಿನಗೆ ಅನ್ನವೇ ? ನಿನ್ನ ಅಂಗವನ್ನು ಅನ್ನವನ್ನು ಮಾಡಿ, ಆ ಕಾಲನಿಗೆ ಉಣಿಸುವ ಪ್ರಸ್ತವನ್ನು ಮಾಡಲಿಕ್ಕೆ ನಿನ್ನನ್ನು ಈ ಮಠಕ್ಕೆ ಕರೆತಂದದ್ದು ತಿಳಿಯಿತೇ'' ಎಂದು ಸಂತೋಷದಿಂದ ಗಹಗಹಿಸಿ ನಗಹತ್ತಿದರು. ಸಿದ್ಧರು ಮರಣಕ್ಕಂಜದೆ, ಯಮನ ಭಕ್ತರೇ ಕೇಳಿರಿ, "ಲೇಸಾದ ಈ ಕಾರ್ಯವನ್ನು ನೀವು ಭರದಿಂದ ನೆರವೇರಿಸಿ ಸುಖಿಸಿರಿ. ನರಕಮಯದಾದ ಈ ನನ್ನ ದೇಹವನ್ನು ನೀವೇ ಕೊರೆದು ದೇವನಿಗೆ ಅರ್ಪಿಸಿದ್ದಾದರೆ, ನಾನೇ ಧನ್ಯನು'' ಎಂದು ಶಿವಧ್ಯಾನದೊಳಗೆ ಮೈಮರೆತು ಕುಳಿತನು.

ಸಿದ್ಧರನ್ನು ಕರೆತಂದ ಆ ನಾಲ್ವರು ಹೊರಗೆ ಹೋಗಲು, ಕೂಡಲೆ ಈರ್ವರು ಒಂದು ಸಂದಿಯೊಳಗಿಂದ ಬಡಿಗಿ ಹಿಡಿದುಕೊಂಡು ಬಂದರು. ಈ ಕತ್ತಲ ಮನೆಯಲ್ಲಿ ಸ್ವಾಮಿಯನ್ನು ಕೊಂದುಹಾಕಬೇಕೆಂದು ಕುಡಿದ ಅಮಲಿನಲ್ಲಿ ಬಡಿಗೆಯನ್ನು ಎತ್ತಿ ಹೊಡೆಯುವಷ್ಟರಲ್ಲಿ ಒಂದು ಆಶ್ಚರ್ಯವಾಯಿತು. ಅದೇನಂದರೆ ಅಲ್ಲೊಂದು ಘಟಸರ್ಪವು ಬಂದು ಒಬ್ಬನನ್ನು ಜೋರಿನಿಂದ ಕಚ್ಚಿ ಮಾಯವಾಯಿತು. ಅವನು ಅಯ್ಯೋ ಸತ್ತೆನು ಏನಿದು ! ಎಂದು ಕೆಟ್ಟ ಧ್ವನಿಯಿಂದ ಚಿಟ್ಟನೇ ಚೀರುತ್ತ ಭೂಮಿಗೆ ಒರಗಿದನು. ಮತ್ತೊಬ್ಬನು ಇವನೇ ಸಾಧುವು ಎಂದು ಅವನ ಎಬೆಯ ಮೇಲೆ ಕುಳಿತು ಅವನ ಕುತ್ತಿಗೆಗೆ ಕೈಹಾಕಿ ಹಿಚುಕಹತ್ತಿದನು. ಕೆಳಗೆ ಬಿದ್ದವನು ಕೂಡಲೆ ನಾನು ತಳವಾರ ಭೀಮನೋ ಎಂದನು. ಅಷ್ಟರಲ್ಲಿ ಹೊರಗಿನಿಂದ ನಾವು ಬಂದೆವು ಹಿಡಿಯಿರಿ, ಎಂಬ ಶಬ್ದವು ಹತ್ತರ ಕೇಳಲು ಅವನು ಒತ್ತರದಿ ಹೊರಗೆ ಓಡಿ ಹೋದನು.

ಒಳಗೆ ಬಿದ್ದವನು, "ಸತ್ಯ ಸ್ವಾಮಿಯ ಕೊಲ್ಲಹೋದ, ಕತ್ತೆಯಾದ ನಾನೇ ಸತ್ತುಹೋಗುವ ಹೊತ್ತು ಬಂದಿತಲ್ಲ" ಎಂದು ಒರಲಹತ್ತಿದನು.

ಇತ್ತ ಸಿದ್ಧಾಶ್ರಮಕ್ಕೆ ಸದ್ಭಕ್ತರು ಬಂದು ಹೊರಗೆ ಕುಳಿತಿರುವವನ ಮುಖದಿಂದ, ಸ್ವಾಮಿಗಳು ಕೌದೀಮಠಕ್ಕೆ ಹೋದದ್ದನ್ನು ಕೇಳಿ, ಇಂಥ ಅಪರಾತ್ರಿಯಲ್ಲಿ ಕರೆದೊಯ್ಯಬೇಕಾದರೆ, ಇದು ಏನೋ ಘಾತಕದ ಯೋಚನೆ ಇರಬೇಕೆಂದು ತಿಳಿದು, ತಾವು ಬೇಗನೆ ಕೈಯಲ್ಲಿ ಪಂಜನ್ನು ಹಿಡಿದುಕೊಂಡು ಓಡುತ್ತ ಕೌದೀಮಠಕ್ಕೆ ಬಂದರು. ಒಳಗಿನಿಂದ 'ಸತ್ತೆ'ನೆಂಬ ಶಬ್ದವನ್ನು ಕೇಳಿ "ಹಿಡಿಯಿರಿ ಬಂದೆವು" ಎಂದು ಮಠದೊಳಗೆ ಹೊಕ್ಕರು. ಒಳಗೆ ಬಂದು ನೋಡಲು ಸಿದ್ಧಾರೂಢರು ಒಂದು ಸ್ಥಾನದಲ್ಲಿ ನಿರ್ವಿಕಲ್ಪ ಸಮಾಧಿಸ್ಥರಾಗಿ-ದ್ದರು. ಹಾವಿನಿಂದ ಕಚ್ಚಿಸಿಕೊಂಡವನು ನೆರಳುತ್ತ ಆರೂಢರ ಪಕ್ಕದಲ್ಲಿಯೇ ಬಿದ್ದಿದ್ದನು. ಬಂದವರು ಅವನ ಮುಖದಿಂದ ಎಲ್ಲ ಸಂಗತಿಯನ್ನು ತಿಳಿದುಕೊಂಡರು. ಹರುಷದಿಂದ ಈಶನ ಅಗಾಧ ಮಹಿಮೆಯನ್ನು ಕೊಂಡಾಡಿ ಸ್ವಾಮಿಗಳಿಗೆ ನಮಿಸಿ, "ತಂದೆಯೇ, ಈಗ ನಾವು ತೀವ್ರ ಮಠಕ್ಕೆ ಹೋಗುವಾ ಬನ್ನಿರಿ" ಎಂದರು. ಅದಕ್ಕೆ ಸಿದ್ಧರು "ನೆರಳುತ್ತ ಬಿದ್ದಿರುವ ಇವನನ್ನು ಹೇಗೆ ಬಿಟ್ಟು ಹೋಗುವದು ! ಈಗ ಇವನನ್ನು ಸಂತೋಷದಿಂದ ಎಚ್ಚರಿಸಿ ಬರುವೆನು, ತಡೆಯಿರಿ" ಎಂದು ಪಂಚಾಕ್ಷರಿಯನ್ನು ಉಚ್ಚರಿಸಿ, ಅವನ ಮೇಲೆ ತಮ್ಮ ಅಮೃತ ಹಸ್ತವನ್ನೆಳೆದರು. ಅವನು "ಶಿವ ಶಿವಾ" ಎಂದು ಎದ್ದು ಸಿದ್ಧರ ಚರಣಕ್ಕೆ ನಮಿಸಿ, "ಕರುಣಾಳು ತಂದೆಯೇ, ನನ್ನ ಅಪರಾಧವನ್ನು ಮನ್ನಿಸು ಎಂದು ಪುನಃ ಅವರ ಪಾದಕ್ಕೆ ಬಿದ್ದನು.

ದಯಾಳು ಸಿದ್ಧರು ಪಾದಕ್ಕೆ ಬಿದ್ದವನನ್ನು ಎಬ್ಬಿಸಿ ಆಶೀರ್ವದಿಸಿದರು. ಅಲ್ಲಿಂದ ಭಕ್ತರನ್ನೊಡಗೊಂಡು, ಸಿದ್ಧಾಶ್ರಮಕ್ಕೆ ಬಂದರು. ಈ ಸಂಗತಿಯನ್ನು ಮರುದಿವಸ ಸರ್ವರೂ ಕೇಳಿ, ಖಿನ್ನರಾದರು. "ಇನ್ನು ಮೇಲೆ ಸತತ ಸ್ವಾಮಿಗಳ ಹತ್ತರ, ಒಬ್ಬ ಸೇವಕನನ್ನು ಇರಿಸಬೇಕು" ಎಂದು ಎಲ್ಲರೂ ನಿಶ್ಚಯಿಸಿ-ದರು. ಆಗ ಗೂಗಿ ಚನ್ನಮಲ್ಲಪ್ಪನೆಂಬವನು, "ಬುದ್ಧಿವಂತರೆ, ನಾನು ಸದ್ಗುರುಗಳ ಆಜ್ಞೆಯನ್ನು ಪರಿಪಾಲಿಸುತ್ತ ಅವರ ಸೇವೆ ಮಾಡಿಕೊಂಡು ಇಲ್ಲಿಯೇ ಇರುವೆನು" ಎಂದನು. ಅದಕ್ಕೆ ಅವರೆಲ್ಲರೂ ಸಮ್ಮತಿಸಿ, "ನೀನು ಶುದ್ಧಮನದಿಂದ ಸದ್ಗುರುವಿನ ಸೇವೆ ಮಾಡಿದ್ದಾದರೆ, ನಿನಗೆ ಗುರು ಕರುಣೆ"

ಯಿಂದ, ಮುಕ್ತಿಯಾಗುವದು. ನೀನೇ ಪ ಮ ಸುಕೃತಿಯು'' ಎಂದು ಸದ್ಗುರುಗಳ ಕಡೆಯಿಂದ, ಚನ್ನಮಲ್ಲಪ್ಪನಿಗೆ ಸನ್ಯಾಸ ದೀಕ್ಷೆ ಕೊಡಿಸಿದರು.

ಒಂದು ದಿನ ಎಲ್ಲ ಸದ್ಭಕ್ತರು, ಶಾಸ್ತ್ರ ಶ್ರವಣ ಮಾಡುವಾಗ್ಗೆ, ಓರ್ವನು ಸ್ವಾಮಿಗಳಿಗೆ ನಮಿಸಿ, ''ಸದ್ಗುರುವೆ, ಪರಮ ಜ್ಞಾನಿಗಳಿಗೆ ವಿಷಯದಿಚ್ಛೆ ಇರುವದೋ ಅಥವಾ ಇರುವದಿಲ್ಲವೋ ?'' ಎಂದು ಬಿನ್ನವಿಸಿಕೊಂಡನು. ಆಗ ಸದ್ಗುರುಗಳು, ನಿಮ್ಮ ಅನುಭವಕ್ಕೆ ಬರುವಂತೆ, ಹೇಳುತ್ತೇನೆ ಕೇಳಿರಿ. ಬಾಲಕರು, ಹಂಚಿನ ಬಿಲ್ಲಿ ಕಟಿದು, ರೊಕ್ಕವನ್ನು ಮಾಡಿ, ಅವುಗಳಿಗೆ ಇವೇ ರೊಕ್ಕವೆಂದು ತಿಳಿದು, ಅವಕ್ಕೆ ಇಚ್ಛಿಸಿ ಆಟವಾಡಿ, ಆಟ ಸಾಕಾದ ನಂತರ, ಅವನ್ನು ಬಿಸುಟಿ, ಮರೆತು, ಮನೆಗೆ ಹೋಗುವಂತೆ, ಜ್ಞಾನಿಯು, ವಿಷಯಗಳ ಮಿಥ್ಯಾ ನಿಶ್ಚಯ ಜ್ಞಾನದಿಂದ, ವ್ಯವಹಾರವು ಸತ್ಯವೆನ್ನುವಂತೆ ಆಟನಾಡಿ ತೋರಿಸುವನು'' ಎಂದು ಬೋಧಿಸಿದರು.

ಹಾಗೆಯೆ ಮತ್ತೊಬ್ಬನು, ಸ್ವಾಮಿಗಳನ್ನು ಕುರಿತು, ''ಗರಗದಲ್ಲಿ ಬ್ರಹ್ಮನಿಷ್ಠರಾದ, ಶ್ರೀ ಮಡಿವಾಳ ಸ್ವಾಮಿಗಳೆಂಬುವರು ಅಂಥಕರಾಗಿ, ಕಡು ವೈರಾಗ್ಯದಿಂದಿರುವರು. ತನ್ನ ದರುಶನಕ್ಕೆ ಬಂದವರಿಗೆಲ್ಲ, ಅವರು ಮನ ಬಂದಂತೆ ಬೇಡುವರಂತೆ ! ಅಂತಪ್ಪ ಸತ್ಪುರುಷರ ದರುಶನವು, ತಮಗೆ ಆಗಿರ–ಬಹುದು. ಆಗಿದ್ದರೆ ತಮಗೂ, ಅವರಿಗೂ ನಡುವೆ ಏನು ವಿಷಯ ನಡೆಯಿತು ? ಎಂಬುದನ್ನು ನಮಗೋಸ್ಕರ ತಾವು ಕರುಣೆಯಿಂದ ಅರುಹಬೇಕು'' ಎಂದು ಪ್ರಾರ್ಥಿಸಿಕೊಂಡನು.

**ಪದ— ೩೬–೬೫ ಗರಗದ ಶ್ರೀ ಮಡಿವಾಳ ಸ್ವಾಮಿಗಳವರ ದರುಶನ**

''ನಾನು ಗೋಕಾವಿ ನದಿಯನ್ನು ದಾಟಿ, ಮಾರ್ಗದಲ್ಲಿ ಪುರ–ಪಟ್ಟಣಗಳನ್ನು ಸಂದರ್ಶಿಸುತ್ತ, ಸಂತೋಷದಿಂದ ಬೆಳಗಾವಿ ಮೇಲಿಂದ, ಗರಗ–ಗ್ರಾಮದ ಹೊರಗಿರುವ ಶ್ರೀಮಡಿವಾಳ ಸ್ವಾಮಿಗಳವರ ಮಠಕ್ಕೆ ಬರುತ್ತಿದ್ದೆನು. ಆ ಸಮಯದಲ್ಲಿ ಸ್ವಾಮಿಗಳು ತಮ್ಮ ಶಿಷ್ಯನಾದ ಘಂಟೆಪ್ಪನೆಂಬವನಿಗೆ, ''ಎಲೋ ಘಂಟ್ಯಾ, ನಾನು ಬತ್ತಲೆ ಇರುವೆನು. ಇಲ್ಲಿಗೆ ಒಬ್ಬ ಮನುಷ್ಯ ಬರುವನು. ಅದಕ್ಕಾಗಿ ಬೇಗನೆ ನನ್ನ ಕೌಪೀನ ಕಪನಿ ಕೊಡೋ'' ಎಂದು ಹೇಳಿದರು. ಅವನು ತಂದು ಕೊಟ್ಟನು. ಅವನ್ನು ಮೈಯೊಳಗೆ ಹಾಕಿಕೊಂಡು ಕುಳಿತರು.

ಅಲ್ಲಿರುವ ಭಕ್ತರು ಇದನ್ನು ಕಂಡು, ''ಇದೇನು ಸ್ವಾಮಿ ? ತಾವು ಲಜ್ಜೆಯನ್ನು ತೊರೆದು ಎಷ್ಟೋ ದಿನಗಳವರೆಗೆ ನಗ್ನದಿಂದಿದ್ದಿರಿ. ಇಂದು ಏಕೆ ಲಜ್ಜೆಯನ್ನು ತಾಳಿದಿರಿ ? ಇಲ್ಲಿರುವ ನಾವೆಲ್ಲರೂ ಮನುಷ್ಯರಲ್ಲನೇನು ?'' ಎಂದು ಕೇಳಿದರು. ಅದಕ್ಕೆ ಮಡಿವಾಳ ಸ್ವಾಮಿಗಳು, ನೀವು ಶೌಚಕ್ಕೆ ಕುಳಿತಿರುವಾಗ್ಗೆ ಪಶುಗಳು ಬಂದರೆ ಲಜ್ಜೆಯನ್ನು ತೊರೆಯುವಿರಿ. ಆದರೆ ಮನುಷ್ಯರು ಬಂದರೆ ನಿಮಗೆ ಲಜ್ಜೆ ಎನಿಸುವದು. ನನ್ನ ಸರಿಸಮಾನ ಮನುಷ್ಯನು ಜಗತ್ತಿನಲ್ಲಿ ಒಬ್ಬನಿರುವನು. ಅವನು ಈ ಹೊತ್ತು ಬರುವನು. ಉಳಿದವರೆಲ್ಲರೂ ಜ್ಞಾನವಿಲ್ಲದ ಮೂಕ ಪ್ರಾಣಿಗಳಂತಿರುವರು. ಅದಕ್ಕಾಗಿ ನಾನು ಅವನೆದುರಿಗೆ ಲಜ್ಜೆಗೆಟ್ಟು ಇರಲಾರೆನು'' ಎಂದರು. ಮಡಿವಾಳ ಸ್ವಾಮಿಗಳು.

ಅಷ್ಟರಲ್ಲಿ ನಾನು ಮಠದ ಬಾಗಿಲದ ಸಮೀಪಕ್ಕೆ ಹೋದೆನು. ಘಂಟೆಪ್ಪನು ''ಅಪ್ಪಾ, ಯಾರೋ ಹೊರಗೆ ಮಹಾತ್ಮರು ಬಂದಿರುವರು'' ಎಂದು ಹೇಳಿದನು ಸ್ವಾಮಿಗಳು, ''ಎಲೇ ಘಂಟ್ಯಾ, ಅವನನ್ನು ಬೇಗನೆ ಒಳಗೆ ಕರಿಯೋ, ಅವನು ಹೇಗಿರುವ ನೋಡುವೆನು'' ಎಂದರು. ಆಗ ಘಂಟೆಪ್ಪನು ನನಗೆ ಒಳಗೆ ಕರೆದನು. ನಾನು ಒಳಗೆ ಹೋಗಿ, ಸ್ವಾಮಿಗಳಿಗೆ ನಮಿಸಿ ನಿಂತುಕೊಂಡೆನು. ಸ್ವಾಮಿಗಳು, "ಸಾಧುವೇ ನಿನ್ನ ಹೆಸರೇನು ?'' ಎಂದು ಕೇಳಿದರು. ''ನನಗೆ ಆರೂಢನೆನ್ನುತ್ತಾರೆ'' ಎಂದು ಹೇಳಿದೆನು. ಅದಕ್ಕೆ ಅವರು ''ಒಮ್ಮೆಲೇ ನನ್ನ ಹೆಸರು ಆರೂಢಾ ಎನ್ನುತ್ತಿ ? ನೀನು ಏಕಕಾಲಕ್ಕೆ ಮೋಡದೊಳಗಿಂದ ಮೂಡಿ ಬಂದಿರುವಿ ಏನು ? ತಾಯಿ ಗರ್ಭದಿಂದ ಹುಟ್ಟಿರುವಿಯೋ ಇಲ್ಲವೋ ? ನಿನ್ನ ತಂದೆ–ತಾಯಿ ಇಟ್ಟಿರುವ ಹೆಸರೇನು ? ಹೇಳಿ'' ಎಂದರು. ''ನಾನು ನಿಜವಾಗಿಯೂ ಮಾಯಾ ಆವರಣ ಮಾಡಿಕೊಂಡು, ಬ್ರಹ್ಮದೊಳಗಿಂದ ಬಂದಿರುವೆನು'' ಎಂದು ಹೇಳಿದೆನು. ಆಗ ಮಡಿವಾಳ ಸ್ವಾಮಿಗಳು, ನನ್ನನ್ನು ಸಮೀಪಕ್ಕೆ ಕರೆದು ಪ್ರೇಮದಿಂದ ಹತ್ತಿರ ಕುಳ್ಳಿರಿಸಿಕೊಂಡರು. ನಂತರ ಮೈಮೇಲೆ ಕೈಯಾಡಿಸಿ. ನನ್ನ ಶರೀರವು ವೈರಾಗ್ಯದಿಂದ ಕೃಶವಾಗಿರುವದನ್ನು ಕಂಡು, ಚಿಂತಿಸುತ್ತ "ಸತ್ಯವಾಗಿ ಇವನು ದೇಹವನ್ನು ದಂಡಿಸಿದ್ದಾನೆ. ಮನಸ್ಸನ್ನು ನಿಗ್ರಹಿಸಿದ್ದಾನೆ ಇವುಗಳಿಲ್ಲದ ಜ್ಞಾನವು ಶುಷ್ಕ ಜ್ಞಾನವಾಗುವದು'' ಎಂದು ತಿಳಿದರು. ಇನ್ನು ಇವನ

ಜ್ಞಾನ ದೃಢತೆ ಹೇಗಿರುವದೆಂಬುದನ್ನು ಪರೀಕ್ಷಿಸಬೇಕೆಂದು ಸ್ವಾಮಿಗಳು ನನಗೆ ಕೆಳಗಿನಂತೆ ಕೇಳಿದರು—

''ನಾನು ಸಂಚಾರಮಾಡುವ ಕಾಲಕ್ಕೆ ಒಂದು ನಗರ ಕಂಡೆ. ಆ ನಗರದ ಎಲ್ಲ ಕಡೆಗೂ ಹಾರಾಡುವ ಮಂಗಗಳೇ ಇದ್ದವು. ಆ ನಗರವನ್ನು ನೀನು ನೋಡಿದಿ ಏನು ?'' ಎಂದು ಕೇಳಿದರು. ನಾನು ಅದನ್ನು ಮನದೊಳಗೆ ಅರಿತು, ''ಈ ದೇಹವೇ ಒಂದು ನಗರವು ಇದರಲ್ಲಿರುವ ಚಪಲ ಚಿತ್ತವೃತ್ತಿಗಳೇ ಮಂಗಗಳು'' ಎಂದು ಹೇಳಿದೆನು. ಸ್ವಾಮಿಗಳು ಸಂತುಷ್ಟರಾಗಿ ಮತ್ತು ನನ್ನ ಯೋಗ ಪರೀಕ್ಷೆ ಮಾಡುವದಕ್ಕಾಗಿ, ಈ ರೀತಿ ಪ್ರಶ್ನೆಮಾಡಿದರು. ''ನಾನು ಸಂಚರಿಸುವಾಗ್ಗೆ ಓರ್ವ ಶ್ರೀಮಂತನ ಮನೆಯನ್ನು ಕಂಡೆನು. ಅದರಲ್ಲಿ ಮೂರು ಅದ್ಭುತವಾದ ನದಿಗಳು ಹರಿದು ಬಂದು ಆ ಮನೆಯ ಪಾಕಶಾಲೆಯಲ್ಲಿ ಕೂಡಿದ್ದವು. ಅವುಗಳ ನೀರಿನಿಂದಲೇ ಅಲ್ಲಿ ಪಾಕಮಾಡುವ ಕಾರ್ಯ ನಡೆದಿತ್ತು. ನಾನು ಚತುರತನದಿಂದ ಆ ಮೂರು ನದಿಗಳನ್ನು ದಾಟಿ ಪಾಕಶಾಲೆಯಲ್ಲಿ ಪಾಕವನ್ನು ಸವಿದು ಹೊರಗೆ ಬರಬೇಕಾದರೆ ಮೂರು ಹರದಾರಿ ಉದ್ದ ಆ ರಸ್ತೆ ಇತ್ತು. ಅಂಥ ಮಂದಿರವು ನಿನಗೇನಾದರೂ ಲಭಿಸಿತ್ತೇನು ?'' ಎಂದು ಕೇಳಿದರು.

"ಈ ದೇಹವೇ ಒಂದು ಮನೆಯು. ತ್ರಿಕೂಟವೇ (ಎರಡೂ ಹುಬ್ಬು-ಗಳ ಮಧ್ಯ) ಆ ಮನೆಯೊಳಗಿರುವ ಪಾಕಶಾಲೆಯು. ಮುಖ್ಯವಾದ ಇಡಾ, ಪಿಂಗಳಾ, ಸುಷುಮ್ನಾ ನಾಡಿಗಳೇ, ಮೂರು ನದಿಗಳು. ಅವುಗಳಿಂದ ರೇಚಕ, ಪೂರಕ, ಕುಂಭಕ ಪ್ರಾಣಾಯಾಮ ಮಾಡುವದೇ, ಪಾಕಕಾರ್ಯವು. ಪಾಕ ಸವಿದದ್ದೇ ನಿರ್ವಿಕಲ್ಪ ಸಮಾಧಿಯ ಆನಂದವು. ಜಾಗ್ರದಾದಿ ಮೂರು ಅವಸ್ಥೆ-ಗಳೇ, ಮೂರು ಹರದಾರಿ ಉದ್ದ ರಸ್ತೆ'' ಈ ಪ್ರಕಾರ ನಾನು ಮನದಲ್ಲಿ ತಿಳಿದು, ಶ್ರೀ ಮಡಿವಾಳ ಸ್ವಾಮಿಗಳಿಗೆ, ಉತ್ತರ ಕೊಟ್ಟದ್ದೇನಂದರೆ, ಇಂಥ ಸುಪ್ರಸಂಗದ ಘನವಾದ ಅನುಭವವು, ತಮಗೆ ಇರುತ್ತಿರಲು, ಯೋಗಿಜನ ವಂದ್ಯನೆಂಬುವ ನಾಮವು, ತಮಗೆ ಯೋಗ್ಯವೇ ಸರಿ. ಆದರೆ ನಾನು, ವಿರತಿಯಿಂದ ಸಂಚರಿಸುತ್ತಿರುವಾಗ್ಗೆ, ಆರು ಪುರಗಳನ್ನು ಕಂಡೆನು. ಒಂದು ಪುರದಲ್ಲಿ ಬರೆ ಸೂಕರ (ಹಂದಿ) ಗಳಿದ್ದವು. ಎರಡನೆಯ ಪುರಕ್ಕೆ ಬರಲು ಅಲ್ಲಿ ಬರೇ ಹಾವುಗಳು ಹರಿದಾಡುತ್ತಿದ್ದವು. ಅವುಗಳನ್ನು ದಾಟಿ ಮುಂದೆ

ಮೂರನೇ ಪುರಕ್ಕೆ ಬರಲು, ಮರದಿಂದ ಮರಕ್ಕೆ ಹಾರಾಡುತ್ತಿರುವ, ಬರೇ ಮಂಗಗಳನ್ನು ಕಂಡೆನು. ಅವುಗಳನ್ನು ನೋಡುತ್ತ ಹಾಗೆ ನಾಲ್ಕನೆಯ ಪುರಕ್ಕೆ ಬಂದೆನು. ಅಲ್ಲಿ ಬರೇ ಖದ್ಯೋತ (ಮಿಂಚುಹುಳ) ಗಳಿದ್ದವು. ಇವೆಲ್ಲವುಗಳನ್ನು ದಿಟ್ಟಿಸುತ್ತ, ಮುಂದೆ ಐದನೇ ಪುರಕ್ಕೆ ಬಂದು, ಅಲ್ಲಿ ಸ್ವಲ್ಪ ವಿಶ್ರಾಂತಿ ತೆಗೆದುಕೊಂಡೆನು. 'ಆದರೆ ಅಲ್ಲಿಯೂ ಬರೇ ಜೀವಂತ ಹೆಣಗಳೇ ಇದ್ದವು. ಮನುಷ್ಯರ ಸುಳಿವೇ ಇದ್ದಿಲ್ಲ' ಎಂದೆನು. 'ಹಾಗಾದರೆ ಮನುಷ್ಯರಿಲ್ಲದ ಆ ಪುರದಲ್ಲಿ ಪ್ರಾಣಿಗಳು ಬದುಕುವದೆಂತು?' ಎಂದು ಮಡಿವಾಳ ಸ್ವಾಮಿಗಳು ಕೇಳಿದರು. ಆಗ ನಾನು ಹೇಳಿದೆನು— 'ಹೇ ಗುರುವೇ ಈ ಐದೂ ಪುರದ ಹೊರಗಿರುವ ಶ್ವಾನಗಳು, ಬೇರೆ ಬೇರೆ ದೇಶಗಳಲ್ಲಿ ಸತ್ತು ಬಿದ್ದಿರುವ ಕತ್ತೆಯ ಮಾಂಸವನ್ನು ಎಳೆತಂದು, ಆ ಸರ್ಪಗಳ ಒಡೆಯನಾದ ಪ್ರಾಣಕೆ ಅರ್ಪಿಸುವವು. ಅವುಗಳನ್ನು ತಿಂದು ಅವೆಲ್ಲ ಜೀವಿಸಿಕೊಂಡಿರುವವು. ನಾನು ಇವೆಲ್ಲ ಪುರಗಳನ್ನು ಪ್ರಯಾಸದಿಂದ ದಾಟುತ್ತ ಆರನೇ ಪುರಕ್ಕೆ ಬಂದೆನು. ಅಲ್ಲಿ ಓರ್ವನು ಸ್ವಪ್ನದಲ್ಲಿ ಮಾಡಿದ ಪಾಕವನ್ನು ಜಾಗ್ರದಲ್ಲಿ ಉಂಡು ಸುಷುಪ್ತಿ ಯಲ್ಲಿ ತೃಪ್ತಿಯನ್ನು ಹೊಂದಿದವನಿದ್ದನು. ಹರುಷದಿಂದ ನಾನು ಅವನ ಚರಣಕ್ಕೆರಗಿದೆನು. ಕೂಡಲೆ ನನಗೆ ಹುಚ್ಚು ತಲೆಗೇರಿ, ಅರುವುದಪ್ಪಿ, ನನ್ನನ್ನು ನಾನೇ ಹರಿದು ತಿಂದೆನು. ಕಡೆಗೆ ನಾನು ಸತ್ತದ್ದನ್ನು ನಾನೇ ಅರಿತು ಮನುಜರನ್ನು ಹುಡುಕುವದಕ್ಕಾಗಿ ದೇಶ ದೇಶಗಳನ್ನು ಅಲೆಯುತ್ತ ಬಂದೆನು. ಎಲ್ಲಿಯೂ ಒಬ್ಬನೂ ನನಗೆ ಭೆಟ್ಟಿಯಾಗಲಿಲ್ಲ. ಹಾಗೆಯೇ ತಿರುಗುತ್ತ ಬರು ತ್ತಿರಲು ಇಲ್ಲಿ ನನಗೆ ನೀನೊಬ್ಬ ಮಾತ್ರ ದೊರಕಿದಿ'' ಎಂದು ಹೇಳಿ ನಮಿಸಿದೆನು.

ಆಗ ಮಡಿವಾಳ ಸ್ವಾಮಿಗಳು, ''ವಾಹವ್ವಾ ! ಶಹಬಾಶ್ ! ಸಿದ್ಧಾ, ನಾನು ಯೋಗಪರವಾಗಿ ಪ್ರಶ್ನೆ ಮಾಡಿದರೆ, ನೀನು ಜ್ಞಾನಪರವಾಗಿ ಅವು ಗಳಿಗೆ ಚನ್ನಾಗಿ ಉತ್ತರ ಕೊಟ್ಟೆ. ಅಹಹಾ ! ಇದು ಸತ್ಯವಾಗಿ ಸ್ತುತ್ಯ (ಪ್ರಶಂಸನೀಯು) ಪ್ರಸ್ಥಾನತ್ರಯಗಳ ಸಾರವನ್ನೇ ಒಳಗೊಂಡಿರುವದು. ನೀನು ಶ್ರೀ ಗಜದಂಡ ಗುರೂತ್ತಮರ ಹತ್ತರ ಉಪದೇಶ ಪಡೆದು ಮನನಾದಿಗಳನ್ನು ಮಾಡಿದ್ದಕ್ಕೆ ಸಾರ್ಥಕವಾಯಿತು. ಗುರುಗಳು ನಿನಗೆ ಸಿದ್ಧಾರೂಢನೆಂಬ ಹೆಸರನ್ನಿಟ್ಟದ್ದು ಬಹು ಯೋಗ್ಯವಾದುದು.

ಇರಲಿ, "ಚದುರನೇ ಯೋಗವಾಶಿಷ್ಠದಲ್ಲಿ' ಅನ್ನವು ಪಾತ್ರೆಯೊಳಗಿದ್ದಾಗ್ಯೂ ಅದರ ರುಚಿಯು ಗೊತ್ತಾಗುವದಿಲ್ಲ. ಹೊಟ್ಟೆಯೊಳಗೆ ಹೋದ ಮೇಲೆಯೂ ತಿಳಿಯುವದಿಲ್ಲ. ಪರಂತು ನಾಲಿಗೆಯ ಮೇಲೆ ಇದ್ದಾಗ ಮಾತ್ರ ಗೋಚರಿಸುವದು ಎಂದು ಬರೆದಿರುವದರ ಅಭಿಪ್ರಾಯ ವೇನಿರುವದು ?'' ಎಂದು ಪ್ರಶ್ನೆ ಮಾಡಿದರು. ನಾನು ಉತ್ತರ ಕೊಟ್ಟಿದ್ದೇನಂದರೆ, ಪೂರ್ವಾವಸ್ಥೆಯಲ್ಲಿ ಅಂದರೆ ಅಜ್ಞಾನದಶೆಯಲ್ಲಿ ಜೀವನಿಗೆ ಸುಖವು ತೋರಲಾರದು. ಇನ್ನು ಜೀವನು ಶ್ರವಣಾದಿ ಸಾಧನಗಳಿಂದ, ಸಿದ್ಧವಸ್ತುವೇ ತಾನಾದ ವಿದೇಹ ಮುಕ್ತನಿಗೂ, ಆ ಸುಖವು ದೊರೆಯಲಾರದು. ಮಧ್ಯಾವಸ್ಥೆ ಎನಿಸುವ ಸರಸವಾದ ಜೀವನ್ಮುಕ್ತಿಯ ಸ್ಥಿತಿಯಲ್ಲಿ ಮಾತ್ರ ಆ ಸಹಜಾನಂದದ ಅನುಭವವು ಗೋಚರಿಸುವದು'' ಎಂದು ಉತ್ತರ ಕೊಟ್ಟನು ನಾನು ಕೊಟ್ಟ ಉತ್ತರವನ್ನು ಮಡಿವಾಳ ಸ್ವಾಮಿಗಳು ಕೇಳಿ, ನೋಡಿದಿರೇನ್ರಯ್ಯಾ ? ಮನುಷ್ಯನೆಂಬುವನ ಯೋಗ್ಯತೆಯನ್ನು ? ಇವನು ಹೇಳಿದ ಗ್ರಂಥದ ಗೂಡಾರ್ಥವು, ಎಷ್ಟು ಅನುಭವಗಮ್ಯವಾಗಿರುವದು ! ಪರಶಿವನೇ ಈ ಧರೆಗೆ ಅವತರಿಸಿ ಬಂದಿರುವನು. ಪರಶಿವನ ಆಜ್ಞೆಯಂತೆ ನಾನಾದರೂ, ಮುಮುಕ್ಷು-ಗಳ ಉದ್ಧಾರಕ್ಕಾಗಿ ಈ ನಾಡಿನಲ್ಲಿ ಅವತರಿಸಿರುವೆನು'' ಎಂದು ಹೇಳಿ ನನ್ನನ್ನು ಮನ್ನಿಸಿ ತೃಪ್ತಿಗೊಳಿಸುತ್ತ ಒಂದು ತಿಂಗಳ ಪರಿಯಂತ ತಮ್ಮಲ್ಲಿಯೇ ಇರಿಸಿಕೊಂಡು ಆಶೀರ್ವದಿಸಿ ಹೋಗಲಿಕ್ಕೆ ಅಪ್ಪಣೆ ಕೊಡಿಸಿದರು. ಮುಂದೆ ನಾನು ಹಾಗೆಯೇ ಸಂಚರಿಸುತ್ತ ಇಲ್ಲಿಗೆ ಬಂದೆನು, ಎಂದು ಸಿದ್ಧಾರೂಢ ಸದ್ಗುರುಗಳು ಎಲ್ಲ ಭಕ್ತಮಂಡಳಿಗೆ ಅರುಹಿದರು.

ಸದ್ಭಕ್ತರೆಲ್ಲರೂ ಸದ್ಗುರುವಿನ ಬಾಯಿಯಿಂದ ಸರ್ವ ಸಂಗತಿಯನ್ನು ಅರಿತುಕೊಂಡು "ಗುರುನಾಥಾ, ನಮ್ಮನ್ನೂ ಸಹ ಗರಗ ಗ್ರಾಮಕ್ಕೆ ಕರೆದು ಕೊಂಡು ಹೋಗಿ ಆ ಮಹಾಸ್ವಾಮಿಗಳವರ ಸಂದರ್ಶನ ಮಾಡಿಸಬೇಕು', ಎಂದು ವಿಜ್ಞಾಪಿಸಿಕೊಂಡರು. ಆ ಬಳಿಕ ಒಂದು ಸಮಯ ಸಾಧಿಸಿ ಸಿದ್ಧರು ಎಲ್ಲ ಭಕ್ತಮಂಡಳಿಯನ್ನು ಕರೆದೊಯ್ದು ಶ್ರೀ ಮಡಿವಾಳ ಸ್ವಾಮಿಗಳವರ ಆನಂದ ಸಂದರ್ಶನ ಮಾಡಿಸಿದರು. ಮಡಿವಾಳ ಸ್ವಾಮಿಗಳು ಅಲ್ಲಿ ಬಂದ ಭಕ್ತರಿಗೆಲ್ಲ ''ಸಿದ್ಧನು ಈಶ್ವರನ ಅವತಾರನಿರುವನು. ನೀವೆಲ್ಲರೂ ಇವನ

ಸೇವೆಯನ್ನು ಮನಮುಟ್ಟಿ ಮಾಡುತ್ತ, ಇವನ ಕರುಣೆಯಿಂದ ಮುಕ್ತರಾಗಿರಿ'' ಎಂದು ಬೋಧಿಸಿದರು. ಇತ್ತ ಸಿದ್ಧನಿಗೆ ಬೋಧಿಸಿದ್ದೇನಂದರೆ, ಇನ್ನು ನೀನು ಸಂಚಾರ ಸಾಕುಮಾಡು, ಹುಬ್ಬಳ್ಳಿಯಲ್ಲಿಯೇ ವಾಸಮಾಡು. ಆ ಹುಬ್ಬಳ್ಳಿ ಯಲ್ಲಿರುವ ಜನಗಳು ತಾವು ತಿರಿದುಂಡರೂ, ನಾವು ದೊರೆಗಳೆಂಬುದನ್ನು ಮಾತ್ರಬಿಡರು. ಅದುಕಾರಣ ಬಹು ಜಾಗ್ರತೆಯಿಂದಿರು. ಸರ್ವರಲ್ಲಿಯೂ ಸಮಭಾವದಿಂದಿದ್ದು ಸರ್ವರಿಗೂ ಸಂತೋಷವನ್ನುಂಟುಮಾಡು ಮತ್ತು ನಿನಗೆ ಇನ್ನೊಂದು ಕಿವಿಮಾತು ಹೇಳುತ್ತೇನೆ. ಚನ್ನಾಗಿ ಜ್ಞಾಪಕದಲ್ಲಿರಲಿ. ''ನಿನ್ನ ಕೈ, ತೊಡೆ, ಬಾಯಿ ಇವು ಮೂರು, ನಿನ್ನ ಸ್ವಾಧೀನದಲ್ಲಿರಲಿ. ಚಿತ್ರ ಪಟದಲ್ಲಿರುವ ಹೆಣ್ಣುಗೊಂಬೆಯನ್ನು ಕೂಡ ಕಣ್ಣೆತ್ತಿ ನೋಡದಿರು. ಹುಬ್ಬಳ್ಳಿ ಜನರು ನಿನ್ನನ್ನು ಮೊದಲಿಗೆ ಮೇಲಕ್ಕೇರಿಸಿ, ಬಳಿಕ ಕೆಳಗೆ ಹಾಕಿ ತುಳಿಯು ವರು. ಬಲು ಎಚ್ಚರ'' ಎಂದು ಎಚ್ಚರಿಸಿದನು. ವಿರತಿ ಬಲಿತ ಧೀರ ಸಿದ್ಧರು ಅದರ ಭಯವು ತಿಲಮಾತ್ರವೂ, ಇರುವದಿಲ್ಲ. ತಮ್ಮ ಕೃಪೆಯಿಂದ, ವಿಷಯಗಳನ್ನೆಲ್ಲ ಧಿಕ್ಕರಿಸಿ ಬಿಟ್ಟಿದ್ದೇನೆ'' ಎಂದು ಉತ್ತರಿಸಿದರು. ಪುನಃ ಮಡಿವಾಳ ಸ್ವಾಮಿಗಳು "ಸಿದ್ಧಾ, ಭಕ್ತರು ನಿನಗಿತ್ತ ಕಾಣಿಕೆಯನ್ನು ಅನ್ಯರಿಗೆ ಕೊಡದೆ, ಅದನ್ನು ನನಗೆ ಕಳಿಸಿಕೊಡು'' ಎಂದರು. ಸಿದ್ಧರು, ಮರಳಿ ಮುಗುಳು ನಗೆಯಿಂದ, "ಸ್ವಾಮೀ, ತಾವು ವಿರಕ್ತರೆಂದು ತಿಳಿದಿದ್ದೆನು. ಸತ್ಯವಾಗಿ ದ್ರವ್ಯವನ್ನು ಸ್ವೀಕರಿಸಿದರೆ, ಮೊದಲು ನನಗಷ್ಟು ಹಣವನ್ನು ಕೊಡಿರಿ. ಅದರಿಂದ ದೊಡ್ಡ ವ್ಯಾಪಾರ ಮಾಡಿ ಸಂಗ್ರಹಿಸಿದ ಅಪಾರ ಹಣವನ್ನು ತಮಗೆ ತಂದೊಪ್ಪಿಸುವೆನು'' ಎಂದನು.

ಇದರ ತಾತ್ಪರ್ಯವಿಷ್ಟೆ ! ಕಾಣಿಕೆ ಎಂಬ ಬ್ರಹ್ಮಜ್ಞಾನವನ್ನು ಅನಧಿಕಾರಿಗಳಿಕೆ ಬೋಧಿಸಬಾರದು. ಅದು ಬ್ರಹ್ಮಜ್ಞಾನಿಗಳಲ್ಲಿ ರಕ್ಷಣೆಯಾಗತಕ್ಕದ್ದು ಎಂಬ ಭಾವ. ಸಿದ್ಧನ ಇಂಥ ಚತುರ ಭಾಷಣವನ್ನು ಕೇಳಿ, ಮಡಿವಾಳ ಸ್ವಾಮಿಗಳ ಹೃದಯದಲ್ಲಿ ಆನಂದ ತುಂಬಿ, ಪ್ರೇಮವು ಹೊರಸೂಸುತ್ತ, ''ಸಿದ್ಧಾ ! ನೀನು ನನ್ನನ್ನು ಎಂದೂ ಮರೆಯಬೇಡ, ಕಂಡಿಯಾ'' ಎಂದು ಸಿದ್ಧರನ್ನು, ಗಟ್ಟಿಯಾಗಿ ಅಪ್ಪಿಆಲಂಗಿಸಿದರು ಮತ್ತು ಅವರನ್ನು ಕಳಿಸುವದಕ್ಕಾಗಿ ಅವರೊಡನೆ ತಾವೂ ಬಹು ದೂರದವರೆಗೆ ನಡೆದರು. ಆಗ ಸಿದ್ಧಾರೂಢರು

ಅಂಧ-ವೃದ್ಧರಾದ, ಮಡಿವಾಳ ಸ್ವಾಮಿಯವರ, ಅಡಿದಾವರೆಗಳನ್ನು ಹಿಡಿದು ನಮಿಸಿ, ಪ್ರಾರ್ಥಿಸಿ, ಹಿಂದಿರುಗಿದರು ಶಿಷ್ಯರು ಅವರ ಕೈ ಹಿಡಿದು, ಮಠಕ್ಕೆ ಕರೆದುಕೊಂಡು ಬಂದರು ಮಡಿವಾಳ ಸ್ವಾಮಿಗಳು ಗಾದಿಯ ಮೇಲೆ ಕುಳಿತುಕೊಂಡು, ಶಿಷ್ಯರನ್ನು ಕುರಿತು. ಸಿದ್ಧರ ಗುಣಗಾನಗಳನ್ನು ಬಹು ಪ್ರಕಾರ ವರ್ಣಿಸುತ್ತ ಕಣ್ಣುಗಳಿಂದ ಅಶ್ರುಗಳನ್ನು ಸುರಿಸಹತ್ತಿದರು. ರಾಮಚಂದ್ರನು ವನವಾಸಕ್ಕೆ ಹೋದಕೂಡಲೆ, ದಶರಥರಾಜನ ಅವಸ್ಥೆಯಾದಂತೆ ಈ ಸಮಯದಲ್ಲಿ ಮಡಿವಾಳಪ್ಪನವರ ಸ್ಥಿತಿಯೂ ಆಯಿತು. ಇತ್ತ ಆರೂಢರು, ತಮ್ಮ ಶಿಷ್ಯಮಂಡಳಿಯನ್ನೊಡಗೊಂಡು ಬರುವಾಗ್ಗೆ, ದಾರಿಯಲ್ಲಿ ಸಂತೋಷದಿಂದ ಮಡಿವಾಳಪ್ಪನವರ, ಶುಭಕರ ವೃತ್ತಾಂತವನ್ನು ಹೇಳುತ್ತ, ಮಾರ್ಗದಾಯಾಸವಿಲ್ಲದೆ, ಮಹಾತ್ಮರ ದರುಶನದ ಆತ್ಮಾನಂದದಿಂದ ಎಲ್ಲರೂ ಸಿದ್ಧಾಶ್ರಮಕ್ಕೆ ಬಂದು ಹೊಂದಿಕೊಂಡರು.

ಮಂಗಲ— ಮೆರೆವ ವೇದ ಪುರಾಣ ಶಾಸ್ತ್ರಸು |
ಶರಧಿಯಂ ಮಥಿಸುತ್ತವಮೃತವ |
ದೊರಕಿಸುತ ಸುರನಿವಹಕಂ ಮತ್ಸರ ಮುದಿಸುವಂತೆ ||

ಸರಸ ಕರುಣನೆ ಭೂಮಿ ಜನರಿಂ |
ಗಿರದೆ ಯಿತ್ತುದ್ಧಾರ ಮಾಡುವ |
ಪರಮ ಸಿದ್ಧಾರೂಢ ಪದ ಪದ್ಮಕ್ಕೆ ನಮಿಸುವೆನು ||

ಇತಿ ಶ್ರೀ ಸಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ
ಲೀಲಾ ಚರಿತ್ರ ಕಲ್ಪದ್ರುಮದೊಳ್ ರಥೋತ್ಸವವೆಂಬ
೩೦ ನೇಯ ಅಧ್ಯಾಯ ಸಮಾಪ್ತಿ

|| ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ||



# ಸದ್ಬೋಧ ಕಾಂಡ

## ಅಧ್ಯಾಯ ೩೧

ಈ ಅಧ್ಯಾಯದಲ್ಲಿ ಗೌರಿಹುಣ್ಣಿವೆ ಬಂದಿರಲು, ಬಹು ಉತ್ಸವದಿಂದ ಜಾತ್ರೆಯನ್ನು ಮಾಡಿದ್ದು. ನವಲಗುಂದ ನಾಗಲಿಂಗಪ್ಪನವರು ಪ್ರಕಟರಾಗಿ ವಸ್ತ್ರದಾನ ಮಾಡಿದ್ದು.

ಒಂದು ದಿನ ಒಬ್ಬ ಬಾಲಕನು ಬಂದು ಅನುಗ್ರಹ ಮಾಡೆಂದು ಕೇಳಲು ಅವನ ಅಧಿಕಾರವನ್ನು ಚನ್ನಾಗಿ ಪರೀಕ್ಷಿಸಿ ಅವನಿಗೆ ಈಶಾವಾಶ್ಯೋಪನಿಷತ್ತು ಕರ್ಮಪರವಲ್ಲ, ಜ್ಞಾನಪರವೇ ನಿಜವೆಂದು ಹದಿನೆಂಟು ಮಂತ್ರಗಳನ್ನು ಅರ್ಥ ಮಾಡಿ ಹೇಳಿ ಅವನಿಗೆ ಕಬೀರದಾಸನೆಂದು ಹೆಸರಿಟ್ಟು ತನ್ನ ಶಿಷ್ಯನನ್ನಾಗಿ ಮಾಡಿಕೊಂಡ ವಿಷಯಗಳನ್ನು ವರ್ಣಿಸಲಾಗಿದೆ.

ಸ್ತೋತ್ರ— ಸರಸ ನಿಜಹೃದಯಾಂಬು ನಿಧಿಯೊಳ್ ।
ಪರಮ ಸುವಿಚಾರದ ಮಥನದಿಂ ।
ದೊರೆತ ಸಿದ್ಧಾರೂಢ ಭಾರತಿ ಚರಿತವೆಂತೆಂಬ ॥
ಮೆರೆವಮೃತಮುಂ ಭೂವಲಯದೊಳ್ ।
ನರರ ಜನ್ಮೋದ್ಧಾರಣಾರ್ಥಕೆ ।
ಕರುಣದಿಂ ತೆಗೆಸಿತ್ತ ಶಿಷ್ಯ ಕಬೀರರಿಂಗೆ ನಮಿಪೆಂ ॥

## ಪದ್ಯ— ೧–೧೯ ಜಾತ್ರೆ ಮಾಡುವದನ್ನು ನೇಮಿಸಿದ್ದು ಮತ್ತು ನಾಗಲಿಂಗ–ಸಿದ್ಧಾರೂಢರ ಸಂದರ್ಶನ

ಹೀಗೆ ಭಕ್ತರು, ಶಾಸ್ತ್ರ ಶ್ರವಣ ಭಜನಾದಿಗಳಲ್ಲಿ ಸಂತೋಷದಿಂದ ಕಾಲ ಕಳೆಯುತ್ತಿರಲು ಗೌರೀಹುಣ್ಣಿವೆ ಬಂದಿತು. ಆಗ ಪ್ರಮುಖರೆಲ್ಲರು ಹೋದ ವರುಷದಂತೆ ಈ ವರುಷವು ರಥೋತ್ಸವವನ್ನು ಒಳ್ಳೇ ವಿಜೃಂಭಣೆಯಿಂದ ಸಾಂಗಗೊಳಿಸಬೇಕೆಂದು ಸಕಲ ಸಾಮಗ್ರಿಗಳನ್ನು ಸಿದ್ಧಪಡಿಸಿದರು. ಇದು ಅಲ್ಲದೆ ಕಾರ್ತಿಕ ಶುದ್ಧ ನವಮಿಯಿಂದ ಹುಣ್ಣಿಮೆಯವರೆಗೆ ಮತ್ತು ಶ್ರಾವಣ ಬಹುಳ ನವಮಿಯಿಂದ ಅಮವಾಸ್ಯದವರೆಗೆ ಸಪ್ತಾಹ ಹಚ್ಚಿ, ಪ್ರಾತಃಕಾಲ ಶಾಸ್ತ್ರಶ್ರವಣ, ಮಧ್ಯಾನ್ಹಕ್ಕೆ ಅನ್ನಸಂತರ್ಪಣೆ, ಸಾಯಂಕಾಲ ಕೀರ್ತನೆ, ಮಹಾಪೂಜೆ, ಅನಂತರ ಅನ್ನಸಂತರ್ಪಣೆ ಇದರಂತೆ ಪ್ರತಿವರುಷವೂ ನೆರ ವೇರಿಸಬೇಕೆಂದು ನಿಶ್ಚಯಿಸಿದರು. ಅದರಂತೆ ಸದ್ಗುರು ಸಿದ್ಧಾರೂಢ ಜಾತ್ರೆ ಯನ್ನು ಅಸಂಖ್ಯಾತ ಭಕ್ತರನ್ನೊಡಗೊಂಡು ಬಹು ಸಂಭ್ರಮದಿಂದ ನೆರವೇರಿಸಿ ಮುಕ್ತಾಯಗೊಳಿಸಹತ್ತಿದರು.

### ನವಲಗುಂದ ನಾಗಲಿಂಗಪ್ಪನ ಸಂದರ್ಶನ

ಒಂದು ದಿನ ಓರ್ವ ಸದ್ಭಕ್ತನು, ಭೋಜನಕ್ಕೆಂದು ಸಿದ್ಧರನ್ನು ತನ್ನ ಮನೆಗೆ ಕರೆತಂದನು. ಹೋಗುವ ಕಾಲಕ್ಕೆ ಕಲಘಟಗೆಯ ಮಾರ್ಗದಿಂದ ಶ್ರೀ ನಾಗಲಿಂಗಪ್ಪನೆಂಬ ಸತ್ಪುರುಷನು, ತನ್ನ ಚಲುವ ಚಟ್ಟಿನ ಪಲ್ಲಕ್ಕಿಯಲ್ಲಿ ಕುಳಿತು ಬರುವಾಗ, ಸಿದ್ಧಾರೂಢರನ್ನು ಕಂಡನು.. ಆಗ ತನ್ನ ಹತ್ತರ ಇದ್ದವ- ರಿಗೆ ಹೇಳಿದನು. ''ಈಶ್ವರನು ಭುವಿಯ ನಟನೆಯನ್ನು ಅರಿಯಲಿಕ್ಕೂ, ಮತ್ತು ತ್ರಿಗುಣಾತ್ಮಕ ಪ್ರಕೃತಿಯ ಜನರನ್ನು, ಕರ್ಮ, ಉಪಾಸನ, ಜ್ಞಾನ- ಗಳಿಂದ ಪೊರೆಯುತ್ತ, ನಿಜವಾದ ಅದ್ವೈತ ಧರ್ಮವನ್ನು ಸ್ಥಾಪನೆಗೊಳಿಸ- ಬೇಕೆಂದು, ದೇವತೆಗಳೆಲ್ಲರನ್ನು ವಂಚಿಸಿ ಕೈಲಾಸವನ್ನು ಬಿಟ್ಟು ಸಾಧು- ರೂಪದಿಂದ ಈ ಧರೆಗೆ ಅವತರಿಸಿ, ಹುಬ್ಬಳ್ಳಿಪುರದಲ್ಲಿ ಸಿದ್ಧಾರೂಢನೆಂಬ ನಾಮದಿಂದ ಮೆರೆಯುತ್ತಿರುವನು'' ಹೀಗೆ ಅಂದವನೇ ಭರ್ರನೇ ತನ್ನ ಪಲ್ಲಕ್ಕಿ- ಯನ್ನು ಇಳಿದು, ಸಿದ್ಧನಲ್ಲಿಗೆ ಬಂದನು. ಅವನನ್ನು ಮುಟ್ಟಿ, ಅವನು ಹೊದ್ದುಕೊಂಡಿರುವ ಧೋತರವನ್ನು ಸರ್ರನೆ ಸೆಳೆದು, ಚರಚರನೆ

ಹರಿದು, ಐದು ತುಂಡು ಮಾಡಿದನು. ಅದರೊಳಗೆ ಒಂದನ್ನು ಗಿಡಕ್ಕೆ ತೂಗುಹಾಕಿದನು. ಒಂದನ್ನು ಗಾಳೀಪಟದಂತೆ ಹಾರಿಸಿಬಿಟ್ಟನು. ಮತ್ತೊಂ-ದನ್ನು ಕಡ್ಡಿಗೀಕೆರೆದು ಸುಟ್ಟನು. ಇನ್ನೊಂದನ್ನು ಕೆರೆಯಲ್ಲಿ ತೇಲು ಬಿಟ್ಟನು. ಉಳಿದದ್ದೊಂದನ್ನು ಭೂಮಿಯೊಳು ಹೂಳಿದನು.

ಬಳಿಕ ತಾನು ಹೊತ್ತುಕೊಂಡಿದ್ದ ಬಿಳಿಯ ಕಂಬಳಿಯನ್ನು ಬಹು ಪ್ರೀತಿಯಿಂದ ಸಿದ್ಧನಿಗೆ ಹೊದಿಸಿದನು ಮತ್ತು ಅವನನ್ನು ತನ್ನ ಚಟ್ಟಿನ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿದನು. ಅದನ್ನು ಕಂಡು ಸಿದ್ಧನು, ''ಸದಯನೇ ಕುಳಿತವರಾರು ? ನಿಂತವರಾರು ? ಮತ್ತು ಮುದದಿಂದ ಇದನ್ನು ಹೊತ್ತ-ವರಾರು ? ಎಂದನು. ಅಷ್ಟರಲ್ಲಿ ಏನು ಚಮತ್ಕಾರವಾಯಿತೆಂದರೆ, ಎತ್ತ ನೋಡಿದರೂ, ನಾಗಲಿಂಗಪ್ಪನೇ ಕಾಣಹತ್ತಿದನು. ಆಗ ಸುರರು ಪುಷ್ಪದ ಮಳೆ ಸುರಿಸಿದರು. ಅದರೊಂದಿಗೆ ದೇವದುಂದುಭಿಗಳು ಮೊಳಗಿದವು ಶಿವ-ಶಕ್ತಿಯರು ಧರಣಿಗೆ ಅವತರಿಸಿ ಸಾನುರಾಗದಿಂದ ಲೀಲೆ ಮಾಳ್ಪುದನ್ನು ಸುರ ನರರೆಲ್ಲರೂ ಕಂಡು ಧನ್ಯರಾದೆವೆಂಬುದೊಂದು ವಾಣಿಯು ನಭದೊಳಗಿಂದ ಕೇಳಿಬಂತು.

ಬಳಿಕ ಸಿದ್ಧರ ಶಿಷ್ಯನೋರ್ವನು ಲಲಿತವಾಣಿಯಿಂದ, ''ನಮ್ಮ ಗುರು-ಗಳು ನಮಗೆ ಹೇಳದೆ ಎತ್ತ ಹೋದರು ? ಸ್ವಾಮಿ'' ಎಂದು ಕೇಳಿದನು. ನಾಗಲಿಂಗಸ್ವಾಮಿ ''ಎಲ್ಲ ಕಡೆಗೂ ಎಲ್ಲರನ್ನು ಕಾಯುವ ಸದ್ಗುರುವರನನ್ನು ನೀನು ತಿಳಿಯಲಾರೆ ! ಅದಕ್ಕೇನು ಮಾಡುವದು ? ಆ ಮಾತಿರಲಿ, ಈಗ ನಿಮ್ಮ ಗುರುಗಳು ಕಡೇ ಓಣಿಯಲ್ಲಿ ವಿಷಮ ಜ್ವರದಿಂದ ಪೀಡಿತಳಾದ ಗುರು-ಶಾಂತವ್ವನನ್ನು ನೋಡುವದಕ್ಕಾಗಿ ಹೋಗಿರುವರು. ಅವರ ಕೃಪೆಯಿಂದ ಈಗ ಅವಳು ಮರದಿಂದ ಮುಕ್ತಳಾಗಿರುವಳು. ನಿಮ್ಮ ಗುರುಗಳು ಮರಳಿ ಈಗಲೇ ಬರುವರು'' ಎಂದನು. ಅಷ್ಟರೊಳಗೆ ಸಿದ್ಧರು ಎಲ್ಲರ ಮಧ್ಯದಲ್ಲಿಯೇ ಇದ್ದರು.

ಬಳಿಕ ಗುರುಶಾಂತವ್ವನೆಂಬ ಸದ್ಭಕ್ತರು ಅತಿನಿಷ್ಠೆಯಿಂದ ಅಲ್ಲಿಗೆ ಬಂದು ''ನಾನು ಈ ಶ್ರೇಷ್ಠ ಸದ್ಗುರುವಿನ ಕೃಪೆಯಿಂದ ಮರಣಬಾಧೆಯಿಂದ ಪಾರಾಗಿ ಮರಳಿ ಹುಟ್ಟಿಬಂದಂತಾಯಿತು'' ಎಂದು ನುಡಿದು ನಾಗಲಿಂಗ

ಸ್ವಾಮಿಗಳಿಗೆ ನಮಿಸಿದಳು. ಅವರು ಆಶೀರ್ವದಿಸಿದರು. ಅಷ್ಟರಲ್ಲಿ ಜಗಾ-ಹೊತ್ತುಕೊಂಡು ಬರುತ್ತಿರುವ ಜೋಗುತಿಯನ್ನು ನಾಗಲಿಂಗಪ್ಪನು ಕಂಡನು. ಕೂಡಲೆ ಅದನ್ನು ಕಸಿದುಕೊಂಡು ನೆಲಕ್ಕೆಪ್ಪಳಿಸಿ, "ಉಧೋ ಉಧೋ" ಎಂದು ಅನ್ನುತ್ತ ಅವಳ ಸುತ್ತಲೂ ಐದು ಪ್ರದಕ್ಷಿಣೆ ಹಾಕಿದನು. ಬಳಿಕ ತನ್ನ ಸಡಗರದ ಪಲ್ಲಕ್ಕಿಯಲ್ಲಿ ಕುಳಿತು ಕಡು ಸೊಬಗನ್ನು ಬೀರುತ್ತ ಧಾರವಾಡದ ದಾರೀ ಹಿಡಿದು ನಡೆದನು.

### ನಾಗಲಿಂಗಪ್ಪನು ಪುನಃ ಪ್ರಕಟನಾಗಿ ವಸ್ತ್ರದಾನ ಮಾಡಿದ್ದು

ಬಳಿಕ ಸಿದ್ಧರು ಊಟಕ್ಕೆ ಕರೆಯಬಂದ ಸದ್ಭಕ್ತನ ಮನೆಗೆ ಪ್ರಸಾದ ಸೇವಿಸಲಿಕ್ಕೆ ಬಂದಿದ್ದರು. ಅಲ್ಲಿ ಭೋಜನ ಕಾರ್ಯವು ಸಾಂಗತವಾಗಿ ಸಾಗಿತ್ತು. ನಾಗಲಿಂಗಪ್ಪನು ಯಾವ ಮಾಯೆದಿಂದಲೋ ಬಂದು ಆ ಮನೆಯೊಳಗಿನ ಎರಡು ಧೋತರ ಹೊರೆಯನ್ನು ಹೊರಗೆ ತಂದು ಬಡವರಿಗೆ ಕೊಡ ಹತ್ತಿದನು. ಅದನ್ನು ಮನೆಯ ಮಾಲಕನು ಕಂಡು ಕೋಪಗೊಂಡು "ಇವನು ನನ್ನ ಮನೆ ಹಾಳುಮಾಡುವನು" ಎಂದು ತಿಳಿದು ಹೊಡೆಯಹೋದನು. ಆಗ ಸದ್ಗುರು ಸಿದ್ಧನು "ಏನಿದಯ್ಯಾ ? ಸಾಧುವರನನ್ನು ಹೊಡೆದರೆ ನಿನ್ನ ವಂಶವೇ ನಾಶವಾದೀತು ! ನಿನ್ನ ಏಳ್ಗೆಗಾಗಿ ಬಂದೊದಗಿದ ಸುಸಮಯ-ವಿದೆಂದು ತಿಳಿ. ಈಗ ನಿನಗೆ ಹಾನಿಯಾದಂತೆ ತೋರಿದರೂ, ಒಂದು ವರುಷ ದೊಳಗಾಗಿ ಸದಯ ನಾಗಲಿಂಗನ ಕೃಪಾಬಲದಿಂದ ನಿನಗೆ ದೊಡ್ಡದೊಂದು ಜವಳೀ ಅಂಗಡಿ ಸ್ಥಾಪಿಸುವ ಬಲಬರುವದು" ಎಂದು ಬೋಧಿಸಿದರು. ಆಗ ಆ ಭಕ್ತನು ಸದ್ಗುರುವಿನ ಅಮೃತವಾಣಿಯನ್ನಾಲಿಸಿ, ಸಂತೋಷಗೊಂಡು ನಾಗಲಿಂಗೇಶ್ವರನ ಚರಣಕ್ಕೆ ಹಣೆಹಚ್ಚಿ ನಮಿಸಿದನು. ಆಗ ನಾಗಲಿಂಗ ಸ್ವಾಮಿಗಳು ಕೃಪಾಶೀರ್ವಾದ ಮಾಡುತ್ತ ಅಲ್ಲಿಯೇ ಅದೃಶ್ಯರಾದರು. ಇತ್ತ ಸಿದ್ಧಾರೂಢರು ಭಕ್ತರನ್ನೊಡಗೊಂಡು ಮಠಕ್ಕೆ ಹಿಂದಿರುಗಿದರು.

### ಪದ— ೨೦-೬೨ ಕಬೀರನಿಗೆ ಈಶಾವಾಸ್ಯೋಪನಿಷತ್ತು ಬೋಧಿಸಿದ್ದು

ಒಂದು ದಿನ ಸಿದ್ಧಾರೂಢ ಸದ್ಗುರುಗಳು ಶಿಷ್ಯರುಗಳಿಗೆ ಸಮುಚಿತ್ತದಿಂದ ಶಾಸ್ತ್ರ ಶ್ರವಣ ಮಾಡಿಸುತ್ತಿದ್ದರು. ಆ ಸಮಯಕ್ಕೆ ಓರ್ವ ಬಾಲಕನು ಬಂದು ಸಾಷ್ಟಾಂಗದಿಂ ವಂದಿಸಿ, "ಶ್ರೀಮತ್ ಅನಾದಿ ಚಿದ್ಘನಸ್ವರೂಪನಾದ ಸದ್ಗು

ರುವೇ, ಈ ಭವದಾವದಲ್ಲಿ ತೊಳಲಿ, ಬಳಲಿ, ಬೆಂಡಾಗಿ ಕಡುದುಃಖದಿಂದ ಬಲುನೊಂದಿದ್ದೇನೆ. ಈ ದುಃಖವನ್ನು ನೀಗಿಸಿ ನಿತ್ಯಸುಖವನ್ನು ಕೊಡುವಾತನು ನೀನೊಬ್ಬನಲ್ಲದೆ ಅನ್ಯಬೇರೊಬ್ಬರೂ ಬೇರೊಂದುಪಾಯವೂ ಇಲ್ಲ. ವೆಂದು ವೇದಾಗಮುಗಳು ಕೂಗುವವು. ಸಜ್ಜನರಾದ ಸಕಲರೂ ಬಣ್ಣಿಸುವರು ಇದೆಲ್ಲವನ್ನು ಕೇಳಿ, ಅಂತಪ್ಪ ಸದ್ಗುರುಪರನನ್ನು ಅರಸುವದಕ್ಕಾಗಿ ಅನೇಕ ದೇಶ ಕೋಶಗಳನ್ನು ಸಂಚರಿಸುತ್ತ ಬರುವಾಗ್ಗೆ, ಹುಬ್ಬಳ್ಳಿಯಲ್ಲಿ ನೆಲೆಸಿರುವ ನಿನ್ನ ವಾರ್ತೆಯನ್ನು ಕೇಳಿ, ನಿನ್ನ ಪಾದಸನ್ನಿಧಿಗೆ ಬಂದಿದ್ದೇನೆ. ಭವರೋಗ ವೈದ್ಯನೇ, ನನ್ನ ಭವದುಃಖವನ್ನು ನಿವಾರಿಸಿ ಮೊದಲಿನ ಆರೋಗ್ಯರೂಪ ಸಹಜಾನಂದದಲ್ಲಿ ನೆಲೆಯಾಗಿ ನಿಲ್ಲಿಸು ತಂದೆ'' ಎಂದು ಆರ್ತತೆಯಿಂದ ಬಂದಿರುವೆನು ಎಂದು ಕೈಜೋಡಿಸಿ ತನ್ನ ಕಾರ್ಪಣ್ಯವನ್ನು ವ್ಯಕ್ತಮಾಡುತ್ತ ಮುದದಿಂದ ನುತಿಸಿ ನೂರ್ಮಡಿಸಿ ಗುರುಸಮ್ಮುಖದಲ್ಲಿ ನಿಂತುಕೊಂಡನು.

ಶ್ರೀಗುರುನಾಥನು, ಇವನು ಅಧಿಕಾರಿ ಇರುವನೋ, ಇಲ್ಲವೋ, ಎಂಬುದನ್ನು ಪರೀಕ್ಷಿಸಿ ತಿಳಿಯಬೇಕೆಂದು, ಅವನಿಗೆ ಉದಾಸೀನ ಮಾಡಿದರು. ಆದರೂ ಧೀನ ಬಾಲಕನು, ಅದನ್ನು ತಿಳಿದು, ``ಗುರುವರನು ನನ್ನ ಅಧಿಕಾರ ಪರೀಕ್ಷಿಸಲೋಸುಗ, ಈ ರೀತಿ ಉದಾಸೀನ ಮಾಡಿರುವದು. ನಿಜವು ನೋಟಕ್ಕೆ ಸುಂದರ ನಯನಗಳು ಎಂತು ಮುಖ್ಯ ಸಾಧನಗಳೋ ಅಂತೆ ಮಿತಿಮೀರಿ ಸೇವೆ ಗೈಯ್ಯುವದೇ ಗುರು ಕರುಣೆಗೆ ಕಾರಣವು'' ಎಂದು ಮನದಲ್ಲಿ ತಿಳಿದು ಅಂದಿನಿಂದ ನಿರಭಿಮಾನದಿಂದ ಸೇವೆ ಮಾಡತೊಡಗಿದನು. ಗುರುಗಳು, ಒಂದೊಂದು ಸಲ ಅನ್ನವನ್ನು ಕೊಡದಿದ್ದರೂ, ಹಸಿವೆ ಪೀಡಿಸುತ್ತಿದ್ದರೂ, ಸದ್ಭಾವದಿಂದೊಡಗೂಡಿ ನಿಷ್ಠೆಯಿಂದ ಬಿಡದಲೇ ಸೇವೆ ಮಾಡುತ್ತಿದ್ದನು. ಅದನ್ನು ಸಿದ್ಧಾರೂಢರು ಕಂಡು ಸಂತೋಷಗೊಂಡು ಅವನಿಗೆ ಕಬೀರದಾಸನೆಂದು ನಾಮಕರಣ ಮಾಡಿದರು.

## ಅಧಿಕಾರಿಯ ಪರೀಕ್ಷೆ

ಕಬೀರನನ್ನು ತಮ್ಮ ಹತ್ತರ ಕುಳ್ಳಿರಿಸಿಕೊಂಡು, ಮುಮುಕ್ಷುತ್ವಕ್ಕೆ, ಮುಖ್ಯವಾಗಿರುವ ವಿವೇಕಾದಿ ನಾಲ್ಕು ಸಾಧನಗಳು, ಇವನಿಗೆ ಚನ್ನಾಗಿ ಅಳವಟ್ಟಿರುವವೋ, ಇಲ್ಲವೋ, ತಿಳಿಯಬೇಕೆಂಬ ಕುತೂಹಲದಿಂದ, ಕಬೀರ–

ನಿಗೆ ಪ್ರಶ್ನೆಮಾಡಹತ್ತಿದರು. "ಜ್ಞಾನದಿಂದ ಸಾಧಿಸಿಕೊಳ್ಳುವ, ಮೋಕ್ಷಕ್ಕೆ ಕುಂದಿಲ್ಲದ, ವಿವೇಕ ಒಂದಿದ್ದರೆ ಸಾಕು. ಮಿಕ್ಕ ಸಾಧನಗಳಾದ ವೈರಾಗ್ಯ ಶಮಾದಿಷಟ್ಸಂಪತ್ತು, ಮುಮುಕ್ಷತ್ವಗಳು, ಏತಕ್ಕೆ ಬೇಕು ? ಎಂದರು.

"ವಿರಾಗಿ ಜನವಂದ್ಯನೇ, ಮುಕ್ತಿದಾಯಕನೆ, ಸದ್ಗುರುವೇ ವಿರತಿ ಇಲ್ಲದೆ ಸನ್ನುತವಾದ ವಿವೇಕವು ನಿಲ್ಲಲಾರದು" ಎಂದನು. ಹಾಗಾದರೆ "ವಿವೇಕ, ವಿರತಿ, ಇವೆರಡೇ ಸಾಕು. ಮುಂದಿನ ಸಾಧನಗಳು, ಯಾತಕ್ಕೆ ಬೇಕು, ಎಂದು ಕೇಳಿದರು.

ಕಬೀರನು, "ಪರೀಕ್ಷಕರ ಕರುಣಾಳುವೇ, ಷಟ್ಸಂಪತ್ತು ಇರದಿದ್ದರೆ, ಪ್ರಾಪ್ತವಾದ ವೈರಾಗ್ಯವು, ನಿಲ್ಲಲಾರದು ಅದು ಕಾರಣ ಈ ಆರೂ ಸಂಪತ್ತು ಗಳಲ್ಲಿ, ಒಂದನ್ನಾದರೂ, ಬಿಡಕೂಡದು ಅದೇಕೆಂದರೆ ಶರೀರವೆಂಬ ರಥಕ್ಕೆ ಇಂದ್ರಿಯಗಳೆ ಕುದುರೆಗಳು. ಮನಸ್ಸೆ ಕಡಿವಾಣವು. ಬುದ್ಧಿಯೇ, ಸಾರ—ಥಿಯು, ಮತ್ತು ಜೀವಾತ್ಮನೆಂಬುವನೇ, ರಥಿಕನು. ಬುದ್ಧಿ ಎಂಬ ಸಾರಥಿಯು, ತನ್ನ ಹಯಗಳೆಂಬ ಇಂದ್ರಿಯಗಳನ್ನು ಮನವೆಂಬ ಕಡಿವಾಣದಿಂದ ಬಿಗಿ ಹಿಡಿದು, ಸನ್ಮಾರ್ಗದೊಳು ರಥವನ್ನು ನಡೆಸಿದ್ದಾದರೆ, ತನ್ನ ನಿಜ ಸದನಕ್ಕೆ ಸುರಕ್ಷಿತವಾಗಿ ಒಡೆಯನು ತಲುಪುವನು. ಇದನ್ನು ವಿಚಾರಿಸಲಾಗಿ ಸಾರಥಿ ಯನ್ನು ಅನುಸರಿಸಿ ಕಡಿವಾಣವು ಕಡಿವಾಣವನ್ನನುಸರಿಸಿ ಕುದುರೆಗಳೂ, ಅವು ಗಳನ್ನನುಸರಿಸಿ ರಥವೂ, ರಥವನ್ನು ಅನುಸರಿಸಿ ರಥಿಕನೂ ಇರಬೇಕು. ಅದು ಕಾರಣ ಮನಸ್ಸನ್ನು ಸ್ವಾಧೀನದಲ್ಲಿ ಇಟ್ಟುಕೊಳ್ಳಬೇಕಾದರೆ ಶಮಾದಿ ಷಟ್ ಸಂಪತ್ತುಗಳು ಬೇಕೇ ಬೇಕು. ಮನೋನಿಗ್ರಹರೂಪವೇ ಶಮೆ, ಇಂದ್ರಿಯ ನಿಗ್ರಹರೂಪವೇ ದಮೆ, ಇವು ಅವಶ್ಯವಾಗಿರುವವು. ಇದರಂತೆ ಚಂಚಲವಾದ ಕೆಡಕು ಮನಸ್ಸನ್ನು ನಿಗ್ರಹಿಸದೆ ಇಂದ್ರಿಯಗಳ ಇಚ್ಛೆಗಳು ಅಡಗಲಾರವು. ಅದಕ್ಕಾಗಿ ದಮೆಯು ಶಮೆಯನ್ನು ಇಚ್ಛಿಸುವದು. ಶ್ರುತಿ ಗುರುಗಳಲ್ಲಿ ದೃಢ ವಿಶ್ವಾಸ ಪುಟಿಸಲಿಕ್ಕೆ ಶ್ರದ್ಧೆಯು ಮುಖ್ಯಬೇಕು. ಇಂದ್ರಿಯಗಳು ಚಂಚಲ ವಾದರೆ ಶ್ರದ್ಧೆಯು ಉಳಿಯಲಾರದು. ಅದಕ್ಕಾಗಿ ಶ್ರದ್ಧೆಯು ದಮೆಯನ್ನು ಇಚ್ಛಿಸುವದು. ಇನ್ನು ಮನಸ್ಸನ್ನು ಚಲಿಸದಂತೆ ಸ್ಥಿರಗೊಳಿಸುವದೇ ಶಾಂತಿಯು. ಗುರುವಚನದಲ್ಲಿ ಸಂಶಯಾತ್ಮಕ ಮನಸ್ಸನ್ನು ಅಡಗಿಸದಿದ್ದರೆ,

ಚಂಚಲಾತ್ಮಕ ಚಿತ್ತವು ಏಕಾಗ್ರವನ್ನು ಹೊಂದಲಾರದು, ಅದು ಕಾರಣ ಶಾಂತಿಯು ಶ್ರದ್ಧೆಯನ್ನು ಅಪೇಕ್ಷಿಸುವದು. ತೊರೆದಿರುವ ವಿಷಯಗಳು ತಾವಾಗಿ ಬಂದು ಪ್ರಾಪ್ತವಾದರೂ, ಅವುಗಳಿಗೆ ಮನಸ್ಸನ್ನು ಹರಿಯಗೊಡದೆ ಛಲದಿಂದ ನಿಲ್ಲಿಸುವದೇ ಉಪರತಿಯು. ಇಲಿಯನ್ನು ಮುರಿದು ತಿನ್ನುತ್ತಿರುವ ಬೆಕ್ಕನ್ನು ಎಷ್ಟೇ ಪ್ರೀತಿಯಿಂದ ಹಾಲು-ಬೆಣ್ಣೆಗಳಿಂದ ಸಲುಹಿದರೂ, ಅದರ ಹತ್ತರ ಇಲಿಯು ಬಂದರೆ, ಆ ಬೆಕ್ಕು ಜಪ್ಪಿಸಿ ಅದನ್ನು ಹಿಡಿದುಕೊಂಡು ತಿನ್ನುವದು. ಅದರಂತೆ ಮನಸ್ಸು ಬೆಕ್ಕಿನಂತೆ ಇರುವ ಕಾರಣ ಉಪರತಿಯು ಶಮೆಯನ್ನು ಇಚ್ಛಿಸುವದು ಶರೀರಕ್ಕಾಗುವ ಕ್ಷುಧೆ, ಮತ್ತು ಶೀತೋಷ್ಣಾದಿ ದ್ವಂದ್ವ ದುಃಖಗಳನ್ನು ಸಹಿಸುವದೇ **ತಿತಿಕ್ಷೆ** ಎಂದು ಹೇಳಿಸಿಕೊಳ್ಳುವದು. ನಿರುತ ಅಂತರ ವೃತ್ತಿಯಾಗಿರುವ ಉನ್ಮನವು ದ್ವಂದ್ವ ದುಃಖಗಳನ್ನು ಸಹಿಸಿಕೊಳ್ಳುವದು. ಪರಂತು ಮನಸ್ಸು ಬಹಿರ್ಮುಖವಾದರೆ ದ್ವಂದ್ವ ದುಃಖಗಳನ್ನು ಸಹಿಸಿಕೊಳ್ಳಲಾರದು. ಆದಕ್ಕಾಗಿ ಶಮೆಯು ತಿತಿಕ್ಷೆಯನ್ನು ಬಯಸುವದು. ಹೀಗೆ ಅವು ಒಂದನ್ನೊಂದು ಬಯಸುತ್ತಿರಲು. ಶಮಾದಿ ಷಟ್ ಗುಣಗಳು, ಗುರುನಾಥಾ ಇವು ಮುಖ್ಯವಾಗಿ ಬೇಕೇ ಬೇಕು," ಎಂದು ಶಮಾದಿ ಗುಣಗಳನ್ನು ಭಿತ್ತರಿಸಿ ನಮಿಸಿದನು.

ಸದ್ಗುರುಗಳು "ಇವನು ನುಡಿದಂತೆ ತನ್ನ ಭಾವವನ್ನು ಕೆಡದಂತೆ ಇಟ್ಟುಕೊಂಡಿರುವನೋ ಇಲ್ಲವೋ ತಿಳಿಯಬೇಕು" ಎಂದು ಮತ್ತೆ ಪ್ರಶ್ನಿಸಿದರು. "ಕಬೀರಾ ! **ಈ ಸಾಧನ ಚತುಷ್ಟಿಗಳೇ ಜೀವರುಗಳ ಮರಣಕ್ಕೆ ಮದ್ದು.** ಅದುಕಾರಣ ನೀನು ಇವುಗಳನ್ನು ಅಪೇಕ್ಷಿಸದೆ ಯಾಮಳ ಶಾಸ್ತ್ರವನ್ನು ತಿಳಿದುಕೊಳ್ಳುವದರಿಂದ ಜನವಶ, ರಾಜ್ಯವಶ ಮೊದಲಾದವುಗಳು ನಿನಗೆ ಸಿದ್ಧಿಸುವವು. ಅದನ್ನು ಬೋಧಿಸುವೆನು ಕೇಳು" ಎಂದರು.

ಆದಕ್ಕೆ ಕಬೀರನು ಹರುಷದಿಂದ, "ಗುರುನಾಥಾ, ತಾವು ಹೇಳುವ ಎಲ್ಲ ಸಿದ್ಧಿಗಳು ಇಹದಲ್ಲಿ ಮಾತ್ರ ಸುಖವನ್ನು, ಪರದಲ್ಲಿ ದುಃಖವನ್ನು ಕೊಡುವವು ಇದನ್ನು ಅರಿತು ಅವುಗಳನ್ನು ತೊರೆದು ಬಿಟ್ಟಿರುವೆನು" ಎಂದನು.

ಹಾಗಾದರೆ 'ನೀನು ಚಂದದಿಂದ ಪರಸುಖಕ್ಕೆ ಸಾಧನಗಳಾದ ಉಪಾಸನಾದಿ ಯೋಗ ಸಾಧನಗಳನ್ನು ಅರಿತುಕೊ, ಎಂದರು.

ಅದಕ್ಕೆ ಕಬೀರನು, ಹೇ ದೀನರಕ್ಷಕ, ಪರಲೋಕ ಸುಖಗಳು ಕರ್ಮ ರಚಿತಗಳಾಗಿರುವವು. ಅವುಗಳ ಫಲವನ್ನು ಸ್ವಪ್ನದಲ್ಲಿ ಪ್ರೀತಿಯಿಂದ ಭೋಗಿಸಲು ಅವು ನಶಿಸುತ್ತ ಕೊನೆಗೆ ಕಡುದುಃಖ ಕೊಡುವವು. ಇದಕ್ಕೆ ಶ್ರುತಿ ಪ್ರಮಾಣವುಂಟು.

ಯಥೇಹ ಕರ್ಮಚಿತಾ ಲೋಕಾಃಕ್ಷೀಯಂತೆ |
ತಥೈವಾಮುತ್ರ ಕರ್ಮ ಚಿತಾ ಲೋಕಾಃ ಕ್ಷೀಯಂತೆ ||

ಹೀಗೆ ಹೇಳಿರುವದರಿಂದ ಅವುಗಳನ್ನು ನಾನು ಚಿಂತಿಸದೆ ತೊರೆದಿರುವೆನು" ಎಂದನು. ಪುನಃ ಗುರುಗಳು, "ನೀನು ಇಹದಲ್ಲಿ ಪರಮ ವಿಷಯಾದಿಗಳನ್ನು ಸಾಧಿಸಿ, ಸಂತತ ಸುಖವನ್ನು ಹೊಂದಬಹುದಲ್ಲವೇ ?" ಶಾಂತಮಯ ಗುರುವೇ, ವಿಷಯಸುಖವಾದರೂ ಅಮೃತತ್ವವಲ್ಲ. ಇದಕ್ಕೆ ಪ್ರಮಾಣವೇನಂದರೆ—

ನಕರ್ಮಣಾ ನಪ್ರಜಯಾ ನಧನೇನ | ನಬಹುನಾಶ್ರುತೇನ
ತ್ಯಾಗೇನೈಕೇನಾಮೃತತ್ವಮಾನಶುಃ ||

ಇಹ–ಪರ ಭೋಗಗಳ ಇಚ್ಛೆಗಳನ್ನು ತಾನು ತ್ಯಾಗಮಾಡದೆ ಅನಂತವಾದ ಅಮೃತತ್ವ ಸುಖವು ದೊರೆಯಲಾರದೆಂದು ನಿಶ್ಚಯಿಸಿ ಅವೆರಡನ್ನು ತ್ಯಾಗಮಾಡಿ ನಿನ್ನ "ಪಾದಪದ್ಮಂಗಳಲ್ಲಿ ತುಂಬಿರುವ ಸುವಿದ್ಯೆ, ಸುವಿಚಾರಗಳೆಂಬ ಮಧುರ ಮಕರಂದಕ್ಕೆ ಮುಮುಕ್ಷುವಾದ ನಾನು ದುಂಬಿಯಾಗಿ ಬಂದು ಎರಗಿರುವೆ, ನನ್ನನ್ನು ಪೊರೆಯಬೇಕು" ಎಂದು ಕಬೀರನು ಪ್ರಾರ್ಥಿಸಿಕೊಂಡನು.

ಸಿದ್ಧ ಸದ್ಗುರುಗಳು ಇವನು ಯೋಗ್ಯಅಧಿಕಾರಿ ಇರುವನೆಂದು ತಿಳಿದು, ಅವನಿಗೆ ದೀಕ್ಷೆಯನ್ನಿತ್ತು, "ಈಗ ನಿನ್ನ ಅಭಿಪ್ರಾಯವು ಏನಿರುವದು ?" ಎಂದು ಕೇಳಿದರು.

ಆಗ ಕಬೀರನು ಗುರುವಿಗೆ ನಮ್ರಭಾವದಿಂದ ವಂದಿಸಿ ಆನಂದಪ್ರಫುಲ್ಲವದನವುಳ್ಳವನಾಗಿ, ತನ್ನ ಮನಸ್ಸಿಗೆ ಬಂದ ಸಂಶಯಗಳನ್ನು ಕೇಳಲಾರಂಭಿಸಿದನು. "ಕೃಪಾನಿಧಿಯೇ ! ಈಶಾವಾಸ್ಯೋಪನಿಷತ್ತು ಇದು ಕರ್ಮಪರವೋ ?

ಜ್ಞಾನಪರವೋ ? ಈ ನನ್ನ ಸಂಶಯವನ್ನು ದೂರಮಾಡಬೇಕು" ಎಂದು ಬಿನ್ನವಿಸಿಕೊಂಡನು.

ಸದ್ಗುರುನಾಥನು, "ಕಬೀರ ! ಮೊದಲು ನಿನಗೆ ಶ್ರುತಿಯಲ್ಲಿ ಪೇಳಿರುವ ಷಡ್ಲಿಂಗಗಳನ್ನು ಬೋಧಿಸುವೆನು. ಅದರಿಂದ ನಿನ್ನ ಸರ್ವ ಸಂಶಯಗಳು ನಾಶವಾಗಿ, ತೀವ್ರ ಜ್ಞಾನವಾಗುವದು. ಶಿವ ಜೀವರ ಅಭೇದ ನಿಶ್ಚಯಕ್ಕೆ ಇವು ಮುಖ್ಯವಾಗಿರುವವು ಪ್ರಕರಣದ ಆರಂಭದಲ್ಲಿ ಹೇಳಿದ ಅರ್ಥವನ್ನೇ ಅಂತ್ಯದಲ್ಲಿ ಮುಗಿಸುವದು, ಉಪಕ್ರಮ–ಉಪಸಂಹಾರ ಎಂಬುದೇ ಮೊದಲನೇ ಲಿಂಗವು. ಅದ್ವೈತಾರ್ಥವನ್ನು ಪುನಃ ಪುನಃ ಬೇರೆ ಬೇರೆ ಯುಕ್ತಿಗಳಿಂದ ಪ್ರತಿಪಾದಿಸುವವೇ ಅಭ್ಯಾಸವೆಂಬ ಎರಡನೇ ಲಿಂಗವು. ಉಪನಿಷತ್ ಪ್ರಮಾಣವನ್ನು ತೊರೆದು, ಅನ್ಯಪ್ರಮಾಣಗಳಿಂದ ಬ್ರಹ್ಮವನ್ನು ತಿಳಿಯಲಾಗದು, ಎಂದು ಹೇಳುವದೇ ಅಪೂರ್ವತಾ ಇದು ಮೂರನೇ ಲಿಂಗವು ನಿಶ್ಚಯವಾದ ಅದ್ವೈತ ಬ್ರಹ್ಮಜ್ಞಾನದಿಂದ ಜನ್ಮಾದ್ಯನರ್ಥಗಳೇನೂ ತೋರದಂತೆ ದುಃಖಗಳ ಅತ್ಯಂತ ನಿವೃತ್ತಿ, ಬ್ರಹ್ಮಪ್ರಾಪ್ತಿಯೆಂದು ಹೇಳಿಸಿಕೊಳ್ಳವದೇ ಫಲ; ಇದುವೇ ನಾಲ್ಕನೇ ಲಿಂಗವು. ಭೇದಜ್ಞಾನದ ನಿಂದೆಯನ್ನೂ, ಅಭೇದ ಜ್ಞಾನದ ಸ್ತುತಿಯನ್ನೂ ಮಾಡುವ ವಾಕ್ಯಗಳೇ ಅರ್ಥವಾದ; ಇದು ಐದನೇ ಲಿಂಗವು. ಬಳಿಕ ಅದ್ವೈತಕ್ಕನುಗುಣವಾಗಿ ದೃಷ್ಟಾಂತಗಳನ್ನು ಹೇಳುವದೇ ಉಪಪತ್ತಿ ; ಇದು ಆರನೇ ಲಿಂಗವಾಗಿರುವದು. ಈ ಪ್ರಕಾರ ಶ್ರುತ್ಯಾನುಸಾರ ಷಡ್ಲಿಂಗಗಳನ್ನು ನೀನು ತಿಳಿದುಕೊಂಡರೆ ಶ್ರುತಿಗಳನ್ನು ಶೋಧಿಸುವ ಬಲ ಬರುವದು. ಅದರಿಂದ ಜ್ಞಾನವಾಗಿ ಮುಕ್ತಿಯು ಲಭಿಸುವದು.

## ಈಶಾವಾಸ್ಯೋಪನಿಷಲ್ಲಿಂಗ ಪ್ರಾರಭ್ಯತೆ

ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೆ ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೆ ॥

ಓಂ ಶಾಂತಿಃ ಶಾಂತಿಃ ಶಾಂತಿಃ

ಈಶಾವಾಸ್ಯಮುಪಕ್ರಮೋಪಸಂಹಾರಃ ಸಪರ್ಯಗಾತ್ ॥
ಅನೇಜದೇಕಮಿತ್ಯಾದ್ಯೋ ಭಾಸಸ್ತಸ್ಯಾದ್ವಯಸ್ಯ ಚ ॥೧॥

## ಉಪಕ್ರಮ ಉಪಸಂಹಾರ ೧ ನೇ ಲಿಂಗ

ಓಂ ಈಶಾವಾಸ್ಯಮಿದಂ ಸರ್ವಂ !

ಆ ಆಭರಣಗಳೆಲ್ಲವು ಸುವರ್ಣದಿಂದ ಆವರಿಸಲ್ಪಟ್ಟಂತೆ, ಸರ್ವ ಜಗತ್ತು ಈಶನಿಂದ ಆವೃತವಾಗಿದೆ, ಎಂದು ಪ್ರಥಮ ಮಂತ್ರವು ಉಪಕ್ರಮವನ್ನು ಮಾಡಿ ತೋರಿಸುತ್ತದೆ. ಪರಶಿವನು ಈ ಭುವನವನ್ನು ನಿರ್ಲೇಪದಿಂದ ನಾಲ್ಕು ದಿಕ್ಕಿಗೂ ವ್ಯಾಪಿಸುತ್ತ ಸದ್ರೂಪದಿಂದಿದ್ದು ಚಿದ್ರೂಪದಿಂದ ಪ್ರಕಾಶಿಸುತ್ತಿರುವನು. ಎಂಬರ್ಥವನ್ನು ಆ ಪ್ರತಿಪಾದಿಸುವ ಎಂಟನೇ ಮಂತ್ರವು ಉಪಸಂಹಾರಪರವು.

ಅನೇಜದೇಕಂ ಮನಸೋಜವೀಯೊ ನೈವದ್ದೇವಾ
ಆಪ್ನುವನ್ ಪೂರ್ವಮರ್ಷತ್ ||
ತದ್ಧಾವತೋऽನ್ಯಾನತ್ಯೇತಿ ತಿಷ್ಠತ್ತಸ್ಮಿನ್ನಪೂಮಾತರಿಶ್ವಾ ದಧಾತಿ ||

## ಅಭ್ಯಾಸ ೨ ನೇ ಲಿಂಗ

ಪರ್ಯಾತ್ಪರನಾದ ಆತ್ಮನು ಸ್ವಲ್ಪವಾದರೂ ಚಲಿಸದೆ ಮನಸ್ಸಿಗಿಂತ ಪೂರ್ವದಲ್ಲಿಯೇ ವಿದ್ಯಮಾನನು [ಇದ್ದ ಸ್ಥಿತಿಯಲ್ಲಿ ಇದ್ದಂತಿರುವನು] ನಿಂತಲ್ಲಿಯೇ ನಿಂತವನಾದರೂ ಓಡುವವರನ್ನು ಹಿಂದೇ ಸರಿಸುವವನು. ಜಗತ್ತನ್ನು ತುಂಬಿಯೂ ಅಚಲನು. ಇದು ಅದ್ವೈತಪದವಾಗಿ ಅಭ್ಯಾಸಲಿಂಗವೆನಿಸುವದು.

## ೩ ನೆಯ ಲಿಂಗ ಅಪೂರ್ವತಾ

ತನು, ಮನ, ಜಗತ್ತು ಇವೆಲ್ಲವೂ ಬಿಡದೆ ಅನುಪಮದಿಂದ ಆ ಪರಮಾತ್ಮನಲ್ಲಿ ಇರುವವು ಎಂಬುದನ್ನು ಗ್ರಹಿಸು.

ನೈನದ್ದೇವಾ ಆಪೂರ್ವತ್ವಮ್ ಫಲಮ್ ಮೋಹಾದ್ಯಭಾವಕಂ ||
ಕುರ್ವನ್ನಿತ್ಯತ್ಯನುವಾದ್ಯೈವಾ ಸೂರ್ಯಭೇದವೆನಿಂದನಂ ||೨||
||ನೈನದ್ದೇವಾ ಆಪ್ನುವನ್ ಪೂರ್ವಮರ್ಷತ್ ||

ಚಿನುಮಯಾತ್ಮನಾದ ಆತ್ಮನು ಇಂದ್ರಿಯಗಳಿಗೆ, ಮನಸ್ಸಿಗೆ ಮತ್ತು ಪ್ರತ್ಯಕ್ಷಾದಿ ಪ್ರಮಾಣಗಳಿಗೆ ಅಗೋಚರನು, ಎಂಬ ಅರ್ಥವನ್ನು ಉಪನಿಷತ್ತಿನ ಮಂತ್ರವು ಹೇಳಿರುವದು. ಇದು ಅಪೂರ್ವತೆ ಎನಿಸುವದು.

## ೪ ನೇ ಲಿಂಗ ಫಲ

|| ತತ್ರ ಕೋ ಮೊ ಹಃ ಕಃ ಶೋಕ ಏಕತ್ವಮನುಶ್ಯತಃ ||

ಆ ಪರಮಾತ್ಮನನ್ನು ತಿಳಿದ ಮಹಾತ್ಮನಿಗೆ, ಈ ಜಗತ್ತಿನಲ್ಲಿ ಮೋಹ ವೆಂಬುದು, ದುಃಖವೆಂಬುದು ಎಲ್ಲಿರುವದು ? ಇಲ್ಲವೆಂಬ ಅರ್ಥವನ್ನು ತೋರಿ ಸುವದೇ ಫಲವೆನಿಸುವದು.

## ೫ ನೇ ಲಿಂಗ ಅರ್ಥವಾದ

ಅಸುರ್ಯಾ ನಾಮತೇ ಲೋಕಾ ಅನ್ಧೇನ ತಮಸಾವೃತಾಃ||

ಎಂಬ ಮಂತ್ರವು ಅಸುರ ಜನಗಲ್ಲಿರುವ ಭೇದಜ್ಞಾನವನ್ನು ನಿಂದಿಸಿ ಅಭೇದಜ್ಞಾನವನ್ನು ಸ್ತುತಿ ಮಾಡುವದು ಇದೇ ಅರ್ಥವಾದವು.

## ೬ ನೇ ಲಿಂಗ ಉಪಪತ್ತಿ

ತಸ್ಮಿನ್ನಪೋ ಮಾತರಿಶ್ವೇತ್ಯುಪಪತ್ತಿಃ ಪ್ರದರ್ಶಿತಾ ||
ಏತ್ತೈರೀಶೋಪನಿಷದೋಽದ್ವೈತೇತಾತ್ಪರ್ಯಮಿಷ್ಯತೆ
ತಸ್ಮಿನ್ನಪೋಮಾತರಿಶ್ವಾ ದಧಾತಿ ||

ಈ ಯಾವ ಆರನೇ ಮಂತ್ರವು ಇದು ಪರಮಾತ್ಮನ ಚೇತನಸ್ವರೂಪವು. ವಾಯು, ಜಲಂಗಳನ್ನು ಧರಿಸಿ ನಿಂತಿದ್ದರೂ, ಅಭೇದಸ್ವರೂಪವನ್ನು ಪ್ರತಿಪಾದಿಸುತ್ತದೆ ಇದೇ ಪರತರವಾದ ಉಪಪತ್ತಿ ಎಂದು ಹೇಳಿಸಿಕೊಳ್ಳು ವದು. ಇವೇ ಶ್ರುತಿತಾತ್ಪರ್ಯ ನಿರ್ಣಯ ಲಿಂಗಗಳನ್ನು ನಿಜಗುಣರು ವಿವೇಕ ಚಿಂತಾಮಣಿ ಎಂಬ ಗ್ರಂಥದಲ್ಲಿ ಉಪಕ್ರಮೋಪಸಂಹಾರ, ಅಭ್ಯಾಸ, ಅಪೂ- ರ್ವತೆ, ಫಲ, ಅರ್ಥವಾದ ಮತ್ತು ಉಪಪತ್ತಿ ಎಂದು ವಿವರಿಸಿದ್ದಾರೆ. [ಪುಟ ೩೪೧] ಬೇಕಾದರೆ ಅಲ್ಲಿಯೂ ನೋಡಿಕೊಳ್ಳಬಹುದು. ಛಾಂದೋ ಗ್ಯಾದಿ ಶ್ರುತಿಗಳಲ್ಲಿಯೂ ಕೂಡಾ, ಪ್ರಥಮ ಭಾಗದಲ್ಲಿ ಸೃಷ್ಟಿಗಿಂತ ಮೊದಲು ಈ ಜಗತ್ತು ಸದ್ರೂಪ ಬ್ರಹ್ಮವಿತ್ತೆಂದೂ, ಆ ಬ್ರಹ್ಮಕ್ಕೆ ಸ್ವಗತಾದಿ ಭೇದತ್ರಯು ಗಳನ್ನುನಿರಾಕರಿಸುತ್ತ ಅಖಂಡಸಚ್ಚಿದಾನಂದ ಬ್ರಹ್ಮಒಂದೇ ಇತ್ತೆಂದು ಹೇಳು ವದೇಉಪಕ್ರಮವು ಪ್ರಕರಣ ಪರಿಸಮಾಪ್ತಿಕಾಲದಲ್ಲಿನಾಮರೂಪಪ್ರಪಂಚಕ್ಕೆ ಆ ಪರಬ್ರಹ್ಮದಲ್ಲಿ ಲಯವನ್ನು ಹೇಳಿ, ಪ್ರತ್ಯಗಾತ್ಮನಿಗೂ ಬ್ರಹ್ಮಕ್ಕೂ ಏಕತ್ವ

ವನ್ನು ಬೋಧಿಸುತ್ತ ಬ್ರಹ್ಮವು ಅದ್ವಿತೀಯವೆಂದು ಹೇಳುವದೇ ಉಪಸಂಹಾರವು. ಈ ಉಪಕ್ರಮ ಉಪಸಂಹಾರ ಇವೆರಡೂ ಕೂಡಿ, ಪ್ರಥಮ ಲಿಂಗವೆಂದು ಹೇಳಿಸಿಕೊಳ್ಳುವದು. ತತ್ವಮಸ್ಯಾದಿ ಮಹಾ ವಾಕ್ಯಗಳಿಂದ ಪ್ರಕರಣ ಮಧ್ಯದಲ್ಲಿ ಪ್ರತ್ಯಗಾತ್ಮನೇ ಪರಬ್ರಹ್ಮನೆಂದು ಪುನಃ ಪುನಃ ಪೇಳುವದೇ ಅಭ್ಯಾಸವೆನಿಸುವದು ಆ ಪ್ರತ್ಯಗಾತ್ಮನಾದ ಪರಮಾತ್ಮನು ಪ್ರತ್ಯಕ್ಷಾದಿ ಪ್ರಮಾಣಗಳಿಗೆ ಅತೀತನೆಂದೂ, ಅಗೋಚರನೆಂದೂ ಹೇಳುವದೇ ಅಪೂರ್ವತೆಯೆನಿಸುವದು. ಆತ್ಮನೊಂದನ್ನು ತಿಳಿದರೆ ಸರ್ವವೂ ತಿಳಿದಂತಾಗುವದು ಎಂದು ಉಪದೇಶಿಸುವದೇ ಫಲ. ಪ್ರತ್ಯಗಾತ್ಮರೂಪ ನಿರ್ವಿಕಾರ ಬ್ರಹ್ಮಕ್ಕೆ "ಸ್ಥಿತೇಃ ಗತಿಶ್ಚಿಂತನೀಯಃ"ಎಂಬ ನ್ಯಾಯ ಉಂಟಾಗಿ ಜಗತ್ಸೃಷ್ಟ್ಯಾದ್ಯನುಪ್ರವೇಶಾಂತವಾದ ಪಂಚಕೃತ್ಯ ಕರ್ತತ್ವವನ್ನು ಹೇಳುವದೇ ಅರ್ಥವಾದವೆನಿಸುವದು. ಬಳಿಕ ಘಟಕ್ಕೆ ಮೃತ್ತಿಕೆ, ತಂತುವಿಗೆ ಊರ್ಣನಾಭಿ [ಜೇಡಹುಳ] ಕಾರಣಗಳಾದಂತೆ ಜಗತ್ತಿಗೆ ಬ್ರಹ್ಮವೇ ಕಾರಣವೆಂದು ಹೇಳುವದೇ ದೃಷ್ಟಾಂತವೆಂದು ನಿರ್ಣಯಿಸಿದ್ದಾರೆ.

ಇಂಥ ಆರು ಲಿಂಗಗಳನ್ನು ನಿರ್ಣಯಿಸುವ ಈಶ್ಯೋಪನಿಷತ್ತಿನ ಸಾರವನ್ನು ಅರಿತದ್ದಾದರೆ ಅದ್ವೈತ ಬ್ರಹ್ಮವೇ ತೋರುವದು. ಇದನ್ನು ಸರ್ವ ಮುನಿಗಳು ಅಂಗೀಕಾರ ಮಾಡಿರುವರು. ಅದುಕಾರಣ ಈಶಾವಾಸ್ಯೋಪನಿಷತ್ತು "ಕರ್ಮಪರವಲ್ಲ, ಜ್ಞಾನಪರವೇ ಇರುವದು" ಎಂದು ಬೋಧಿಸಿದರು.

ಈ ಪ್ರಕಾರ ಸದ್ಗುರುಗಳು ಷಡ್ಲಿಂಗಗಳನ್ನು ಸಂತೋಷದಿಂದ ಬೋಧಿಸಲು, ಕಬೀರನಿಗೆ ಕಾಡುತ್ತಿರುವ ಸಂಶಯವೆಂಬ ಭೂತವು ಸಂಪೂರ್ಣವಾಗಿ ಬಿಟ್ಟುಹೋಯಿತು. ಭ್ರಾಂತಿಯನ್ನು ನಾಶಮಾಡುವ ಉಪನಿಷತ್ತಿನಲ್ಲಿರುವ ಮಂತ್ರಗಳ ಆದ್ಯಂತ ಅರ್ಥಗಳನ್ನು ಹೇಳುತ್ತ, ಕರ್ಮವನ್ನು ನಿಷೇಧಿಸುತ್ತ, ಗುರುಗಳು ಮುದದಿಂದ ಅದ್ವೈತವನ್ನೇ ಸ್ಥಾಪಿಸಿದರು. "ಹೇ ಗುರುದೇವನೇ, ನನಗೆ ಬಂದು ಬಡಕೊಂಡು ಕಾಡುತ್ತಿದ್ದ ಸಂಶಯವೆಂಬ ಪಿಶಾಚಿಯನ್ನು ತಾವು ತಮ್ಮ ಬೋಧವೆಂಬ ಮಂತ್ರವನ್ನು ಮಂತ್ರಿಸಿ ಅದನ್ನು ಬಿಡಿಸಿ ಓಡಿಸಿಬಿಟ್ಟಿರಿ. ಈಗ ನಾನು ಪರಬ್ರಹ್ಮನೇ ಇರುವೆನೆಂಬ ಅರೋಕ್ಷ ಜ್ಞಾನವಾಯಿತು" ಎಂದು ಕಬೀರದಾಸರು ಸಿದ್ಧಾರೂಢ ಸದ್ಗುರುಗಳ ಅಡಿದಾವರೆ

ಗಳಿಗೆ ತಮ್ಮ ಶಿರಬಾಗಿಸಿ ನಮಿಸಿದರು. ಸಿದ್ಧಾರೂಢರು ಅವರಿಗೆ ಹರುಷದಿಂದ ಆಶೀರ್ವದಿಸಿರು.

ಮಂಗಲ— ಗುರುವೆ ಬ್ರಹ್ಮನ ಗುರುವೆ ವಿಷ್ಣುವು ।
ಗುರುವೆ ರುದ್ರನು ಗುರುವೆ ಈಶನು ।
ಗುರುವೆ ಸದಾಶಿವ ಮೂರ್ತಿ ಪರತರ ಪಾವನಾತ್ಮಕನು ॥
ಗುರುವೆ ಸಚ್ಚಿತ್ಸುಖಮಯಾತ್ಮನು ।
ಗುರುವೆ ಸಾಕ್ಷಾದ್ ಬ್ರಹ್ಮರೂಪನು ।
ಗುರುವೆ ತಾರಕನಿರಲು ಸಾಕ್ಷಾದ್ಗುರುಪದದೊಳಿಹೆನು ॥

ಇತಿ ಶ್ರೀ ಸಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರಲೀಲಾ ಚರಿತ್ರಕಲ್ಪದ್ರುಮದೊಳು ನಿಜಶಿಷ್ಯನಿಗೆ ಷಡ್ಲಿಂಗಬೋಧೆಯೆಂಬ ೩೧ ನೇ ಅಧ್ಯಾಯ ಸಮಾಪ್ತಿ.

———

॥ ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ॥



# ಸದ್ಬೋಧ ಕಾಂಡ

## ಅಧ್ಯಾಯ ೩೨

ಈ ಅಧ್ಯಾಯದಲ್ಲಿ ನಿರ್ವಾಣಿಪ್ಪನೆಂಬವನ ಅಧಿಕಾರ ನೋಡಿ, ಶ್ರುತಿ-ಯೂಗಮಾರ್ಗದಿಂದ ಶೈವ ಸಿದ್ಧಾಂತವನ್ನು ಹೇಳಿ ಅವನನ್ನು ಶಿಷ್ಯನನ್ನಾಗಿ ಮಾಡಿಕೊಂಡದ್ದು.

ಜಯಕೃಷ್ಣನೆಂಬ ಶಿಷ್ಯನಿಗೆ ಮುಂಡಕ ಮೊದಲಾದ ಉಪನಿಷತ್ತುಗಳನ್ನು ಬೋಧಿಸಿ ಧನ್ಯನನ್ನಾಗಿ ಮಾಡಿದ್ದು.

ಬಾಬಾ ಗರ್ದೆ ಎಂಬವನಿಗೆ ಛಾಂದೋಗ್ಯ ಮೊದಲಾದ ಉಪನಿಷತ್ತುಗಳನ್ನು ಬೋಧಿಸಿದ್ದು. ಮತ್ತು ಹುಬ್ಬಳ್ಳಿಯಲ್ಲಿರುವ ತಿರಕಪ್ಪನೆಂಬ ಬ್ರಾಹ್ಮಣನಿಗೆ ಮಾಂಡುಕ್ಯೋಪನಿಷತ್ತು ಬೋಧಿಸಿ, ಎಲ್ಲ ಶಿಷ್ಯರಿಗೆ ಒಂದೊಂದು ಗ್ರಂಥವನ್ನು ಕನ್ನಡದಲ್ಲಿ ಭಾಷಾಂತರ ಮಾಡಲಿಕ್ಕೆ ಅಪ್ಪಣೆಕೊಡಿಸಿದ ವಿಷಯಗಳಿರುವವು.

ಸ್ತೋತ್ರಪದ—ಪರತರಾನಂದಮಯ ಶ್ರೀ ಗುರು |
ವರನೆ ನಿರುತ ಪ್ರಸನ್ನ ನಪ್ಪನೆ |
ಸುರಗಣಾರ್ಚಿತ ದೇವದೇವನೆ ಪಾವನಾತ್ಮಕನೆ ||
ಪರಶಿವನೆ ಭವರೋಗ ವೈದ್ಯನೆ |
ನಿರುತ ಸುಜ್ಞಾನ ಸ್ವರೂಪನೆ |
ಕರುಣಿಯೇ ನಿಜಬೋಧ ಯುಕ್ತನೆ ನಿನ್ನ ನಾಂ ನಮಿಪೆ ||

## ಪದ—೧-೧೭ ನಿರ್ವಾಣಪ್ಪನಿಗೆ ಶ್ರುತಿಯೊಗಮಾರ್ಥದಿಂದ ಬೋಧಮಾಡಿದ್ದು

ಸಿದ್ಧಾಶ್ರಮದಲ್ಲಿ ಸಂತಸದಿಂದ ಸತತವೂ ಉಪನಿಷತ್ ಪ್ರವಚನವು ನಡೆಯುತ್ತಿತ್ತು. ಒಂದು ದಿನ ನಿರ್ವಾಣಯ್ಯನೆಂಬ ಒಬ್ಬ ವಿರಕ್ತನು ತನ್ನ ಭ್ರಾಂತಿಕೆಡಿಸುವ ತತ್ತ್ವವು ಎಲ್ಲಿಯೂ ದೊರೆಯದಿರಲು, ಅದಕ್ಕಾಗಿ ಸದ್ಗುರುವರನನ್ನು ಅರಸುತ್ತ ಬರುತ್ತಿದ್ದನು. ಸೊಲ್ಲಾಪುರದಲ್ಲಿರುವ ಸಿದ್ಧರಾಮೇಶ್ವರನ ಹತ್ತಿರಿರುವ ಕಾಸಾರದ ದಡದಲ್ಲಿ ತಾನು ಕೆಲವು ಕಾಲ ತನ್ನ ಧರ್ಮದ ಪ್ರಕಾರ ಲಿಂಗಾರ್ಚನೆ ತೀರಿಸಿ ಬಳಿಕ ಹನ್ನೆರಡು ಹನ್ನೆರಡು ಮಾತ್ರೆಗಳವರೆಗೆ ರೇಚಕ, ಕುಂಭಕ, ಪೂರಕವೆಂಬ ಪ್ರಾಣಾಯಾಮವನ್ನು ಆರು ತಿಂಗಳವರೆಗೆ ಸಾಧಿಸಿದನು. ಅದರಿಂದ ಚಿತ್ತನಿರೋಧವಾಗಿ ಬುದ್ಧಿಗೆ ಸುವಿಚಾರ ಶಕ್ತಿ ಬೆಳೆಯಿತು. ಮನೋ ನಿರೋಧನಕ್ಕೆ ಈ ಯೋಗವೇ ಮುಖ್ಯ ಸಾಧನವೆಂದು ಮನವರಿಕೆ

ಯಾಯಿತು. ಬಳಿಕ ಆ ಯೋಗವನ್ನು ತ್ಯಜಿಸಿ ವಿವೇಕತತ್ಪರನಾದನು. ವೇದಾಂತಕ್ಕೂ ಮತ್ತು ಶಿವ ಸಿದ್ಧಾಂತಕ್ಕೂ ವಿರೋಧವೇನಾದರೂ ಇರಬಹುದೋ ? ಎಂದು ತನಗೆ ಬಂದಿರುವ ಸಂಶಯವನ್ನು ಕಳೆಯುವಂಥ ಶ್ರೋತ್ರೀಯ ಸದ್ಗುರುವರನು ಎಲ್ಲಿರಬಹುದು ? ಎಂದು ಚಿಂತಿಸುತ್ತಿದ್ದನು. ಒಂದು ದಿನ ಕೆಲವು ಜಂಗಮರು ನಿರ್ವಾಣ ಸ್ವಾಮಿಗಳವರ ದರುಶನಕ್ಕೆ ಬಂದರು. ಆಗ ಅವರು ಸ್ವಾಮಿಗಳನ್ನು ಕುರಿತು, "ಹುಬ್ಬಳ್ಳಿಯಲ್ಲಿ ಶ್ರೀ ಸಿದ್ಧಾರೂಢ ಮಹಾ ಸ್ವಾಮಿಗಳವರು ಅಖಿಲ ಶಾಸ್ತ್ರಗಳಲ್ಲಿ ಪಾರಂಗತರಾಗಿರುವರು" ಎಂದು ಹೇಳಿದರು. ಆಗ ನಿರ್ವಾಣೆಪ್ಪನವರು ಅವರು ಹೇಳಿದ್ದನ್ನು ಕೇಳಿ ಕೂಡಲೆ ಹರುಷದಿಂದ ಹೊರಟು ಹುಬ್ಬಳ್ಳಿಯಲ್ಲಿರುವ ಸಿದ್ಧಾಶ್ರಮಕ್ಕೆ ಬಂದರು.

ಅಲ್ಲಿ ಸದ್ಗುರುಗಳ ದರುಶನಗೊಂಡು, ಶುದ್ಧಮನದಿಂದ ಅಂಜಲಿಬದ್ಧನಾಗಿ "ಓಂ ಚೈತನ್ಯಂ" ಎಂಬ ಮಂತ್ರವನ್ನು ನುಡಿದು ತನ್ನ ಎಂಟು ಅಂಗಗಳು ನೆಲಸೋಂಕುವಂತೆ ನಮಿಸಿ, "ಪರಮ ಗುರುವೇ ! ನನ್ನ ಬಿನ್ನಪವನ್ನು ಅವಧರಿಸು. ಕರ್ಮದಿಂದ ಪ್ರಾಪ್ತವಾದ ಫಲವು ಭ್ರಾಂತಿ ಜನ್ಯವು. ಮತ್ತು ಕಾಲಾನುಸಾರ ನಾಶವಾಗುವದು. ಆದರೆ ಸುಜ್ಞಾನದಿಂದ ನಿಜವಾದ ಸ್ವಸ್ವರೂಪಜ್ಞಾನ ಪ್ರಾಪ್ತವಾಗುವದು. ಅದು ಸ್ವಭಾವದಿಂದ ಸಹಜವಾಗಿರಲು ಜ್ಞಾನದ ಫಲವು ಎಂದೂ ನಾಶವಾಗತಕ್ಕದಲ್ಲ. ಹೀಗಿದ್ದು ಗುರುದೇವಾ, ಚಂಚಲ ಸ್ವಭಾವವುಳ್ಳ ಮನಸ್ಸು ನನ್ನನ್ನು ಬಹು ವ್ಯಥೆಪಡಿಸುತ್ತಿರುವದು ಇದರಿಂದ ಶಮಾದಿಗಳನ್ನು ಸಾಧಿಸಲಿಕ್ಕೆ ಕಡುತರದ ವಿಘ್ನವಾಗಿರುವದು. ಬೆಲ್ಲದ ಮಧುರವನ್ನು ಬೇರ್ಪಡಿಸಿದರೆ, ಬೆಲ್ಲ ಉಳಿಯದಂತೆ ಮನದ ಚಂಚಲ ಧರ್ಮವನ್ನು ನಾಶಮಾಡಿದರೆ, ಧರ್ಮಿಯಾದ ಮನವು, ನಿವೃತ್ತಿಯಾಗುವದು. ಆ ಮನಸ್ಸನ್ನು ನಿವೃತ್ತಿಮಾಡಿದರೆ, ಪರಮಾರ್ಥ ಶೋಧನೆಗೆ ಸಾಧನವೇ ಇಲ್ಲ, ಎಂಬ ಸಂಶಯವು ನನ್ನನ್ನು ಕೊರೆಯುತ್ತಿರುವದು. ಅದನ್ನು ಪರಿಹರಿಸ-ಬೇಕೆಂದು, ಬಿನ್ನವಿಸಿಕೊಳ್ಳುವೆನು," ಎಂದು ನಮಿಸಿದನು.

ಸದ್ಗುರುಗಳು, ಅವನು ಯೋಗ್ಯ ಅಧಿಕಾರಿ ಇರುವನೆಂದು ತಿಳಿದು, ಮನ್ನಿಸಿ, "ಮನಸ್ಸಿನ ಚಂಚಲತ್ವದಿಂದ ನಿನಗೆ ಎಷ್ಟೂ ಬಾಧೆಯು ಬರಲಾ–

ರದು, ವಿಚಾರಿಸಿ ನೋಡು. ಆ ಮನಸ್ಸು ನನ್ನದೆಂಬ ಅಭಿಮಾನ ಮಾತ್ರ—ದಿಂದ ನಿನಗೆ ಬಾಧೆಯುಂಟಾಗುವದು. ಅದು ಇಲ್ಲದಿರೆ ಬಾಧೆ ನಿನಗೆಲ್ಲಿದೆ ? ಜಾಗ್ರ, ಸ್ವಪ್ನ ಈ ಎರಡವಸ್ಥೆಗಳಲ್ಲಿ ಮಾತ್ರ, ನಾನು ಮತ್ತು ನನ್ನದೆಂದು ಸಾಧಿಸುತ್ತಿರುವ ಅಭಿಮಾನವು, ಖೇದದಾಯಕವಿರುವದು ಪರಂತು ಮೋದ-ಕರ ಸುಷುಪ್ತಿ ಅವಸ್ಥೆಯಲ್ಲಿ ನಾನು ನನ್ನದೆಂಬ ಅಭಿಮಾನವು. ಅಡಗಿದ ಮೂಲಕ ಅಲ್ಲಿ ಖೇದಮೋದಗಳೆಂಬವು ನಿನಗೆಲ್ಲಿರುವವು' ? ಆಗ ನಿರ್ವಾಣ-ಯ್ಯನು, "ಗುರುನಾಥಾ, ಹಾಗಾದರೆ ಅಭಿಮಾನ ನಾಶವಾಗುವದಕ್ಕೆ ಉಪಾಯವೇನು ? ಎಂದು ಬಿನ್ನೈಯಿಸಿಕೊಂಡನು. ಗುರುಗಳು ಈ ತರದ ಅಭಿಮಾನಕ್ಕೂ, ಅಂತಃಕರುಣಕ್ಕೂ, ಇಂದ್ರಿಯಾದಿಗಳಿಗೂ ತಾನು ಕರ್ತನಲ್ಲ. ಯಾಕೆಂದರೆ, ತಾನು (ಆತ್ಮನು) ಪರಿಶುದ್ಧನೂ, ಅಜಾತನೂ, ಅಸಂಗತನಾಗಿ ಅರಿಯುವದರಿಂದ ಅಕರ್ತನು, ಅಭೋಕ್ತನು ಇರುವನು. ಇಂತು ನೀನು ನಿಜವಾಗಿ ತಿಳಿಯುವವನಾಗು. ಹೀಗೆ ನಿಶ್ಚಯ ಮಾಡುವದರಿಂದ, ಸಾತಿಶಯದ ಅಭಿಮಾನವು, ಚನ್ನಾಗಿ ನಶಿಸುವದು. ಆ ಬಳಿಕ ಸಾಮ್ಯೈಕ್ಯ ಭಾವಾಭಾವಗಳು ನಿನ್ನ ಅನುಭವಕ್ಕೆ ಬರುವವು ಎಂದು ಆರೂಢರು ಅಪ್ಪಣೆ ಕೊಡಿಸಿದರು. "ಸಾಮ್ಯೈಕ್ಯಭಾವಾ ಭಾವ ಇದರರ್ಥನನಗಾಗಲಿಲ್ಲ, ಗುರುವೇ ? ಎಂದನು. ಒಂದು ವಸ್ತುವು ಒಂದೆ ಕಾಲದಲ್ಲಿ ಒಂದೇ ದೇಶದಲ್ಲಿ ಇದ್ದರೆ, ಅದು ಅದೇ ಕಾಲದಲ್ಲಿ ಇನ್ನೊಂದು ದೇಶನಲ್ಲಿ ಅಭಾವವಾಗಿರುತ್ತದೆ. ಇದೇ ದೇಶಭೇದವು ಇದುವೇ ಭಾವಾ ಭಾವ ಎಂದು ಹೇಳಿಸಿಕೊಳ್ಳುವದು. ಅದು ಹೇಗೆಂದರೆ ಮನೆಯೊಳಗೆ ಒಂದು ಜಾಗೆಯಲ್ಲಿ ಒಂದು ಕೊಡವು ಇದ್ದದ್ದು ಕಂಡರೆ ಅದು ಭಾವವು. ಅದನ್ನು ಯಾರಾದರೂ ವೈದಿರಲು, ಅದು ಕಾಣದಿರುವದೇ, ಅಭಾವವು. ಇದುವೇ ಸಾಮ್ಯೈಕ್ಯಭಾವಾಭಾವ ಎಂದು ಹೇಳಿಸಿಕೊಳ್ಳುವದು. ಇದೇ ರೀತಿ ಜೀವನದಲ್ಲಿರುವ ಕರಣ ಕರ್ತೃತ್ವದ ಅಭಿಮಾನವು, ಈಶ ಮತ್ತು ಆತ್ಮನಲ್ಲಿ ಇರುವದಿಲ್ಲ. ಇನ್ನು ಈಶನಲ್ಲಿರುವ ಸಂಕಲ್ಪ ಕರ್ತೃತ್ವದ ಅಭಿಮಾನವು, ಜೀವ ಮತ್ತು ಆತ್ಮನಲ್ಲಿರುವದಿಲ್ಲ. ಮತ್ತು ಆತ್ಮನಲ್ಲಿರುವ ಸನ್ನಿಧಾನ ಕರ್ತೃತ್ವ ಅಭಿಮಾನವು, ಜೀವೇಶ್ವರರಲ್ಲಿರುವದಿಲ್ಲ. ಈ ಮೂವರಲ್ಲಿ ಮೂರು ಅಭಿಮಾನವಿದ್ದರೂ, ನೀನು ಮಾತ್ರ ಅವಕ್ಕೆ ಸಾಕ್ಷಿಕನು. ಭವರಹಿತನಾದ

ನಿನಗೆ, ಯಾವ ಕರ್ತೃತ್ವವೂ, ಸಂಭವಿಸುವದಿಲ್ಲ. ಅತ್ಯಂತ ಅಭಾವವಾಗಿರುವ ಕರ್ತೃತ್ವಾದಿ ಅಭಿಮಾನಗಳು, ಸೂರ್ಯ ಮತ್ತು ಸೂರ್ಯಕಾಂತ ಮಣಿಗಳೆ-ರಡರ ಸನ್ನಿಧಾನದಲ್ಲಿ, ಇಚ್ಛೆ ಯತ್ನಗಳಿಲ್ಲದೆ, ದಾಹರೂಪ ಕಾರ್ಯವು ತೋರುವಂತೆ, ಅವರವರ ಸನ್ನಿಧಾನದಲ್ಲಿ, ಅವು ತೋರುತ್ತಿರುವವು. ಭ್ರಾಂತಿ-ರಹಿತನಾಗಿ ಅಕರ್ತ, ಅಭೋಕ್ತ ನೀನಿರಲಾಗಿ ಚಿಂತೆ ಬಾಧೆಗಳು, ನಿನೆಗೆಲ್ಲಿಂದ ಬರಬೇಕು ? ಇದಕ್ಕೆ ಉಪನಿಷತ್ತಿನಲ್ಲಿ ಸಂತೋಷವನ್ನುಂಟು ಮಾಡುವ, ಅನಂತ ಪ್ರಶ್ನೋತ್ತರಗಳಿರುವವು," ಎಂದರು.

ನಿರ್ವಾಣಯ್ಯನು, ಕೈ ಜೋಡಿಸಿ, "ಸದಯನೇ, ಆ ಪ್ರಮಾಣಗಳಾ ವವು ? ಎಂದು ಬಿನ್ನವಿಸಿಕೊಂಡನು. "ಆರು ಉಪನಿಷತ್ತಿನಲ್ಲಿ ಸರಸವಾಗಿ-ರುವ, ನಾಲ್ಕುಖಂಡಗಳನ್ನು ಮತ್ತು ಕಠೋಪನಿಷತ್ತಿನ, ಎರಡು ಸಂಧಿಗಳಲ್ಲಿ-ರುವ, ವಲ್ಲಿಗಳನ್ನು ಮತ್ತು ಪ್ರಶ್ನೋಪನಿಷತ್ತಿನಲ್ಲಿರುವ, ಆರು ಪ್ರಶ್ನೆಗಳನ್ನು ಸಂತೋಷದಿಂದ, ಆರೂಢರು ವಿವರಿಸಿ, ಮತ್ತು ನಿನಗೆ ಇನ್ನೇನಾದರೂ, ಸಂಶಯುಗಳು, ಉಳಿದಿದ್ದರೆ ಕೇಳು," ಎಂದರು.

ಆಗ ನಿರ್ವಾಣೆಪ್ಪನು ಸಿದ್ಧರ ಪಾದಪದ್ಮಂಗಳಿಗೆ ನಮಿಸಿ, "ಪರಮ ಗುರುವೇ, ಶಿವಸಿದ್ಧಾಂತದ ಷಟ್‌ಸ್ಥಲಗಳು ವೇದಾಂತ ಸಿದ್ಧಾಂತಕ್ಕೆ ಸರಿ ಯಾದವುಗಳೋ ? ಇಲ್ಲವೊ ? ಎಂಬ ಸಂಶಯುವು, ಬಂದಿರುವದು, ಅದನ್ನಷ್ಟು ಪರಿಹರಿಸಬೇಕು," ಎಂದು ಪ್ರಾರ್ಥಿಸಿಕೊಂಡನು. ಅದಕ್ಕೆ ಆರೂಢರು, 'ಪರಮ ಶಿಷ್ಯನೇ, ಶಿವಾಗಮದಲ್ಲಿರುವ ವೀರಶೈವದ ಷಟ್‌ಸ್ಥಲದ, ಮತ್ತು ನಿರಾಭಾರಿ ವೀರಶೈವದ, ನಿರ್ಣಯವನ್ನು ಇದು ಅಲ್ಲದೆ ನವಲಿಂಗ ಸಕೀಲವನ್ನೂ ಒಳ್ಳೇ ಪ್ರೇಮದಿಂದಾಲಿಸು. ವೇದಾಂತ ಶಾಸ್ತ್ರಕ್ಕೂ, ಶಿವಸಿದ್ಧಾಂತಕ್ಕೂ, ಭೇದವು ಎಳ್ಳನಿತಿಲ್ಲವು,' ಎಂದು ಹೇಳಿ ಎಲ್ಲವನ್ನೂ ಸರಿಪಡಿಸಿದರು

ಗುರುವಿಗೆ ಸ್ತೋತ್ರಕ್ಕೆ ಸ್ತೋತ್ರವನ್ನು ಪಾಡಿ, "ಭ್ರಾಂತಿಗೆಡಿಸುವ ಬ್ರಹ್ಮ-ನಿಷ್ಠ ಸದ್ಗುರುವೇ, ಎನ್ನ ಮನದಲ್ಲಿ ಎದ್ದು ತಾಕಲಾಡಿ ಗದ್ದಲ ಮಾಡುತ್ತಿದ್ದ ಎಲ್ಲ ಸಂಶಯುಗಳನ್ನು ತಾವು ಒದ್ದೋಡಿಸಿದಿರಿ. ಈಗ ನನ್ನನ್ನು ಶಾಂತಿ ಎಂಬ ಜಲದಲ್ಲಿ, ಸ್ನಾನಮಾಡಿಸಿ ಆನಂದಗೊಳಿಸಿದಿರಿ. ನಾನು ಧನ್ಯನಾದೆನು" ಎಂದು ಸದ್ಗುರುಗಳಿಗೆ ಪ್ರಣಾಮಗಳನ್ನರ್ಪಿಸಿದನು.

## ಪದ—೨೮-೩೬ ಜಯಕೃಷ್ಣನಿಗೆ ಮುಂಡಕೋಪನಿಷತ್ತು ಬೋಧಿಸಿದ್ದು

ಒಂದಾನೊಂದು ದಿವಸ ಬೆಳಗಿನ ಜಾವದಲ್ಲಿ ಜಯಕೃಷ್ಣನೆಂಬ ಉತ್ತಮಾಧಿಕಾರಿಯು ಸಂಸಾರದಲ್ಲಿ ತೊಳಲಿ ವ್ಯಾಕುಲ ಚಿತ್ತನಾಗಿ, "ಇದು ಯಾರಿಂದ ಪರಿಹಾರವಾದೀತು" ? ಅಂತಪ್ಪ ಸದ್ಗುರುವರನು ನನಗೆಂದು ದೊರೆತಾನು ? ಎಂದು ಗುರುವರನನ್ನು ಅರಸಹತ್ತಿದನು. ಅಷ್ಟರಲ್ಲಿ ಶ್ರೀ ಸಿದ್ಧಾರೂಢರ ವಾರ್ತೆಯನ್ನು ಕೇಳಿ, ಮಾನವನು ಪಡೆಯತಕ್ಕ ವೇದಾಂತ ಸಿದ್ಧಾಂತವನ್ನು ಪಡೆಯುವದಕ್ಕಾಗಿ, ಸಿದ್ಧಾಶ್ರಮಕ್ಕೆ ಬಂದನು. ಅಲ್ಲಿ ಆರೂಢರಿಗೆ, ಪ್ರಣಾಮುಗಳನ್ನು ಸಲ್ಲಿಸಿ, ಶ್ರೀಗುರುವೇ, ಅಜ್ಞಾನವೆಂಬ ಕತ್ತಲೆಯನ್ನು ನೀಗಿ ಜ್ಞಾನ-ವೈರಾಗ್ಯವೆಂಬ ನಿಶ್ಚಲ ಕಾಂತಿಯುಕ್ತ ಕೃಪಾಕಟಾಕ್ಷ ನೇತ್ರದಿಂದಲೂ, ಸುಮನಸ್ಸಿನಿಂದಲೂ ಶೋಭಿಸುವ ಸಿದ್ಧಮೂರ್ತಿಯೇ ! ಭೋಗಗಳ ಬಯಕೆಯನ್ನು ನೀಗಿರುವ ಶಿವಯೋಗಿಯೇ, ! ನಿನ್ನ ನತಜನಕ್ಕೆ, ಬಂದ ಸಂಶಯವೆಂಬ ರೋಗಕ್ಕೆ ಧನ್ವಂತರಿಯೇ, ನನ್ನನ್ನು ಉದ್ಧರಿಸು. ಆರು ಮತಗಳನ್ನು ಖಂಡಿಸಿ, ಅಮಿತವಾದ ಶಿವಸುಖವನ್ನು ಹೊಂದಿದ ಶಿವಯೋಗಿಯೇ !

"ದ್ವಾಸು ಪರ್ಣಾ ಶರೀರೇಽಸ್ಮಿನ್ ಜೀವೇಶಾಖ್ಯೌಸಹ ಸ್ಥಿತೌ"

ಎಂಬ ಮುಂಡಕೋಪನಿಷತ್ತಿನಲ್ಲಿರುವ ಶ್ರುತಿ ಪ್ರಮಾಣವು, ಜೀವ ಮತ್ತು ಈಶ್ವರರ ಭೇದವನ್ನು ತೋರಿಸುತ್ತಿರುವದು, ಅನ್ನುವಂತೆ ಕಂಡು ಬರುತ್ತದೆ. ಅಖಂಡೈಕ್ಯ ಜ್ಞಾನಕ್ಕೆ ಇದರಿಂದ ವಿಘ್ನ ಬರುವದು. ಇದಕ್ಕೇನು ಪರಿಹಾರ, ಎಂದು ವಿಜ್ಞಾಪಿಸಿಕೊಂಡನು. "ಆದ್ಯಂತವಾಗಿ ಶ್ರುತಿಗಳ ಸಾರವನ್ನು, ಯಾವ ಸದ್ಗುರುಗಳ ಮುಖದಿಂದಲೂ, ನೀನು ಶ್ರವಣ ಮಾಡದ್ದರಿಂದ, ನಿನಗೆ ಸಂಶಯ ಬಂದಿರುವದು," ಎಂದು ಸಿದ್ಧರು ನುಡಿದರು. "ಗುರುವೇ ಹೌದು" ನಾನೇ ಕಂಡಕಂಡಂತೆ ಓದಿ ಭಂಡನಾದೆನು. ತಂದೆಯೇ, ತಾವೇ ಆದ್ಯಂತವಾಗಿ, ಅದ್ವೈತ ವಿಚಾರವನ್ನು ವಿಸ್ತೀರ್ಣವಾಗಿ ವಿವರಿಸಬೇಕು" ಎಂದು ಬಿನ್ನಯಿಸಿಕೊಂಡನು.

ಆಗ ಸಿದ್ಧಾರೂಢರು, "ಮುಂಡಕೋಪನಿಷತ್ತಿನ, ಆರು ಖಂಡಗಳನ್ನು ಮತ್ತು ತೈತ್ತರೀಯೋಪನಿಷತ್ತಿನ ಮೂರನೆಯ ಬೃಗುವಲ್ಲಿಯೊಳಗಿರುವ ಹತ್ತು ಅನುವಾಕ್ಕುಗಳನ್ನೂ, ಬಳಿಕ ಐತರೇಯೋಪನಿಷತ್ತಿನ ಐದು ಖಂಡಗಳನ್ನು ಸುವಿಚಾರದಿಂದ ಬೋಧಿಸಿದರು. ಅಧಿಕಾರಿಯಾದ ಜಯಕೃಷ್ಣನು, ಒಳ್ಳೇ ಹರುಷದಿಂದ ಎದ್ದು ಗುರು ಪಾದಕ್ಕೆ ಬಿದ್ದು ನಮಿಸಿ, "ತಂದೆಯೇ ನನ್ನ ದ್ವೈತ ಭ್ರಮೆಯನ್ನು ಅಡಗಿಸಿ, ಅದ್ವೈತದ ಅಪರೋಕ್ಷ ಜ್ಞಾನವನ್ನು ಬೋಧಿಸಿ, ಭ್ರಮರಕೀಟನ್ಯಾಯದಂತೆ ನನ್ನನ್ನು ತಮ್ಮಂತೆಯೇ ಮಾಡಿಕೊಂಡಿರಿ ಇನ್ನು ಈ ಸುಜ್ಞಾನವು ಎಂದುಕೊಂಡಂತೆ ಆಶೀರ್ವದಿಸಿರಿ" ಎಂದು ಮತ್ತೊಮ್ಮೆ ನಮಿಸಿದನು. ಆರೂಢರು ಅವನಿಗೆ ನಿಶ್ಚಲದಾಸರು, ಹಿಂದಿಯಲ್ಲಿ ಬರೆದಿರುವ ವಿಚಾರಸಾಗರವೆಂಬ ಗ್ರಂಥವನ್ನು ನೀನು ಕನ್ನಡದಲ್ಲಿ ಭಾಷಾಂತರಿಸು. ಅದರಿಂದ ನಿನಗೆ ಗುರುಕೃಪೆಯಿಂದ ಪ್ರಾಪ್ತವಾದ ಅದ್ವೈತ ಅಪರೋಕ್ಷ ಜ್ಞಾನವು ದೃಢವಾಗುವದು, ಎಂದು ಆಶೀರ್ವದಿಸಿದರು.

### ಪದ— ೩೭-೫೩ **ಬಾಬಾ ಗರ್ದೆಯವರಿಗೆ ಛಾಂದೋಗ್ಯ ಉಪನಿಷತ್ತು ಬೋಧಿಸಿದ್ದು**

ಹೀಗೆ ಕೆಲವು ದಿನಗಳು ಗತಿಸಲಾಗಿ **ಬಾಬಾ ಗರ್ದೆ** ಎಂಬವರು, ನಿತ್ಯಾನಿತ್ಯ ವೇಕ, ಇಹಿಹಾಮುತಾರ್ಥಫಲಭೋಗ ವಿರಾಗ, ಶಮಾದಿ ಷಟ್ಸಂಪತ್ತು, ಮುಮುಕ್ಷುತ್ವ ಎಂಬ ನಾಲ್ಕು ಸಾಧನಗಳನ್ನು ಸಾಧಿಸಿದರೂ, ಹಗಲಿರುಳು ಕೊರೆಯುತ್ತ ಚಿಂತೆಗೊಳಿಸುವ ಅಜ್ಞಾನವೆಂಬ ಆವರಣವು, ಹೋಗದೆ ದೇಶದೇಶಗಳನ್ನು ತಿರುಗುತ್ತ ಬರುತ್ತಿರಲು, ಒಂದು ದಿನ ಶಾಂತಿಸಾಗರ ಸಿದ್ಧಾರೂಢರು ವಾರ್ತೆಯನ್ನು ಕೇಳಿ, ಅವರ ಸನ್ನಿಧಿಗೆ ಬಂದರು. ಸತತವು, ಜನನ ಮರಣಂಗಳೆಂಬ ಭವಸಾಗರ ಸುಳುವಿನಲ್ಲಿ ಸಿಕ್ಕು ತಿರು ತಿರುಗಿ, ಮುಳುಮುಳುಗಿ, ಏಳುತ್ತ ತೇಲುತ್ತ ಪಾರಾಗಲಿಕ್ಕೆ ಶಕ್ತಿಸಾಲದೆ ಗರ್ದೆಯವರು ಸದ್ಗುರುಗಳ ಮುಂದೆ ಆನಂದಾಶ್ರುಗಳನ್ನು ಸುರಿಸುತ್ತ ಕೈಜೋಡಿಸಿ ನಿಂತು,

ಓಂ ಚೈತನ್ಯಂ ಶಾಶ್ವತಂ ಶಾಂತಂ ಯೋಮಾತೀತಂ ನಿರಂಜನಂ । ನಾದ ಬಿಂದು ಕಲಾತೀತಂ ತಸ್ಮೈ ಶ್ರೀಗುರುವೇ ನಮಃ ||

ಎಂದು ನುತಿಸುತ್ತ, ಸಾಷ್ಟಾಂಗ ಹಾಕಿ ಎದ್ದು ಮೈಪುಳಕದಿಂದ ಅಂಜಲಿಬದ್ಧನಾಗಿ, "ಸದ್ಗುರುರಾಯನೇ, ಎನ್ನೊಡೆಯನೇ, ದಯಾಸಾಗರಮೂರ್ತಿಯೇ ? ಧರೆಗೆ ಅವತರಿಸಿದ ಶಿವನೇ ! ಭವದ ಭೂತಪೀಡೆಯಿಂದ ಅತಿ ದುಃಖಿತನಾದ ನನ್ನನ್ನು ಪಾರುಮಾಡುವ ಸರ್ವ ಭಾರವು ನಿನ್ನದು, ನಾನು ನಿನ್ನ ದಾಸಾನುದಾಸನು. ತೀವ್ರ ಈ ಭವಸಾಗರದಿಂದ ದಾಟಿಸಿ ಮುಕ್ತನನ್ನಾಗಿ ಮಾಡು ತಂದೆ" ಎಂದು ವಿನೀತನಾಗಿ ಪ್ರಾರ್ಥಿಸಿಕೊಂಡರು.

ಗುರುಗಳು, ಬಾಬಾ ಗರ್ದೆಯವರ ಅಧಿಕಾರವನ್ನೀಕ್ಷಿಸಿ, ತಮ್ಮ ಬಳಿಯಲ್ಲಿ ಕುಳ್ಳಿರಿಸಿಕೊಂಡರು. ಮತ್ತು ಅವರ ಮಸ್ತಕದ ಮೇಲೆ ತಮ್ಮ ಅಮೃತ ಹಸ್ತವನ್ನಿಟ್ಟು, "ಪೊರೆಯುವೆನು, ಅಂಜದಿರು, ನಿನ್ನ ಸಂಶಯವೇನಿರುವದು ? ಕೇಳು" ಎಂದರು.

ಗರ್ದೆಯವರು ಗುರುವೇ "ವರ ವೇದಗಳಲ್ಲಿ ಅನಂತ ಶಾಖೆಗಳಿರುವವು. ಅವುಗಳಲ್ಲಿ ಮತ್ತೆ ಅನೇಕ ವಾಕ್ಯಗಳಿರುವವು. ಅವೆಲ್ಲವುಗಳ ಅರ್ಥವು; ಒಂದೇಯಾಗಿರುವದೋ ? ಅಥವಾ ಭಿನ್ನಭಿನ್ನವಾಗಿರುವದೋ ? ಎಂಬ ಸಂಶಯ ಬಂದಿರುವದು. ಕೃಪೆದೋರಿ ಅದನ್ನು ಪರಿಹರಿಸಬೇಕು" ಎಂದು ಬಿನ್ನಯಿಸಿಕೊಂಡರು.

ಗರ್ದೆಯವರೇ; ಬಾದರಾಯಣನ ಬ್ರಹ್ಮಸೂತ್ರದಲ್ಲಿರುವ "ತತ್ತು ಸಮನ್ವಯಾತ್" ಎಂಬ ಈ ಸೂತ್ರದಿಂದ ವಿಚಾರಿಸಲು, ಅವೆಲ್ಲ ವಾಕ್ಯಗಳು ಸಮನ್ವಯಾರ್ಥವನ್ನೇ ಬೋಧಿಸುತ್ತವೆ, ಎಂದು ನಿರ್ಣಯವಾಗುತ್ತದೆ. ಇವೇ ಮಹಾವಾಕ್ಯಗಳೆನಿಸುವವು. ಇದಕ್ಕೆ ಅನುರೂಪವಾದ ಎಲ್ಲ ವಾಕ್ಯಗಳು ಒಂದೇ ಆಗಿರುವವು. ಇವನ್ನು ಶೋಧಿಸಿರುವ ನಿಮ್ಮ ಪುಣ್ಯಕ್ಕೆ ಎಣೆಯಿಲ್ಲ, ನೀವೇ ಧನ್ಯರು, 'ಸರ್ವಂ ಖಲ್ವಿದಂ ಬ್ರಹ್ಮ' ಬ್ರಹ್ಮೈವೇದಂ ಸರ್ವಂ' 'ಆತ್ಮೈವೇದಂ ಸರ್ವಂ' ತ್ವಮೇವ ತತ್' ಅಯಾಮಾತಾ ಬ್ರಹ್ಮ' ಅಹಂ ಬ್ರಹ್ಮಾಸ್ಮಿ' 'ನೇಹ ನಾನಾಸ್ತಿ'

ಹೀಗೆ ಎಲ್ಲ ವಾಕ್ಯಗಳು ಘನತರ ಅಖಂಡಾತ್ಮ ಬ್ರಹ್ಮನೆಂದು ಹೇಳುವ ಭಾವಾನ್ವಯವು ಸಾಮ್ಯವಿರುವದರಿಂದ ಆ ವಾಕ್ಯಗಳೆಲ್ಲವೂ ಭಿನ್ನ

ವಾಗಿರುವದಿಲ್ಲ. ಅವು ಏಕಾನ್ವಯಗಳಿರುವವು, ಅಂದರೆ ಒಂದನ್ನೇ ಕುರಿತು ಬೋಧಮಾಡುವವು, ಎಂಬುದನ್ನು ಏಕಾಗ್ರಚಿತ್ತದಿಂದ ತಿಳಿದುಕೊಳ್ಳಿರಿ," ಎಂದು ಆರೂಢರು ಬೋಧಿಸಿದರು.

ಗರ್ದೆಯವರು ಪುನಃ ಕಾರುಣ್ಯನಿಧಿ ಗುರುವೇ ! ಈ ತಾತ್ಪರ್ಯವನ್ನು ಅತಿ ಸರಳತೆಯಿಂದ ಬೋಧಿಸುವ ಮಹಾವಾಕ್ಯಗಳು ಯಾವ ಶಾಖೆಯಲ್ಲಿ ಇರುವವು ?" ಎಂದು ಪ್ರಶ್ನೆ ಮಾಡಿದರು. ಸದ್ಗುರುಗಳು, "ಪ್ರಿಯ ಶಿಷ್ಯನೇ, ಅದು ಸಾಮವೇದದ ಶಾಖೆಯಲ್ಲಿ, ಛಾಂದೋಗ್ಯ ಉಪನಿಷತ್ತಿನ ಆರನೇ ಅಧ್ಯಾಯದಲ್ಲಿ ತತ್ತ್ವಮಸಿ, ಎಂಬ ಮಹಾಕಾವ್ಯವಿರುವದು" ಎಂದು ಸದ್ಗುರುಗಳು ಹೇಳಿದರು.

ಪುನಃ ಗರ್ದೆಯವರು, "ಗುರುವೇ, ಈ ಅಧ್ಯಾಯವನ್ನು ಯಾರು ಯಾರಿಗೆ ಹೇಳಿರುವರು" ? ಎಂದು ಬಿನ್ನಯಿಸಿಕೊಂಡರು. ಸಿದ್ಧರು, "ಮಗನೆ ಉದ್ದಾಲಕನೆಂಬ ಋಷಿಯು, ಹನ್ನೆರಡುವರುಷ ಗುರುಕುಲವಾಸದಲ್ಲಿದ್ದು, ಎಲ್ಲ ವೇದಗಳಲ್ಲಿ ಪಾರಂಗತನಾಗಿ ಬಂದ, ತಮ್ಮ ಸುತನಾದ ಶ್ವೇತಕೇತುವಿಗೆ, ಛಾಂದೋಗ್ಯೋಪನಿಷತ್ತಿನ, ಆರನೇ ಅಧ್ಯಾಯವನ್ನು, ಉಪಕ್ರಮ ಉಪ-ಸಂಹಾರ ಮೊದಲಾದ ಆರು ಲಿಂಗಗಳ ಮೂಲಕ ಬೋಧಿಸಿದರು ನಾಮ ರೂಪಗಳಿಂದ ತೋರುವ, ಈ ದೃಶ್ಯ ಪ್ರಪಂಚವು, ಬಂಗಾರದಲ್ಲಿರುವ ಆಭರಣ ಗಳಂತೆ, ಭ್ರಾಂತಿಮಯವೆಂದು ಹೇಳಿ, ಅದ್ವೈತವನ್ನು ದೃಢಪಡಿಸಿದರು. ಪರಬ್ರಹ್ಮನಲ್ಲಿರುವ ಸತ್ತು, ಚಿತ್ತು, ಆನಂದ, ನಿತ್ಯ, ಪರಿಪೂರ್ಣವೆಂಬ ಪಂಚ ಲಕ್ಷಣಗಳು ನಿನ್ನಲ್ಲಿಯೂ, ಇರುವದರಿಂದ ನೀನೇ ಅವನಿರುವಿ. ಎಂಬ ಅರ್ಥವನ್ನು ತೋರಿಸುವ 'ತತ್ವಮಸಿ, ಮಹಾವಾಕ್ಯವನ್ನು ಹರುಷಾತಿ-ಶಯದಿಂದ, ಒಂಭತ್ತು ಪ್ರಕಾರದಿಂದ, ಒಂಭತ್ತು ಸಾರೆ ಬೋಧಿಸಿರುವರು. ಅದನ್ನೇ ಈಗ ನಿನಗೆ ಬೋಧಿಸುವೆನು," ಎಂದು ಅದರ ಹದಿನಾರು ಖಂಡ-ಗಳನ್ನು, ಶಿಷ್ಯನಾದ ಗರ್ದೆಯವರಿಗೆ ಹೋಧಿಸಿದರು.

ಆಗ ಗರ್ದೆಯವರು, "ದಯಾಂಬುನಿಧಿಯೇ, ನನಗೆ ಬೃಹದಾರಣ್ಯಕ-ವನ್ನು ಬೋಧಿಸಿ ಉದ್ಧರಿಸಿರಿ," ಎಂದು ಮತ್ತೆ ಆತುರತೆಯಿಂದ ಅರಿಕೆ ಮಾಡಿಕೊಂಡರು.

ಆಗ ಗರ್ದೆಯವರು, "ದಯಾಂಬುನಿಧಿಯೇ, ನನಗೆ ಬೃಹದಾರಣ್ಯಕವನ್ನು ಬೋಧಿಸಿ ಉದ್ಧರಿಸಿರಿ" ಎಂದು ಮತ್ತೆ ಆತುರತೆಯಿಂದ ಅರಿಕೆ ಮಾಡಿಕೊಂಡನು.

ಕರುಣಾಂಬುನಿಧಿ ಸಿದ್ಧ ಸದ್ಗುರುಗಳು ಸಂತೋಷ ಉಕ್ಕಿ, ಆ ಅರಣ್ಯಕವನ್ನು ಸುಗಮವಾಗಿ ತಿಳಿಯುವಂತೆ ಬೋಧಿಸಿದರು. ಆಗ ಬಾಬಾಗರ್ದೆಯ-ವರು, ಸುಡುವ ಕಾಡ್ಗಿಚ್ಚಿನಿಂದ, ಕಡೆಗೆ ತೆಗೆಯಿಸಿಕೊಂಡವನಂತೆ ಅಪರಿಮಿತ ಹರುಷದಿಂದೊಡಗೂಡಿ "ಗುರುಪುಂಗವನೇ ತಮ್ಮ ಬೋಧವೆಂಬ ದಿನಮಣಿ-ಯಿಂದ ನನ್ನಲ್ಲಿದ್ದ ಅಜ್ಞಾನವೆಂಬ ತಾಮಸವು ಹರಿದು, ಸ್ವಪ್ರಕಾಶ ನಿತ್ಯ-ಪೂರ್ಣಾನಂದ ಜ್ಞಾನವು ಪ್ರಾಪ್ತವಾಯಿತು. ಇದು ಕೆಡದೆ ಸ್ಥಿರವಾಗಿ ಉಳಿ-ಯುವಂತೆ ಕೃಪೆದೋರಬೇಕು" ಎಂದು ಕೈಜೋಡಿಸಿ ಬಾರಿ ನಿಂತರು. ಆಗ ಗುರವರೇಣ್ಯರು, ನೀನು ಒಳ್ಳೇ ಜಾಣತನದಿಂದ, ವಿದ್ಯಾರಣ್ಯ ಕೃತ ಪಂಚದಶಿ ಎಂಬ ಗ್ರಂಥವನ್ನು ಕನ್ನಡ ಭಾಷೆಯಲ್ಲಿ ರಚಿಸಿ, ಓದು, ಅಂದರೆ ನಿನಗೆ ಈಗ ನಾವು ನೀಡಿದ ಜ್ಞಾನವು ದೃಢಗೊಳ್ಳುವದು" ಎಂದು ಅಪ್ಪಣೆಕೊಡಿಸಿದರೆ ಅದನ್ನು ಬಾಬಾ ಅವರು, ಶಿರಸಾವಹಿಸಿದೊಡನೆ, ಅದರ ಮಸ್ತಕದ ಮೇಲೆ ಅಭಯ ಹಸ್ತವನ್ನಿಟ್ಟು ಆಶೀರ್ವದಿಸಿದರು.

**ಪದ—೫೪—೬೬ ತಿರಕಪ್ಪನಿಗೆ ಮಾಂಡೇಕ್ಯ ಉಪನಿಷತ್ತನ್ನು ಬೋಧಿಸಿದ್ದು**

ನಂತರ ಒಂದಾನೊಂದು ದಿವಸ ಹುಬ್ಬಳ್ಳಿಯಲ್ಲಿದ್ದ ತಿರಕಂಭಟ್ಟನೆಂಬವನು ಆರೂಢ ಸದ್ಗುರುಗಳ ಸನ್ನಿಧಾನಕ್ಕೆ ಬಂದು ಸಾಷ್ಟಾಂಗದಿಂದ ನಮಸ್ಕರಿಸಿ "ಪರಮ ಗುರುವೇ, ಜನ್ಮಜನ್ಮಾಂತರಗಳ ಋಷಿಗಳ ಸೇವೆಗೈದದ್ದರಿಂದಲೇ ಮುಮುಕ್ಷುತ್ವದಿಂದೊಡಗೂಡಿದ ಈ ಮಾನವ ಜನ್ಮವು ಬಂದಿರುವದು. ಈ ಜನ್ಮವು ಸಫಲವಾಗುವ ಉಪಾಯವನ್ನು ತಾವೇ ಅರಿದು, ನನಗೊರೆದು ಧನ್ಯನನ್ನಾಗಿ ಮಾಡಿರಿ ಎಂದು ಬಿನ್ನಯಿಸಿಕೊಂಡನು.

ದಯಾಳಸಿದ್ದ ಸದ್ಗುರುಗಳು ಸಂತೋಷದಿಂದ ತಿರಕಂಭಟ್ಟನನ್ನು ಹತ್ತರ ಕುಳ್ಳಿರಿಸಿಕೊಂಡು, "ಮುದ್ದು ಮಗನೇ ಬಹಳ ಬಗೆಯ ಸಾಧನಗಳನ್ನು ಸಾಧಿಸಿದ್ದರೂ, ನಿನ್ನ ಮನಸ್ಸಿನ ಚಂಚಲತ್ವವು ಇನ್ನೂ ಹೋಗಿಲ್ಲ

ವಾದ್ದರಿಂದ ಆ ಮನದ ಪರಿಶುದ್ಧತೆಗಾಗಿ ನಿನಗೆ ಪ್ರಣವೋಪಾಸನವನ್ನು ತಿಳಿಸಿ ಕೊಡುತ್ತೇನೆ'' ಎಂದು ಹೇಳಿ ಸಂಪೂರ್ಣವಾಗಿ ಮಾಂಡುಕ್ಯೋಪನಿಷತ್ತಿನ ರಹಸ್ಯವನ್ನು ತಿಳಿಸಿದರು. ಆಗ ತಿಲಕಂಭಟ್ಟರು ಗುರುಗಳ ಅಡಿಗೆರಗಿ ನವ ಸ್ಕರಿಸಿ, ''ಸದ್ಗುರುವೇ ತಮ್ಮ ಉಪದೇಶಾಮೃತವು, ತಾಪತ್ರಯಾದಿಗಳಲ್ಲಿ ಬೆಂದು ಬೆಂಡಾದ ನನ್ನ ಹೃದಯಕ್ಕೆ ಶೀಘ್ರವಾಗಿ, ಶೀತಳವನ್ನುಂಟು ಮಾಡಿತು. ನಾನು ಧನ್ಯನಾದೆನು'' ಎಂದು ಸ್ತುತಿಸಿ ನಮಿಸಿದನು.

ಆಗ ಆರೂಢರು "ಈಗ ಪ್ರಾಪ್ತವಾದ ಆನಂದವು ನಿನ್ನಲ್ಲಿ ದೃಢವಾಗಿ ನಿಲ್ಲುವದಕ್ಕಾಗಿ ನೀನು ಅತಿಶ್ರೇಷ್ಠವಾದ ಈಶಾವಾಸ್ಯೋಪನಿಷತ್ತನ್ನು ಸರಸ ವಾದ ಕನ್ನಡದಲ್ಲಿ ಬರೆದು ಅದನ್ನು ನಿತ್ಯವೂ ಓದು'' ಎಂದು ಆಶೀರ್ವದಿಸಿದರು.

## ಶಿಷ್ಯರಿಗೆ ಕನ್ನಡದಲ್ಲಿ ಗ್ರಂಥ ಬರೆಯಲಾಜ್ಞೆ

ಬಳಿಕ ''ನಿರ್ವಾಣೆಪ್ಪನನು ಪುನಃ ಕರೆದು ನೀನು ತಿಳಿದುಕೊಂಡು ನವ ಲಿಂಗ ಸಕೀಲಗಳನ್ನು ಒತ್ತಟ್ಟಿಗಿಟ್ಟು ಪ್ರಸಿದ್ಧವಾದ ಪಂಚೀಕರಣವೆಂತೆಂಬ ಗ್ರಂಥವನ್ನು ಕನ್ನಡದಲ್ಲಿ ನಿರಭಿಮಾನದಿಂದ ರಚಿಸಿದರೆ ನಿನ್ನ ಜ್ಞಾನವು ವೃದ್ಧಿ ಯಾಗಿ ಆತ್ಮ ಸಾಕ್ಷಾತ್ಕಾರವಾಗುವದು'' ಎಂದು ಆಶೀರ್ವಾದ ಮಾಡಿದರು.

ಪರಮ ಶಿಷ್ಯರಾದ ಕಬೀರರಿಗೆ, ದಶೋಪನಿಷತ್ತಿನ ಸಾರವನ್ನು ತಿಳಿದು ಕನ್ನಡ ಭಾಷೆಯಲ್ಲಿ ಬರೆದು, ಅದನ್ನು ಗುರುಗಳ ಚರಿತ್ರದ ಅಂತ್ಯಭಾಗದಲ್ಲಿ ಜೋಡಿಸು ಎಂದು ಆಶೀರ್ವದಿಸಿದರು. ಕಬೀರರು ಶಿರಸಾವಹಿಸಿ, ಮೊದಲು ಸಿದ್ಧಾರೂಢರ ಚರಿತ್ರವನ್ನೂ ಅದರ ಅಂತ್ಯದಲ್ಲಿ ದಶೋಪನಿಷತ್ತಿನ ಸಾರವನ್ನೂ ಬರೆದು ಗುರುಚರಣಕ್ಕೆ ಒಪ್ಪಿಸಿದರು.

ಗುರುಗಳು ಮಠದಲ್ಲಿ ಪ್ರತಿನಿತ್ಯ ಶಿಷ್ಯವೃಂದಕ್ಕೆ ಬ್ರಹ್ಮಸೂತ್ರ, ಪಂಚದಶಿ, ವಿಚಾರಸಾಗರ, ಯೋಗವಾಶಿಷ್ಠ, ನಿಜಗುಣರ ಗ್ರಂಥ ಮೊದಲಾದ ಶಾಸ್ತ್ರಗಳನ್ನು ಕಳಕಳಿಯ ಕರುಣೆಯಿಂದ ಪ್ರವಚನ ನಡೆಸುತ್ತಿದ್ದರು. ಹೀಗಿರಲು ನಾಲ್ಕನೇ ವರುಷದ ಜಾತ್ರೆಯು ಸಂತೋಷದಿಂದ ಮುಗಿಯಿತು. ಅಷ್ಟರಲ್ಲಿ ಯಾವನೋ ಆಕಾಶಬುಟ್ಟಿಯನ್ನು ಬಿಟ್ಟಿರಲಾಗಿ, ಅದು ಅಡ್ಡಗಾಳಿಗೆ ಬಂದು ತೇರಿಗೆ ತಟ್ಟಿ ಉರಿಹತ್ತಿತು. ಉರಿಯುವ ತೇರನ್ನು ಎಲ್ಲ ಜನರು ನೋಡಿ, ''ಇದು

ಏನೋ ಒಂದು ಅಶುಭ ಸೂಚನೆ ಕಂಡುಬರುವದು'' ಎಂದರು ಸಿದ್ಧಾರೂಢರು "ಭಕ್ತರೇ, ಆಕಾಶದಿಂದ ಬೆಳಕು ಜಾರಿಬಂದು ತೇರಿಗೆ ಪ್ರಕಾಶವನ್ನುಂಟು ಮಾಡಿತು. ಇದೇ ರೀತಿ ಜಾತ್ರೆಯ ಪ್ರಕಾಶವು ಜಗತ್ತಿನ ದಿಗಂತದವರೆಗೆ ಹಬ್ಬುವದು. ಈ ಶುಭಸೂಚನೆಯನ್ನು ಸೂಚಿಸಲಿಕ್ಕೆ ಈ ಘಟನೆ ಆಗಿರುವದಲ್ಲದೆ ಅದು ಅಶುಭ ಸೂಚನೆ ತೋರಿಸುವದಕ್ಕಲ್ಲ !'' ಎಂದರು. ಸದ್ಗುರುಗಳ ಈ ನುಡಿಗೆ ಎಲ್ಲ ಭಕ್ತರು ಪರಮ ಹರುಷಿತರಾಗಿ ಜಯ ಜಯವೆಂದು ನಮಿಸಿದರು. ಮತ್ತೆ ಮರುದಿವಸ ಬ್ರಹ್ಮಸೂತ್ರ ವ್ಯಾಸಂಗ ನಡೆಯಿತು.

ಮಂಗಲ— ಪರಮ ಸದ್ಗುರು ವ್ಯಾಸಋಷಿಗಳೆ !
ಸರುವ ವೇದದ ಸಾರನೆಲ್ಲವ |
ನುರೆದೆಗೆದು ಪದಿನೆಂಟು ಸುಪುರಾಣವನು ಭಾರತವಂ ||

ಭರದಿ ಪರತರ ಬ್ರಹ್ಮಸೂತ್ರವ |
ನುರಚಿಸಿದ ತವದಿವ್ಯಮತಿಯ |
ನ್ನರಿದು ಚಕಿತಂ ಪೊಂದಿ ತವಪದಕಾನು ವಂದಿಪೆನು ||

ಇತಿ ಶ್ರೀ ಸಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ ಲೀಲಾ ಚರಿತ್ರೆ ಕಲ್ಪದ್ರುಮದೊಳು ಉತ್ತಮಾಧಿಕಾರಿಗೆ ಉಪನಿಷತ್ತುಗಳನ್ನು ಉಪದೇಶಿಸಿದ ೩೨ನೇ ಅಧ್ಯಾಯ ಸಮಾಪ್ತಿ.

---

|| ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ||



# ವೈಭವ ಕಾಂಡ

## ಅಧ್ಯಾಯ ೩೩

ಈ ಅಧ್ಯಾಯದಲ್ಲಿ ಸಿದ್ಧಾಶ್ರಮಕ್ಕೆ, ಬಹುದೇಶದಿಂದ ಸಾಧುವರ್ಯರು, ಬಂದು ಕೂಡಿದ್ದು, ಶರೀಫ್ ಸಾಹೇಬನೆಂಬ ಯೋಗಿವರನು ಮಹಿಮೆ ತೋರಿದ್ದು.

ಜಮಖಂಡಿ ಅಪ್ಪಾಸಾಹೇಬನೆಂಬ ಸಂಸ್ಥಾನಿಕನು, ಆಶ್ರಮಕ್ಕೆ ರಸ್ತೆ-ಮಾಡಿಸಿದ್ದು.

ಸಿದ್ಧರ ಜಾತ್ರೆಯು ಬೆಳೆದದ್ದು, ಸಮಾಧಿ ಕಟ್ಟಿಸಿದ್ದು ಮತ್ತು ಜಾತ್ರೆಯನ್ನು ಶಿವರಾತ್ರಿಗೆ ನೇಮಿಸಿದ್ದು, ಪ್ಲೇಗಿನಿಂದ ಜಾತ್ರೆಯನ್ನು ಎರಡು ವರುಷ ಸಂಕ್ಷೇಪಮಾಡಿ ಮುಂದೆ ಯಥಾಪ್ರಕಾರ ನಡೆಸಿದ್ದು. ಸಮಾಧಿಯ ಮುಂದಿನು ಪಾತಾಳಂಕಣ ಮೊದಲಾದ ಮಠವನ್ನು ಕಟ್ಟಿಸಿದ್ದು, ಅಂಕಲಕೋಟೆ ಶರಣಪ್ಪನು ರುದ್ರಾಕ್ಷಿಯ ಮಂಟಪ ಪೂಜಾ ಪ್ರಾರಂಭ ಮಾಡಿದ ವಿಷಯಗಳು ಇರುವವು.

ಸ್ತೋತ್ರ— ತಿಳಿಯೆ ಕರ್ಮೋಪಾಸನಂಗಳ |
ಬಳಿಕ ಜ್ಞಾನವ ಹೀಗೆ ಕಾಂಡಂ |
ಗಳಿಹ ವೇದಗಳನ್ನು ಗುರುಕೃಪೆಯಿಂದ ಲರಿಯುತ್ತು ||

ಬಳಿಕ ರಾಮಾಯಣವ ತದ್ವ ।
ತ್ತ್ರಿಳೆಯ ಕಲ್ಯಾಣಕ್ಕೆ ರಚಿಸಿದ ।
ಪೊಳೆವ ವಾಲ್ಮೀಕ ಋಷಿಗಳ ಪದಕಾನುನತನಪ್ಪೇಂ ॥

## ಪದ— ೧-೬ ಸಿದ್ಧಾಶ್ರಮಕ್ಕೆ ಬಹುದೇಶದಿಂದ ಸಾಧುವರ್ಯರು ಬಂದು ಕೂಡಿದ್ದು

ಮೊದಲಿನಂತೆ ಮಠದಲ್ಲಿ ನಿರಂತರ ಶಾಸ್ತ್ರಾಧ್ಯಯನ ನಡೆಯುವದನ್ನು ದೇಶದ ಎಲ್ಲ ಜನರು, ಕೇಳಿ ಹರುಷ ಹೊಂದುತ್ತಿದ್ದರು. ಸಿದ್ಧಾರೂಢರ ಕೀರ್ತಿಯು ಶಶಿಯ ಬೆಳದಿಂಗಳಂತೆ ಜಗತ್ತನ್ನು ವ್ಯಾಪಿಸಿತು. ಸ್ವಾಮಿಗಳವರ ಸಂದರ್ಶನಕ್ಕೆ ಸಂತರಾದ ಖಾಸ್ಗತ್ ಸ್ವಾಮಿಗಳು, ರಂಗಸ್ವಾಮಿ, ಬಾಲಕನಾದ ದೇವೇಂದ್ರನು ಗುಂಡಾಗುರುಗಳು ಅಥಣಿ ಮುರಗೇಂದ್ರ ಸ್ವಾಮಿಗಳು, ಶರಣಪ್ಪನವರು, ಆದಯ್ಯನವರು, ಉದ್ದಾನಯ್ಯನವರು ಮೊದಲಾದ ಅನೇಕ ಸತ್ಪುರುಷರು, ಬಂದು ಮಠದಲ್ಲಿ ಸೇವಾ ಮಾಡುತ್ತಿದ್ದರು. ಇವರೆಲ್ಲರೂ ಸಾಕ್ಷಾತ್ ಗುರುಶಂಭುಲಿಂಗನೇ ಅವತರಿಸಿ ಸಿದ್ಧಾರೂಢನಾಮದಿಂದ ಬಂದಿರುವನು ಎಂದು ನೆರೆನಂಬಿ "ಗುರುದೇವಾ, ನಮಗೆ **ಶ್ರೀ ನಿಜಗುಣರ ಆರು ಶಾಸ್ತ್ರಗಳನ್ನು** ತಿಳಿಸಿ ಉದ್ಧರಿಸಬೇಕು" ಎಂದು ಪ್ರಾರ್ಥಿಸಿಕೊಂಡರು. ಅವರ ಪ್ರಾರ್ಥನೆಯನ್ನು ಮನ್ನಿಸಿ ಕರುಣಕಟಾಕ್ಷವುಳ್ಳವರಾಗಿ, ಮೊಟ್ಟಮೊದಲು ಶ್ರೀ ನಿಜಗುಣರ ಗ್ರಂಥಕ್ಕೆ ಪಂಚರತ್ನವೆಂದು ಹೆಸರಿಟ್ಟು, ತಾವೇ ಮಂಟೂರ ಶೆಟ್ಟರಿಂದ ಪ್ರಕಟಿಸಿ, ಅದನ್ನು ಕ್ರಮವತ್ತಾಗಿ ಮುದದಿಂದ ಬೋಧಿಸಿ, ಅವರೆಲ್ಲರನ್ನು ಧನ್ಯರನ್ನಾಗಿ ಮಾಡಿದರು. ಅವರಲ್ಲಿ ಕೆಲವರು ಭೇದ ಭಾವನೆ ತೊರೆದು, ನಿರಂತರ ಮಠದಲ್ಲಿಯೇ ಇರಹತ್ತಿದರು. ಕೆಲವರು ಗುರುಮುಟ್ಟಿ, ಗುರುಗಳಾಗಿ ತಮ್ಮ ಗ್ರಾಮುಗಳಾಗಿ ಹೋಗುತ್ತ ಬರುತ್ತ ಇರಹತ್ತಿದರು.

ಪರಶಿವನು, ಕೈಲಾಸದಲ್ಲಿ ಬಸವಾದಿ ಪ್ರಮಥರನ್ನೊಡಗೊಂಡು, ಮೆರೆಯುತ್ತಿರುವಂತೆ ಸಿದ್ಧರು ಪರಮ ಶಿಷ್ಯರ ಮಧ್ಯದಲ್ಲಿ ಪ್ರಕಾಶಮಾನರಾಗಿ ಉಪನಿಷತ್ತಿನ ಎಲ್ಲ ಲಕ್ಷಾರ್ಥಗಳನ್ನು ಬೋಧಿಸಿದ್ದರು.

## ಪದ— ೭–೨೫ ಶರೀಫ ಸಾಹೇಬನೆಂಬ ಸಾಧುವು ಬಂದು ಮಹಿಮೆ ತೋರಿದ್ದು

ಒಂದು ದಿನ ಶರೀಫ ಸಾಹೇಬರೆಂಬ ಸಾಧುವರ್ಯರು ಬಂದು, ಮಠದಲ್ಲಿರುವ ಸುಂದರವಾದ ಹೂದೋಟದಲ್ಲಿ ಹೊಕ್ಕು, ನಾಲ್ಕೈದು ಪರಿಮಳ ಬೀರುವ, ಪುಷ್ಪಗಳನ್ನು ಹರಿದುಕೊಂಡರು. ಅದನ್ನು ತೋಟದ ರಕ್ಷಕನಾದ ಶಿವಯ್ಯನು ಕಂಡು, ''ಏನಯ್ಯಾ, ಈಶ್ವರನ ಅಗಾಧ ಸೃಷ್ಟಿರಚನಾತ್ಮಕ ಚಾತುರ್ಯವನ್ನು ಪ್ರಕಟಿಸಿ ತೋರಿಸುತ್ತಿರುವ ಹೂವುಗಳನ್ನು ಹರಿದು, ಸುಗಂಧವನ್ನು ಮೂಸಿ, ನಿಮಿಷಾರ್ಧದಲ್ಲಿ ಬಿಸುಟಿ ಬಿಡುವದು. ಇದು ನಿಮ್ಮ ವಿವೇಕಕ್ಕೆ ಸರಿಹೋಗುವದೇ ?'' ಎಂದು ಪ್ರಶ್ನೆ ಮಾಡಿದನು, ಅದಕ್ಕೆ ಶರೀಫರು ''ಓಹೋ ! ಇಲ್ಲಿ ಹೀಗಿರುವದೋ ? ಸರಿ ಆರೂಢನೆಂದು ಖ್ಯಾತಿವೆತ್ತ ಪುರುಷರಿಗೂ, ಅವರ ಶಿಷ್ಯರಿಗೂ ಈ ತರದ ಆಶೆ ಇವೆ ಅಂದ ಮೇಲೆ ಉಳಿದವರ ಪಾಡೇನು ! ಮೆರೆವ ಸರ್ವ ಭೋಗಗಳು ಭೋಗಿಗಳಿಗಲ್ಲದೆ ತ್ಯಾಗಿಗಳ ಭೋಗಕ್ಕಲ್ಲ'' ಎಂದು ಅಂದರು. ಅದನ್ನು ಸಿದ್ಧಾರೂಢರು ಕೇಳಿ, ಸುಮ್ಮನಿದ್ದರು. ಶಾಸ್ತ್ರ ಶ್ರವಣಕ್ಕೆ ಸರ್ವರೂ ಶಿರಬಾಗಿ ಕುಳಿತುಕೊಂಡರು.

## ಶರೀಫರಿಗೆ ಬೋಧಿಸಿದ್ದು

"ಸಗುಣನಾದ ಈಶ್ವರನು ಕಲ್ಪಿತನು, ಅವನಿಂದ ರಚಿತವಾಗಿ ಮನೋಹರವಾಗಿ ನಿರ್ಮಿಸಲ್ಪಟ್ಟ ಈ ಧರಣಿಯೂ ಕಲ್ಪಿತವು. ಅದರಲ್ಲಿರುವ ಜಂಗಮ, ಸ್ಥಾವರ, ವಸ್ತುಗಳೆಲ್ಲವೂ ಕಲ್ಪಿತವು. ಭವಿಗಳು, ಭಕ್ತರು, ಭವ ರಹಿತ ಮಹಾತ್ಮರು ಇವರೆಲ್ಲರೂ ಕಲ್ಪಿತರು. ಹೂವುಗಳನ್ನು ಎತ್ತಬೇಡ ಎನ್ನುವ ಪುರುಷನೂ, ಹೂವು ಹರಿದ ಪುರುಷನೂ ಕಲ್ಪಿತರು. ಇಂತಿವೆಲ್ಲವೂ ಮನದ ಕಲ್ಪನೆಯಲ್ಲಿ ತೋರಿ, ಅಲ್ಲಿಯೇ ಅಡಗುವದರಿಂದ ಇವೆಲ್ಲವು ಮನಸ್ಸಿನ ಧರ್ಮಗಳು. ನಾನು ಅದರ ಸಂಗವಿಲ್ಲದೆ ಚೈತನ್ಯಸ್ವರೂಪದಿಂದ ಸಾಕ್ಷಿಕನಾಗಿರುವೆನು. ಹೇಗಂದರೆ ಎರಡನೆಯರಿಗಾದ ಸುಖ–ದುಃಖಾದಿಗಳು ನನಗೆ ಹೇಗೆ ಇಲ್ಲವೋ, ಅದರಂತೆಯೇ ನನ್ನ ಮನಸ್ಸಿನ ಖೇದ ಮೋಹಾದಿಗಳು ವಿಚಾರಿಸಲಾಗಿ ನನಗೆ ಇರುವದಿಲ್ಲ. ಶ್ರೇಷ್ಠ ತ್ಯಾಗಿ ಎನಿಸಿಕೊಂಡು ಆಶೆಯಿಂದ ಹೂವುಗಳನ್ನು ನೀನೇ ಹರಿದು, ಆಶಾಯುಕ್ತ ಭೋಗಿಗಳಿಗೆ

ಒಡೆಯನಾದುದನ್ನು ಮರೆತು, ನೀನು ಎರಡನೇಯವರಿಗೆ ಆಶೆಯುಳ್ಳವರೆಂದು ಅನ್ನಬಹುದೋ ?'' ಎಂದು ಸಿದ್ಧರು ನುಡಿದರು.

ಶರೀಫರು, ''ನೀನು ಜಗದೊಡೆಯನೇ ಸತ್ಯವು. ಸತ್ತು, ಚಿತ್ತು, ಆನಂದ ಇವು ಆತ್ಮನಲ್ಲಿ ಹೇಗಿರುವವು ?' ಎಂದು ಪ್ರಶ್ನೆ ಮಾಡಿದರು.

''ಶರೀಫನೇ ಕೇಳು, ಮೂರು ಕಾಲಗಳಲ್ಲಿ ಬಾಧೆ ಹೊಂದದೆ ಇರುವವನಾದ್ದರಿಂದ ಆತ್ಮನು ಚಿದ್ರೂಪನು. ಸರ್ವ ಜಗತ್ತನು ಪ್ರಕಾಶಿಸುವದರಿಂದ ಅವನು ಚಿದ್ರೂಪನು. ಅತ್ಯಂತ ಪ್ರೀತಿಗೆ ಆಸ್ಪದ ತಾನೇ ಆಗಿರುವದರಿಂದ ಆನಂದ ಸ್ವರೂಪನು. ಹೀಗೆ ಸಚ್ಚಿದಾನಂದ ಸ್ವರೂಪದಿಂದಿರುವನು'' ಎಂದು ಸಿದ್ಧರು ಬೋಧಿಸಿದರು. ಕೂಡಲೆ ಶರೀಫನು ''ಸಾಧು ನೋಡಲೋ ಇವನೇ ಪರಮ ಸಾಧು ನೋಡಲೋ'' ಎಂಬ ಪದ್ಯವನ್ನು ಅಲ್ಲಿಯೇ ರಚಿಸಿ ಹಾಡಿದನು. ಅದನ್ನು ಕೇಳಿ ಶರೀಫರೇ, ನೀವು ಪ್ರಾಸಾದಿಕ ಕವಿಗಳಿರುವಿರಿ'' ಎಂದು ಸಿದ್ಧಾರೂಢರು ಪ್ರಶಂಸಿಸಿದರು. ಶರೀಫರು, ಆನಂದತುಂದಿಲರಾಗಿ, ನಾನು ಗುರುಕೃಪೆ ಪಡೆದು ಮಾಡಿದ ದೇವಿ ಉಪಾಸನೆಯು ಈಗ ಫಲಿಸಿತೆಂದು ಶಿವಯೋಗಿಗಳಾದ ಶ್ರೀ ಸಿದ್ಧಾರೂಢರ ಮುಂದೆ ಎರಡು ಟೆಂಗಿನ ಕಾಯಿಗಳನ್ನು ತಂದಿಟ್ಟು ಶಿರಬಾಗಿ ನಮಿಸಿ, ''ನನಗೆ ಆಶೀರ್ವಾದ ಕೊಡಿರಿ !'' ಎಂದು ಕೇಳಿದರು. ಆಗ ಆರೂಢರು ಒಂದು ಕಾಯಿಯನ್ನು ಕೈಯಲ್ಲಿತಕ್ಕೊಂಡು ಆಶೀರ್ವಾದರೂಪದಿಂದ ಕೊಡಹೋದರು. ಶರೀಫರು, ''ಹಾ ! ತಡೆಯಿರಿ'' ಕೆಡುವ ಶರೀರವೆಂಬ ಈ ಕಾಯದ ಒಳಹೊರಗೇನೂ ಇರದೆ ಚಿದಾಕಾಶದಲ್ಲಿ ತಾನೇ ತಾನಾಗಿ ಹೊಳೆಯುವಂತೆ ಈ ಟೆಂಗಿನಕಾಯಿಯ ಒಳಗಿರುವ ನೀರು ಮತ್ತು ಕೊಬ್ಬರಿಗಳೆರಡೂ ಇರದಂತೆ ಮಾಡಿ ಕೇವಲ ಬುರುಡಿಯನ್ನಷ್ಟೇ ದಯಪಾಲಿಸಬೇಕು'' ಎಂದು ವಿನಂತಿಸಿಕೊಂಡರು. ಆಗ ಜಗದ್ಗುರುಗಳು ''ಅತ್ಯಂತ ಕ್ಷುಲ್ಲಕರು ಮತ್ತು ವಿಚಾರಹೀನರಾದ ಗಾರುಡಿಗರು ಮಾಡಿತೋರಿಸುವ ಕಾರ್ಯವಿದು. ಜ್ಞಾನಿಗಳಾದ ಸತ್ಪುರುಷರು ತಮ್ಮ ಮಹಿಮೆಯನ್ನು ಸಣ್ಣ-ಪುಟ್ಟ ಯಾವ ಕಾರ್ಯಕ್ಕೊ ಎಂದೂ ಉಪಯೋಗಿಸುವದಿಲ್ಲ. ಅದು ಹಾಗಿರಲಿ, ಬಿಡು. ನಿಮ್ಮ ಶ್ರೇಷ್ಠ ಗುರುಗಳಾದ ಗೋವಿಂದ ಸ್ವಾಮಿಗಳಿಗೆ ಪ್ರಾಪ್ತವಾಗಿರುವ ಉಜ್ವಲವಾದ ದೇವಿಯ ಉಪಾಸನೆಯ ಬಲವನ್ನು ಪ್ರಸಿದ್ಧ

ಪಡಿಸುವದಕ್ಕೆ ನೀವೇ ಯೋಗ್ಯರಾಗಿರುವಿರಿ. ಇಂದು ನಿಮ್ಮ ಗುರುಗಳ ಕೀರ್ತಿಯು ಪಸರಿಸುವ ಪ್ರಸಂಗ ಪ್ರಾಪ್ತವಾಗಿದೆ ಅದುಕಾರಣ, ನೀವೇ ಈ ಮಾಟವನ್ನು ಮಾಡಿ ತೋರಿಸಿರಿ'' ಎಂದರು.

ಕೂಡಲೇ ಶರೀಫರು ಅಲ್ಲಿದ್ದ ಕಾಯಿಯನ್ನು ತಕ್ಕೊಂಡು ಮೂಸಿಸಿ ಅದನ್ನು ಒಡೆದರು. ಅದು ಬರಿ ಬುರುಡೆಯಾಗಿ ಚೂರು ಚೂರಾಗಿ ಬಿದ್ದವು ! ಆ ಮೇಲೆ ಮತ್ತೊಂದು ಕಾಯನ್ನು ತಕ್ಕೊಂಡು ''ಕಾಯಿಯೇ ಕಾಣದಂತಾಗು'' ಎನ್ನಲು ಅದು ಕೂಡಲೇ ಮಾಯವಾಯಿತು ! ಇವೆರಡೂ ಘಟನೆಗಳನ್ನು ಕಂಡು ಎಲ್ಲರೂ ಆಶ್ಚರ್ಯಚಕಿತರಾದರು.

''ಗುರು-ಶಿಷ್ಯರಿಬ್ಬರು ದೇವಿಯ ಉಪಾಸನೆಯ ಬಲದಿಂದ ಇಂಥ ಮಹಿಮೆಯನ್ನು ತೋರಿಸಿದರು'' ಎಂದು ಸಿದ್ಧಾರೂಢರು ಶ್ಲಾಘನೆ ಮಾಡಿದರು. ಆಗ ಅಲ್ಲಿದ್ದ ಎಲ್ಲ ಶಿಷ್ಯರು ಸದ್ಗುರುಗಳನ್ನು ಕುರಿತು, 'ಈ ಘಟನೆಯ ಗುಟ್ಟೇನು ?'' ಎಂದು ಕೇಳಿದರು.

ಅದಕ್ಕೆ ಆರೂಢರು 'ಈ ದೇಹವೇ ಒಂದು ಕಾಯಿ, ಇದರಲ್ಲಿರುವ ಅಹಂಕಾರ-ಮಮಕಾರಗಳೇ ಕೊಬ್ಬರಿ-ನೀರುಗಳು, ಇವೆರಡನ್ನು ನಿರಸನಗೊಳಿಸುವದೇ ಘ್ರಾಣಿಸುವದಕ್ಕೆ ಅರ್ಥವು. ಅಹಂಕಾರ ಮಮಕಾರಗಳು ಕಾಣದಂತೆ ಉಡುಗಬೇಕಾದರೆ, ಗುರುವರನಿಂದ ಸಂಶಯರಹಿತ ಬೋಧೆಯು ಅತ್ಯವಶ್ಯವು. ಅದು ಅಹಂ-ಮಮ ಭ್ರಾಂತಿಗಳನ್ನು ಕಳೆದು, ಅದ್ವೈತವನ್ನು ಗಟ್ಟಿಗೊಳಿಸಿ, ಜೀವ-ಬ್ರಹ್ಮರ ಐಕ್ಯತೆಯನ್ನು ಸ್ಥಾಪಿಸುವದು ಅದುವೇ ಕಾಯಿಯನ್ನು ಒಡೆದಂತೆ ಇನ್ನು ಕಾಯಿಯನ್ನು ಮಾಯ ಮಾಡುವದೆಂದರೆ ''ಈ ತೋರುವ ಸ್ಥೂಲದೇಹವು ಆದಿಯಲ್ಲಿಯೂ ಇಲ್ಲ, ಅಂತ್ಯದಲ್ಲಿಯೂ ಇರುವದಿಲ್ಲ. ಮಧ್ಯದಲ್ಲಿ ಕೆಲಕಾಲ ತೋರಿ ಅಡಗುವ ಈ ದೇಹವು ಆತ್ಮನಲ್ಲ. ಇದು ಆತ್ಮನಲ್ಲಿ ಅತ್ಯಂತ ಅಭಾವವು'' ಎಂಬುದನ್ನು ದೃಢ ನಿಶ್ಚಯ ಮಾಡಿಕೊಳ್ಳುವದೇ ಕಾಯಿಯನ್ನು ಮಾಯ ಮಾಡುವದರ ಅರ್ಥವಿದು'' ಎಂದು ಸದ್ಗುರುಗಳು ಸಿದ್ಧಿಯ ಅರ್ಥವನ್ನು ವಿವರಿಸಿದರು. ಆಗ ಶರೀಫ ಮೊದಲುಗೊಂಡು ಎಲ್ಲರೂ ಇದು ಸತ್ಯವೆಂದು ಸಂತೋಷಹೊಂದಿದರು.

## ಪದ— ೨೬—೩೧ ಜಮಖಂಡಿ ಅಪ್ಪಾಸಾಹೇಬರು ಬಂದು ಮಠಕ್ಕೆ ರಸ್ತೆ ಮಾಡಿಸಿದ್ದು.

ಮರುದಿವಸ ಸಂಜಾವಿನಲ್ಲಿ ಜಮಖಂಡಿ ಶ್ರೀ ಅಪ್ಪಾಸಾಹೇಬರು, ಪರಮ ಭಕ್ತಿಯುಕ್ತರಾಗಿ ಬಂದು, ಸಿದ್ಧರ ಪಾದ ಪದ್ಮಂಗಳಿಗೆ ನೊಸಲು ಹಚ್ಚಿ ನಮಿಸಿ ಕುಳಿತಿರಲು, ಅದೇ ಸಮಯಕ್ಕೆ ಓರ್ವ ಮುದುಕೆಯು, ಸಿದ್ಧಾರೂಢರ ದರುಶನಕ್ಕೆ ಇಕ್ಕಟ್ಟಿನ ದಾರಿಯಲ್ಲಿ ನುಗ್ಗಿ ಬರುವಾಗ್ಗೆ, ಕಾಲು ಜಾರಿ ಬಿದ್ದಳು, ತಲೆಗೆ ಕಲ್ಲುತಾಕಿ ದಳದಳನೆ ನೆತ್ತರ ಸುರಿಯಹತ್ತಿತು. ಮುದುಕೆಯು ಕಡುಕಷ್ಟದಿಂದ ಅಳುತ್ತ ಗುರುವಿನ ನೆನೆಯುತ್ತ ಬಂದು ಅವರ ಪಾದಕ್ಕೆ ಬಿದ್ದಳು ಆಗ ಆರೂಢರು "ಅವ್ವಾ ಏನಿದು ?" ಎಂದು ಕೇಳಿದರು. ಮುದಕೆವ್ವನು, "ಗುರುವೇ, ನಿನ್ನ ದರುಶನಕ್ಕೆ ಬರುವಾಗ್ಗೆ ದಾರಿತಪ್ಪಿ ತೆಗ್ಗಿನಲ್ಲಿ ಕಾಲುಜಾರಿಬಿದ್ದೆನು" ಎಂದಳು. ಕರುಣಾಸಾಗರನಾದ ಸದ್ಗುರುವು, ಭಸ್ಮವನ್ನು ಲೇಪಿಸಿ ಆಶೀರ್ವದಿಸಿದರು. ಕೂಡಲೆ ಅವಳು ಸುಖಿಯಾದಳು ! ಆಗ ಅಪ್ಪಾಸಾಹೇಬರು ಸಿದ್ಧರ ಮಹಾಮಹಿಮೆಯನ್ನು ಕಂಡು ಚಕಿತರಾದರು ಆರೂಢರು ವೇದ ಪ್ರಮಾಣಗಳಿಂದ ದ್ವೈತವನ್ನು ಖಂಡಿಸಿ ಅದ್ವೈತವನ್ನು ಲಲಿತವಾಗಿ ಸ್ಥಿರಗೊಳಿಸುವ ರೀತಿಯನ್ನು ಕಂಡು "ಇಲ್ಲಿ ಪರಮಾತ್ಮನೇ ಅವತರಿಸಿ ಬಂದಿರುವದು ನಿಜವೆಂದು ಮನಗಂಡರು." ಮತ್ತು "ಸದ್ಗುರು ತಂದೆಯೇ ! ತಮ್ಮ ದರುಶನಕ್ಕೆ ಬರ–ಹೋಗುವದರ ಸಲುವಾಗಿ ಭಕ್ತ ಜನರಿಗೆ ಬಹಳೇ ತೊಂದರೆಯಾಗುತ್ತದೆ. ಅದುಕಾರಣ ತಾವು ಅಪ್ಪಣೆಕೊಡಿಸಿದ್ದಾದರೆ ನಾನು ತೀವ್ರ ಸರಳ ಮಾರ್ಗವನ್ನು ಮಾಡಿಸುವೆನು" ಎಂದು ವಿನೀತರಾಗಿ ನಮಿಸಿದರು. ಗುರುಗಳು ಸಮ್ಮತಿಸಿ ಆಶಿರ್ವದಿಸಿದರು.

ಕೂಡಲೇ ಅಪ್ಪಾಸಾಹೇಬರು ಬುದ್ಧಿವಂತರಾದ ಸೇವಕರನ್ನು ಕರೆಯಿಸಿಕೊಂಡರು. ಮಾರ್ಗವನ್ನು ಸರಿಪಡಿಸುವವರೆಗೂ ತಾವೂ ಸದ್ಗುರುಗಳ ಸನ್ನಿಧಿಯಲ್ಲಿ ಉಳಿದುಕೊಂಡರು. ಮತ್ತು ದಿನಾಲು ಸೇವಕರಿಂದ ಕೆಲಸ ಮಾಡಿಸುತ್ತ ತಾವೂ ಸೇವೆಕೈಕೊಂಡರು. ಸೇವಕರೆಲ್ಲರಿಗೂ ಪಂಚತರದ ಪಕ್ವಾನ್ನಗಳನ್ನು ಮಾಡಿಸುತ್ತ ಅವರೆಲ್ಲರನ್ನು ತೃಪ್ತಿಗೊಳಿಸುತ್ತ ಸಂತೋಷದಿಂದ

ಕಾಲಕಳೆಯುತ್ತ ಕೈಗೊಂಡ ಕಾರ್ಯವನ್ನು ಮೂರು ತಿಂಗಳೊಳಗಾಗಿ ಮ ಕ್ತಾಯ ಗೊಳಿಸಿದರು.

ಒಂದು ದಿವಸ ಸಂಸ್ಥಾನಿಕರು ಸದ್ಗುರುಗಳನ್ನು ಪೂಜಿಸಿ, ಮಡಿಯನ್ನು ಹೊದಿಸಿ ಚರಣಕ್ಕೆ ಕಾಣಿಕೆಯನ್ನು ಸಲ್ಲಿಸಿ, ನಮಸ್ಕರಿಸಿ, ಹೊರಡಲು ಅಪ್ಪಣೆ ಗೊಂಡು ಪಯಣಬೆಳೆಸಿದರು. ಈ ಪ್ರಕಾರ ಶ್ರೀ ಸಿದ್ಧಾರೂಢರ ಕೀರ್ತಿಯ ಲತೆಯು ಓರಂತೆ ಸರ್ವ ಭಕ್ತರ ಹೃದಯವೆಂಬ ಹಂದರದ ಮೇಲೆ ಸುಂದರ ವಾಗ ಹಬ್ಬತೊಡಗಿತು. ಅದು ಹಾಗೆಯೇ ಸುತ್ತಲು ಹಬ್ಬುತ್ತ ವಿಜಾಪುರದ ಷಣ್ಮುಖ ಸ್ವಾಮಿಗಳವರೆಗೂ ಕುಡಿ ಚಾಚಿತು. ಅವರು ಬಂದು ಶಾಂತ ಸಿದ್ಧರ ದರುಶನಗೊಂಡರು. ಕೆಲವು ದಿವಸಗಳವರೆಗೆ ಸದ್ಗುರುಗಳೊಂದಿಗೆ ಆನಂದ ದಿಂದ ಕಾಲ ಕಳೆದು ಪ್ರತಿವರುಷ ಹೋಗಿಬರುವ ಸಾಂಪ್ರದಾಯವನ್ನಿಟ್ಟು ಕೊಂಡರು. ಇದರಂತೆ ಬೆಂಗಳೂರಿನಿಂದ ಶ್ರೀಅನಂತಸ್ವಾಮಿಗಳು ಸದ್ಗುರುಗಳ ಅಗಾಧ ಮಹಿಮೆಗೆ ಒಲಿದು ಪ್ರತಿವರುಷವೂ ಬರ–ಹೋಗುವದನ್ನು ಮಾಡ ಹತ್ತಿದರು. ದೇಶದೇಶಗಳ ಅನೇಕ ಸಾಧುಸತ್ಪುರುಷರು ಬಹು ಪ್ರೇಮದಿಂದ ಬಂದು ಕೂಡುತ್ತಿದ್ದರು. ಕಾರ್ತಿಕ ಮಾಸದ ಶುಕ್ಲಪಕ್ಷವು ಸಮೀಪಿಸಿತು, ಹಿಂದಿನ ಐದಾರು ವರುಷಗಳಿಗಂತಲೂ ಜಾತ್ರೆಯು ಅತಿ ವಿಜೃಂಭಣೆಯಿಂದ ನಡೆಯತೊಡಗಿತು. ಅದೇ ಸಮಯಕ್ಕೆ ಆನೆಯನ್ನು ತರಿಸಿದರು. ಅದರ ಮೇಲೆ ಸುಂದರವಾದ ಸಿದ್ಧರಾಕೃತಿಯ ಮೂರ್ತಿಯನ್ನು ಇಟ್ಟರು. ಹೊನ್ನಕಳಸ, ಪೂಮಾಲೆ, ಛತ್ರ-ಚಾಮರಗಳಿಂದ ಶೃಂಗರಿಸಿದ ಶ್ರೀಗಂಧದ ಪಲ್ಲಕ್ಕಿಯಲ್ಲಿ ಶ್ರೀ ಸದ್ಗುರುಗಳನ್ನು ಕೂಡ್ರಿಸಿದರು ಊರೊಳಗೆ ಒಳ್ಳೇ ವಿಜೃಂಭಣೆಯಿಂದ ಮೆರೆಸುತ್ತ ಮಠಕ್ಕೆ ತಂದು ಸದರಿನಲ್ಲಿ ಕೂಡ್ರಿಸಿದರು. ಕೈಲಾಸದಲ್ಲಿ ಶಂಕರ ನನ್ನು ಪೂಜಿಸಿದಂತೆ. ಅಸಂಖ್ಯಾತ ದೀಪಗಳ ಮಧ್ಯದಲ್ಲಿ ಅವೆಲ್ಲಕ್ಕೆ ಪ್ರಕಾಶ ಬೀರುವ ಚಿಜ್ಯೋತಿಸ್ವರೂಪ ಸಿದ್ಧಸದ್ಗುರುಗಳನ್ನು ಒಳ್ಳೇ ವೈಭವದಿಂದ ಪೂಜೆ ಮಾಡಿದರು. ಯಾತ್ರಿಕರಿಗೆ ಊಟಕ್ಕೆ ಕರೆದು ಎಲೆ ಹಾಕಿದರು.

ಸಪ್ತಾಹಕಾರ್ಯ ಪ್ರಾರಂಭದಿಂದ ಸದ್ಭಕ್ತರು, ಜಿಜ್ಞಾಸುಗಳು ಕೂಡಿ ಶಾಸ್ತ್ರಶ್ರವಣ, ಅಂದ ಚಂದದ ಕೀರ್ತನೆ, ಭಜನೆ, ಪ್ರವಚನ ನಡೆಸಹತ್ತಿದರು. ಆರನೇ ದಿವಸಕ್ಕೆ ಸಮಸ್ತ ಸದ್ಭಕ್ತರು ಸಮಭಾವಚಿತ್ತುಳ್ಳವರಾಗಿ ಕೆರೆಯ

ದಂಡೆಯುಮೇಲೆ ಸಾಲುಗೊಂಡು, ಕಾಂತಿಯುಕ್ತದೀಪಗಳನ್ನು ಹಚ್ಚಿ, ಹೂವಿನ ತೇರಿನಲ್ಲಿ ಶ್ರೀ ಸದ್ಗುರುವರನನ್ನು ಬಹು ವಿಜೃಂಭಣೆಯಿಂದ ಕೂಡ್ರಿಸಿದರು. ಮಂಗಳಾರತಿ ಪಾಡಿ ಹರನಾಮಸ್ಮರಣೆ ಮಾಡುತ್ತ ಸರಸ ವಾದ್ಯ ಗಳೊಂದಿಗೆ ನಲಿನಲಿದು ತೇರನ್ನುತಿರುಗಾಡಿಸಹತ್ತಿದರು. ಕರೆಯುಸುತ್ತಲೂ ನಿಂತ ಯಾತ್ರಿಕ ಅಸಂಖ್ಯಾತ ಜನರು ಹಣ್ಣುಕಾಯಿಗಳನ್ನುಸೂರಿ ಮಾಡುವದು ಲೆಕ್ಕತಪ್ಪಿತು. ಕೆರೆಯತುಂಬ ಹಣ್ಣುಕಾಯಿಗಳು ತೇಲಾಡಹತ್ತಿದವು ಹೀಗೆ ತೇರು ತಿರುಗಾಡಿ ಸುತ್ತ ಮೆರೆಸಿ ಉತ್ಸವ ಮುಗಿಸಿ, ಪಲ್ಲಕ್ಕಿಯಲ್ಲಿ ಮಂಟಪಕ್ಕೆ ಕರೆತಂದು ಕುಳ್ಳಿರಿಸಿ, ಪಾದಪೂಜೆ ಮಾಡಿದರು. ಮರುದಿವಸ ಶಾಸ್ತ್ರ ಶ್ರವಣ, ಕೀರ್ತನೆ ಆದನಂತರ ಅನ್ನಸಂತರ್ಪಣೆ ನಡೆಸಿದರು. ನಂತರ ಗೋಧೂಳಿ ಸಮಯಕ್ಕೆ, ಮಂತ್ರಗಳಿಂದ ಕೆತ್ತಲ್ಪಟ್ಟ, ಶ್ರೀಗಂಧದ ಸುಂದರ ದೊಡ್ಡತೇರಿನ ಮಧ್ಯಮಂಟಪಕ್ಕ, ಪೂಮಾಲೆ ಕೇತಕಿ ಮೊದಲಾದವುಗಳಿಂದ ಶೃಂಗರಿಸಲ್ಪಟ್ಟಸಿಂಹಾಸನದ ಮೇಲೆ ಕುಳ್ಳಿರಿಸಿದರು ಬಳಿಕ ಜರೀಪಿತಾಂಬರ ಹೊದಿಸಿ, ಪೂಮಾಲೆಗಳನ್ನು ಹಾಕಿ ನವರತ್ನಗಳಿಂದ ಕೆತ್ತಲ್ಪಟ್ಟಸುವರ್ಣ ಕಿರೀಟವನ್ನು, ಮಸ್ತಕದ ಮೇಲೆ ಇಟ್ಟುಸುಮಂಗಲೆಯುಲೆಯರು ಆರತಿ ಎತ್ತಿಮಂಗಳ ಪಾಡಿದರು. ಸಮಸ್ತಜನರೂ, ಪಾರ್ವತೀ ಪತಿ—ಹರಹರ ಮಹಾದೇವ ಎಂದು ಜೈಘೋಷದಿಂದ ಮಹಾ ತೇರನ್ನು ಎಳೆದು, ತಿರುಗಿ ಪಾಜೇಗಟ್ಟಿಗೆ ತಂದು ನಿಲ್ಲಿಸಿದರು. ಅಲ್ಲಿಂದ ಸದ್ಗುರುಗಳನ್ನು ಪಲ್ಲಕ್ಕಿಯಲ್ಲಿ ಕರೆತಂದು ಸುಂದರವಾದ ಭವ್ಯಮಂಟಪದ ಮಧ್ಯದಲ್ಲಿ ಪರಶಿವನ ಸಿಂಹಾಸನಕ್ಕೆ ಸರಿಯಾದ ಪೀಠದ ಮೇಲೆ ಇಳಿಸಿದರು. ಸಾಂಪ್ರದಾಯ ಪ್ರಕಾರ ಪಾದಪೂಜೆ ಪ್ರಾರಂಭವಾಗಲು ಅಗಣಿತ ಮದ್ದು ಸುಟ್ಟರು.

ಇದರಂತೆ ಮೂರು ವರುಷಗಳವರೆಗೆ, ಸಂತಸವಾಗಿ ಜಾತ್ರೆಯು ಸಾಂಗವಾಗಿ ಸಾಗು. ನಂತರ ಗುಡಿಯ ಹಿಂಭಾಗದಲ್ಲಿರುವ, ಹೂವಿನ ತೋಟದಲ್ಲಿ ಎಲ್ಲ ಭಕ್ತರೂ, ಸದ್ಭಾವದಿಂದೊಡಗೂಡಿ, ಶಾಂತ ಮನಸ್ಸಿನಿಂದ, ಸದ್ಗುರುಗಳ ಸಮಾಧಿಯನ್ನು ಕಟ್ಟಿಸಿದರು. ಮುಂದೆ ಜಾತ್ರೆಯು, ಮಾಘಮಾಸ ಬಹುಳ ಅಷ್ಟಮಿ ಬ್ರಾಹ್ಮೀ ಮುಹೂರ್ತದಲ್ಲಿ, ಸಪ್ತಾಹದೊಡನೆ ಭಜನೆ ಪ್ರಾರಂಭವಾಗಿ, ನಿತ್ಯ ಅನ್ನಸಂತರ್ಪಣೆ, ಬೆಳಗಿನಜಾವದಲ್ಲಿ ಶಾಸ್ತ್ರ ಶ್ರವಣ, ಸಂಜೆಗೆ ಕೀರ್ತನೆ, ಸಂತರ ಭಜನೆಯೊಂದಿಗೆ ಮಹಾಪೂಜೆಯಾಗುವದು. ಅನು—

ಮಾಸ್ಯೆಯ ದಿವಸ ಬೃಹದ್ರಥೋತ್ಸವವನ್ನು ಮಾಡುತ್ತ, ಮರುದಿನ ಅಪಃಕಾಲ-ದಲ್ಲಿ ಮಹಾಸಪ್ತಾಹವನ್ನು ಮುಕ್ತಾಯಗೊಳಿಸಿದರು. ಶ್ರಾವಣ ಜಾತ್ರೆಯಲ್ಲಿ ಕೆರೆಯೊಳಗೆ ಹೂವಿನ ತೇರನ್ನು ಎಳೆಸುವದು, ಸರಿಯೋಗುವದೆಂದು ಹರುಷದಿಂದ, ಎಲ್ಲ ಭಕ್ತರು ಒಪ್ಪಿದರು. ಅದರಂತೆ ಜಾತ್ರೆಯನ್ನು ಬಿಡದೆ ಮಾಡ—ತೊಡಗಿದರು. ಅವರಲ್ಲಿ ವಿಜಾಪುರದ ರಾಮದಾಸರು, ಕೀರ್ತನೆಯ ಸೇವೆ—ಯನ್ನು ಕಡೆಯವರೆಗೂ, ಮಾಡುವೆನೆಂದು ಅದರ ಸಾಂಪ್ರದಾಯವನ್ನು ಹಾಕಿಕೊಂಡರು. ಅದರಂತೆ ತಿರಕೆಂಭಟ್ಟರೂ, ಕೀರ್ತನ ಸೇವೆಗೆ ಒಪ್ಪಿಕೊಂಡರು. ಸರಳವಾಗಿ ಹೀಗೆ ಜಾತ್ರೆಯು ಎರಡು ವರುಷ ಸಾಂಗವಾಗಿ ಜರುಗಿತು ಅಷ್ಟರಲ್ಲಿ ಕಡು ಭಯಂಕರ ಪ್ಲೇಗವೆಂಬುವ ಕೆಡಕು ರೋಗವು ಜಗತ್ತಿನ ತುಂಬ ಹಬ್ಬಿತು. ಅದರಿಂದ ಜನರು ತೀವ್ರ ಮೃತ್ಯುವಿನ ಬಾಯಿಗೆ ತುತ್ತಾಗುತ್ತ ಭೂಮಿಯು ಶವಮಯವಾಯಿತು. ಸರಕಾರವು ಅದನ್ನರಿತು ಜನಸಮೂಹವು ಕೂಡಬಾರದೆಂದು ಕಡುಕಟ್ಟಪ್ಪಣೆ ಮಾಡಿತು.

ಸದ್ಗುರುಗಳು ಜಾತ್ರೆ ಮಾಡುವದನ್ನು ನಿಲ್ಲಿಸಿ ಸಾಂಪ್ರದಾಯ ತಪ್ಪಿಸಬಾರದೆಂದು ಎರಡು ವರುಷ ಜಾತ್ರೆಯನ್ನು ಸಂಕ್ಷಿಪ್ತವಾಗಿ ಮುಗಿಸಿದರು. ಪ್ಲೇಗಿನ ಬೇನೆಯು ನಿಲ್ಲಲು, ಜಾತ್ರೆಯು ಮತ್ತೆ ಮೊದಲಿನಂತೆ ವರುಷವರುಷಕ್ಕೆ ಹೆಚ್ಚೆಚ್ಚಾಗಿ ಒಳ್ಳೇ ವೈಭವದಿಂದ ಜರುಗಹತ್ತಿತ್ತು ಗುರುವಿನ ಕರುಣವೆಂಬ ಶರಧಿಯು ಉಕ್ಕುತ್ತ ದೇಶದ ತುಂಬ ಹೊರಚಲ್ಲಿತು.

ಈ ಕೀರ್ತಿಯ ದುಂದುಭಿಯನ್ನು ಕೇಳಿ ದೇಶದೇಶದ ಮೂಲೆ ಮೂಲೆಗಳಿಂದ ಜನರು ಬರಹತ್ತಿದರು. ಶ್ರೀ ಕಾಶೀನಾಥ ಛತ್ರೆ ಎಂಬವನು ಪರಮ ಭಕ್ತಿಯಿಂದೊಡಗೂಡಿ ತಪ್ಪದೆ ಸದ್ಗುರುಗಳ ಸನ್ನಿಧಿಗೆ ಬರಹೋಗುವದನ್ನಿಟ್ಟುಕೊಂಡನು. ಸಮಾಧಿಯ ಮುಂದೆ ಪಡಸಾಲೆಯನ್ನೂ ಅದರ ಮುಂದೆ ಪಾತಾಳಂಕಣವನ್ನೂ ಹುಮ್ಮಸದಿಂದ ಬಲು ಸುಂದರವಾಗಿ ಕಟ್ಟಬೇಕೆಂದು ಶುಕ್ಕಪ್ಪ ಖಂಡಪ್ಪ ಇವರು ನಡಕಟ್ಟಿ ನಿಂತರು. ಅದಕ್ಕೆ ಬೇಕಾಗುವ ತರತರದ ಕಲ್ಲಿನ ತೊಲೆ, ಕಂಬ, ಬೋದಿಗೆ ಮೊದಲಾದವುಗಳನ್ನು, ಗೋಡೆ ಕಟ್ಟುವದಕ್ಕೆ ದಿಂಡುಗಲ್ಲುಗಳನ್ನೂ ತರಿಸಿದರು. ಅವುಗಳನ್ನು ಜಿನುಗಾಗಿ ಮನೋಹರ

ವಾಗುವಂತೆ ಕೆತ್ತಿಸಿ, ಹದಗೊಳಿಸಿದಗಚ್ಚಿನಿಂದಬಲುಬಂಧುರವಾಗಿ ಕಟ್ಟಿಸಿದರು ಮೇಲೆ ದಬಾಸು ಹಾಕುವ ಹಾಸುಗಲ್ಲುಗಳಲ್ಲಿ ಕಮಲವನ್ನೂ, ಮುಂಬದಿಯಲ್ಲಿ ಹಾಕುವ ಅಂತರಾಣಿ ಕಲ್ಲಿನಲ್ಲಿ ಸರ್ಪವನ್ನೂ ಮತ್ತು ಅದರ ಮುಂದಿನ ಅಂತರಾಣಿ ಜೋಡಿರುವ ಶಿಲೆಗಳಲ್ಲಿ ಈಶಾವಾಸ್ಯೋಪನಿಷತ್ತಿನ ಮಂತ್ರಗಳನ್ನು ಕೆತ್ತಿಸಿ ಕಟ್ಟಡವನ್ನು ೧೯೬೭ ನೇ ಇಸ್ವಿಗೆ ಮುಕ್ತಾಯಗೊಳಿಸಿದರು.

ಅಕ್ಕಲಕೋಟ ಶರಣಪ್ಪನವರು ಮಠದ ಸಮೀಪಕ್ಕೆ ಒಂದು ಜಾಗಾ ಖರೀದಿಗೆ ತಕ್ಕೊಂಡು ಆ ಜಾಗೆಯಲ್ಲಿ ರುದ್ರಾಕ್ಷಿ ಮಂಟಪವನ್ನು ರಚಿಸಿದರು. ಜಾತ್ರೆಯ ಸಮಯಕ್ಕೆ ಮಠಕ್ಕೆ ಬಂದು ತಾವು ರಚಿಸಿದ ಮಂಟಪದಲ್ಲಿ ಸಿದ್ಧಾ-ರೂಢರನ್ನು ಕರೆತಂದು ವೈಭವದಿಂದ ಪಾದಪೂಜೆಯನ್ನು ಮಾಡುತ್ತಿದ್ದರು. ಮತ್ತು ಏಳು ದಿವಸ ಅನ್ನಸಂತರ್ಪಣೆ ನಡೆಸಿದರು, ಇದು ಅಲ್ಲದೆ ಅಲ್ಲಿಯೇ ಸಿದ್ಧಾರೂಢರ ಮೂರ್ತಿಯನ್ನು ಸ್ಥಾಪನಮಾಡಿ ಅಹೋರಾತ್ರಿ "ಸಿದ್ಧಾರೂಢ ಸದ್ಗುರು ತಂದೆ ಉದ್ಧಾರಾದೆವೊ ನಿಮ್ಮಿಂದ" ಅನ್ನುವ ಭಜನೆಯನ್ನು ಅವರು ಹಾಕಿ ಕೊಟ್ಟ ಸಾಂಪ್ರದಾಯವನ್ನು, ತಾಳವನ್ನು ಕೆಳಗಿಡದೆ ಇಂದಿನವರೆಗೂ ಹಾಗೆಯೇ ಕಟಿಯುತ್ತಿರುವರು. ಬಳಿಕ ಸ್ವಾಮಿಯ ಮಹಾಪೂಜೆಯ ಕಾಲಕ್ಕೆ ಸದ್ಗುರುವಿನ ಸದರಿನ ಮುಂದೆ ಸಭೆಯ ಮಧ್ಯದಲ್ಲಿ ಮೇಜಿನ ಮೇಲೆ ನಿಂತು ತಾಸೆರೆಡು ತಾಸು ಭಜನೆಯನ್ನು ತಾವೇ ಅಲ್ಲಿಯೇರಚಿಸಿ ಅನ್ನುತ್ತಿದ್ದರು. ಪುನಃ ಅದನ್ನು ಸರ್ವ ಜನ ಯಾತ್ರಿಕರ ಮುಖದಿಂದ ಅನ್ನಿಸುತ್ತಿದ್ದರು.

ಸಿದ್ಧಾರೂಢ ಸದ್ಗುರುತಂದೆ | ಉದ್ಧಾರಾದೆವೊ ನಿಮ್ಮಿಂದೆ ||

ಉದ್ಧಾರಾದೆವೊ ನಿಮ್ಮಿಂದೆ | ನೀವೀಲೊಕಕ ಬಂದಿಂದೆ|
ನೀವೀಲೋಕಕ ಬಂದಿಂದೆ ನಿಮ್ಮ ಪಾದವಕಂಡಿಂದೆ||
ಸಿದ್ಧಾರೂಢ ಸದ್ಗುರು ತಂದೆ | ಉದ್ಧಾರಾದೆವೊ ನಿಮ್ಮಿಂದೆ||೧||

ಉದ್ಧಾರಾದೆವೊ ನಿಮ್ಮಿಂದೆ | ನಿಮ್ಮ ಸೇವೆಯಗೊಂಡಿಂದೆ |
ನಿಮ್ಮ ಸೇವೆಯಗೊಂಡಿಂದೆ | ನಿಮ್ಮ ಕರುಣ ಪಡೆದಿಂದೆ |
ಸಿದ್ಧಾರೂಢ ಸದ್ಗುರು ತಂದೆ ಉದ್ಧಾರಾದೆವೊ ನಿಮ್ಮಿಂದೆ ||೨||

ನಿಮ್ಮ ಕರುಣ ಪಡೆದಿಂದೆ ! ನಿಮ್ಮ ವಾಕ್ಯವ ಕೇಳಿಂದೆ ||
ನಿಮ್ಮ ವಾಕ್ಯವ ಕೇಳಿಂದೆ ! ಸಂಶಯ ವಳದಿಂದೆ |
ಸಿದ್ಧಾರೂಢ ಸದ್ಗುರು ತಂದೆ | ಉದ್ಧಾರಾದೆವೊ ನಿಮ್ಮಿಂದೆ ||೩||

ಉದ್ಧಾರಾದೆವೊ ನಿಮ್ಮಿಂದೆ | ಎಲ್ಲಾ ಸಂಶಯ ನೀಗಿಂದೆ |
ಎಲ್ಲಾ ಸಂಶಯ ನೀಗಿಂದೆ | ಬಲ್ಲಿದನಾದೆನು ನಿಮ್ಮಿಂದೆ |
ಸಿದ್ಧಾರೂಢ ಸದ್ಗುರು ತಂದೆ | ಉದ್ದಾರಾದೆವೊ ನಿಮ್ಮಿಂದೆ ||೪||

ಬಲ್ಲಿದನಾದೆನು ನಿಮ್ಮಿಂದೆ | ಎಲ್ಲವು ನಾನೆ ತಿಳಿದಿಂದೆ |
ಎಲ್ಲವು ನಾನೆ ತಿಳಿದಿಂದೆ | ಎಲ್ಲವು ನಾನೇ ನಾನಾದಿಂದೆ |
ಸಿದ್ಧಾರೂಢ ಸದ್ಗುರು ತಂದೆ | ಉದ್ಧಾರಾದೆವೊ ನಿಮ್ಮಿಂದೆ ||೫||

ಸಿದ್ಧಾರೂಢ ತಾಯಿ–ತಂದೆ | ಸಾಧುಗಳೆ ನಂಬಳಗದ ಮಂದಿ ||
ಸಿದ್ಧಾರೂಢರ ಅಂಗಾರ | ಜಗತ್ತೆಲ್ಲಾ ಬಂಗಾರ ||
ಸಿದ್ಧಾರೂಢರ ಜೋಳಿಗಿ ಜಗತ್ತಿಗೆಲ್ಲಾ ಹೋಳಿಗಿ ||
ಸಿದ್ಧಾರೂಢ ದಯಾಳಾ | ನಮ್ಮನ ಮಾಡಿದ ಝಳಾಝುಳಾ ||
ಸಿದ್ಧಾರೂಢರ ಉಪದೇಶ | ತತ್ವಂ ಅಸಿಪದ ನಿರ್ದೇಶ ||
ಸಿದ್ಧಾರೂಢರ ವಾರ್ತಿ | ಜಗತ್ತಿಗೆಲ್ಲಾ ಕೀರ್ತಿ ||
ಜಗತ್ತಿಗೆಲ್ಲಾ ಕೀರ್ತಿ | ಇರುವುದೊಂದೇ ಮೂರ್ತಿ ||

ಸಾಧು ಬಂದನ ನೋಡ ತಂಗಿ | ಸಿದ್ಧಾ ಬಂದನ ನೋಡ ನೋಡ ||
ಜಗತ್ತುದ್ಧಾರ ಮಾಡುವಂಥ | ಸಾಧು ಬಂದನ ನೋಡ ತಂಗಿ
ಸಿದ್ಧಾ ಬಂದನ ನೋಡ ನೋಡ ||
ಕೈಲಾಸದೊಡೆಯ ನೋಡ ನೋಡ | ಜಗತ್ತದೊಡೆಯನ ನೋಡ ನೋಡ ||
ತ್ರಿಲೋಕದೊಡೆಯನ ನೋಡ ನೋಡ | ಸಾಧು ಬಂದನ ನೋಡ ತಂಗಿ
ಸಿದ್ಧಾ ಬಂದನ ನೋಡ ನೋಡ ||
ಮಂಟಪ ಪೂಜಾ ನೋಡ ನೋಡ | ಕಂಟಿ ಹೋಗತೈತಿ ನೋಡ ನೋಡ |
ಇಲ್ಲೆ ಕುಂತಾನ ನೋಡ ನೋಡ | ಎಡಕ ನೋಡು ಬಲಕ ನೋಡು |
ಹಿಂದೆ ನೋಡು | ಮೇಲೆ ನೋಡು ಕೆಳಗೆ ನೋಡು |

ಎಲ್ಲಿ ನೋಡೆ ಅಲ್ಲಲ್ಲಿ ಅವನೇ ನೋಡ ತಂಗಿ |
ಸಿದ್ಧಾ ಬಂದನ ನೋಡ ನೋಡ ||

ಸಿದ್ಧ ಪೂಜೆ ಮಹಿಮಾನ | ಮೋಕ್ಷ ಫಾಲಿ ಲೋಟಾಂಗಣ ||
ಮಧ್ಯಭಾಗಿ ಸಿಂಹಾಸನ | ದೋಹಿಭಾಗಿ ಸಂತಜನ ||ಪ||
ಬಾಳಿ ವಿಭೂತಿ ಅರ್ಚನೆ | ಭಕ್ತ ಕರತಿ ಅರ್ಚನ ||
ಗಳ ಪುಷ್ಪ ಜೇತಿ ಹಾರ | ಶೋಭತಾತ ಮನೋಹರ ||
ಕುಠಿ ಗೋಪು ಹಾತಿ ತೋಡೆ | ರೂಪ ಬ್ರಹ್ಮಲಾನಾ ತೊಡೆ ||
ಶಿರಿ ಸುವರ್ಣಾಚಾ ಮುಕುಟ ! ಶೋಭೆ ತಾತಿ ನೀಲ ಕಂಠ ||
ಶೋಭೆ ಸುಂದರತಿಕಾಯ | ಸುವರ್ಣಶೇಷಧರಿ ಛಾಯ ||
ದಾಸವೀನವೀ ಪಾಂಡುರಂಗ | ಕಂಠಿರಾಹೋ ಆಭಂಗ ||

ಈ ಪ್ರಕಾರ ಶರಣಪ್ಪನವರು ಮಹಾತ್ಮರ ಮಹಾ ಪೂಜಾದ ಪಡದೆ ಎತ್ತುವ ವರೆಗೂ ಒಂದು ತಾಸು ಕೀರ್ತನೆಯನ್ನು ಮಾಡಿ ಸರ್ವ ಸಭಿಕರ ಮನಸ್ಸನ್ನು ಭಕ್ತಿರಸದಲ್ಲಿಮುಳುಗಿಸಿ, ಆನಂದಸಾಗರದಲ್ಲಿ ಮೈಮರೆಸಿ, ತಾವೂ ಮೈ ಮರೆಯುತ್ತಿದ್ದರು. ಹೀಗೆ ಜಾತ್ರೆಗೆ ಬಂದ ಎಲ್ಲ ಸದ್ಭಕ್ತರನ್ನು ಕೃತಾರ್ಥ ರನ್ನಾಗಿ ಮಾಡುತ್ತಿದ್ದರು, ಇದರಂತೆ ಅಕ್ಕಲಕೋಟ ಶರಣರು ಹಾಕಿಕೊಟ್ಟ ಸಾಂಪ್ರದಾಯವು ಇಂದಿಗೂ ಹಾಗೆಯೇ ನಡೆಯುತ್ತ ಬಂದಿರುವದು.

ನಿರಂಜನ ಬಾಬು ಎಂಬುವನು ನಯ, ವಿನಯ, ಭಯ–ಭಕ್ತಿ ಯುಕ್ತ ನಾಗಿ ಬಂದು ಸದ್ಗುರು ಸೇವೆಯಲ್ಲಿ ನಿರತನಾದನು. ಇದರಂತೆ ಹರಿದ್ವಾರ, ಸಿದಗುರಾ, ಹೃಷಿಕೇಶ, ನಾಸಿಕ, ಕಾಶಿ ಮೊದಲಾದ ಭರತಖಂಡದಲ್ಲಿರುವ ಎಲ್ಲ ಮಹಾತ್ಮರು ಬಂದು ಬ್ರಹ್ಮಜಿಜ್ಞಾಸ ಮಾಡಿಕೊಂಡು, „ಜಗದೀಶ್ವರನೇ ಜಗದುದ್ಧಾರಕ್ಕೆ ದಕ್ಷಿಣಾಮೂರ್ತಿಯಾಗಿ ಇಲ್ಲಿಬಂದು ನೆಲೆಸಿರುವದೇ ನಿಜವು" ಎಂದು ತಿಳಿದು ಪರಮ ಸದ್ಭಕ್ತಿಯಿಂದ ಸಾಷ್ಟಾಂಗದಿಂ ವಂದಿಸಿ ಹೋಗು ತ್ತಿದ್ದರು.

ಮಂಗಳ— ಭರತ ಖಂಡದೆ ದ್ವೈತಮತವ |
ನ್ನಿರದೆ ಖಂಡನಗೈದು ತಾಂ ಸಲೆ |
ಪರತರಾದ್ವೈತವನು ಮಂದಿಸಿ ಬ್ರಹ್ಮಸೂತ್ರಕ್ಕೊ ||

ಪರಮ ಶ್ರುತಿಗಳಿಗುಂ ಸುಭಾಷ್ಯವ ।
ಒರೆಯಲಿಕೆ ಶಂಕರನೆ ತಾನವ ।
ತರೆಸಿ ಬಂದಿಹ ಸಂಕರಾಚಾರ್ಯನಿಗೆ ನಾಂ ನಮಿಪೆ ॥

ಇತಿ ಶ್ರೀ ಸದ್ಗುರು ಸಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ—
ಲೀಲಾ ಚರಿತ್ರ ಕಲ್ಪದ್ರುಮದೊಳು ಮಠಸ್ಥಾಪನವೆಂಬ
೩೩ ನೇ ಅಧ್ಯಾಯ ಸಮಾಪ್ತಿ.

———

॥ ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ॥



# ವೈಭವಕಾಂಡ

## ಅಧ್ಯಾಯ ೩೪

ಈ ಅಧ್ಯಾಯದಲ್ಲಿ ಪಾಠಶಾಲೆಯನ್ನು ಕಟ್ಟಿಸಿದ್ದು, ಅದರಲ್ಲಿ ಶಿಷ್ಯರ
ಅಧ್ಯಯನ ಮಾಡುವದು.

ರುದ್ರಾಕ್ಷಿ ಮಠಕ್ಕೆ ಪಲ್ಲಕ್ಕಿ ಹೋಗುವ ಸಾಂಪ್ರದಾಯ ಬೆಳೆದದ್ದು.

ವಿಷಪ್ರಯೋಗದಿಂದ ಸ್ವಾಮಿಗಳು ಪಾರಾದದ್ದು ಒಬ್ಬ ಕುಟಿಲ ಸಾಧ
ವನ್ನು ಮಠದಿಂದ ಹೊರಗೆ ಹಾಕಿದ್ದು ಮತ್ತೆ ವಿಷ ಹಾಕಿದ ಮುದುಕಿ

ಹುಚ್ಚು ಹೆಚ್ಚಾಗಲು ಆಕೆಗೆ ಮುಕ್ತಿಯನ್ನು ಕೊಟ್ಟದ್ದು. ಕಬೀರದಾಸರ ನಿರ್ವಾಣವು.

ಗಡ್ಡೆಯ ತೇರು ಕಟ್ಟಿಸಿದ್ದು ಹುಬ್ಬಳ್ಳಿ ತೇಜಪ್ಪನು ಭೂದಾನ ಮಾಡಲು ಅದನ್ನು ವಿಸ್ತಾರವಾಗಿ ಮಾರ್ಗ ಸರಿ ಮಾಡಿಸಿದ್ದು. ಸಿದ್ಧರ ಕೀರ್ತಿ ಹಬ್ಬಿದ್ದು.

ಟಿಳಕನು ಅರ್ಥ ಬರೆದ ಭಗವದ್ಗೀತೆಯನ್ನು ನಿರಾಕರಿಸಿ ಅವನ ಗರ್ವಭಂಗ ಮಾಡಿದ ವಿಷಯಗಳು ಒಳಗೊಂಡಿರುವವು.

ಸ್ತೋತ್ರ— ಸರುವ ಪ್ರಸ್ಥಾನಗಳ ಗರ್ಭವ ।
ನರಿದು ದಿವ್ಯಾಗಮುಗಳೆಲ್ಲವ !
ನರಿದು ನಾನಾ ತರದ ಮತವಾದಿಗಳ ಶಾಸ್ತ್ರಗಳ ||
ಅರಿದು ಖಂಡನ ಮುಂಡನಂಗೈ ।
ದಿರಿಸಿ ಜಗದೋದ್ಧಾರಗೋಸುಗ ।
ಭರದಿ ಷಟ್‌ಶಾಸ್ತ್ರವನು ರಚಿಸಿಹ ನಿಜಗುಣಿಗೆ ನಮಿಸೇಂ ||

## ಪದ— ೧-೬ ಪಾಠಶಾಲೆ ಕಟ್ಟಿಸಿದ್ದು

ಈ ಪ್ರಕಾರ ಮಠದಲ್ಲಿ ಸತ್ಸಂಗವು, ದಿನದಿನಕ್ಕೆ ಹೆಚ್ಚಾಗಹತ್ತಿತು. ಹೀಗಾಗಲು ಮುಖ್ಯ ಮುಖ್ಯ ಸದ್ಭಕ್ತರೆಲ್ಲರೂ ಕೂಡಿ, ಶಿಷ್ಯರಿಗೆ ಅಧ್ಯಯನ ಮಾಡಲಿಕ್ಕೂ, ಶಾಸ್ತ್ರಶ್ರವಣಕ್ಕೂ, ಜಾತ್ರೆಯಲ್ಲಿ ಸಂತ ಜನರು ಇಳಿದುಕೊಂಡು ಸುಖಿಸುವದಕ್ಕೂ, ಪ್ರತಿ ಸೋಮವಾರ ಕೀರ್ತನಕ್ಕೂ ಮತ್ತು ಶ್ರೀ ಸ್ವಾಮಿಗಳವರ ದಿವ್ಯ ಪಾದಪೂಜೆಗೆ ಹೀಗೆ ಎಲ್ಲಕ್ಕೂ ಅನುಕೂಲವಾಗಲೆಂದು ತೀವ್ರವಾಗಿ ವಿಶಾಲವಾದ, ಪಾಠಶಾಲೆಯನ್ನು ಕಟ್ಟಿಸಿದರು. ನಂತರ ಪ್ರತಿ-ವರುಷದಲ್ಲಾಗುವ, ನೀರಿನ ಕೊರತೆಯನ್ನು ದೂರ ಮಾಡಬೇಕೆಂದು, ಕೆರೆಯನ್ನು ಕಡಿಸಿ ಅದಕ್ಕೆ ಕಲ್ಲಿನ ಸರಳ ಪಾವಟಿಗೆಗಳನ್ನು ಕಟ್ಟಿಸಿದರು. ಈ ಪ್ರಕಾರ ಮನೋಹರವಾಗಿ ಶೋಭಿಸುವ ಸಿದ್ಧಾಶ್ರಮದಲ್ಲಿ ಕೆಲವು ಸಾಧು-ವರ್ಯರು, ಬ್ರಹ್ಮಜಿಜ್ಞಾಸವನ್ನೂ, ವ ತ್ತಿತರರು ವೇದಾಧ್ಯಯನವನ್ನೂ, ಮಾಡಹತ್ತಿರುವ ಮತ್ತು ಕೆಲವರು ತರ್ಕ, ನ್ಯಾಯ, ವ್ಯಾಕರಣ, ವೇದಾಂತ

ಮೊದಲಾದವುಗಳನ್ನು ಓದಹತ್ತಿದರು. ಇದು ಅಲ್ಲದೆ ಹಲವರು ಗುರುಕೃಪೆಗೆ ಪಾತ್ರರಾಗಿ, ವೇದಾಂತ ಗ್ರಂಥಗಳನ್ನು ವಿರಚಿಸಹತ್ತಿದರು. ಹಲವರು ಸ್ತೋತ್ರ ಗ್ರಂಥಗಳನ್ನು ಛಂದಸ್ಸು ಮೊದಲಾದ ಗ್ರಂಥಗಳನ್ನು ವಿರಚಿಸಿದರು. ಇಂಥ ಕಾರ್ಯವು ನೀಗದ ಅನೇಕರು, ''ಸೇವಾ ಪರಮಧರ್ಮೋ ಯೋಗಿ ನಾಮಪ್ಯಗಮ್ಯಾ'' (ಸೇವೆಯೇ ಶ್ರೇಷ್ಠ ಧರ್ಮವು ಯೋಗಿಗಳಿಗೆ ಸಹ ಸಿಗಲಾರದು) ಎಂಬ ಮಾತನ್ನು ಮನವರಿಕೆ ಮಾಡಿಕೊಂಡು ಗುರುಸೇವೆಯನ್ನೇ ತಮ್ಮ ಆಚರಣೆಯನ್ನಾಗಿ ಮಾಡಿಕೊಂಡರು. ಕೆಲವರು ಬರ ಹೋಗುವ ಭಕ್ತರಿಗೆ ಪಾಕವನ್ನು ಮಾಡುವ ಕಾಯಕವನ್ನು ಕೈಕೊಂಡರು. ಹಲವರು ಊಟಕ್ಕೆ ಕರೆಯುವದನ್ನೂ ಅಡಿಗೆಗೆ ಸಾಮಾನು ತರುವದನ್ನೂ ಮಾಡಹತ್ತಿದರು. ಎಷ್ಟೋ ಜನರು ಶ್ರವಣಕ್ಕೆ ಬರಹತ್ತಿದರು. ಎಷ್ಟೋ ಜನರು ಸ್ವಾಮಿಯ ದರುಶನ ಮಾಡಿಕೊಂಡು ಅವರ ಕೃಪೆಗೆ ಪಾತ್ರರಾಗಿ ತಮ್ಮ ಭ್ರಾಂತಿ, ಜನ್ಮ, ಜರಾ, ಮೃತ್ಯು ಮೊದಲಾದ ದುಃಖಗಳಿಂದ ದೂರಾಗಿ ಧನ್ಯರಾದರು. "ಗುರುವೇ ? ನಿನ್ನ ಕರುಣವೆಷ್ಟಿರಬಹುದು ?'' ಎಂದು ಅವರೆಲ್ಲರೂ ನಾನಾಪರಿಯಿಂದ ಸ್ತುತಿಸಹತ್ತಿದರು.

## ಪದ— ೭-೧೨ ರುದ್ರಾಕ್ಷಿ ಮಠಕ್ಕೆ ಪಲ್ಲಕ್ಕಿ ಹೋಗುವ ಸಾಂಪ್ರದಾಯ ಬೆಳೆದದ್ದು

ಈ ಪ್ರಕಾರ ಮೆರೆಯುತ್ತಿರುವ ವೈಭವವನ್ನು ರುದ್ರಾಕ್ಷಿಮಠದ ಶ್ರೀಗುರುಗಳಾದ ಚನ್ನಮಲ್ಲ ಸ್ವಾಮಿಗಳು ನೋಡಿ ಮನಪೊಲಿದು ಸಿದ್ಧಾರೂಢರನ್ನು ಪಲ್ಲಕ್ಕಿ ಉತ್ಸವದೊಡನೆ ತಮ್ಮ ಮಠಕ್ಕೆ ಕರೆತಂದರು. ಆರೂಢರನ್ನು ಒಳ್ಳೇ ವಿಜೃಂಭಣೆಯಿಂದ ಪೂಜಿಸಿ ಹರುಷಾಬ್ಧಿಯಲ್ಲಿ ಮುಳುಗಿದರು. ಆಮೇಲೆ ಶಿವಭಜನೆಯೊಂದಿಗೆ ಮರಳಿ ಮಠಕ್ಕೆ ಬೀಳ್ಕೊಟ್ಟರು. ಭಕ್ತರಾದವರು ತಮ್ಮ ತಮ್ಮ ಮನೆಗಳಿಗೆ ಉತ್ಸವದಿಂದ ಕರೆದೊಯ್ದು ಪಾದಪೂಜೆ ಮಾಡಿ ಕಾಣಿಕೆಯನ್ನು ಕೊಡಹತ್ತಿದರು. ಸಿದ್ಧಾರೂಢರಿಗೆ ಸಲ್ಲುವ ಮಾನ ಮನ್ನಣೆ ಸಿಗುವ ಈ ತರದ ಸೌಭಾಗ್ಯವನ್ನು ಮತವಾದಿಗಳು ಕಂಡು ಅಸೂಯೆಯುಳ್ಳವರಾಗಿ ಕೋಪಗೊಂಡು ತಳಮಳಿಸಹತ್ತಿದರು. ಮುಂದೆ ಶಿವರಾತ್ರಿಯು ಬಂದಿತು. ಆಗ ಕೆಲವು ಜಂಗಮರು ಮತ್ಸರ ತುಂಬಿಕೊಂಡು ರುದ್ರಾಕ್ಷಿಮಠಕ್ಕೆ ಬಂದರು.

ಶ್ರೀ ಚನ್ನಮಲ್ಲಸ್ವಾಮಿಗಳನ್ನು ಕುರಿತು, "ಗುರುಗಳೇ, ಏನಿದು ? ಇಷ್ಟಲಿಂಗವನ್ನು ತೋರಿದು, ಜನರಿಂದ ಭ್ರಷ್ಟನೆಂದು ನಿಂದೆಹೊಂದಿದ ಭವಿಯನ್ನು ಈ ಮಠದಲ್ಲಿ ಕರೆತಂದು ತಿಳಿದವರಾದ ನೀವು ಪೂಜೆ ಮಾಡುವದು ಉಚಿತವೆ ? ಆದದ್ದು ಆಗಿಹೋಯಿತು. ಇನ್ನು ಮುಂದೆ ಎಂದೂ ಆ ಭವಿಯನ್ನು ಈ ಮಠಕ್ಕೆ ಕರೆಯಿಸಬಾರದು. ಒಂದು ವೇಳೆ ನೀವು ಹಟಕ್ಕೆ ಬಿದ್ದು ಕರೆಯಿಸಿದ್ದಾದರೆ, ಮುಂದೆ ಅವನದು ನಿಮ್ಮದು ಪರಿಣಾಮ ಏನಾದೀತು ? ಎಂಬುದು ಸ್ವಲ್ಪ ಲಕ್ಷ್ಯದಲ್ಲಿರಲಿ ! ತಿಳಿಯಿತೇ ?" ಎಂದರು. ಅದಕ್ಕೆ ಸ್ವಾಮಿಗಳು ಕುದ್ರಿತರಾಗುತ್ತ, "ಇರಲಿ ಹೋಗಿರೋ ! ನಿಮ್ಮಂಥವರನ್ನು ಬಹಳ ನೋಡಿರುವೆನು" ಎಂದರು.

ಈ ವಾರ್ತೆಯು ಸಿದ್ಧಾರೂಢರವರೆಗೆ ಹೋಯಿತು. ಆಗ ಆರೂಢರು "ಭಕ್ತರೇ ಕೇಳಿರಿ, ಅನ್ಯರಿಂದ ದುಃಖವನ್ನು ಕೊಡದಿರುವದೇ ಸತ್ಯವಂತರ ಧರ್ಮವು (ಕರುಣದಿಂದತಿಶಯ ವಹ ಧರ್ಮವುಂಟೆ) ನಾವು ರುದ್ರಾಕ್ಷಿ ಮಠಕ್ಕೆ ಹೋಗುವದರಿಂದ ಅನ್ಯರಿಗೆ ಖೇದವಾಗುತ್ತಿದ್ದರೆ, ಅಲ್ಲಿಗೆ ಹೋಗುವದನ್ನು ನಿಲ್ಲಿಸಿ ಬಿಡಿರಿ" ಎಂದರು. ಈ ಪರಿಸ್ಥಿತಿಯನ್ನು ಅರಿತು ಕೆಲವು ನಿಷ್ಠಾವಂತ ಭಕ್ತರು ಉದ್ರೇಕದಿಂದ ರಾಜಸ್ಥಾನಕ್ಕೆ ಬಂದು, ರಾಜ್ಯಾಧಿಕಾರಿಗಳನ್ನೂ, ಭಕ್ತರ ಮಹಾ ಬಲವನ್ನೂ ಬರಮಾಡಿಕೊಂಡು ಪ್ರತಿ ವರುಷಕ್ಕಿಂತಲೂ ಅಧಿಕ ವೈಭವದಿಂದ ರುದ್ರಾಕ್ಷಿಮಠಕ್ಕೆ ಪಲ್ಲಕ್ಕಿ ಉತ್ಸವದಿಂದ ಪೇಟೆಯೊಳಗೆ ಒಂದೂ ಬೀದಿಯನ್ನು ಬಿಡದಂತೆ ಎಲ್ಲ ಬೀದಿಗಳಲ್ಲಿಯು ಸದ್ಗುರು ಸಿದ್ಧರನ್ನು ಒಳ್ಳೇ ವಿಜೃಂಭಣೆಯಿಂದ ಮೆರೆಸುತ್ತ ಬಂದರು. ಅಲ್ಲ ಪಾದಪೂಜೆ ತೀರಿಸಿಕೊಂಡು ಪುನಃ ಸಿದ್ಧರನ್ನು ಸಡಗರದಿಂದ ಮೆರೆಸುತ್ತ ಸಿದ್ಧಾಶ್ರಮಕ್ಕೆ ತಂದು ಮುಟ್ಟಿಸಿದರು.

### ಪದ— ೧೩–೪೧ ಸಿದ್ಧಾರೂಢರಿಗೆ ವಿಷಪ್ರಯೋಗ

ಹೀಗೆ ಮೇಲಿಂದ ಮೇಲೆ ನಡೆಯುತ್ತಿರುವ ಸಿದ್ಧರ ವೈಭವದ ಸೊಬಗನ್ನು ಪಾಮರರಾದ ಜಂಗಮರು ಸಹಿಸಲಾರದಷ್ಟು ವ್ಯಥೆಯುಳ್ಳವರಾದರು ಅವರೆಲ್ಲರೂ ಒಂದುಗೂಡಿ, ಒಂದು ಉಪಾಯವನ್ನು ಹುಡುಕಿದರು. ಶ್ರದ್ಧೆಯಿಂದ ಪ್ರತಿದಿನವು ಆರೂಢರಿಗೆ ಅಡಿಗೆ ಮಾಡಿ ಎಸೆ ಒಯ್ಯುತ್ತಿರುವ,

ದರಿದ್ರಳಾದ ಓರ್ವ ಮುದುಕಿಯ ಮನೆಗೆ ಹೋದರು. ಅವಳಿಗೆ ಥಳಥಳಿಸುವ ಎರಡು ಬಂಗಾರದ ಬಳೆಗಳನ್ನು ಕೊಟ್ಟು, ಅವಳನ್ನು ಸಂತೋಷಗೊಳಿಸಿದರು. ನಂತರ "ಆ ನೀಚನಾದ ಸಿದ್ಧನಿಗೆ ಈ ದಿನ ನೀನು ಒಯ್ಯುತ್ತಿರುವ ಎಡೆಯಲ್ಲಿ ಈ ವಿಷವನ್ನು ಕೂಡಿಸಿ, ಉಣ್ಣಿಸಿ ಬಂದರೆ ನಿನಗೆ ಮತ್ತೆ ಹತ್ತು ತೊಲೆ ಸರಿಗೆಯನ್ನು ಕೊಡುವೆವು" ಎಂದು ಆ ಮಳ್ಳ ಮುದುಕಿಗೆ ಆಶೆಹಚ್ಚಿ ಕಳುಹಿಸಿಕೊಟ್ಟರು. ಆ ಅಜ್ಞಾನಿ ಮಂದ ಬುದ್ಧಿಯುಳ್ಳ ಮುದುಕಿಯು ಅತಿ ಆಶೆಗೆ ಬಿದ್ದು, ಅವರು ಕೊಟ್ಟ ಕೆಟ್ಟ ವಿಷವನ್ನು ತಾನು ಮಾಡಿಟ್ಟ ಅಡಿಗೆಯಲ್ಲಿ ಮಿಶ್ರ ಮಾಡಿದಳು ಅದನ್ನು ಅಡಿಗೆಯಲ್ಲಿ ಇಟ್ಟುಕೊಂಡು, ತೀವ್ರ ಮಠಕ್ಕೆ ಬಂದಳು. ಅತಿವಿನಯದಿಂದ ಸ್ವಾಮಿಗಳನ್ನು ಕರೆದು ಆಸನದ ಮೇಲೆ ಕೂಡ್ರಿಸಿ ಊಟಕ್ಕೆ ಕೊಟ್ಟಳು. ಆರೂಢರು ಆ ವಿಷಮಿಶ್ರಿತವಾದ ಅನ್ನದೊಳಗಿಂದ ಒಂದು ತುತ್ತನ್ನು ಕೈಯಲ್ಲಿ ತೆಗೆದುಕೊಂಡು, ಇದು ನೀಲ ಕಂಠನಿಗೆ ಅರ್ಪಿತವಾಗಲೆಂದು" ಸ್ವೀಕರಿಸಿದರು. ಅವಳ ಮರ್ಮವನ್ನು ತಿಳಿದು, ಹೆತ್ತ ತಾಯಿಯೇ, ನೀನು ಈಗ ನನಗೆ ನೀಡಿರುವದು ಉತ್ತಮವಾಯಿತು ! ನೀನು ಇದನ್ನು ತೀವ್ರವಾಗಿ ಭೂಮಿಯಲ್ಲಿ ಹೂಳಿಬಿಡು'. ಯಾಕಂದರೆ ಭಕ್ತರು ಈಗ ನಿನ್ನ ಈ ಕೃತಿ ಕೇಳಿದರೆಂದರೆ, ಅವರು ನಿನ್ನನ್ನು ಹೊಡೆಯುವರು. ಅದಕ್ಕಾಗಿ ನೀನು ಇಲ್ಲಿಂದ ತೀವ್ರ ಹೊರಟು ಹೋಗು" ಎಂದರು. ಮುದುಕಿಯು ಸಿದ್ಧರ ನುಡಿಯನ್ನು ಕೇಳಿದಾಕ್ಷಣ ಹಿಂದಕ್ಕೆ ನೋಡುತ್ತ ಮುಂದೆ ಓಡುತ್ತ 'ನನ್ನ ಯಾರೋ ಹಿಡಿಯಲಿಕ್ಕೆ ಬಂದರು' ಎಂಬ ಭ್ರಾಂತಿಯಿಂದ ಹೆದರಿದವಳಾಗಿ ಒದರುತ್ತ ಭರದಿಂದ ತನ್ನ ಮನೆಗೆ ಬರುವಂಥವಳಾದಳು. ಅಂದಿನಿಂದಲೇ ಅವಳಿಗೆ ಹುಚ್ಚು ತಲೆಗೇರಿತು. "ಬಂದರೋ ! ಯಾರೋ ನನ್ನನ್ನು ಹೊಡೆಯಲಿಕ್ಕೆ ಬಂದರು" ಎಂದು ಒದರಹತ್ತಿದಳು. ಅವಳ ಹುಚ್ಚು ದಿನದಿನಕ್ಕೆ ಹೆಚ್ಚುತ್ತ, "ಅಯ್ಯಯ್ಯೋ! ಕೊಂದು ಹಾಕುವವರು ಬಂದರು ! ಇಲ್ಲಿಯೇ ಬಂದರು ನೋಡಿರಿ ! ನೋಡಿರಿ !" ಎಂದು ದೊಡ್ಡ ಧ್ವನಿಯಿಂದ ಕೂಗಹತ್ತಿದಳು. ಯಾರು ಏನು ಮಾಡಿದರೂ ಅವಳ ಹುಚ್ಚು ನಿಚ್ಚಳಾಗಲಿಲ್ಲ. ಆಕೆಯ ಸ್ಥಿತಿಯು ದಿನದಿನಕ್ಕೆ ಅತಿ ಕೆಡಹತ್ತಿತು.

ಇತ್ತ ಆರೂಢರೂ ತಾವು ಬಾಯಿಯಲ್ಲಿ ಹಾಕಿಕೊಂಡ ವಿಷದ ತುತ್ತನ್ನು ಕೆಳಗೆ ಉಗಳದೆ "ನನ್ನ ಭೋಗಕ್ಕೆ ಬಂದಿರುವ ಈ ವಿಷವನ್ನು ನಾನು ಈಗ

ಬಿಟ್ಟಿದ್ದಾದರೆ ಮುಂದೆಯಾದರೂ ಇದು ನನಗೆ ಹಟದಿಂದ ಊಟಮಾಡಿಸಿಯೇ ತೀರುವದು'' ಎಂದು ನಿಶ್ಚಯಿಸಿ ನುಂಗಿದರು. ಅದು ಶರೀರದಲ್ಲಿ ವ್ಯಾಪಿಸಿ ಬಹಳೇ ವ್ಯಥೆಯನ್ನುಂಟುಮಾಡಹತ್ತಿತು. ಆಗ ಪೀಠದ ಮೇಲೆ ಬಂದು ಕುಳಿತು ಕೊಂಡರು. ಎಲ್ಲ ಭಕ್ತವೃಂದವನ್ನು ತಮ್ಮ ಹತ್ತರ ಕರೆದು ಹೇಳಿದರು. 'ನನ್ನ ಅಂಶಕರೇ, ಹಿಂದಕ್ಕೆ ಸುರಾಸುರರು ಸಮುದ್ರ ಮಥನ ಮಾಡಿದರು. ಅದರಲ್ಲಿ ಜನಿವಾದ ಅಮೃತವನ್ನು ಸುರರು ಮತ್ತು ಸರೆಯನ್ನು ಅಸುರರು ಸಂತೋಷ ದಿಂದ ಸೇವಿಸಿದರು. ನಂತರ ಅಂತ್ಯಕ್ಕೆ ಹೊರಟ ಕಾಳಕೂಟ ವಿಷವನ್ನು ನೀಲ ಕಂಠನು ನಿರ್ವಾಹವಿಲ್ಲದೆ ಪಾನಮಾಡಬೇಕಾಯಿತು. ಆ ವಿಷಪಾನವು ಮರಣಸಾಧನೆಯಾದರೂ ಪಾರ್ವತಿಯ ಮಂಗಳಸೂತ್ರದ ಮಹಿಮೆಯಿಂದ ಉಳಿದನು. ಅದರಂತೆ ವೇದ, ಪುರಾಣ, ಶಾಸ್ತ್ರಗಳೆಂಬ ಸಮುದ್ರದ ಮಥನ ದಲ್ಲಿ ದ್ವೈತ ಅದ್ವೈತಗಳೆಂಬ ಎರಡು ವಸ್ತುಗಳು ಹುಟ್ಟಿದವು. ಅವುಗಳಲ್ಲಿ ಸಾತ್ವಿಕರು ಅದ್ವೈತವನ್ನು, ರಾಜಸಿ ಮತ್ತು ತಾಮಸಿಗಳು ದ್ವೈತವನ್ನೂ ಸ್ವೀಕರಿಸಿದರು. ಅದು ಹೇಗಂದರೆ ಅದ್ವೈತ ಕಾರ್ಯವು ಶುದ್ಧ ಭಕ್ತಿಯು. ದ್ವೈತ ಕಾರ್ಯವು ಪರನಿಂದೆ ಮತ್ತು ಮತ್ಸರವು ಸಾತ್ವಿಕ ಗುಣಗಳು ಭಕ್ತಿ ಎಂಬ ಅಮೃತವನ್ನೂ, ರಾಜಸಿಗಳು ಭ್ರಾಂತರಾಗಿ ನಿಂದೆ ಎಂಬ ಸುರೆ ಯನ್ನೂ, ಬಳಿಕ ತಾಮಸಿಗಳಾದ ಅಧಮರು ಮತ್ಸರವೆಂಬ ವಿಷವನ್ನು ಸೇವಿ ಸಿದರು. ಅವರು ಸೇವಿಸಿದ ಮತ್ಸರವೇ ಇಂದು ವಿಷರೂಪವಾಗಿ ನನಗೆ ಬಂದೊದಗಿತು. ನಾನು ಅದನ್ನು ಚಿಂತಿಸದೆ ಸ್ವೀಕರಿಸಿದೆನು. ಪರಂತು ನನ್ನ ಅದೃಷ್ಟವೆಂಬ ಕಾಂತೆಯ ಕೊರಳಲ್ಲಿರುವ ಮಂಗಲ ಸೂತ್ರದ ಮಹಿಮೆ ಯಿಂದ ಉಳಿಯುವೆನು, ಈಗ ನಾನು ಇಪ್ಪತ್ತೊಂದು ದಿವಸ ಸಮಾಧಿ ಯಲ್ಲಿ ಇರಬೇಕಾಗುವದು. ಅಲ್ಲಿಯವರೆಗೂ ನೀವು ಯಾರೂ ಎಬ್ಬಿಸ ಬೇಡಿರಿ'' ಎಂದು ಹೇಳಿ ಬೇಗನೆ ಕೋಣೆಯೊಳಗೆ ಹೋಗಿ, ಬಾಗಿಲವನ್ನು ಮುಚ್ಚಿಕೊಂಡು ಮಲಗಿದರು.

ಆಗ ಭಕ್ತರು, ''ಅಯ್ಯೋ ಶಿವನೇ ! ಸ್ವಾಮಿಗಳಿಗೆ ಯಾರೋ ವಿಷ ಹಾಕಿರುವರು'' ಎಂದು ಮರಗುತ್ತ ಬಹು ವ್ಯಥೆಪಟ್ಟವರಾಗಿ ತೀವ್ರ ವೈದ್ಯ ನನ್ನು ಕರೆತಂದನು. ವೈದ್ಯರು ಗುರುಗಳನ್ನು ಪರೀಕ್ಷಿಸಿ, ''ಈ ಮಹಾತ್ಮರ

ಒಡಲಲ್ಲಿ ಕಡು ಉಗ್ರತರವಾದ ವಿಷವು ವ್ಯಾಪಿಸಿರುವದು. ಇವರು ಬದುಕುವ ಆಶೆಯಂತೂ ತೋರುವದಲ್ಲ. ಆದರೂ ಹಾಗೆಯೇ ಬಿಡದೆ ಔಷಧೋಪಚಾರ ಮಾಡುವಂತೆ ಮಾಡುವದು ಒಳ್ಳೇದು" ಎಂದರು. ಈ ಮಾತನ್ನು ಭಕ್ತರು ಕೇಳಿದೊಡನೆ ಬೆಂಕಿಯಲ್ಲಿ ಬಿದ್ದ ಹುಳದಂತೆ ಸಂಕಟಗೊಂಡು ಚಟಪಡಿಸುತ್ತ ಹಾಹಾಕಾರ ಮಾಡುತ್ತ, ''ಹರಹರಾ ಗುರುನಾಥಾ ! ಜಗತ್ತಿನಲ್ಲಿರುವ ಮುಮುಕ್ಷುಗಳನ್ನು ಉದ್ಧಾರಮಾಡುವಲ್ಲಿ ಈಗ ನಿನಗೆ ಬೇಸರವಾಯಿತೇ ? ಈ ಭವಸಾಗರದಲ್ಲಿ ನಮ್ಮೆಲ್ಲರನ್ನು ಕೈಬಿಟ್ಟು ಹೋಗುವಿಯಾ ?'' ಎಂದು ಘೋರ ಸ್ವರದಿಂದ ಅಳುತ್ತ ಅವರೆಲ್ಲರ ಕಣ್ಣೀರಿನ ಸುರಿಮಳೆಯು, ಅವರೆಲ್ಲರ ಬಟ್ಟೆಯನ್ನು ನೆನೆಸಿತು ವೈದ್ಯರು ಔಷಧ ಕೊಡಹೋಗಲು ಸಿದ್ಧರು, "ನಾನು ಔಷಧ ತೆಗೆದುಕೊಳ್ಳುವದಿಲ್ಲ. ಪರಶಿವನ ಅಪಾರ ಕರುಣೆಯಿಂದ ನನಗೆ ಮರಣವಾಗುವದಿಲ್ಲ. ಎಲ್ಲ ಭಕ್ತರಿಗೂ ನಾನು ಅಭಯ ವಚನವನ್ನು ಕೊಡುವೆನು. ಇದು ಸತ್ಯವೆಂದು ನಂಬಿರಿ ಇದಕ್ಕಿಂತಲೂ ಮುಂದೆ ನಿಮಗೆ ಅಧಿಕ ಸುಖವಾಗುವದೆಂಬ ಸುದ್ದಿಯನ್ನು ಬೀರಲು ಬಂದು, ವಿಷರೂಪ ಪರಿಚಾರಕನಿಗೆ ನೀವೆಲ್ಲರು ಉಪಚರಿಸುವದು ಉಚಿತವು. ಅದುಕಾರಣ, ಇಪ್ಪತ್ತೊಂದು ದಿವಸಗಳವರೆಗೆ ನಿಮ್ಮೆಲ್ಲರಿಗೂ ಒಂದೇ ಮನಸ್ಸಿನಿಂದ ಗುರುಸೇವೆ ಮಾಡುವ ಸಮಯ ಬಂದೊದಗಿದೆ ಎಂದರು. ಸದ್ಗುರುವಿನ ವಾಕ್ಯವನ್ನು ಕೇಳಿ, ವೈದ್ಯರು ಬಂದಹಾದಿಗೆ ಸುಂಕವಿಲ್ಲವೆಂಬಂತೆ ಹೊರಟು ಹೋದರು.

ಮುಂದೆ ಸದ್ಗುರುನಾಥನಿಗೆ, ವಿಷದಜ್ವಾಲೆಯು ದಿನದಿನಕ್ಕೆ ಹೆಚ್ಚಾಗ ಹತ್ತಿತು. ಅದರಿಂದ ಕುತ್ತಿಗೆ, ಶಿರ ಊದಿಕೋಲು, ಗುರುಗಳ ಗುರುತು ತಪ್ಪಿತು. ಗಂಟಲದ ನಾಳವು ಬಾತು, ನಾಲಿಗೆಯು ಹೊರಚಾಚಿತು. ಗದ್ದ ಒಳಗೆ ಹೋಗದಂತಾಗಿ ಬಾಯೊಳಗಿಂದ ತಾಸಿಗೆ ಒಂದು ಡಬರಿಯಂತೆ ಜೊಲ್ಲು ಸೋರಹತ್ತಿತು. ಇಂಥ ಪರಿಸ್ಥಿತಿಯನ್ನು ಕಂಡ ಸದ್ಭಕ್ತರೆಲ್ಲರೂ, ಗುರುನಾಥನು ಈ ಸಮಯದಲ್ಲಿ ನಮ್ಮೆಲ್ಲರನ್ನು ಕೈಬಿಡುವನು'' ಎಂದು ಗೋಳಿಡುತ್ತ ಕಣ್ಣೀರನ್ನು ಹೊಳೆಯನ್ನಾಗಿ ಹರಿಸಿದರು. ಭಕ್ತರು ಈ ಪರಿಗೋಳಿಡುವದನ್ನು ಕಂಡು, ಸದ್ಗುರುವರನು ಕೈ ಸಂಜ್ಞೆಯಿಂದ ''ಹೆದರಬೇಡಿರಿ ಎಂದು ಎಲ್ಲರನ್ನು ಶಾಂತಪಡಿಸಿದನು. ಆಗ ಎಲ್ಲ ಭಕ್ತರು ಮೊದಲಿನಂತೆ ಒಂದೇ ಮನಸ್ಸಿನಿಂದ ಗುರುಧ್ಯಾನದಲ್ಲಿ ತತ್ಪರರಾದರು.

## ಕುಟಿಲ ಸನ್ಯಾಸಿಯನ್ನು ಮಠದಿಂದ ಹೊರಗೆ ಹಾಕಿದ್ದು

ಇದೇ ಸಮಯವನ್ನು ಸಾಧಿಸಿ, ಮಠದಲ್ಲಿರುವ ಓರ್ವ ಸ್ವಾರ್ಥಿ ಸಾಧುವು, "ಸಿದ್ಧನು ಸಾಯುವದು ನಿಶ್ಚಯವು. ಇನ್ನು ಮುಂದೆ ಮಠವು ನನ್ನದೇ ಆಗುವದು. ಎಲ್ಲ ಭಕ್ತರ ಮನ್ನಣೆಯು ನನಗಾಗುವದು" ಎಂದು ಭಾವಿಸಿದನು ಮತ್ತು ಮೂರ್ಖತನದಿಂದ ಒಂದು ಮೋಸದ ಕಾಗದ ಮಾಡಿಸುವದನ್ನು ಭಕ್ತರು ಕಂಡರು. ಕೂಡಲೇ ಅವನನ್ನು ಮಠದಿಂದ ಹೊರಗೆ ಹಾಕಿದರು.

ಹೀಗೆ ಕೆಲವು ದಿನಗಳು ಗತಿಸಲು ಸಿದ್ಧರ ಶರೀರದಲ್ಲಿ ವ್ಯಾಪಿಸಿಕೊಂಡಿದ್ದ ವಿಷದ ಶಕ್ತಿಯು, ಮೆಲ್ಲ ಮೆಲ್ಲಗೆ ಕ್ಷೀಣವಾಯಿತು. ಇಪ್ಪತ್ತೊಂದನೆಯ ದಿವಸ ನಸುಕಿನಲ್ಲಿ ಸದ್ಗುರುನಾಥನು ಎದ್ದು, ಹಾಸಿಗೆಯ ಮೇಲೆ ಕುಳಿತನು. ಗುರುಗಳ ಪೂರ್ವಸ್ಥಿತಿಯನ್ನು ಕಂಡು, ಸದ್ಭಕ್ತರಿಗೆ ಹಿಡಿಸಲಾರದಷ್ಟು ಆನಂದವಾಯಿತು. ಆಗ ಎಲ್ಲರೂ ಶಿವಯೋಗಿ ಶ್ರೇಷ್ಠನಿಗೆ ಮಂಗಳಾರತಿಯನ್ನೆತ್ತಿ ಜೈಘೋಷದಿಂದ ಕುಣಿದಾಡಿದರು.

## ವಿಷಹಾಕಿದ ಮುದುಕಿಗೆ ಮುಕ್ತಿ ಕೊಟ್ಟದ್ದು

ಒಂದು ದಿವಸ ಬೆಳಗಿನಲ್ಲಿ ಶ್ರೀ ಸಿದ್ಧಾರೂಢರಿಗೆ ವಿಷಹಾಕಿದ ಮುದು-ಕಿಯ ಹುಚ್ಚು ಹೆಚ್ಚಾಗಿ, ತಲೆಗೇರಿ ಚೀರಾಡುವದನ್ನು ನೋಡಿ, ಅವಳ ನೆರೆ-ಮನೆಯ ಕರುಣಾಳು ಪುರುಷನೊಬ್ಬನು, ಸ್ವಾಮಿಗಳ ಸನ್ನಿದಾನಕ್ಕೆ ಬಂದನು. "ದಯಾನಿಧಿಯೇ, ಆ ಮುದುಕಮ್ಮನು ಉಳಿಯುವಂತಿಲ್ಲ. ಹಗಲಿರುಳು ತಮ್ಮನ್ನೇ ನೆನೆಸುತ್ತಿರುವಳು. ಆದಕಾರಣ, ತಾವು ಈಗಲೇ ದಯಮಾಡಿಸಬೇಕು" ಎಂದು ನಮ್ರತೆಯಿಂದ ಬೇಡಿಕೊಂಡನು. ಹೆತ್ತವ್ವನ ಕರುಳಿನಂತಿರುವ ಕರುಣಾಳು ಸಾಗರನಾದ ಗುರುನಾಥನು, ಅವನು ತಂದ ಟಾಂಗಾದ ಮೇಲೆ ಕುಳಿತು ಅವಳ ಮನೆಗೆ ಬಂದನು. ಅವಳ ಮೇಲೆ ಕರುಣಾ ದೃಷ್ಟಿಯನ್ನು ಬೀರಿದೊಡನೆ, ಮುದುಕಿಯ ಮೈಮೇಲೆ ಅರುವು ಬಂದಿತು. ಕೂಡಲೇ ಅವಳು ಸದ್ಗುರುಗಳ ಪಾದದ ಮೇಲೆ ಹೊರಳುತ್ತ ತನ್ನ ಮಸ್ತಕ ವನ್ನಿಟ್ಟು ನಮಿಸಿದಳು. ಗುರುಗಳು ಅವಳಿಗೆ ಪಂಚಾಕ್ಷರಿ ಮಂತ್ರವನ್ನು ಉಪದೇಶಿಸಿದರು. ಮುದುಕಿಯು, ಅದನ್ನು ಉಚ್ಚರಿಸುತ್ತ ಸದ್ಗುರುಗಳ

ಪಾದಗಳ ಮೇಲೆ ತನ್ನ ಮಸ್ತಕವನ್ನು ಚಲ್ಲಿ, ಅಸುನೀಗಿದಳು. ಆಗ ಆರೂಢರು, ಇವಳ ಮುಂದಿನ ಕಾರ್ಯಗಳನ್ನು ನೆರವೇರಿಸಿರೆಂದು ಹೇಳಿ, ಮರಳಿ ಮಠಕ್ಕೆ ಬಂದರು.

ಎಂದಿನಂತೆ ಉಜ್ಜಣ್ಣನವರ ಮನೆಗೆ, ಸಾಯಂಕಾಲ ಬಂದು ಒಳ್ಳೇ ಸಂತೋಷಭರಿತರಾಗಿ, ಭಕ್ತರಿಗೆ ವೇದಾಂತ ಶಾಸ್ತ್ರವನ್ನು ಹೇಳುತ್ತ, ಬೆಳಗಿನ ಜಾವದಲ್ಲಿ ಶಿವಭಜನೆಮಾಡಿಸುತ್ತ, ಮಠಕ್ಕೆ ಕಾಲು ನಡಿಗೆಯಿಂದ, ಬರಹೋಗುವದನ್ನು ಮಾಡುತ್ತಿದ್ದರು. ವಿಷಪಾನ ಮಾಡಿದ ಮೇಲೆ, ಅವರ ಶಕ್ತಿಯು ಕುಗ್ಗಿತು. ಇದನ್ನು ಕಂಡು ಶ್ರೇಷ್ಠ ಸದ್ಭಕ್ತನಾದ, ದೀವಟಗೆ ಮಲ್ಲಪ್ಪನೆಂಬವನು ಸ್ವಾಮಿಗಳನ್ನು ಎರಡು ವೇಳೆ ಮಠದಿಂದ ಮನೆಗೂ ಮನೆಯಿಂದ ಮಠಕ್ಕೂ ಕರೆದುಕೊಂಡು ಬರುವದಕ್ಕೆ ಅನುಕೂಲವಾಗುವ ದೆಂದು ತಿಳಿದು ಒಂದು ಟಾಂಗಾ ಮತ್ತೊಂದು ರಥವನ್ನೂ ಕುದುರೆಗಳನ್ನೂ ತರಿಸಿ ಅವೆಲ್ಲಕ್ಕೂ ಒಂದು ಆಳವನ್ನಿಟ್ಟು ಮಹಾತ್ಮರ ಸೇವೆಯಲ್ಲಿ ನಿರತನಾದನು.

ಶ್ರೀ ಸಿದ್ಧಾರೂಢ ಮಹಾಪ್ರಭುಗಳು ಅತಿ ಉಗ್ರವಾದ ವಿಷವನ್ನು ಸೇವಿಸಿ ಬದುಕಿದರೆಂಬ ವಾರ್ತೆಯು ಎಲ್ಲ ದೇಶಗಳ ಮೂಲೆ ಮೂಲೆಗಳಲ್ಲೂ ಹಬ್ಬಿತು. ಸರ್ವರೂ ಇವನು ನೀಲಕಂಠನೇ ನಿಜವೆಂದು ನುತಿಸಿದರು. ಪೊಡವಿ ಜನರುದ್ಧಾರಕ್ಕೋಸುಗ ಹುಬ್ಬಳ್ಳಿ ಎಂಬ ಕೆಟ್ಟಪಟ್ಟಣದಲ್ಲಿ ನಿಂತು, ಅಡಿಗಡಿಗೆ ಕಡುಹೀನರಿಂದ ಕಷ್ಟವನ್ನು ಸಹಿಸುತ್ತ ಅವರೆಲ್ಲರಲ್ಲಿ ಅತಿ ಪ್ರೀತಿಯನ್ನಿಡುತ್ತ, ಅವರನ್ನು ಸನ್ಮಾರ್ಗಕ್ಕೆ ಹಚ್ಚಿ, ಯಮಪಟ್ಟಣದಂತಿರುವ ಹುಬ್ಬಳ್ಳಿಯನ್ನು ಕೈಲಾಸವನ್ನಾಗಿ ಮಾಡಿದ ಸಿದ್ಧರ ಸುದ್ದಿಯನ್ನು ಮುಂಬಯಿ ಶ್ರೀಮಂತರು ಅರಿತು, ಹರುಷದಿಂದ ಎರಡು-ಮೂರು ಸಲ ಗುರುವರನ ಉತ್ಸವಕ್ಕೆ ಭಕ್ತಿ ಯುಕ್ತರಾಗಿ ತಪ್ಪದೇ ಬಂದು ಸೇವೆ ಮಾಡಹತ್ತಿದರು. ಜಾತ್ರೆ ಮುಗಿದನಂತರ ಗುರುವಿನಾಜ್ಞೆ ಪಡೆದು ಹೋಗುತ್ತಿದ್ದರು.

## ಪದ— ೪೨-೪೪ ಕಬೀರದಾಸರ ನಿರ್ಯಾಣವು

ಹೀಗೆ ಕೆಲವು ದಿನಗಳು ಕಳೆದನಂತರ, ಶಿಷ್ಯರಲ್ಲಿ ಶಿಖಾಮಣಿಯಂತಿದ್ದ ಕಬೀರದಾಸರು ರಾಕ್ಷಸನಾಮ ಸಂವತ್ಸರ ಕಾರ್ತಿಕಮಾಸ ಬಹುಳ ನವಮಿ

ತಿಥಿಯಲ್ಲಿ ಇಹಲೋಕ ಯಾತ್ರೆಯನ್ನು ಮುಗಿಸಿ, ಶ್ರೀಗುರು ಪಾದದಡಿಯಲ್ಲಿ ನಿರ್ವಿಕಲ್ಪ ಸಮಾಧಿಯಿಂದ ವಿದೇಹ ಕೈವಲ್ಯವನ್ನು ಹೊಂದಿದರು ! ಆ ಪೂಜ್ಯರ ಶರೀರವನ್ನು ಭೂ-ಸಮಾಧಿಯಲ್ಲಿರಿಸಿ ಅದರ ಮೇಲೆ ಬದಾಮಿ ಕಲ್ಲುಗಳನ್ನು ಸುಂದರವಾಗಿ ಕೆತ್ತಿಸಿ ಅಂದವಾಗಿ ಗದ್ದುಗೆಯನ್ನು ಕಟ್ಟಿಸಿದರು. ಪ್ರತಿವರುಷ ಜಾತ್ರೆಯಲ್ಲಿ ಸಮಾಧಿಯ ಮೇಲೆ ಸುಂದರವಾದ ಮಂಟಪಕಟ್ಟಿ ವೈಭವದಿಂದ ಪೂಜಿಸುವ ಸಾಂಪ್ರದಾಯ ಇಂದಿಗೂ ಇರುತ್ತದೆ. ಇದರಂತೆ ಮತ್ತೆ ಕೆಲವು ಶ್ರೇಷ್ಠ ಶಿಷ್ಯರು ಮಠದಲ್ಲಿಯೇ ಪರಮ ಕೈವಲ್ಯಧಾಮವನ್ನು ಹೊಂದಿದರು. ಮತ್ತೆ ಹೊರಗಿನಿಂದ ಹೊಸ ಮುಮುಕ್ಷುಗಳು ತಮ್ಮ ಉದ್ಧಾರಕ್ಕಾಗಿ ಸದ್ಗುರುಗಳ ಸನ್ನಿಧಿಗೆ ಬರಹತ್ತಿದರು. ಒಟ್ಟಿನಲ್ಲಿ ಸತ್ಪುರುಷರಿಂದ ಮಠವು ಕೈಲಾಸದಂತೆ ಶೋಭಿಸಹತ್ತಿತು.

## ಪದ—೪೫-೫೫ ಗಡ್ಡೀ ತೇರು ಕಟ್ಟಿಸಿದ್ದು, ತೇಜಪ್ಪನು ಭೂದಾನ ಮಾಡಿದ್ದು

ಮತ್ತೊಂದು ಸಮಯದಲ್ಲಿ ಸದ್ಭಕ್ತರೆಲ್ಲರೂ ಒಂದಾಗಿ ವೇದ ಮಂತ್ರಗಳನ್ನು ಕೆತ್ತಿಸಿ, ಸುಂದರವಾದ ಗಡ್ಡೆಯ ತೇರನು ಕಟ್ಟಿಸಬೇಕೆಂದು ನಿಶ್ಚಯಿಸಿ, ಕಟ್ಟಿಗೆಯನ್ನು ತರಿಸಿದರು. ಕುಶಲಮತಿಯುಳ್ಳ ಬಡಿಗರನ್ನು ಕರೆಯಿಸಿ, ಬಹುಜನರು ಮೆಚ್ಚುವಂತೆ ತೀವ್ರವಾಗಿ ತೇರು ಕಟ್ಟುವ ಕೆಲಸವನ್ನು ಪೂರ್ತಿಗೊಳಿಸಿದರು.

## ತೇಜಪ್ಪನು ತೇರು ಎಳೆಯಲಿಕ್ಕೆ ತನ್ನ ಭೂಮಿಯನ್ನು ಕೊಟ್ಟಿದ್ದು

ಒಂದು ದಿನ ಬೆಳಗಿನಜಾವದಲ್ಲಿ ಸದ್ಗುರುಗಳು ಶಿಷ್ಯವೃಂದಕ್ಕೆ ಶಾಸ್ತ್ರ ಶ್ರವಣ ಮಾಡಿಸುತ್ತಿರುವಾಗ ಹುಬ್ಬಳ್ಳಿ ತೇಜಪ್ಪನೆಂಬ ಶ್ರೀಮಂತನು ಬಂದು ಸ್ವಾಮಿಗಳಿಗೆ ನಮಸ್ಕರಿಸಿ ಹೇಳಿದನು. "ಅಪ್ಪಾ, ನಿನ್ನೆ ನನ್ನ ಕನಸಿನಲ್ಲಿ ನಮ್ಮ ತಂದೆಯು ಬಂದು, "ಮಗನೇ ! ಸಿದ್ಧಾರೂಢರ ತೇರು ಎಳೆಯುವದಕ್ಕೋಸ್ಕರ ನಿನ್ನ ಭೂಮಿಯಲ್ಲಿ ಅವರೆಷ್ಟು, ಬೇಡುವರೋ ಅಷ್ಟು, ಶುದ್ಧ ಮನಸ್ಸಿನಿಂದ ಕೊಡು. ಅಂದರೆ ನನಗೆ ಸುಖ ಲಭಿಸುವದು, ಎಂದು ಹೇಳಿದನು.

ಆದು ಕಾರಣ ತಮಗೆ ಬೇಕಾಗಿರುವಷ್ಟು ಭೂಮಿಯನ್ನು ತಮ್ಮ ಚರಣಕ್ಕೆ ಅರ್ಪಿಸುವೆನು" ಎಂದು ನಮಿಸಿದನು.

ಕೂಡಲೇ ಎಲ್ಲ ಭಕ್ತರು ಆ ಸ್ಥಳಕ್ಕೆ ಹೋಗಿ ಅಳತೆ ಮಾಡಿ ತೋರಿಸಿದರು. ಆಗ ತೇಜಪ್ಪನು ಸರಳ ಮನಸ್ಸಿನಿಂದ ಅಷ್ಟು ಭೂಮಿಗೆ ಕಾಗದ ಬರಕೊಟ್ಟು ಭಕ್ತಿಯಿಂದ ಸ್ವಾಮಿಗಳ ಚರಣಕ್ಕೆ ಅರ್ಪಿಸಿದನು. ಸದ್ಗುರುಗಳು ತೇಜಪ್ಪನ ಪರಮ ಭಕ್ತಿಗೆ ಪ್ರಸನ್ನರಾಗಿ, "ನಿನ್ನ ವಂಶದವರೆಲ್ಲರಿಗೂ ಸುಖ-ಸಂಪತ್ತು ವೃದ್ಧಿಯಾಗಲಿ" ಎಂದು ಆಶೀರ್ವದಿಸಿದರು. ನಂತರ ಭಕ್ತರು ತಮ್ಮ ವಿಚಾರವನ್ನು ಗ್ರಾಮಾಧಿಕಾರಿಗಳಿಗೆ ತಿಳಿಸಿದರು. ಅವರೆಲ್ಲರೂ ಸದ್ಗುರುವಿನ ಕಾರ್ಯವೆಂದು, ಅತಿ ಭಕ್ತಿಯಿಂದ ಆಗಿಂದಾಗಲೆ, ರಸ್ತೆ ಮಾಡುವ ಕಾರ್ಯವನ್ನು ಕೈಕೊಂಡು ಅದನ್ನು ಪೂರ್ತಿಗೊಳಿಸಿ ಗುರುಗಳಿಂದ ಪ್ರೇಮಯುಕ್ತ ಪ್ರಸಾದವನ್ನು ಪಡೆದು ಅವರಿಗೆ ನಮಿಸಿ ನಿರ್ಗಮಿಸಿದರು.

ಮತ್ತೆ ಕೆಲವು ದಿನಗಳು ಕಳೆಯಲಾಗಿ ಸದ್ಗುರುಗಳ ಸಮಾಧಿ ಮಂದಿರದ ಮೇಲೆ ಭಕ್ತರು ಸುಂದರದ ಗೋಪುರವನ್ನು ಕಟ್ಟಿಸಿ ಅದರ ಮೇಲೆ ಬಂಗಾರದಂತೆ ಹೊಳೆಯುವ ಕಳಸವನ್ನು ಹರುಷದಿಂದ ಇರಿಸಿದರು. ಮುಂದೆ ಶ್ರೀರಾಮನವಮಿಯಲ್ಲಿ ಶ್ರೀ ಸದ್ಗುರುನಾಥನ ಜನ್ಮೋತ್ಸವವನ್ನು, ಕಸಬಿ ಪೇಟೆಯಲ್ಲಿ ನೆರವೇರಿಸಿದರು. ಹದಿಮೂರನೆಯ ದಿವಸ ಹರುಷದಿಂದ ಸ್ವಾಮಿಗಳವರನ್ನು ಅಂದವಾಗಿ ಶೃಂಗರಿಸಿದ ಶ್ರೀಗಂಧದ ತೊಟ್ಟಿಲದಲ್ಲಿ ಕುಳ್ಳಿರಿಸಿ ನಾಮಕರಣೋತ್ಸವವನ್ನು ಮಾಡಿ ಸಮಾಪ್ತಿಗೊಳಿಸಿದರು. ಇದರಂತೆ ಪ್ರತಿವರುಷ ನೆರವೇರಿಸುವ ಸಾಂಪ್ರದಾಯವನ್ನು ಹಾಕಿದರು.

ಪಂಢರಪುರದಲ್ಲಿ ಆಷಾಢ ಮತ್ತು ಕಾರ್ತಿಕಮಾಸದಲ್ಲಿ ಜರಗುವ ಉತ್ಸವದಂತೆ, ಅದೇ ರೀತಿಗೆ ಭಾಗವತ ಸಪ್ತಕದೊಂದಿಗೆ ಉತ್ಸವವನ್ನು ಪ್ರತಿವರುಷ ಮಾಡುವಂತೆ ನಿರ್ಧರಿಸಿದರು. ಇದು ಅಲ್ಲದೆ ಪ್ರತಿ ಸೋಮವಾರ ಕೀರ್ತನೆ, ಪಾದಪೂಜೆ ಇವೆಲ್ಲ ಉತ್ಸವಗಳನ್ನು ಬಹು ಸಂತೋಷದಿಂದ ಸಾಗುವಂತೆ ಸರ್ವ ಸದ್ಭಕ್ತರು ಸೇವೆಕೈಕೊಂಡರು. "ಹುಬ್ಬಳ್ಳಿ ಎಂಬ ಕೈಲಾಸದಲ್ಲಿ ಪರಮೇಶನೆಂಬ ಸಿದ್ಧಾರೂಢನು ನೆಲೆಸಿರುವನು," ಎಂದು ಎಲ್ಲರೂ ತಮ್ಮ ಹಮ್ಮುದೊರೆದು ಬ್ರಾಹ್ಮಣ ಮೊದಲುಗೊಂಡು ಚಾಂಡಾಲ

ಕಡೆಯಾಗಿ ಸರ್ವರೂ ಭಯ-ಭಕ್ತಿಯಿಂದೊಡಗೂಡಿ ಸದ್ಗುರುಗಳಿಗೆ ವಂದಿಸಿ ಕಡುಹರುಷದಿಂದ ಶಾಸ್ತ್ರಶ್ರವಣ ಮಾಡುತ್ತ ಧನ್ಯಭಾವದಲ್ಲಿ ತಮ್ಮ ತಮ್ಮ ಪುರಸದನಗಳಿಗೆ ಹೋಗುತ್ತಿದ್ದರು. ಈ ಪ್ರಕಾರ ಸಿದ್ಧರ ಕೀರ್ತಿಲತೆಯು ಸಪ್ತ ಸಮುದ್ರಗಳವರೆಗೂ ಪಸರಿಸಿತು.

### ಪದ—೫೬-೭೧ ಲೋಕಮಾನ್ಯ ಟಿಳಕರ ಗರ್ವಭಂಗ

ಮಠದಲ್ಲಿ ಪ್ರತಿದಿನವೂ, ಕ್ರಮವತ್ ಶಾಸ್ತ್ರ ನಡೆಯುತ್ತಿತ್ತು. ಒಂದು ದಿನ ಓರ್ವ ಬ್ರಾಹ್ಮಣನು, ಲೋಕಮಾನ್ಯರು, ಟೀಕೆಯನ್ನು ಬರೆದ ಭಗವದ್ಗೀತೆ ಎಂಬ ಗ್ರಂಥವನ್ನು ತಕ್ಕೊಂಡು ಬಂದನು. ಅವನು ಸ್ವಾಮಿ:-ಗಳಿಗೆ ನಮಸ್ಕರಿಸಿ, ಕುಳಿತುಕೊಂಡನು ಬಳಿಕ ಮೆಲ್ಲಗೆ ಅದರಲ್ಲಿರುವ "ಕರ್ಮಣ್ಯೆ ವಾಧಿಕಾರಸ್ತೆಮಾ ! ಫಲೇಷು ಕದಾಚನ" "ಕರ್ಮಣ್ಯೆವ ! ಹಿ ಸಂಸಿದ್ಧಿ ಮಾಸ್ಥಿತಾ ಜನಕಾದಯಃ" ಮೊದಲಾದ ಶ್ಲೋಕಗಳಿಗೆ ಟಿಳಕರು ಹರುಷದಿಂದ ಬರೆದ ಕರ್ಮಪರ ಅರ್ಥವನ್ನು ಓದಿ, "ಸ್ವಾಮಿಗಳೇ, ಪೂರ್ವಜರು ಬರೆದ ಅರ್ಥವನ್ನು ಮತ್ತು ಇದನ್ನು ವಿಚಾರಿಸಲಾಗಿ, ಇವೆರಡರಲ್ಲಿ ಭೇದಕಂಡು ಬರುವದು. ಆದರೆ ಅವರು ಬರೆದಿರುವದು, ಯಥಾರ್ಥವೋ ? ಟಿಳಕರು ಬರೆದಿರುವದು. ಯಥಾರ್ಥವೋ ? ಎಂಬ ಸಂಶಯವು, ನನ್ನನ್ನು ಕೊರೆಯುತ್ತಿರುವದು. ಇದನ್ನು ಪರಿಸಬೇಕು" ಎಂದು ಪ್ರಾರ್ಥಿಸಿಕೊಂಡನು.

ಸಿದ್ಧಾರೂಢರೂ, ಚದುರಮತಿಯೇ ಕೇಳು. ಸದ್ಗುರುವರನ ಮುಖ-ದಿಂದ ವಿದ್ಯೆಯನ್ನು ಕಲಿಯದೆ, ಮೊದಲಿನ ತನ್ನ ಕರ್ಮ ಸಂಸ್ಕಾರದಲ್ಲಿ ಮುಳುಗಿದ ಬುದ್ಧಿಯಿಂದ, ಬರೆದ ಅರ್ಥವು ಹೀಗೆ ಯೋಗ್ಯವಾಗುವದು ? ನೀನೇ ತಿಳಿದು ನೋಡು" ಎಂದರು. ಸಿದ್ಧರು ಹೀಗೆ ನುಡಿದರೆಂಬ ಸುದ್ದಿಯು ಹಬ್ಬುತ್ತ ಲೋಕಮಾನ್ಯರವರೆಗೂ ಹೋಯಿತು. ಅವರು ಒಂದು ಸಮಯ ಸಾಧಿಸಿ ಹುಬ್ಬಳ್ಳಿಗೆ ಬಂದರು.

ತಾವು ತಮ್ಮ ಮನದೊಳಗೆ, "ನಾನು ಬರೆದಿರುವ ಭಗವದ್ಗೀತೆಯ ಅರ್ಥವನ್ನು ಸಿದ್ಧಪಡಿಸಿ, ಅವರ ಬುದ್ಧಿಯನ್ನರಿದು, ನನ್ನ ಸುಬುದ್ಧಿಯಿಂದ

ಅವರೊಡನೆ ತರ್ಕವನ್ನು ಮಾಡಬೇಕು," ಎಂಬ ನಿಶ್ಚಯ ಬುದ್ಧಿಯಿಂದ ಸಂತೋಷಗೊಂಡು, ಮಠಕ್ಕೆ ಬಂದರು. ಅಲ್ಲಿ ಸ್ವಾಮಿಗಳ ಸಂದರ್ಶನ ಮಾಡಿಕೊಂಡು, ಕುಳಿತರು. ನಂತರ, ಮಹನಿಯರೇ, ನಾನು ಸರಸವಾಗಿ ಬರೆದ ಭಗವದ್ಗೀತೆಯ ಅರ್ಥಕ್ಕೆ ತಾವು ಹೆಸರಿಟ್ಟರಂತೆ ! ಅದು ಯಾವದು ನನಗೆ ತಿಳಿಸಬೇಕು," ಎಂದರು.

ಅದಕ್ಕೆ ಆರೂಢರು, ಲೋಕಮಾನ್ಯರೇ, ಶ್ರೀ ಆನಂದಗಿರಿ, ಶ್ರೀಧರ, ಚಿದ್ಘನ, ಮಧುಸೂಧನ, ಶಂಕರಾನಂದ, ಶ್ರೀ ಶಂಕರಾಚಾರ್ಯ ಮೊದಲಾದ ಮಹಾ ಮುನಿಗಳು ಗುರು ಮುಖದಿಂದ ಶೃತಿಗಳ ಅರ್ಥವನ-ರಿತು, ಅಹಂಕಾರ ಭೇದಗಳನ್ನು ಮರೆತು, ವಿರಕ್ತಿಯಿಂದ ಸಮಭಾವವುಳ್ಳ-ವರಾಗಿ, ಜಗತ್ತಿನ ಕಲ್ಯಾಣಕ್ಕಾಗಿ, ಅತಿ ಶ್ರಮವಹಿಸಿ ಕಿಂಚಿತ್ತಾದರೂ, ಸಂಶಯಕ್ಕೆ ಆಸ್ಪದವಿರದಂತೆ, ನಿರ್ಮಲವಾದ ಅರ್ಥವನ್ನು ಬರೆದಿರುವರು. ನೀವಾದರೂ, ಕೊಂಕಿನಿಂದ ನಡೆವ ಜನರನ್ನು ಸತ್ಕರ್ಮಕ್ಕೆ ಸೋಂಕಿಸುತ್ತ ತೀವ್ರವಾಗಿ ಮೋಕ್ಷದ ಮಾರ್ಗಕ್ಕೆ ಹಚ್ಚಬೇಕೆಂದು ಬರೆದಿರುವದು ಯೋಗ್ಯವೇ ಆಗಿರುವದು, ಎಂದು ಹೇಳಿದರು.

ಹೀಗೆ ಆರೂಢರು ಆಡಿದ ನುಡಿಗಳನ್ನು ಕೇಳಿ ಟಿಳಕರು, ಮನದಲ್ಲಿ ಸಂತೋಷಭರಿತರಾಗಿ ಅಟ್ಟಹಾಸದಿಂದ, "ಆರೂಢರೇ, ಆತ್ಮನು ಬಂಧ-ರಹಿತನ, ಪ್ರಾಣ, ಇಂದ್ರಿಯ ಅಂತಕರಣ ಇವುಗಳಿಗೆ ಒಂದಕ್ಕೂ ಸಂಬಂಧ ಇಲ್ಲದವನು ಮತ್ತು ಮಾತು ಮನಗಳಿಗೆ ಮೀರಿದವನು, ಎಂದು ಹೇಳುವಿರಿ. ಇದರಿಂದ ನಿಮ್ಮ ಮತವು ಶೂನ್ಯ ಮತವಾಯಿತು ! ಇದಕ್ಕೆ ತಮ್ಮ ಉತ್ತರ ವೇನು ?" ಎಂದು ಪ್ರಶ್ನೆ ಮಾಡಿದರು.

## ಟಿಳಕರ ಗರ್ವಭಂಗ

ಅದಕ್ಕೆ ಭಾರತಿಯು, "ಮತಿವಂತರೆ, ಕೇಳಿರಿ, ಆ ಶೂನ್ಯವನ್ನು ಅರಿಯುತ್ತ ಇರುವ ಆತ್ಮನು ನಿರುತ ಸಾಕ್ಷಿಕನಾಗಿ ಇರಬೇಕಾದನಲ್ಲವೇ ? ಅವನೇ ಆತ್ಮ ಸ್ವರೂಪನು. ಆದರೆ ಪೂರ್ವದ ಕರ್ಮಾಚರಣೆಯ ಪೂರ್ಣ ಅನುಭವವು ನಿಮಗಿರುವದು. ಆದರೆ ಅಭಿಮಾನದಿಂದ ಇಂಥ ಆತ್ಮ ಸ್ವರೂಪವನ್ನು ತಿಳಿಯದೆ ನಾಸ್ತಿಕರಂತೆ ನೀವು ಬಹಿರ್ಮುಖಿಯಾಗಿ ಈ ರೀತಿ ಪ್ರಶ್ನೆ ಮಾಡುವಿರಿ

ಸ್ತುತ್ಯನಾದ ಬ್ರಹ್ಮವಿದ್ಯೆಗೆ ನೀವು ಅಧಿಕಾರಿಗಳಲ್ಲ ! ನಿಷ್ಕಾಮ ಕರ್ಮಗಳಿಂದ ಅಂತಃಕರಣಶುದ್ಧಿ ಮಾಡಿಕೊಂಡಿದ್ದರೆ, ಜ್ಞಾನಕ್ಕೆ ನೀವು ಅಧಿಕಾರಿಗಳಾಗುತ್ತಿದ್ದೀರಿ. ನೀವು ಹಾಗೆ ಮಾಡಲಿಲ್ಲ. ಯಾಕಂದರೆ ನಾನು ಬರೆದ ಗೀತಾರಹಸ್ಯಕ್ಕೆ ಬುಧರಿಂದ ಕಂದು ಬಂದಿತೆಂದು ಕುಗ್ಗಿದಿರಿ ಈಗ ಇಲ್ಲಿ ನಿಮ್ಮ ಸ್ತುತಿ ಮಾಡಲಾಗಿ ಹಿಗ್ಗಿದಿರಿ ಈ ರೀತಿಯಾಗಿ ನಿಮ್ಮಲ್ಲಿ ಹಿಗ್ಗು ಕುಗ್ಗುಗಳಿರುವವೆಂದ ಮೇಲೆ ನೀವು ಕರ್ಮದ ಮರ್ಮವನ್ನು ತಿಳಿಯದವರಾಗಿರುವಿರಿ. ಆದಕಾರಣ ಕರ್ಮ, ಜ್ಞಾನ ಇವುಗಳೆರಡರ ನಿರ್ಮಲ ಜಾನವು ಇಲ್ಲದೆ ಭಗವದ್ಗೀತೆಗೆ ಅರ್ಥವನ್ನು ಬರೆದದ್ದು ಅದು ಹೇಗಿರುವದೆಂಬುದನ್ನು ನೀವೆ ವಿಚಾರಿಸಿರಿ. ಮತ್ತು ನಿಮ್ಮ ಅನುಭವದಿಂದ ತಿಳಿದು ನೋಡಿರಿ" ಎಂದು ನಿರರ್ಗಳವಾಗಿ ನುಡಿದರು.

## ಶ್ರೀ ಟಿಳಕರ ಆತ್ಮನಿವೇದನೆ

ಟಿಳಕರು ಇದೆಲ್ಲವನ್ನು ಕೇಳಿ ಆಶ್ಚರ್ಯಚಕಿತರಾದರು. ಅಲ್ಲಿ ನೆರೆದಿರುವ ಭಕ್ತ ಸಮುದಾಯವನ್ನು ಕುರಿತು, "ಮಹನಿಯರೇ ! ನಾನು ಭಾರತದ ಭೂಮಿ ಅಷ್ಟೇ ಅಲ್ಲದೆ ಯುರೋಪ, ಅಮೇರಿಕಾ, ಆಫ್ರಿಕಾ, ಏಶಿಯಾ ಮೊದಲಾದ ದೇಶಗಳ ಜನರಿಂದ ಪ್ರಖ್ಯಾತಿಯನ್ನು ಹೊಂದಿ ಲೋಕಮಾನ್ಯನೆಂಬ ಬಿರುದನ್ನು ಪಡೆದಿರುವೆನು. ನಾನು ಮನಸ್ಸಿನಲ್ಲಿ ನಾನಾ ಪ್ರಕಾರದ ಪ್ರಶ್ನೆಗಳನ್ನು ಕಲ್ಪಿಸಿಕೊಂಡು ಇವರೊಡನೆ ವಾದ ಮಾಡಬೇಕೆಂದು ಬಂದಿದ್ದೆನು; ಆದರೆ ಇವರ ದರುಶನಮಾತ್ರದಿಂದಲೇ ನನ್ನಲ್ಲಿಯ ಎಲ್ಲ ಪ್ರಶ್ನೆಗಳು ಅಲ್ಲಿಯೇ ಮಾಯವಾಗಿ ನನಗೇನೂ ತೋರದಂತಾಯಿತು. ಇದರ ಸಮ್ಮುಖದಲ್ಲಿ ಏನೊಂದು ನುಡಿಯಲಾಗದ ಸ್ಥಿತಿಯು ನನಗೆ ಬಂದೊದಗಿತು. ಈ ಮಹಾ ಪುರುಷನು ನಿಜವಾಗಿ ಆದಿ ನಾರಾಯಣನು. ಇದು ಸತ್ಯವು" ಎಂದು ಸಾರಿದರು.

ಪುನಃ ಶ್ರೀ ಸದ್ಗುರುಗಳಿಗೆ, "ಹೇ ದಯಾಂಬುನಿಧಿಯೇ, ಮಾನ್ಯ ವಿದೂರನೇ, ಸಾಧುಶಿರೋಮಣಿಯೇ, ಭಕ್ತೋದ್ಧಾರನೇ ನನ್ನ ಅಪರಾಧವನ್ನು ಮನ್ನಿಸು" ಎಂದು ವಿನೀತ ಭಾವದಿಂದ ನಮಿಸಿದರು. ಸದ್ಗುರುಗಳು ಅವರಿಗೆ ಪ್ರಸಾದವನ್ನಿತ್ತು ಆಶೀರ್ವದಿಸಿ ಕಳುಹಿಸಿದರು.

ಮಂಗಲ— ಶ್ರೀ ಗುರುವರನೆ ನಿಜಸುಖಾಮೃತ ।
ಸಾಗರನೇ ಭಕ್ತಾಳಿ ಬಂಧುವೆ ।
ಭೋಗಿ ಭೂಷನೆ ದ್ವೈತಗಜ ಪಂಚಾಸ್ಯ ನೆನಿಸಿಹನೇ ॥
ಮೋಘದ ಪಕೃತಿಗೆ ನಪಕಾರಿಯೇ ।
ಯೋಗಿ ಜನಕುಲವಂದ್ಯ ದೇವನೆ ।
ಯೋಗ್ಯ ಶಿಷ್ಯರ ತಾಪಹಾರಿಯೆ ನಿನ್ನನಾ ನಮಿಪೇ ॥

ಇತಿ ಶ್ರೀ ಸಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ
ಲೀಲಾ ಚರಿತ್ರ ಕಲ್ಪದ್ರುಮದೊಳು ವಿಷಪ್ರಾಶನವೆಂಬ
**೩೪ ನೇ ಅಧ್ಯಾಯ ಸಮಾಪ್ತಿ**

---

॥ ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ॥



# ವೈಭವ ಕಾಂಡ

## ಅಧ್ಯಾಯ ೩೫

ಈ ಅಧ್ಯಾಯದಲ್ಲಿ ಶಿವಪುತ್ರನ ಚರಿತ್ರ, ಮಠಕ್ಕೆ ಮರಿಯಾದ ಗುರುನಾಥಾರೂಢರ ಪವಿತ್ರ ಚರಿತ್ರಗಳಿರುವವು.

ಮಂಗಲ— ನಿರುತ ಜೀವನ ಭಾವ ವೆನೊಳ |
ಗಿರಲು ಕೋಶಂಗಳು ಬೇರೆ |
ಯಿರಿಸಿ ಮೊದಲಿನ ಭ್ರಾಂತಿ ಅಳಿಸುವ ತತ್ವಮಸಿಯನ್ನು ||
ಕರುಣದಿಂ ಬೋಧಿಸುತ ಶೃತಿಗಳ |
ಸರಸ ಪವಣದಿ ಬ್ರಹ್ಮವೇನಾ |
ನಿರುವೆನೆಂಬುದ ದೃಢವಗೊಳಿಸಿಹ ಗುರುವೆನೆತನಪ್ಪ ||

### ಪದ—೧-೩೦ ಶ್ರೀ ಶಿವಪುತ್ರ ಸ್ವಾಮಿಗಳ ಇತಿಹಾಸ

ಯೋಗಿಗಳ ಒಡೆಯರಾದ ಶ್ರೀ ಸಿದ್ಧಾರೂಢರು ಉಜ್ಜಣ್ಣನವರ ಭೀಮಪ್ಪನವರಿಗೆ ಮಗನಾದ ಮೇಲೆ ಭಕ್ತರು ಅವರನ್ನು ಕರೆದುಕೊಂಡು ಗೋಕರ್ಣಕ್ಕೆ ಪಯಣ ಬೆಳೆಸಿದರು. ಹಾದಿಯಲ್ಲಿ ಅಡಿಗೆಯನ್ನು ಮಾಡುತ್ತ ವಿನೋದದಿಂದ ಉಣ್ಣುತ್ತ ಆನಂದದಿಂದ ಮಹಾಬಲೇಶ್ವರನ ದೇವಾಲಯಕ್ಕೆ ಬಂದು ತಲುಪಿದರು.

ಮೊಟ್ಟಮೊದಲು ಆರೂಢರು ತಮ್ಮ ಗುರುಗಳಾದ ಶ್ರೀ ಗಜದಂಡ ಸ್ವಾಮಿಗಳವರ ಸೇವೆಯಲ್ಲಿದ್ದರು. ಆಗ ಆರೂಢರ ಕೂಡ ವಾದಮಾಡಿ ಮುಖಭಂಗಿತನಾದ ಸುಬ್ಬಯ್ಯ ಶಾಸ್ತ್ರಿಯು ಕೆಲವು ವರುಷ ಸುರಪುರದ ರಾಜ್ಯದ ಆಸ್ಥಾನ ಪಂಡಿತನಾಗಿದ್ದನು. ಬಳಿಕ ವೃದ್ಧನಾದ ಮೇಲೆ ಸಂಚರಿಸುತ್ತ ಈಗ ಗೋಕರ್ಣಕ್ಕೆ ಬಂದಿದ್ದನು. ಅವನು ಒಂದು ಸ್ಥಾನದಲ್ಲಿ "ಸಿದ್ಧ ಸಿದ್ಧ" ಎಂದು ಸಿದ್ಧನ ಧ್ಯಾನ ಮಾಡುತ್ತ ಮಲಗಿದ್ದನು. ಆ ಸ್ವರವನ್ನು ಕೇಳಿ ಆರೂಢರು "ನೀನಾರು ?" ಎಂದು ಕೇಳಿದರು. ಕೂಡಲೇ ಸುಬ್ಬಯ್ಯ ಶಾಸ್ತ್ರಿಯು ಮೇಲಕ್ಕೆ ಮುಖವನ್ನೆತ್ತಿ ನೋಡಿದನು. ಸಿದ್ಧರನ್ನು ಕಂಡು "ಸಿದ್ಧನೇ ನಾನು ಪಂಡಿತನೆಂಬ ಅಹಂಕಾರದಿಂದಲೂ ಮಂದಮತಿಯಿಂದಲೂ ನಿನ್ನ ಕೂಡ ವಾದವನ್ನು ಮಾಡಿ ಪರಾಭವವನ್ನು ಹೊಂದಿದ ಸುಬ್ಬಾ ಶಾಸ್ತ್ರಿಯು ನಾನು ಶಿವನ ಅವತಾರಿಯಾದ ಸಿದ್ಧರಿಗೆ ನಿಂದೆಮಾಡಿ ಕಡು ಅಪರಾಧ ವನ್ನೆಸಗಿದೆನೆಂಬ ಬೇಗೆಯಿಂದ ಅಂದಿನಿಂದ ಇಂದಿನವರೆಗೂ ಬಳಲುತ್ತಿರುವೆನು ಅದು ಕಾರಣ ನಾನು ಅವರಿಂದ ಕ್ಷಮೆಯನ್ನು ಪಡೆದದ್ದಾದರೆ ನನಗೆ ಭವಿಷ್ಯ ದಲ್ಲಿ ಬಹು ಸುಖ ದೊರೆಯುವದೆಂದು ಭಾವಿಸಿಕೊಂಡಿರುವೆನು. ಅದಕ್ಕಾಗಿ

ದೇಶದೇಶಗಳಲ್ಲಿರುವ ಕ್ಷೇತ್ರಗಳೆಲ್ಲವನ್ನು ಅರಸುತ್ತ ತಿರುಗಿದೆನು. ಆದರೂ ನೀನು ನನಗೆ ಎಲ್ಲಿಯೂ ದೊರೆಯಲಿಲ್ಲ. ಅದು ಕಾರಣ ದುರ್ಭಾಗ್ಯವುಳ್ಳವನಾಗಿ ಅಯ್ಯೋ! ಸಿದ್ಧನೇ, ಎಲ್ಲಿರುವಿ ?' ಎನ್ನುತ್ತ ನಿನ್ನ ಧ್ಯಾನ ಹಂಬಲದಿಂದ ಸೊರಗಿ ಬೆಂಡಾಗಿ ಬಹಳ ನಿಃಶಕ್ತನಾದೆನು. ಇನ್ನು ಮುಂದೆ ಉಪಾಯವಿಲ್ಲೆಂದು ತಿಳಿದು, ಗೋಕರಣ ಕ್ಷೇತ್ರಕ್ಕಾದರೂ ಹೋಗಿ ಅಲ್ಲಿ ಪ್ರಾಣತ್ಯಾಗ ಮಾಡ ಬೇಕೆಂದು ಇಲ್ಲಿಗೆ ಬಂದಿರುವೆನು. ಆದರೆ ಅಂತ್ಯ ಸಮಯಕ್ಕೆ ನೀನೇ ಬಂದು ನನಗೆ ದರುಶನ ಕೊಟ್ಟು ಧನ್ಯನನ್ನಾಗಿ ಮಾಡಿದಿ ! ಶ್ರೀಕೃಷ್ಣನಂತೆ ನಿನಗೆ ಭಕ್ತ ವತ್ಸಲನೆಂಬ ಬಿರುದು ನಿಜವಾಗಿ ಸಲ್ಲುವದು. ಇದರಲ್ಲಿ ತಿಲಮಾತ್ರವೂ ಸಂದೇಹವಿಲ್ಲ, ಇನ್ನು ಮೇಲೆ ನಾನು ನಿತ್ಯದಲ್ಲಿ ನಿಮ್ಮ ಸೇವೆಯಲ್ಲಿದ್ದು, ನಿಮ್ಮ ಕೃಪೆಗೆ ಪಾತ್ರನಾಗಬೇಕೆಂಬ ಇಚ್ಛೆಯು ಪೂರ್ಣವಿದೆ. ಮುಂದಿನ ಜನ್ಮದಲ್ಲಿ ಯಾದರೂ ನನ್ನ ಇಚ್ಛೆಯನ್ನು ಪೂರ್ಣಮಾಡಿ ನನ್ನನ್ನು ಉದ್ಧರಿಸು, ಮೊದಲು ಮಾಡಿದ ನನ್ನ ಅಪರಾಧ ಮನ್ನಿಸಿ ರಕ್ಷಿಸು" ಎಂದು ಅಳುತ್ತ, ತನ್ನ ಶಿರವನ್ನು ಸಿದ್ಧಾರೂಢರ ಶ್ರೀಪಾದಗಳ ಮೇಲಿಟ್ಟನು.

## ಸುಬ್ಬಯ್ಯಶಾಸ್ತ್ರಿಯ ಪ್ರಾಣವಿಯೋಗ

ಆಗ ಗುರುವರನು ತನ್ನ ಅಮೃತ ಹಸ್ತದಿಂದ ಅವನ ಶಿರವನು ಹಿಡಿದೆತ್ತಿ.

"ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೆ ಕಲೇ ವರಂ |
ತಂತಮೇವೈತಿ ಕೌಂತೇಯ ಸದಾ ತದ್ಭಾವ ಭಾವಿತಃ ||"

ಮರಣಕಾಲದಲ್ಲಿ ಯಾರು ಯಾವ ಭಾವನೆಯನ್ನು ಮನಸ್ಸಿನಲ್ಲಿ ತಂದು ದೇಹವನ್ನು ಬಿಡುವರೋ ಅವರಿಗೆ ಅಂಥ ಭಾವದ ಶರೀರವೇ ಬರುತ್ತದೆಂದು ಕರುಣದಿಂದ ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಪ್ರತಿಪಾದಿಸಿರುವನು. ಅದರಂತೆ ನೀನೂ ಸದ್ಭಾವನೆಯಿಂದ ಅಸುವನ್ನು ನೀಗಿದರೆ, ಅದೇ ತರಹದ ದೇಹವು, ನಿನಗೊದಗುವದು. ನಂತರ ಅದೇ ಶರೀರದಲ್ಲಿ, ಗುರುಭಕ್ತಿ ಹುಟ್ಟಿ, ನನ್ನ ಹತ್ತರ ಬರುವಿ. ಇದು ಗುರುವಿನ ಸತ್ಯಸಂಕಲ್ಪವು," ಎಂದು ಸಿದ್ಧರು ಆಶೀರ್ವದಿಸಿದರು,

ಗುರುವಚನವನ್ನು ಆಲಿಸಿ ಸುಬ್ಬಯ್ಯ ಶಾಸ್ತ್ರಿಯು, ಬಹುಸಂತೋಷ-ದಿಂದ ಸಿದ್ಧರ ಧ್ಯಾನಮಾಡುತ್ತ, ಪ್ರಾಣವನ್ನು ನೀಗಿದನು. ಅಲ್ಲಿದ್ದ ಬ್ರಾಹ್ಮಣರು, ಆ ಶರೀರದ ಸಂಸ್ಕಾರ ಮಾಡಿದರು.

ಇತ್ತ ಆರೂಢರು, ತಮ್ಮ ಶಿಷ್ಯರಿಗೆ ಎಲ್ಲ ಕ್ಷೇತ್ರವನ್ನು ತೋರಿಸಿ, ಅಲ್ಲಿಯೇ ಕೆಲವು ದಿವಸ ಕಾಲಕಳೆದು, ಪುನಃ ಹುಬ್ಬಳ್ಳಿಗೆ ಆಗಮಿಸಿದರು. ಇತ್ತ ಮರಣವನ್ನು ಹೊಂದಿದ ಶಾಸ್ತ್ರಿಯು, ನಾಕ–ನರಕಂಗಳ ಸುಖ–ದುಃಖಗಳನ್ನು ಬಿಡದೆ ಅನುಭವಿಸುತ್ತ, ಆಕಾಶಾದಿ ಮೊದಲುಗೊಂಡು ಮೇಘಾಗಮನದಿಂದ ಗರಗ ಗ್ರಾಮದಲ್ಲಿರುವ ಶ್ರೀ ಮಡಿವಾಳ ಸ್ವಾಮಿಗಳ ಭಕ್ತನ ತೋಟದಲ್ಲಿರುವ ಫಲಭರಿತ ಒಂದು ವೃಕ್ಷದ ಹಣ್ಣಿನಲ್ಲಿ ಪ್ರವೇಶಿಸಿದನು. ತೋಟದ ಮಾಲಕನು ಪರಮ ಭಕ್ತಿಯಿಂದ ಕೆಲವು ಫಲಗಳನ್ನು ಶ್ರೀ ಮಡಿವಾಳ ಸ್ವಾಮಿಗಳವರ ಮಠಕ್ಕೆ ಒಯ್ದು ಕೊಟ್ಟನು. ಅವುಗಳಲ್ಲಿ ಆ ಸುಬ್ಬಯ್ಯ ಶಾಸ್ತ್ರಿಯು ಪ್ರವಿಷ್ಟಗೊಂಡ ಫಲ ಒಂದಿತ್ತು. ಶ್ರೀ ಮಡಿವಾಳ ಸ್ವಾಮಿಗಳ ಸೇವೆಯನ್ನು ಶಿವಬಸಪ್ಪ, ಶಿವಲಿಂಗಮ್ಮ ಎಂಬ ದಂಪತಿಗಳೀರ್ವರು ಪರಮ ಭಕ್ತಿಯಿಂದ ತ್ರಿಕರಣಪೂರ್ವಕವಾಗಿ ಮಾಡುತ್ತಿದ್ದರು. ಅದನ್ನು ಮಡಿವಾಳ ಸ್ವಾಮಿಗಳ ಮರಿದೇವರು ಕಂಡು ಅವರ ಭಕ್ತಿಗೆ ಮೆಚ್ಚಿ, "ನೀವು ವರವನ್ನು ಬೇಡಿಕೊಳ್ಳಿರಿ. ನಿಮ್ಮಿಷ್ಟಾರ್ಥವನ್ನು ಶ್ರೀಗುರು ಮಡಿವಾಳ ಸ್ವಾಮಿಗಳವರು ನಿಃಸಂದೇಹವಾಗಿ ಈಡೇರಿಸುವರು," ಎಂದು ಹೇಳಿದರು. ಆಗ ದಂಪತಿಗಳೀರ್ವರು, ಅತಿ ಸಂತೋಷವುಳ್ಳವರಾಗಿ "ಸ್ವಾಮೀ, ನಮಗೊರ್ವ ಸತ್ಪುತ್ರನನ್ನು ದಯಪಾಲಿಸಿ ಉದ್ಧರಿಸಬೇಕು," ಎಂದು ಬೇಡಿಕೊಂಡರು. ಸ್ವಾಮಿಗಳು ಆ ಭಕ್ತನು ತಂದು ಕೊಟ್ಟ, ಎರಡು ಮಾವಿನಹಣ್ಣುಗಳನ್ನು ದಂಪತಿಗಳಿಗೆ ಕೊಟ್ಟು ಇದನ್ನು ಸ್ವೀಕರಿಸಿರಿ ನೀವು ಇಚ್ಛಿಸಿದಂತೆ ಸತ್ಪುತ್ರನೇ, ನಿಮ್ಮ ಉದರದಿಂದ ಉದಿತನಾಗುವನು" ಎಂದು ಆಶೀರ್ವದಿಸಿ ಕಳುಹಿದರು.

## ಸುಬ್ಬಯ್ಯ ಶಾಸ್ತ್ರಿಯ ಪುನರ್ಜನ್ಮ

ಆ ದಂಪತಿಗಳು ಪ್ರಸಾದಭೂತವಾದ ಆ ಫಲಗಳನ್ನು ಸೇವಿಸಿ ಶ್ರೀ ಭಗವಂತನ ಧ್ಯಾನದಲ್ಲಿ, ನಿರತರಾಗಿ ಕಾಲ ಕಳೆಯುತ್ತಿರಲು ಶಿವಲಿಂಗಮ್ಮನು ಗರ್ಭವತಿಯಾದಳು. ದಿನದಿನಕ್ಕೆ ಗರ್ಭ ಬೆಳೆಯುತ್ತ, ನವಮಾಸ ತುಂಬಿ

ಹತ್ತನೇ ತಿಂಗಳಲ್ಲಿ ಗಂಡು ಮಗುವಿಗೆ ಜನ್ಮವಿತ್ತಳು. ಕೂಡಲೇ ಜೋಯಿಸ ರನ್ನು ಕರೆಯಿಸಿ, ಮುಹೂರ್ತ ಮೊದಲಾದ ಜಾತಕವನ್ನು ಕೇಳಿದರು. "ಇವನು ಉತ್ತಮ ನಕ್ಷತ್ರದಲ್ಲಿ ಜನಿಸಿರುವನು. ಮುಂದೆ ಇವನು ಸತ್ಪುರಷನಾಗುವನು. ಶಿವಪ್ರಸಾದದಿಂದ ಜನಿಸಿರುವ ಕಾರಣ ಇವನಿಗೆ ಶಿವಪುತ್ರನೆಂದು ನಾಮ ಕರಣ ಮಾಡಿರಿ," ಎಂದು ಜೋಯಿಸರು ಹೇಳಿದಂತೆ ಮಗನಿಗೆ ಶಿವಪುತ್ರ-ನೆಂದು ಹೆಸರನ್ನಿಟ್ಟರು. ತಾಯಿ-ತಂದೆಗಳು ಮುದ್ದು ಮಗನನ್ನು ಒಳ್ಳೇ ಮಮತೆಯಿಂದ ಸಲುಹತ್ತಿದರು. ಬಿದಿಗೆಯ ಚಂದ್ರನಂತೆ ಬೆಳೆಯು ತ್ತಿದ್ದ ಶಿವಪುತ್ರನು ಹನ್ನೆರಡು ವರುಷ ವಯಸ್ಸಿಗೆ ಬಂದನು. ಆಗ ತಂದೆ ತಾಯ್ಗಳು ಅವನಿಗೆ ಲಗ್ನವನ್ನು ಮಾಡಿದರು. ಆದರೆ ಪೂರ್ವ ಜನ್ಮದ ಸುಕರ್ಮ ವಶದಿಂದ ಶಿವಪುತ್ರನಿಗೆ ತೀವ್ರ ವೈರಾಗ್ಯವುಂಟಾಯಿತು. ಹದಿನಾಲ್ಕು ವರುಷದ ವಯಸ್ಸಿಗೆ ಮನೆಯನ್ನು ಬಿಟ್ಟು ಹುಬ್ಬಳ್ಳಿಯಲ್ಲಿರುವ ಶ್ರೀ ಸಿದ್ಧಾರೂಢರ ಸನ್ನಿಧಿಗೆ ಬಂದನು.

## ಶಿವಪುತ್ರಸ್ವಾಮಿಗಳ ಇತಿಹಾಸ

ಸದ್ಗುರುಗಳ ಪಾದಪದ್ಮಗಳಿಗೆ ವಂದಿಸಿ, "ಕರುಣಾಕಟಾಕ್ಷನೇ, ದಯಾಂಬುಧಿಯೇ, ಸಂತತ ದುಃಖದಲ್ಲಿ ಮುಳುಗುತ್ತಿರುವ ಈ ಭವಸಾಗರ ದಿಂದ ತಾರಿಸಿಪೊರೆವಂತ ಸಾಮರ್ಥ್ಯವು ನಿನಗೊಬ್ಬನಿಗಲ್ಲದೆ ಬೇರೆಯವರಿ ಗುಂಟೇ ? ಗುರನಾಥಾ ! ನತಜನಕಮಲಕುಲಭಾನು, ನಿನಗೆ ನಾನು ಶರಣು ಬಂದಿರುವೆನು ತಂದೆ ಕರುಣದಿಂದ ನಿನ್ನ ಸನ್ನಿಧಿಯಲ್ಲಿ ನನ್ನನ್ನಿಟ್ಟು ಕೊಂಡು ರಕ್ಷಿಸು" ಎಂದು ಪ್ರಾರ್ಥಿಸಿ ಅವರ ಪಾದಗಳ ಮೇಲೆ ಮಸ್ತಕವ ನ್ನಿಟ್ಟನು.

ಸದ್ಗುರಗಳು ತಮ್ಮ ಅಮೃತ ಹಸ್ತದಿಂದ ಅವನನ್ನು ಹಿಡಿದೆತ್ತಿ ಅಭಯ ಕೊಟ್ಟು "ನೀನು ಇಲ್ಲಿಯೇ ಇರು. ಅಂದರೆ ನಿನಗೆ ಭವದಭಯ ಎಂದಿಗೂ ಬರಲಾರದು" ಎಂದು ಶಿವಪುತ್ರನನ್ನು ಸಂತೈಸಿದರು. ಹಿಂದಿನ ಜನ್ಮದಲ್ಲಿ ಅವನು ಸುಬ್ಬಯ್ಯಶಾಸ್ತ್ರಿಯಾಗಿದ್ದನೆಂದು ಮನದಲ್ಲಿ ಅರಿತುಕೊಂಡರು. ಪೂರ್ವ ಜನ್ಮದ ವಿದ್ಯಾ ಸಂಸ್ಕಾರದಿಂದ ಇವನು ಮಹಾ ಪಂಡಿತನಾಗುವ ನೆಂದು ತಿಳಿದು ಸಂಸ್ಕೃತ ಪಾಠಶಾಲೆಗೆ ಕಳುಹಿಸಿದರು. ಶಿವಪುತ್ರನು ಅಲ್ಲಿ ಶೀಘ್ರ

ವಿದ್ಯೆಯನ್ನು ಕಲಿತು ಬಂದು, ಸ್ವಾಮಿಗಳವರ ಸನ್ನಿಧಾನದಲ್ಲಿ ಉಪನಿಷತ್ತಿನ ಅರ್ಥವನ್ನು ಶ್ರವಣ ಮಾಡುವ ಜನರ ಮನಸ್ಸಿನ ಮೇಲೆ ಅತಿ ಪರಿಣಾಮ ವಾಗುವಂತೆ ತಿಳಿಸಿ ಹೇಳುತ್ತಿದ್ದನು. ಸದ್ಗುರುಗಳು ಅದನ್ನು ಕಂಡು ಬಹು ಸಂತೋಷಗೊಂಡರು. ಇದು ಅಲ್ಲದೆ ಶಿವಪುತ್ರಸ್ವಾಮಿಗಳಿಗೆ ವೇದಾಂತದ ಎಲ್ಲ ಮರ್ಮ ಅರುಹಿಕೊಟ್ಟರು. ಸದ್ಗುರುಗಳು ತಾವು ತಿಳಿಸಿಕೊಟ್ಟ ವಿಷಯವನ್ನು ಸರ್ವ ಶ್ರೋತೃವರ್ಗಕ್ಕೆ ಶ್ರವಣ ಮಾಡಿಸುವದಕ್ಕಾಗಿ ಶಿವಪುತ್ರಪ್ಪನವರಿಗೂ, ಶರಣಪನವರಿಗೂ ಅಪ್ಪಣೆಕೊಡಿಸಿದರು. ಅವರೀರ್ವರು ಮಠದಲ್ಲಿ ಎರಡು ಹೊತ್ತು ಮುಮುಕ್ಷುಗಳಿಗೆ ಶಾಸ್ತ್ರಶ್ರವಣ ಮಾಡಿಸುತ್ತ ಗುರುಭಕ್ತಿಯಿಂದಲೂ ವಿರಕ್ತಿಯಿಂದಲೂ ಮಠದಲ್ಲಿಯೇ ಇರಹತ್ತಿದರು.

### ಪ್ರಭುವೆಂಬ ಶಿಷ್ಯರಿಗೆ ಶಿವಾಗಮ ರಹಸ್ಯ ತಿಳಿಸಿದ್ದು

ಅದೇ ಕಾಲಕ್ಕೆ ಮಠದ ಶಿಷ್ಯ ವೃಂದದ, "ಪ್ರಭು" ಎಂಬ ಓರ್ವ ಯೋಗ್ಯ ಅಧಿಕಾರಿ ಇದ್ದನು. ಅವನು ತನ್ನ ಶೀಲ ಧರ್ಮವನ್ನು ಕಾಯ್ದು ಕೊಂಡು, ಶಿವಧರ್ಮ ರತಿ, ಗುರುಸೇವೆ ಮತ್ತು ಶಮಾದಿ ಸಾಧನಗಳನ್ನು ಸಾಧಿಸಿಕೊಂಡು, ಗುರುಗಳ ಅನುಗ್ರಹಕ್ಕೆ ಪಾತ್ರನಾಗಿದ್ದನು. ಒಂದು ದಿನ ಸದ್ಗುರುಗಳು ಅವನನ್ನು ತಮ್ಮ ಹತ್ತಿರಕ್ಕೆ ಕರೆದು, ಕುಳ್ಳಿರಿಸಿಕೊಂಡು ಶಿವಾಗಮದಲ್ಲಿ ಹೇಳಿರುವ ಇಷ್ಟಲಿಂಗಾರ್ಚನೆಯ ಎಲ್ಲ ವಿಧಿಯನ್ನು ಅರುಹಿದರು, "ವತ್ಸ, ಯೋಗ ಮಾರ್ಗದಲ್ಲಿ ತೋರುವ, ಆನಂದ ಜ್ಯೋತಿಯೇ ಈಗ "ಪಜ್ಞಾನಂ, ಅಯಂ, ಅಹಂ," ಎಂದು ಅನುಭವಕ್ಕೆ ಬರುವದು. ಅದೇ ವೃತ್ತಿಯು, ನೇತ್ರಸ್ಥಾನದಿಂದ ಹೊರಗಮಿಸಿ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿಮಂತ್ರ ರೂಪದಿಂದ ವರ್ತಿಸುವದು. ಇದುವೇ ನಿನ್ನ ಇಷ್ಟಲಿಂಗ ನಿನ್ನ ಆತ್ಮಲಿಂಗ ಅಥವಾ ಸರ್ವಾತ್ಮವೆಂದು ನಿಶ್ಚಯಿಸು ಸರ್ವಾತ್ಮ ಭಾವವೇ ಲಿಂಗಾರ್ಚನೆಗೂ, ಲಿಂಗಾಂಗೈಕ್ಯ ಸುಖಕ್ಕೂ, ಆಶ್ರಯವು ಇದು, ಹರಿ, ಹರ, ರುದ್ರಾದಿಗಳಿಗೂ, ಶ್ರುತಿ ಪುರಾಣಾಗಮ ಶಾಸ್ತ್ರ ಸಿದ್ಧಾಂತಗಳಿಗೂ, ನಿಲುಕದ ಪರಮ ಚಿತ್ ಪ್ರಭೆ ಇಷ್ಟಲಿಂಗವು ಅದುವೇ ನಾನೆಂದು ದೃಢವಾಗಿ ನಂಬು" ಎಂದು ಬೋಧ ಮಾಡಿದರು.

ಒಂದುದಿನ ಆರೂಢ ಶ್ರೀ ಸದ್ಗುರುಗಳು, ಸಿದ್ಧಾಶ್ರಮದಿಂದ, ಉಜ್ಜಣ್ಣನವರ ಮನೆಗೆ ಬಂದು, ಸಂತೋಷದಿಂದ ಕುಳಿತಿದ್ದರು. ಆಗ ಭೀಮಪ್ಪನವರ ದತ್ತಕ ಪುತ್ರನಾದ, ಸಿದ್ಧಪ್ಪನ ಏಳೆಂಟು ವರುಷದ, ಹಿರಿಯಮಗನಾದ ಗುರಪ್ಪನೆಂಬವನು, ಓಡುತ್ತ ಬಂದು ಸ್ವಾಮಿಗಳವರ ತೊಡೆಯ ಮೇಲೆ ಕುಳಿತನು. ಅಲ್ಲಿಂದ ಅವರ ಭುಜದ ಮೇಲೆ ಹತ್ತಿ ಹಾರಾಡುತ್ತ ಅವರನ್ನು ನಾನಾರೀತಿ ಕಾಡಹತ್ತಿದನು. ಆರೂಢರು ಅದೆಲ್ಲವನ್ನು ತಾಳಿಕೊಳ್ಳುತ್ತ ಮಮಕಾರದಿಂದ ಅವನನ್ನು ಪ್ರೀತಿಸುತ್ತಿದ್ದರು. ಈ ರೀತಿ ಸದ್ಗುರುಗಳಿಗೆ ಕಾಟಕೊಡುವದನ್ನು ಸದ್ಭಕ್ತರು ಕಂಡು ಬೇಸರಗೊಂಡು "ಕರುಣಾಳುವೇ, ಈ ಗುರಪ್ಪನಿಗೆ ತಾವು ಹೆಚ್ಚಿಗೆ ಸಲಿಗೆ ಕೊಟ್ಟದ್ದಾದರೆ ಇವನು ತಮಗೆ ಅತಿ ತ್ರಾಸುಕೊಡುವನು ಅದಕ್ಕಾಗಿ ಇವನನ್ನು ಒಳಗೆ ಕಳುಹಿಸಿ ಬರುವೆವು. ಎಂದರು. ಇದು ಅವನ ಸಹಜ ಸ್ವಭಾವವು. ಇವನ ಪೂರ್ವ ಜನ್ಮದ ವೃತ್ತಾಂತವು ಒಳ್ಳೇ ಆಶ್ಚರ್ಯಕರ ಮತ್ತು ರಸಭರಿತವಾಗಿದೆ. ಇದನ್ನು ಪರಮ ಭಕ್ತಿಯಿಂದ ಶ್ರವಣ ಮಾಡುವ ಸ್ತ್ರೀ ಪುರುಷರ ಜನ್ಮಜನ್ಮಾಂತರದ ಪಾಪಗಳೆಲ್ಲ ಹರಿದು ಪರಿಶುದ್ಧ ಮನಸ್ಸುಳ್ಳವರಾಗಿ ಧನ್ಯರಾಗುವರು," ಎಂದು ಆರೂಢರು ಹೇಳಿದರು.

## ಪದ—೩೯-೧೮ ಮಠಕ್ಕೆ ಮರಿಯಾದ ಗುರುನಾಥಾರೂಢರ ಪವಿತ್ರ ಚರಿತ್ರೆ

ಇಂಥ ಅಮೃತವಾಣಿಯನ್ನು, ಸದ್ಗುರುಗಳ ಮುಖದಿಂದ ಕೇಳಿದ ಕೂಡಲೇ, ಅಲ್ಲಿ ನೆರೆದಂಥ ಸದ್ಭಕ್ತರೆಲ್ಲರು, ಒಳ್ಳೇ ಕುತೂಹಲದಿಂದ, "ಕರುಣಾನಿಧಿಯೇ, ನಮ್ಮೆಲ್ಲರಿಗೆ ಗುರಪ್ಪನ, ಪೂರ್ವಜನ್ಮದ ವೃತ್ತಾಂತವನ್ನು ಅರುಹಿ ಕೊಡಬೇಕು." ಎಂದು ಬಿನ್ನವಿಸಿಕೊಂಡರು.

"ಹಾಗಾದರೆ ಹೊರಗೆ ಅಂಗಳದಲ್ಲಿ ಆಡುತ್ತಿರುವ, ಆ ಚಿಕ್ಕ ಬಾಲಕನನ್ನು ಇಲ್ಲಿಗೆ ಕರೆದುಕೊಂಡು ಬನ್ನಿರಿ" ಎಂದರು. ಆಗ ಅವರೊಳಗಿನವನೊಬ್ಬನು ಹೊರಗೆ ಹೋಗಿ ಆಡುತ್ತಿರುವ ಬಾಲಕನಿಗೆ, ಮುದ್ದಿಸಿ ಪ್ರೀತಿಯಿಂದ ಎತ್ತಿಕೊಂಡು ಬಂದು, ಸ್ವಾಮಿಗಳವರ ಚರಣ ಸನ್ನಿಧಿಯಲ್ಲಿ ಕುಳ್ಳಿರಿಸಿದನು. ಕೂಡಲೇ ಯೋಗಸಿದ್ಧರು, ಆ ಕಂದನ ಮೇಲೆ ತಮ್ಮ ತ್ರಿಕಾಲದೃಷ್ಟಿಯನ್ನು ಬೀರಿದರು. ಮತ್ತು ಮಗುವಿನ ಶಿರದ

ಮೇಲೆ ವರದ ಹಸ್ತವನ್ನಿಳಿದರು. ಬಳಿಕ ತಮ್ಮ ಮುಂಭಾಗದಲ್ಲಿದ್ದ ಒಂದು ಬಾಳೇಹಣ್ಣನ್ನು ತಿನ್ನಿಸಿದರು. ಕೂಡಲೇ ಆ ಬಾಲಕನ ಮುಖದ ಮೇಲೆ ಒಂದು ತರಹದ ಪ್ರಕಾಶವು ತೋರಹತ್ತಿತು. ಅದನ್ನು ಎಲ್ಲ ಭಕ್ತರು ಕಂಡು ವಿಸ್ಮಯಗೊಂಡರು. ಆಗ ಸದ್ಗುರುಗಳು "ಈ ಭಾಲಕನ ಮುಖದಿಂದ ಈ ಗುರಪ್ಪನ ಪೂರ್ವೀಕಥೆಯನ್ನು ಕೇಳಿರಿ" ಎಂದು ಎಲ್ಲರಿಗೂ ಅಪ್ಪಣೆ ಕೊಡಿಸಿದರು.

ಆಗ ಬಾಲಕನು, ಶ್ರೀಗಳವರ ಚರಣಕ್ಕೆ ನಮಿಸಿ, ಗುರಪ್ಪನ ಚರಿತ್ರವನ್ನು ಹೇಳಲಾರಂಭಿಸಿದನು. "ಸದ್ಭಕ್ತರೇ ಕೇಳಿರಿ; ಕೈಲಾಸದಲ್ಲಿ ಶಂಕರನ ಪೂಜೆನಡೆದ ಸಮಯದಲ್ಲಿ ಒಂದು ದಿನ ಓರ್ವ ಗಂಧರ್ವನೆಂಬವನು, ಶರೀರದ ಭಾನವಿಲ್ಲದೆ ಆನಂದದಿಂದ ಪರಶಿವನ ಧ್ಯಾನದಲ್ಲಿ ಮಗ್ನನಾಗಿ ಕುಳಿತಿದ್ದನು. ನಂದೀಶ್ವರನು, ಅವನ ಕೈ ಹಿಡಿದು, "ಪರಮಾತ್ಮನ ಪೂಜೆಯ ಸಮಯದಲ್ಲಿ ಹೀಗೆ ನೀನು ಕುಳಿತಿರುವದು, ನಿನಗೆ ಯೋಗ್ಯವೇ ಏಳು" ಎಂದು ಮೇಲಕ್ಕೆ ಎತ್ತಿದನು. ಗಂಧರ್ವನು ಕೋಪಗೊಂಡು ನಂದೀಶನನ್ನು ಗರ್ಜಿಸಿ ಜರೆದನು. ಆಗ ನಂದೀಶನು, ಎಲೋ ನೀಚನೆ ನೀಲಕಂಠನ ಪೂಜೆಗೆ ನಿರ್ಮಲ ಮನಸ್ಸಿನಿಂದ ನಿನ್ನನ್ನು ಕರೆದರೆ ಕೋಪಗೊಳ್ಳುವಿಯಾ ? ಮಂದಮತಿಯೇ !, ಇದಕ್ಕನುಗುಣವಾಗಿ ನೀನು ಭೂಲೋಕದಲ್ಲಿ ಶ್ರೀಶೈಲಕ್ಷೇತ್ರದ ಮಲ್ಲಿಕಾರ್ಜುನ ದೇವಾಲಯದ ಸಮೀಪದಲ್ಲಿರುವ ಕಾಡಿನಲ್ಲಿ ಕಾಡು ಹುಲಿಯಾಗಿ ಸಂಚರಿಸು ! ಎಂದು ಶಾಪಕೊಟ್ಟನು.

ಆಗ ಗಂಧರ್ವನು, ಭಯಗ್ರಸ್ಥನಾಗಿ ಕಣ್ಣೀರು ಸುರಿಸುತ್ತ, ಹರನ ಬಳಿಗೆ ಬಂದನು. ಪ್ರಭುವೇ, ನಿರಪರಾಧಿಯಾದ ನಾನು, ತಮ್ಮ ಧ್ಯಾನದಲ್ಲಿ ಮೈಮರೆತು ಕುಳಿತಿರುವಾಗ, ನಂದೀಶ್ವರನು ಬಂದು, ನನ್ನ ಆನಂದವನ್ನು ಕೆಡಿಸಿ, ವ್ಯಾಘ್ರನಾಗೆಂದು ಶಾಪಕೊಟ್ಟನು" ಎಂದು ದೂರು ಹೇಳಿದನು. ಪರಮಾತ್ಮನು, ನಿನಗೆ ಪ್ರಮಥರು ಶಾಪಕೊಟ್ಟಮೇಲೆ ಅದನ್ನು ಯಾರಿಂದಲೂ ತಪ್ಪಿಸಲಿಕ್ಕೆ ಆಗುವದಿಲ್ಲ. ಆದದ್ದು ಆಗಿಹೋಯಿತು. ಮುಂದೆ ನಿನ್ನನ್ನು ಉದ್ಧಾರ ಮಾಡಲು, ನಾನೇ ನರರೂಪ ತಾಳಿ ಗುರುವಾಗಿ ಭೂಲೋಕದಲ್ಲಿ ಅವತರಿಸುವೆನು. ಆಗ ನಿನ್ನ ಹುಲಿಯ ಜನ್ಮವನ್ನು ನೀಗಿಸಿ ಮಾನವ ದೇಹದಲ್ಲಿ

ಬರಿಸಿ ನನ್ನ ಸಮಸ್ತ ಸಂಪದವನ್ನು ನಿನಗಿತ್ತು, ನಿನ್ನನ್ನು ಕಾಪಾಡುವೆನು. ಹೆದರಬೇಡ. ಶಾಂತಿಗುಳವನ್ನು ಮಾತ್ರ ಬಿಡಬೇಡ ಹೋಗು' ಎಂದು ಸಂತೈಸಿ ಕಳಿಸಿಕೊಟ್ಟನು.

ಗಂಧರ್ವನು ಶಿವನ ಮಾತಿಗೆ ಮನ್ನಣೆ ಇತ್ತು ನಮಿಸಿ ದೇವ ಶರೀರ ವನ್ನು ಬಿಟ್ಟು ಶ್ರೀಶೈಲದಲ್ಲಿ ವ್ಯಾಘ್ರನಾಗಿ ಜನಿಸಿದನು. ಶಂಕರನು ಅದೇ ಕಾಲಕ್ಕೆ ಬಿದರಿಕೋಟೆಯಲ್ಲಿ ನರರೂಪದಿಂದ ಗುರುಶಾಂತಪ್ಪ–ದೇವಮಲ್ಲಮ್ಮ ಇವರ ಗರ್ಭದಲ್ಲಿ ಸಿದ್ಧನಾಮದಿಂದ ಅವತರಿಸಿದನು. ಬಾಲ ಸಿದ್ಧನು ಮನೆ ಮಾರು ತೊರೆದು, ಶ್ರೀಗುರುಗಳ ಕರುಣೆಪಡೆದು, ದೇಶದೇಶಗಳನ್ನು ಸಂಚರಿ ಸುತ್ತ ಚಿಂತಾಮಣಿ ಆಶ್ರಮಕ್ಕೆ ಬಂದನು. ಬಳಿಕ ಅಲ್ಲಿದ್ದ ಒಬ್ಬ ಭಕ್ತನು ಇವರನ್ನು ಕರೆಕೊಂಡು ಶ್ರೀಶೈಲಕ್ಕೆ ಹೋದನು. ಆಗ ಸಿದ್ಧನ ಸಂಗಡಿದ್ದ ಜಂಗಮರು ಸಿದ್ಧನನ್ನು ಕಂಡು "ಇವನು ಲಿಂಗವಿಲ್ಲದ ಬದ್ಧ ಭವಿ ಇರುವನು" ಎಂದು ಗದ್ದರಿಸಿ ಅವನನ್ನು ಗುದ್ದಿ ಹೊರಗೆ ದೂಡಿದರು. ಸಿದ್ಧರು ಗುದ್ದಿಸಿ ಕೊಂಡು ಕಾಡು ಬಿದ್ದು ಬರುವಾಗ ಒಂದು ಮಠವನ್ನು ಕಂಡು ಅದರಲ್ಲಿ ಪ್ರವೇಶ ಮಾಡಿದರು. ಅಲ್ಲಿ ಮಲಗಿದ್ದ ಒಂದು ಹುಲಿಯು ಸಿದ್ಧರ ಸುಳವನ್ನು ಕಂಡು ದಿಗ್ಗನೆ ಎದ್ದು ಅವರನ್ನು ಗುರುತಿಸಿತು. ಬಹು ಸಂತೋಷವುಳ್ಳದ್ದಾಗಿ ವಿನಯದಿಂದ ಬಂದು ಆರೂಢರ ದಿವ್ಯ ಚರಣಕ್ಕೆ ತಲೆ ಬಗ್ಗಿಸಿ ನಿಂತಿತು. ಅದನ್ನು ಅವರು ಗುರ್ತಿಸಿ, ಸಂತೋಷದಿಂದ ಅದರ ಶಿರವನ್ನು ಹಿಡಿದು ಮೇಲ ಕ್ಕೆತ್ತಿನರು. "ಮೃಗರಾಜನೇ" ನಿನಗೆ ಇನ್ನು ಸ್ವಲ್ಪೇ ದಿನಗಳಲ್ಲಿ ನರಜನ್ಮ ಪ್ರಾಪ್ತವಾಗುವದು, ಎಂದು ಅದರ ಮೇಲೆ ಅಭಯ ಹಸ್ತವನ್ನಿಟ್ಟು ಕೈಯಾಡಿಸಿ ದರು. ಮತ್ತು ಅದರ ಮೇಲೆ ಆರೋಹಣಮಾಡಿ ಲಿಂಗಗಳನ್ನು ಕಳಕೊಂಡ ಜಂಗಮರ ಗರ್ವವನ್ನೆಲ್ಲ ಜಾಡಿಸಿ ಝುಳಝುಳ ಮಾಡಿದರು. ಬಳಿಕ ಅವರ ಲಿಂಗಗಳನ್ನು ಕೊಟ್ಟು ಹುಲಿಯನ್ನು ಅಲ್ಲಿಯೇ ಬಿಟ್ಟು ಹೊರಟರು. ಮುಂದೆ ನಾನಾ ದೇಶ ಗಿರಿ, ಹಳ್ಳ, ಕೊಳ್ಳಗಳನ್ನು ತಿರುಗುತ್ತ ಕಾವೇರಿ ನದಿಯ ತೀರದಲ್ಲಿದ್ದ ಅಡವಿಗೆ ಬಂದರು. ಅಲ್ಲಿ ಕುರುಬರ ಕುರಿಗಳನ್ನು ಕಾಯುತ್ತ, ಅವರ ಕೂಡ ಉಣ್ಣುತ್ತ, ಆಟವಾಡುತ್ತ, ಸಂತೋಷದಿಂದ ಕಾಲಕಳೆಯ ಹತ್ತಿದರು. ಅತ್ತ ಹುಲಿಯು ಕೆಲವು ದಿವಸಗಳವರೆಗೆ ಅದೇ ಅಡವಿಯಲ್ಲಿ ವಾಸಮಾಡಿಕೊಂಡು ಅಲ್ಲಿಯೇ ತಿರುಗಾಡುತ್ತಿತ್ತು. ಅದಕ್ಕೆ ಸಿದ್ಧರ ವ್ಯಸನವು

ಹೆಚ್ಚಾಗಿ ಅವರನ್ನು ಅರಸುತ್ತ ದೈವಯೋಗದಿಂದ ಸಿದ್ಧರಿದ್ದ ಸ್ಥಳಕ್ಕೆ ಬಂದಿತು ಅಲ್ಲಿ ಕುರುಬರೊಡನೆ ಊಟ ಮಾಡುತ್ತ ಕುಳಿತಿರುವ ಆ ಪರಶಿವನ ಪರಾವತಾರಿಯಾದ ಸಿದ್ಧಾರೂಢರನ್ನು ಗುರುತಿಸಿತು. ತಾಯಿಯನ್ನು ಕಳಕೊಂಡ ಶಿಸುವಿನಂತೆ ಕಳವಳಿಸುತ್ತ ಅತಿ ಆತುರತೆಯಿಂದ ಜಿಗಿಯುತ್ತ ಬಂದು ಅವರನ್ನು ಈಕ್ಷಿಸುತ್ತ ನಿಂತಿತು. ಕುರುಬರೆಲ್ಲರೂ ಅಂಜಿ ಪಲಾಯನರಾದರು. ಹುಲಿಯು ಸಿದ್ಧರ ಮುಂದೆ ತಲೆ ಬಗ್ಗಿಸಿ ನಿಂತುಕೊಂಡಿತು. ಅವಧೂತರು ಪ್ರೀತಿಯಿಂದ ಅದರ ಮೇಲೆ ಹತ್ತಿ ಕುಳಿತುಕೊಂಡರು ಮತ್ತು ವಿನೋದದಿಂದ ನಗುತ್ತ, 'ಕುರುಬರೇ' ನಿಮಗೆ ಇದರಿಂದ ಮರಣದ ಭಯವಿಲ್ಲ. ನಿಮಗೆ ಗೆಳೆಯನಾಗಿ ಬಂದಿರುವದು. ಬನ್ನಿರೆಂದು ಕರೆದನು. ಅವರು ಅಂಜಿ ಬಾರದಿರಲು, ಹುಲಿಯನ್ನು ತಾನೇ ಅವರ ಸಮೀಪಕ್ಕೆ ಒಯ್ದು ನಿಲ್ಲಿಸಿದನು. ಆಗ ಕುರುಬರು ಮೈಛಳಿ ಬಿಟ್ಟು, 'ನೀನು ಚಂದ್ರಮೌಳಿ ಶಿವನೇ ಹೌದು. ನಮ್ಮ ಮನದ ಮಲಿನ ಕಳೆದು ನಿರ್ಮಲರನ್ನಾಗಿ ಮಾಡಿದ ಮಹಾದೇವನೇ ನಿನಗೆ ಶರಣು. ಶುಭದಾಯಕನೇ ನಿನಗೆ ಮಂಗಲ ! ಲೋಕ ಸಂಪೂಜ್ಯನೇ ನಿನಗೆ ಜಯ ಜಯ. ಕುರಿಗಳಿಗೆ ಮೃತ್ಯುವಾದ ಹುಲಿಯನ್ನು ಹೆತ್ತತಾಯಿಯಂತೆ ಮಯಾದಿ ನೀನು ನರನಲ್ಲ ಕೇವಲ ಪರಶಿವನು,' ಎಂದು ತಮ್ಮ ನಾಯಿಗಳನ್ನು ಪ್ರೀತಿಸುವಂತೆ ಹುಲಿಯಕೂಡ ಒಳ್ಳೇ ಸಲುಗೆಯಿಂದ ಆಡ ಹತ್ತಿದರು.

ಸಿದ್ಧರು ಆ ಹುಲಿಯ ಕಿವಿಯನ್ನು ಹಿಡಿದೆತ್ತಿ ಜಗ್ಗುತ್ತ ಒಂದು ಬಾರೆ ಹೊಡೆಯುತ್ತ ಮತ್ತೊಂದು ಬಾರೆ ಪ್ರೀತಿಯಿಂದ ಮುದ್ದಿಸುತ್ತ ಮತ್ತೊಂದು ಸಲ ಅದರ ಮೇಲೆ ಹತ್ತಿ ಹೊಡೆಯುತ್ತ ಹೀಗೆ ನಾನಾ ರೀತಿಯಿಂದ ಅದನ್ನು ಕಾಡಹತ್ತಿದರು. ಹುಲಿಯು ತನ್ನನ್ನು ಕಾಡಿದಷ್ಟು ಸಂತೋಷದಿಂದ ಅವರ ಕೂಡ ವಿನೋದ ಮಾಡುತ್ತಿತ್ತು.

ಹೀಗೆ ಕಾಲ ಕಳೆಯುತ್ತಿರಲು ಒಂದುದಿನ ಒಬ್ಬ ಬೇಡನು ಹೊತ್ತುಸಾಧಿಸಿ ಬಂದು, ಮರೆಯಲ್ಲಿ ನಿಂತು ಗುಂಡಿನಿಂದ ಗುರಿಯಿಟ್ಟು ಆ ಹುಲಿಗೆ ಹೊಡೆದನು. ಕೂಡಲೇ ಹುಲಿಯು ಗರ್ಜಿಸುತ್ತ ಬೇಡನ ಮೇಲೆ ಜಿಗಿದು ಕಡಿದು ಕೆಡವಿತು. ಆ ಸದ್ದಿಗೆ ಸಿದ್ಧರು ಭಾವಿಸಿ ಬಂದು ಹುಲಿಯನ್ನು ನೋಡಿ ಮರಮರನೆ ಮರುಗಿದರು. ಸಿದ್ಧರನ್ನು ಕಂಡಕೂಡಲೇ ಬಿದ್ದಹುಲಿಯು ಒದ್ದಾಡುತ್ತ ಎದ್ದು

ಕಣ್ಣೀರು ಹರಿಸುತ್ತ ಸಿದ್ಧಸದ್ಗುರುಗಳ ಚರಣಗಳ ಮೇಲೆ ಬಂದು ಬಿದ್ದಿತು. ಸ್ವಾಮಿಗಳು ಕರುಣೆಯಿಂದ ಅದರ ಶಿರವನ್ನು ಹಿಡಿದೆತ್ತಿ ತಮ್ಮ ತೊಡೆಯ ಮೇಲೆ ಇರಿಸಿಕೊಂಡರು. "ಭಕ್ತನೇ, ದುಃಖಿಸಬೇಡ ತಾಳು ಈ ಸಮಯ ದಲ್ಲಿ ಗುರುವಿನನ್ನು ಸ್ಮರಿಸು. ಮುಂದೆ ತೀವ್ರವಾಗಿ ಸ್ತುತ್ಯವಾದ ನರಜನ್ಮವು ಪ್ರಾಪ್ತವಾಗುವದು, ಎಂದು ಬೋಧಿಸಿ, ಅದರ ಮೈಮೇಲೆ ತಮ್ಮ ಅಭಯ ಹಸ್ತವನ್ನಾಡಿಸಿದರು. ಆಗ ಹುಲಿಯು ಸಿದ್ಧರ ಧ್ಯಾನದಲ್ಲಿ ಅವರ ಚರಣ ದಲ್ಲಿಯೇ ದೇಹ ತ್ಯಾಗಮಾಡಿತು.

ಇತ್ತ ಸ್ವಾಮಿಗಳು ಅಲ್ಲಿ ನೆರೆದ ಜನರಿಗೆ, 'ಈ ಬೇಡನು ಸಾಯುವ ದಿಲ್ಲ. ಇವನನ್ನು ಚನ್ನಾಗಿ ರಕ್ಷಿಸಿರಿ,' ಎಂದು ಹೇಳಿದರು. ಅವರು ಸಿದ್ಧರ ಮಹಿಮೆಯನ್ನು ನೋಡಿ ಎಲ್ಲರೂ ಚಕಿತಗೊಂಡವರಾಗಿ ಇವರು ಪರಮಾ ತ್ಮನೇ ಹೌದು, ಎಂದು ನಿಶ್ಚಯಿಸಿ ಪರಮ ಭಕ್ತಿಯಿಂದ ಎಲ್ಲರೂ ನಮಿಸಿ ಬೇಡನನ್ನು ಹೊತ್ತುಕೊಂಡು ಹೋದರು.

ಬಳಿಕ ಆರೂಢರು ನಾನಾ ದೇಶ-ಕೋಶಗಳನ್ನು ತಿರುಗುತ್ತ ಈ ಹುಬ್ಬ ಳ್ಳಿಗೆ ಬಂದು ನೆಲಸಿದರು. ಕೆಲವು ಕಾಲದ ಮೇಲೆ ಉಜ್ಜಣ್ಣನವರ ಸಿದ್ಧಪ್ಪನ ಮಹಾ ಪತಿವ್ರತಾ ಧರ್ಮಪತ್ನಿಯ ಗರ್ಭದಲ್ಲಿ ಹಿಂದೆ ಹುಲಿಯಾಗಿದ್ದ ಗಂಧ ರ್ವನೇ ಪರಮೇಶ್ವರನ ಕೃಪೆಯಿಂದ ಈಗ ಜನಿಸಿದವನೇ ಈ ಗುರಪ್ಪನು. ಮೊದಲು ಸಿದ್ಧರು ಇವನು ಹುಲಿಯಾಗಿದ್ದಾಗ ನಾನಾಪರಿಯಿಂದ ಹೇಗೆ ಕಾಡಿಸಿದ್ದರೋ ಹಾಗೆಯೇ ಇವರನ್ನು ಈಗ ಕಾಡುವನು ! ಭಕ್ತರೇ ಕೇಳಿ ದಿರಾ ! ಇಂಥ ಆಶ್ಚರ್ಯಕರ ಕಥೆಯನ್ನು ಆರೂಢನು ತಾವೇ ನನ್ನ ಹೃದಯ ದಲ್ಲಿ ಕುಳಿತು ಇದೆಲ್ಲ ಚರಿತ್ರವನ್ನು ಶ್ರವಣ ಮಾಡಿಸಿದ್ದು ಅವರೇ ಏನೂ ಅರಿಯದ ಅಜ್ಞ ಬಾಲಕನಾದ ನಾನು ಏನು ತಿಳಿದು ಹೇಳಬಲ್ಲೆ ?" ಎಂದು ಬಾಲಕನು ನುಡಿದು ಸದ್ಗುರುಗಳಿಗೆ ನಮಿಸಿ ಮೌನ ಸ್ಥಿತಿಯನ್ನು ಹೊಂದಿದನು. ಕೂಡಲೇ ಆರೂಢರ ಬಾಲಕನಿಗೆ ಮತ್ತೊಂದು ಬಾಳೆಯ ಹಣ್ಣು ಕೊಟ್ಟು ತಿನ್ನಿಸಿದರು. ಕೂಡಲೇ ಹುಡುಗನಿಗೆ ಪೂರ್ವ ಸ್ಥಿತಿ ಪ್ರಾಪ್ತ ವಾಗಿ ಆಟಕ್ಕೆ ಹೊರಟು ಹೋದನು.

ಭಕ್ತರಾದವರೆಲ್ಲರೂ ಇದೆಲ್ಲವನ್ನು ಏಕಚಿತ್ತದಿಂದ ಶ್ರವಣಮಾಡಿ ಪರಮ ಆಶ್ಚರ್ಯಚಕಿತರಾದರು. "ಗುರುನಾಥ ಈ ಮಠಕ್ಕೆ ಮುಂದೆ ಗುರಪ್ಪನನ್ನು ಮರಿಯನ್ನಾಗಿ ಮಾಡಬೇಕು" ಎಂದು ಬಿನ್ನವಿಸಿಕೊಂಡರು. ಅದಕ್ಕೆ ಆರೂಢರು ಸಮ್ಮತಿಸಲು ಸರ್ವಭಕ್ತರು ಶುದ್ಧ ಒನ್ಮನಸ್ಸುಳ್ಳವರಾಗಿ ಸಂತೋಷದಿಂದ ಸದ್ಗುರುಗಳಿಂದ ಗುರಪ್ಪನಿಗೆ ಸನ್ಯಾಸ ದೀಕ್ಷೆ ಕೊಡಿಸಿ ಮಠಕ್ಕೆ ಉತ್ತರಾಧಿಕಾರಿಯನ್ನಾಗಿ ಮಾಡಿದರು. ಹಾಗೆಯೇ ಮುಂದೆ ಅವನಿಗೆ ಮಠದಲ್ಲಿ ಸಂಸ್ಕೃತ ಕಲಿಯಲಿಕ್ಕೆ ಹಚ್ಚಿದರು. ಅವನು ಸಂಸ್ಕೃತ ಕಲಿಯುತ್ತ ಹೋಗಲು ಅವನ ಮುನ್ನಿನ ಕಿಡಿಗೇಡಿತನ ಗುಣಗಳೆಲ್ಲ ಮಾಯವಾದವು. ವೃತ್ತಿಯು ದಿನದಿನಕ್ಕೆ ಬದಲಾಗುತ್ತ ಅತಿ ಶಾಂತ ಗುಣವು ಪ್ರಾಪ್ತವಾಯಿತು. ಭಕ್ತರೆಲ್ಲರು ಅದನ್ನು ಕಂಡು ಭಯ ಭಕ್ತಿ–ಯುಕ್ತರಾಗಿ ಪೂಜ್ಯ ಭಾವನೆಯಿಂದ ನಮಿಸಹತ್ತಿದರು.

ಮಂಗಲ— ಪರಮ ಶಿಷ್ಯರು ಮತ್ತೆ ಭಕ್ತರ |
ಪೊರೆಯಲೋಸುಗ ನರನ ಜನ್ಮಕೆ |
ಬರುಸ ಧರೆಯೊಳ್ ಮೀರಿಕಷ್ಟವ ತಾನು ಉಣ್ಣುತ್ತಾ ||
ಪರರು ತಾವಪಕಾರ ಮಾಡಿರೆ |
ಹರುಷದಿಂದುಪಕಾರವವರಿಗೆ |
ಭರದಿ ಮಾಡಿದ ಪರಮ ಸಿದ್ಧರ ಚರಣಕಾಂ ನಮಿಪೆ ||

ಇತಿ ಶ್ರೀ ಸಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರ
ಲೀಲಾಚರಿತ್ರೆ ಕಲ್ಪದ್ರುಮದೊಳು ಶಿವಪುತ್ರ ಮತ್ತು ಗುರಪ್ಪ
ಎಂಬವರ ಪೂರ್ವಜನ್ಮದ ಕಥಾನಿರೂಪಣೆ ಎಂಬ
೩೫ ನೇ ಅಧ್ಯಾಯ ಸಮಾಪ್ತಿ.

———

|| ಶ್ರೀ ಸದ್ಗುರು ಸಿದ್ಧಾರೂಢ ಪ್ರಸನ್ನ ||



# ವೈಭವ ಕಾಂಡ

## ಅಧ್ಯಾಯ ೩೬

ಈ ಕೊನೆಯ ಅಧ್ಯಾಯದಲ್ಲಿ ಶ್ರೀ ಸಿದ್ಧಾರೂಢ ಸ್ವಾಮಿಗಳ ಬೋ ಯಿಂದಲೂ, ಸುಪ್ರಭಾವದಿಂದಲೂ, ಜಾತ್ರೆಯುತ್ಸವದಿಂದಲೂ ಜನರು ಧನ್ಯ ಭಾವ ಪಡೆದದ್ದು.

ಪುಣ್ಯಗೋಸುಗ ಅನ್ನದಾನವನ್ನು ಮಾಡುವನಾದಕಾರಣ ಅವತಾ ಪುರುಷನಲ್ಲವೆಂದು ಶಂಕೆ ಮಾಡಿದ್ದಕ್ಕೆ ಅವತಾರಿಯೇ ನಿಜವೆಂದು ಸಿದ್ಧ ಮಾಡಿದ್ದು. ಚರಿತ್ರೆಯ ಮಹಿಮೆ ಮತ್ತು ಫಲಸಿದ್ಧಿ ವಿಷಯ

ಸ್ತುತಿ— ಮೊದಲು ಕಮಲಜನಾವ ಬಲದಿಂ ||
ದುದಯ ಗೊಳಿಪನೋ ಜಗವ ಬಳಿಕಂ ||
ಮುದದಿ ಯಚ್ಯುತನಾವ ಬಲದಿಂದದನು ರಕ್ಷಿಪನೊ ||
ಅದನು ಕಡೆಗಂ ರುದ್ರನೆಂಬವ |
ನೊದವಿ ಲಯಿಪನೊ ಆವಬಲದಿಂ |
ಅದರ ಮೂಲಸ್ವರೂಪ ವರುಹಿದ ಗುರುವಿಗಂ ನಮಿಪೆಂ ||

### ಪದ— ೧-೯ ಜನರು ಧನ್ಯತೆ ಭಾವ ಪಡೆದದ್ದು

ಹೀಗೆ ಸಿದ್ಧರ ಮಹಿಮೆಯನ್ನೂ ಮತ್ತು ಪರಬ್ರಹ್ಮವಿದ್ಯೆಯ ಬಂಧುರವಾದ ಹೊಂದಾಣಿಕೆಯನ್ನೂ ದೇಶದೇಶದ ಜನರು ಕೇಳುತ್ತ "ಇವನು ಶಿವನೇ ಇರುವನೆಂದು ಬಲವಾಗಿ ನಂಬಿ, 'ಸಿದ್ಧಾರೂಢ ಸದ್ಗುರುತಂದೆ ಉದ್ಧಾರಾದೆವೊ ನಿಮ್ಮಿಂದೆ' ಎಂದು ಸ್ತುತಿಸುತ್ತಿದ್ದರು ಮತ್ತು ಸದ್ಗುರುವಿನ ಸನ್ನಿಧಿಗೆ ಬಂದವರೆಲ್ಲರೂ ತಮ್ಮ ತಮ್ಮ ಸಂಶಯಗಳನ್ನು ಕಳೆದುಕೊಂಡು ನಿಶ್ಚಿಂತರಾಗಿ ಹೋಗುತ್ತಿದ್ದರು. ಇಂಥ ಸುಂದರ ಶುಭಕಾಲದಲ್ಲಿ ಭರತಖಂಡದ ಈ ಕನ್ನಡ ನಾಡಿನಲ್ಲಿ ಮಾತ್ರ ನಿತ್ಯವು ಪರಮ ಪಂಚಾಕ್ಷರಿಯ ಭಜನೆಯು ಮತ್ತು ವೇದಾಂತ ಶಾಸ್ತ್ರದ ಅಭ್ಯಾಸವು ಕ್ರಮವಾಗಿ ಇಂದಿಗೂ ನಡೆದಿರುವದು. ಶಿವರಾತ್ರಿಯಲ್ಲಿ ಎಲ್ಲ ಶಿವಯೋಗಿಗಳ ಸಮೂಹದೊಂದಿಗೆ ಸಂಭ್ರಮದ ಜಾತ್ರೆಯು ಆನಂದೋತ್ಸವಗಳಿಂದ ನೆರವೇರುತ್ತಿರುವದು. ಆ ಸಮಯದಲ್ಲಿ ಮೋಹಿಗಳು ಮತ್ತು ನಿರ್ಮೋಹಿಗಳು ಇವರೀರ್ವರ ಮನಸ್ಸಿನ ಸಂಶಯದ ಬೇರನ್ನು ಕಿತ್ತೊಗೆದು ನಿಸ್ಸಂದೇಹ ಜ್ಞಾನ ಕೊಟ್ಟು ರಕ್ಷಿಸುತ್ತಿರುವ ಆರೂಢರ ಖ್ಯಾತಿಯು ದಿಗ್ದೇಶಗಳಲ್ಲಿಯೂ ಪಸರಿಸಿತು.

### ಪದ— ೧೦-೨೨ ಪುಣ್ಯಕ್ಕಾಗಿ ಅನ್ನದಾನ ಮಾಡುವದರಿಂದ ಸಿದ್ಧನು ಅವತಾರ ಪುರುಷನಲ್ಲ

ಭಕ್ತರ ಸಮೂಹದ ಇಂಥ ಜಾತ್ರೆಯು ಪೂರ್ವದಲ್ಲಿ ಎಲ್ಲಿಯೂ ಆಗಿರಲಿಕ್ಕಿಲ್ಲ ! ಇತಿಹಾಸ ಪ್ರಸಿದ್ಧವಾದ ಶಿವರಾತ್ರಿ. ಇದು "ಚೆಂಗು ಭಲೆ ಭಲೆರೆ ಎಂದು ಭಕ್ತಾದಿಗಳು ಜಾತ್ರೆಯಲ್ಲಿ ಮನಸೋತು ಹೊಗಳಿ ಸಂತೋಷ" ಹೊಂದುವರು. ಸಾಂಪ್ರದಾಯ ಹಿಡಿದು ಈ ಸಪ್ತಾಹದಿಂದೊಡಗೂಡಿ ಜಾತ್ರೆಯ ಸಮಯಕ್ಕೆ ಹೊರಗಿನಿಂದ ಅಕ್ಕಿ, ಜೋಳ, ಗೋದಿ, ಬ್ಯಾಳಿ, ಬೆಲ್ಲ ವಾಗೀನಗಟ್ಟಲೆ ಬರುತ್ತಿದ್ದವು. ಕುಂಬಳಕಾಯಿ, ಬದನೇಕಾಯಿ, ಸವತೀಕಾಯಿ, ಗಜ್ಜರಿ, ಮೆಣಸಿನಕಾಯಿ ಮೊದಲಾದ ಕಾಯಿಪಲ್ಲೆ ದಿನಾಲು ಬಂಡಿಗಳು ತುಂಬಿ ಬರುತ್ತಿದ್ದವು. ಬ್ಯಾಡಗಿ ಕಡೆಯಿಂದ ಒಣ ಮೆಣಸಿನಕಾಯಿಯ ಅಂಡಿಗೆಗಳೂ, ಕೊಡಗದ ಕಡೆಯಿಂದ ಊಟಕ್ಕೆ ಒಣ ಬಾಳೇ ಎಲೆಯ ಕಟ್ಟು ವ್ಯಾಗೀನಗಟ್ಲೆ ಬರುತ್ತಿದ್ದವು. ಮುಲ್ಲಾಡದಿಂದ ಕಟ್ಟಿಗೆ ಹೇರಿಕೊಂಡು ಬರುವ ಬಂಡಿಗಳ ಸಂಖ್ಯೆ ಲೆಕ್ಕಹತ್ತದಾ

ಯಿತು. ಬಂದ ಕಟ್ಟಿಗೆಯನ್ನು ಗಿರಣಿಯಲ್ಲಿ ದುಡಿಯುವ ನೂರಾ
ಜನರು ಪ್ರತಿಭಾನುಸಾರ ಬಂದು ಅವೆಲ್ಲ ಕಟ್ಟಿಗೆಯನ್ನು ಒಡೆಗು ಪ್ರಸಾ
ಸೇವಿಸಿ, ಗುರುವಿನ ಆಶೀರ್ವಾದ ಪಡೆದು ಹೋಗುತ್ತಿದ್ದರು. ಕಟ್ಟಿಗೆ ಒಟ್ಟಿ
ಬಣವೆಯ ತುದಿಯನ್ನು ನೋಡಿದರೆ ತಲೆಯ ಮೇಲಿನ ರುಮಾಲ ಕೆಳ
ಬೀಳುತ್ತಿತ್ತು. ಇಂಥ ೩--೪ ಬಣವೆಗಳು ಸತತ ಇರುತ್ತಿದ್ದವು. ಜಾತ್ರೆಯ
ಸಮಯಕ್ಕೆ ಅನೇಕ ದಾನಿಗಳು ಮನ್ನಣೆಗೊಳ್ಳುವ ಮನಸ್ಸಿನಿಂದ ಇನ್ನೂರು
ಮುನ್ನೂರು ಅನ್ನದಾಸೋಹಗಳನ್ನು ತರುತ್ತಿದ್ದರು. ಸದ್ಗುರುಗಳು ಜಾತ್ರೆಯ
ಮೂರು ತಿಂಗಳ ಮುಂಚಿತವಾಗಿ, ಶಾಸ್ತ್ರ ಹೇಳುವದನ್ನು ನಿಲ್ಲಿಸಿ ಅನ್ನಛತ
ಇಡುವವರ ಸಲುವಾಗಿ, ಕೆಣಜ ಬಿದುರು ಮೊದಲಾದವುಗಳನ್ನು ತರಿಸಿ
ಮೂರನೂರು, ಚಪ್ಪರಗಳನ್ನು ಕಟ್ಟಿಸಿ, ಅವೆಲ್ಲಕ್ಕೂ ಒಲೆ, ಬಚ್ಚಲಗಳನ
ಹಾಕಿಸಿ ಸಜ್ಜುಗೊಳಿಸುತ್ತಿದ್ದರು ಮತ್ತು ಪ್ರತಿಯೊಂದು ಅನ್ನದಾಸೋಹಕ
ಹಿಲಾಲು ಸಾಕಾಗುವಷ್ಟು ಕಟ್ಟಿಗೆಗಳನ್ನು ಪೂರೈಸಿಕೊಡುತ್ತಿದ್ದರು. ಕುಂಬಾ
ರರು ಎಲ್ಲ ದಾಸೋಹಗಳಿಗೂ, ಮಠಕ್ಕೂ ಸಾಕಾಗುವಷ್ಟು ಕೊಡ ಮ
ಮುಚ್ಚಳ ಮೊದಲಾದವುಗಳನ್ನು ಒದಗಿಸಿಕೊಟ್ಟು, ಸದ್ಗುರುಗಳ ಆಶೀರ್ವಾ
ಪಡೆಯುತ್ತಿದ್ದರು. ದೊಡ್ಡ ಮಠದ ಅಡಿಗೆಯ ಮನೆಯಲ್ಲಿ ದಿನಾಲು ೩--೪
ಚೀಲ ಅಕ್ಕಿ ಬಸಿಯುತ್ತಿದ್ದರು ನಾಲ್ವತ್ತುಕೊಡ ಹಿಡಿಯುವಂಥ ನಾಲ್ಕೈದು
ಕೊಳಗ ಸಾರು ಕಾಸುತ್ತಿದ್ದರು. ನೂರಾರು ಜನ ಹೆಣ್ಣುಮಕ್ಕಳು, ಸುಸ್ವರ
ದಿಂದ ಭಜನಿ ಮಾಡುತ್ತ ರೊಟ್ಟೀ ಬಡಿಯುತ್ತಿದ್ದರು. ಹತ್ತಿಪ್ಪತ್ತು ಜನರ
ಮುದ್ದೀ ತಿರವುತ್ತಿದ್ದರು. ಹೀಗೆ ಪಾಕ ತಯಾರಿಸುವವರೆಷ್ಟೊ! ಊಟಕ
ಬಡಿಸುವವರೆಷ್ಟೋ, ಊಟಕ್ಕೆ ಕರೆಯುವವರೆಷ್ಟೋ ಜನರು ತಮ್ಮ ತನು
ಸೇವೆಯನ್ನು ತ್ರಿಕರ್ಣ ಪೂರ್ವಕ ಹುಮ್ಮಸದಿಂದ ಮಾಡುತ್ತ ಗುರುಕೃಪೆ
ಪಾತ್ರರಾಗಿ ಧನ್ಯರಾಗುತ್ತಿದ್ದರು. ಬಂದ ಜಾತ್ರಿಕರು ಪ್ರಸಾದವನ್ನುಂಡು ತೃಪ್ತಿ
ಗೊಂಡು ಹೋಗುವಾಗ, ಅವರೆಲ್ಲರು ಮಹದಾನಂದದಿಂದ, ''ದಂಡನಾಯ
ಬಸವಣ್ಣನ ಭಕ್ತಿಯ ದಾಸೋಹಕ್ಕಿಂತ ಇದು ಅತಿ ಮಿಗಿಲಾದದ್ದು'' ಎಂದ
ಹೊಗಳಹತ್ತಿದರು. ಪ್ರಸಾದಗೊಂಡವರ ಸಂಖ್ಯೆ ಲೆಕ್ಕವಿಲ್ಲದಷ್ಟು ಮಿ
ಮೀರಿತು. ಶಿವನು, ತನ್ನ ಭಕ್ತಿಭಾಂಡಾರಿ ಬಸವಣ್ಣನ ದಾನಕ್ಕಿಂತ ತನ
ದಾನವು ಎಷ್ಟೋಪಾಲು ಮಿಗಿಲು ಎನ್ನುವದನ್ನು ತೋರಿಸಲಿಕ್ಕೆ ಇಂಥ ಅನ

ಸಂತರ್ಪಣೆಯನ್ನು ನಡೆಸಿರುವನು, ಎಂದು ನೆರೆದ ಜಾತ್ರೀ ಜನರೆಲ್ಲ ಹೊಗಳ-ಹತ್ತಿದರು. "ಭಗವಂತನೇ, ನೀನಿರುವ ಸ್ಥಾನದಲ್ಲಿ ಯಾವುದಕ್ಕೆ ಏನು ಕೊರತೆ ಇರುವದು ?'' ಎನ್ನುತ್ತ ಭಕ್ತರು ಸಂತೋಷದಿಂದ ಶಾಸ್ತ್ರ ಶ್ರವಣ, ಕೀರ್ತನೆ, ನಿರಂಜನ ಪಾದಪೂಜೆ ಮೊದಲಾದವುಗಳನ್ನು ಮಾಡುತ್ತ ಜಾತ್ರೆಯನ್ನು ಒಳ್ಳೇ ವೈಭವದಿಂದ ಮಾಡುತ್ತಿದ್ದರು, ಜಾತ್ರೆಯನ್ನು ಮುಕ್ತಾಯಗೊಳಿಸಿ ಶುದ್ಧಮನದಿಂದ ಸಿದ್ಧ ಸದ್ಗುರುಗಳ ಆಶೀರ್ವಾದ ಪಡೆದು ಭವವನ್ನು ಗೆದ್ದು ಧನ್ಯರಾದೆವೆಂದು ಸ್ವಾಮಿಗಳಿಗೆ ನಮಿಸಿದರು ಮತ್ತು ಪಂಚಾಕ್ಷರಿಯ ಮಂತ್ರ ವನ್ನು ತಿದ್ದಿ ಅನೇಕ ರೀತಿಯಿಂದ ಹಾಡುತ್ತ ತಮ್ಮ ಗ್ರಾಮುಗಳಿಗೆ ಹೋಗು-ತ್ತಿದ್ದರು. ಈಗಲೂ ಮಠದಲ್ಲಿ ಅಹೋರಾತ್ರಿ ಪಂಚಾಕ್ಷರಿ ಭಜನೆಯು ನಡೆದಿರುವದು.

## ಅನ್ನದ ಮಹಿಮೆ

ಜಾತ್ರೆಯಲ್ಲಿ ಕೆಲವು ಮಂದಮತಿಗಳಾದ ನಿಂದಕರು ಹೀಗೆ ಅನ್ನದಾನ ಮಾಡುವದನ್ನು ಕಂಡು, "ಸಾಮಾನ್ಯ ಮನುಷ್ಯರು ಪುಣ್ಯಬರಲೆಂಬ ಭಾವನೆ ಯಿಂದ ಅನ್ನದಾನ ಮಾಡುವಂತೆ, ಇವರೂ ಮಾಡುತ್ತಾರೆಂದಮೇಲೆ ಇವರಿಗೆ ಶಿವನ ಅವತಾರವೆಂದು ಅನ್ನುವದು ಹೇಗೆ? ಅನ್ನಹತ್ತಿದರು. ಕೆಲವು ಭಕ್ತರು ಅದನ್ನು ಕೇಳಿ ಸದ್ಗುರುಗಳ ಹತ್ತರ ಬಂದು, "ಅಪ್ಪಾ, ಜನರು ಹೀಗೆ ದೂರುವರು'' ಎಂದು ಅರಿಕೆ ಮಾಡಿಕೊಂಡರು.

"ಸದ್ಭಕ್ತರೇ, ಕೇಳಿರಿ. ನರರು ಉಣ್ಣುವ ಅನ್ನವು, ಉದರದೊಳಗೆ ಹೋದಮೇಲೆ ಸತ್ವ, ರಾಜಸ, ತಾಮಸವೆಂಬ ಮೂರು ಗುಣಗಳ ರೂಪಾಂತರ ಹೊಂದುವದು. ಅನ್ನದ ತಾಮಸ ಭಾಗವು ಮಲರೂಪದಿಂದ ಹೊರಗೆ ಹೋಗುವದು ರಾಜಸ ಭಾಗವು ಸಪ್ತಧಾತುಗಳ ರೂಪವನ್ನು ಧರಿಸುವದು. ಸಾತ್ವಿಕ ಭಾಗದಿಂದ ಅಂತಃಕರಣವಾಗುವದು. ಹೀಗಿರಲು ಊಟಮಾಡುವ ಸಮಯದಲ್ಲಿ ಮನಸ್ಸನ್ನು ವಿವೇಕದಿಂದ ವಿಷಯಗಳಿಗೆ ತೊಡಗಿಸದೆ ಪರಿಶುದ್ಧ ಮನಸ್ಸುಳ್ಳವರಾಗಿ ಸದ್ಭಾವದಿಂದ ಪರಶಿವನ ಧ್ಯಾನಮಾಡುತ್ತ ಪ್ರಸಾದಭಾವನೆ ಯಿಂದ ಉಂಡದ್ದಾದರೆ ಶರೀರವು ನಿರ್ಮಲಾರೋಗ್ಯ ಉಳ್ಳದ್ದಾಗುವದು. ಮತ್ತು ಮನವು ಸತ್ವಗುಣದ ವೃದ್ಧಿಯೊಡನೆ ತನ್ನ ಸಹಜ ಸ್ವಭಾವವಾದ

ಚಾಂಚಲ್ಯವನ್ನು ಕಳೆದುಕೊಳ್ಳುವದು. ಇದರಿಂದ ಮಾನವನು ನಿಶ್ಚಯ ಮನವುಳ್ಳವನಾಗಿ ಸನ್ಮಾರ್ಗದಲ್ಲಿ ತೊಡಗುವನು. ಇಂಥ ಸಾತ್ವಿಕ ಅನ್ನ ಪ್ರಸಾದ ಸೇವನೆಯಿಂದಾದ ವೀರ್ಯದಿಂದ ಅಂಥವರಿಗೆ ಅಂಥ ಸತ್ಪುತ್ರನೇ ಜನಿಸಿರುವನು. ಅವನು ಮುಂದೆ ಜ್ಞಾನಕ್ಕೆ ಹೊಣೆಗಾರನಾಗಿ, ತನ್ನ ತಂದೆ ತಾಯಿಗಳನ್ನಲ್ಲದೆ ಇಪ್ಪತ್ತೊಂದು ತಲೆಯವರಿಗೆ ತನ್ನ ವಂಶವನ್ನು ಉದ್ಧಾರ ಮಾಡುವನು. ಈ ರಹಸ್ಯವು ಅನ್ನದಲ್ಲಿರುವದು' ಎಂದು ಸಿದ್ಧಾರೂಢರು ಅವರೆಲ್ಲರಿಗೆ ಬೋಧಿಸಿದರು.

ಸದ್ಗುರುನಾಥನ ಭೋಧದ ತಾತ್ಪರ್ಯವೇನಂದರೆ ನಿರಂತರ ತಮ್ಮ ವ್ಯವಹಾರದ ತೊಡಗಿದ ಲೌಕಿಕರಿಗೆ ಇಂಥ ಸಾಧನೆಯನ್ನು ಸಾಧಿಸುವದು, ಸಾಧ್ಯವಾಗುವದಿಲ್ಲೆಂದು ತಿಳಿದು, ಸಂತ ಶಿಖಾಮಣಿ ಸಿದ್ಧಾರೂಢರು ಪ್ರತಿ ವರುಷದ ಶಿವರಾತ್ರಿ ಮತ್ತು ಶ್ರಾವಣ ಅಂತ್ಯದಲ್ಲಿ ಜಾತ್ರೆಯನ್ನು ಮಾಡ ಹತ್ತಿದರು. ಆ ಸಮಯದಲ್ಲಿ ಅಸಂಖ್ಯಾತ ಜನರು ಭಕ್ತಿಯಿಂದ ಬಂದು ತಮ್ಮ ತಮ್ಮ ಎಲ್ಲ ವ್ಯವಹಾರಗಳನ್ನು ಮರೆತ ಪರಮಾನಂದದಲ್ಲಿ ತನ್ಮಯರಾಗುತ್ತಿದ್ದರು ಮತ್ತು ಅವರೆಲ್ಲರು ಶಿವಮಂತ್ರೋಚ್ಚಾರಣೆಯಿಂದ ಶಿವಭಾವನೆ ತಾಳಿ ಅಡಿಗೆ ಮಾಡುತ್ತಿದ್ದರು. ಅವರು ಮಾಡಿದ ಎಲ್ಲ ಅಡಿಗೆಯ ಮೇಲೆ ಗುರುವರನು ತನ್ನ ಕರುಣಾಕಟಾಕ್ಷ ಬೀರಿ, ಹಸ್ತಸ್ಪರ್ಶ ಮಾಡುತ್ತಿರಲು, ಅದು ಪ್ರಸಾದವಾಗುತ್ತಿತ್ತು. ಅಂಥ ಪ್ರಸಾದವನ್ನು ಬಂದ ಯಾತ್ರಿಕರೆಲ್ಲರು ಸುಬುದ್ಧಿಯಿಂದ ಇದು ಮಹಾಪ್ರಸಾದವೆಂದು ಸ್ವೀಕರಿಸಿ ಪಾವನರಾಗುತ್ತಿದ್ದರು. ಈ ಪ್ರಕಾರ ಈ ಸುಕ್ಷೇತ್ರದಲ್ಲಿ ಪ್ರತಿವರುಷ ಎರಡು ಸಲ ಪ್ರಸಾದ ವಿತರಣೆ ನಡೆಯುವದು. ಸನ್ಮಾರ್ಗಿಗಳಿಗೆ, ಶಾಂತರಿಗೆ, ಶಿವಭಕ್ತರಿಗೆ ಇದೊಂದು **ಸುತಸಬೀರುವ ಕಾಶೀಕ್ಷೇತ್ರವಾಯಿತು !** ಜಗತ್ತು ಶಿವನ ಅವತಾರಿಯಾದ ಸಿದ್ಧನಿಂದ ತೀವ್ರ ಉದ್ಧಾರವಾಯಿತು. "ಈ ಮಹಾತ್ಮನಿಗೆ ಜಯ ಜಯವಾಗಲಿ !" ಎಂದು ಉನ್ನತ ಸ್ವರದಿಂದ ಘೋಷಣೆ ಮಾಡಿದರು. ಅದು ಅಲ್ಲದೆ ಕೈಲಾಸ ಮಂಟಪದಲ್ಲಿ ಸಣ್ಣ-ಪುಟ್ಟ ಬಾಲ-ಬಾಲಕಿಯರು ಸಂಭಾಷಣೆ, ಪ್ರವಚನ, ಉಪನ್ಯಾಸ ಮೊದಲಾದವುಗಳನ್ನೂ ಶ್ರೇಷ್ಠತರವಾದ ವೇದಾಂತ ಶಾಸ್ತ್ರವನ್ನೂ ತಿಳಿದುಕೊಂಡು ಹೇಳುವದನ್ನು ಕೇಳಿದರೆ ಆಶ್ಚರ್ಯವೂ ಶಿವಭಕ್ತಿಯೂ ಏಕಕಾಲಕ್ಕೆ ಹುಟ್ಟುವದು.

ಭರತ ಖಂಡವು ಮೊದಲು ತಿಳಿದು ನೋಡಿದರೆ ಹೇಗಿತ್ತು ? ಶ್ರೀ ಸದ್ಗುರು ಸಿದ್ಧಾರೂಢ ಸ್ವಾಮಿಗಳು ಅವತರಿಸಿ ದೇಶದ ಜನರನ್ನು ಯಾತ್ರೆಯ ನೆವದಿಂದ ಕರೆಯಿಸಿ ಅವರೆಲ್ಲರಿಗೆ ಸಾತ್ವಿಕ ಮಹಾಪ್ರಸಾದವನ್ನು ಕೊಡುತ್ತ ನಾನಾ ರೀತಿಯಿಂದ ಬೋಧಿಸಿ ಅವರೆಲ್ಲರನ್ನು ಬಿಡದೆ ಸನ್ಮಾರ್ಗಕ್ಕೆ ಹಚ್ಚಿದ ಮೇಲೆ ಈಗ ಹೇಗಿರುವದು ಎಂಬುದನ್ನು ನೀವೇ ವಿಚಾರಿಸಿ ನೋಡಿರಿ, ಅನ್ನ ದಾನವನ್ನು ಜಗತ್ತಿನ ಉದ್ಧಾರಕ್ಕೆ ಮಾಡುವನೋ ? ಅಥವಾ ಪುಣ್ಯವನ್ನು ಪಡೆಯಲಿಕ್ಕೆ ಮಾಡುವನೋ ? ಸಮ್ಯಕ್ ರೀತಿಯಿಂದ ವಿಚಾರಿಸಿ ನೋಡಿ ದರೆ ಇವನು ಪರಮಾತ್ಮನ ಅವತಾರ ಪುರುಷನಲ್ಲದೆ ನರನಲ್ಲ. ಇಂಥ ಸದ್ಗುರುವರನ ಮಹಿಮೆಯನ್ನು ಅಜಹರಿರುದ್ರಾದಿಗಳು ತಿಳಿಯಲು ಹೋಗಿ ಅಸಫಲರಾದರು ! ಇದಕ್ಕಾಗಿಯೇ ಶಿವನು ವೇದದಲ್ಲಿ ಅತಿ ಮುದದಿಂದ, ''ನಗುರೋ ರಧಿಕಂ, ನಗುರೋ ರಧಿಕಂ, ನಗುರೋ ರಧಿಕಂ, ವಿಧಿತಂ, ವಿಧಿತಂ, ವಿಧಿತಂ, ಶಿವಅಜಹರಿ, ಶಾಸನತಃ, ಶಿವಅಜಹರಿ, ಶಾಸನತಃ, ಶಿವಅಜಹರಿ ಶಾಸನತಃ'' ಎಂದು ಮೂರು ಸಾರೆ ಘೋಷಿಸಿ ಅನುಶಾಸನ ವನ್ನು ಮಾಡಿರುವನು.

ಗುರು ಸರಿ ಯಾರ್ಯಾರಿಲ್ಲಾ। ಗುರು ಪಾದುವೆ ಮೂಜಗನೆಲ್ಲಾ । ತಂಗೀ
ನಂಬವ್ವಾ ಇದು ಸುಳ್ಳಲ್ಲಾ । ಗುರು ದ್ರೋಹಿಗಳಿಗೆ ಗತಿಯಿಲ್ಲಾ ॥ಪ॥

ಗುರು ಬ್ರಹ್ಮ ಹರಿರುದ್ರೇಶ್ವರ । ವರಸದಾಶಿವಮೂರ್ತಿ । ಗುರುಸಾಕ್ಷಾತ್ಪರ
ಬ್ರಹ್ಮನವ್ವ ॥
ಗುರು ಸಾಕ್ಷಾತ್ಪರ ಬ್ರಹ್ಮ। ಧರೆಯನುದ್ಧರಿಸಲ್ಕೆ । ನರರೂಪ ತಾಳಿ
ಬಂದಿಹನೆ ॥೧॥

ಪರಿಪರಿ ಭವದೊಳು । ಮರಗುವರನು ಕಂಡು । ಭರದಿರಕ್ಷಿಸುವನೆ ದಯದಿ
ಭರದಿ ರಕ್ಷಿಸುವಂಥಾ । ಗುರುವಿಗೆ ಶರಣೊಕ್ಕು । ಸ್ಥಿರಮುಕ್ತಿಸುಖವನು
ಪಡಿರೆ ॥೨॥

ಘೋರ ಸಂಸಾರವಿದು । ಮೂರು ದಿನದ ಸಂತಿ । ತೀರಿಸಿಕೊಂಡು
ಹೋಗುವದು ॥
ತೀರಿದಕೂಡಲೆ । ದಾರಿಹಿಡಿಯುವಾಗ । ಆರಿಗಾರಿಲ್ಲವ್ವಾ ಕಡಿಗೆ ॥೩॥

ಕೆಟ್ಟೋಗುಕಾಯಿದು । ಎಷ್ಟವ್ವಾ ಅಭಿಮಾನ । ಬಿಟ್ಟದನು ಗುರುಗಾದ ಹಿಡಿರೆ ||
ಬಿಟ್ಟು ಗುರುಪಾದ ಮನ । ಮುಟ್ಟಿ ಸೇವಿಸುತವರ । ಗುಟ್ಟು ತಿಳಿದು ಭವಗೆಲಿರೆ ||೪||
ಗುರು ನೀನೇಗತಿಯೆಂದು । ಮೊರೆಹೊಕ್ಕವರನ್ನು । ಕರುಣದಿಂ ಕರೆದು ಮನ್ನಿಸಿದಾ ||
ಕರುಣದಿಂ ಕರೆದೆನ್ನ । ಶಿರದಿಹಸ್ತವನಿಟ್ಟು । ವರದಾನೆ ಗುರುಬೋಧೆ ಯನ್ನು ||೫||
ಆರುಗುಣಗಳ ಬಿಡಿಸಿ । ಮೂರು ತಾಪವಕೆಡಿಸಿ । ಹಾರಿಸಿದಾ ಮೂಲಾ-ಜ್ಞಾನವನು ||
ಹಾರಿಸಿ ಮೂಲಾಜ್ಞಾನ । ತೋರಿಸಿದಾ ನಿಜರೂಪು । ಆರು ನೀನೋಡು ನೋಡೆಂದಾ ||೬||
ಹಮ್ಮಿಗೆ ಸಾಕ್ಷ್ಯಾಗಿ । ಸುಮ್ಮನಿರುವಾ ಪರ । ಬ್ರಹ್ಮವೆ ನೀನಹುದೆಂದಾ ||
ಬ್ರಹ್ಮವೆ ತಾನೆಂದು । ಸುಮ್ಮನಿರಲು ಮುಕ್ತಿ । ನಿಮ್ಮನಿಯಾಳಹುದೆಂದಾ ||೭||
ಬಿಡುಯಂದಾ ತನುಭಾವಾ । ಸುಡುಯಂದಾ ಭವಭ್ರಾಂತಿ । ಹಿಡಿಯಂದಾ ಸೋಹಂಭಾವವನು
ಹಿಡಿದು ಸೋಹಂಭಾವ । ಪಡಿದೆ ನಿತ್ಯಾನಂದ । ವಡಿಯಾ ಸದ್ಗುರುವಿನ ದಯದಿ ||೮||
ಮಳ್ಳತನ ಜೀವತ್ವ । ತಳ್ಳಲನುಭವದಿಂದ । ಸುಳ್ಳಾಗಿ ಹೋತವ್ವ ಭವದುಃಖ ||
ಸುಳ್ಳಾಗಿ ಭವದುಃಖ । ಪುಳ್ಳಾತ್ಮಾನಂದದ । ನೆಳ್ಳಿನೊಳು ಕುಳಿತು ಮೈಮರಿದೆ ||೯||
ಮರಿಲ್ಹ್ಯಾಂಗನಾನಿಂಥ । ಪರಮೋಪ ಕಾರಿಯಾ । ಗಿರುವ ಶ್ರೀ ಗುರುವಿನ ಮಹಿಮಾ ||
ಮರಿಲಾರೆ ಪ್ರಭುವೆಗೆ । ದೊರಿತಾ ಹಿಂದಿನ ಬಹು । ವುರುತರ ಪುಣ್ಯದ ಬಲದಿ ||೧೦||
ಗುರುಗ್ರಾಮಗುರುಕ್ಷೇತ್ರ। ಗುರುಮನಿಕೈಲಾಸ। ಗುರುಮೂರ್ತಿಸಗುಣೇಶ್ವರನು ||

ಗುರು ಸುಗುಣೇಶ್ವರಾ | ವರ ಮುಮುಕ್ಷುಗಳಿಗೆ | ಗುರುವಿಗಿಂ ಪರದೈವ ವಿಲ್ಲಾ ||೧೧||

ಗುರುವಿನ ಘನ ಮಹಿಮೆ | ಗುರು ಪುತ್ರರಿವರು | ನರಗುರಿಗಳರಿವರೇನವ್ವಾ ||

ನರಗುರಿಗಳರಿಯದೆ | ಕರುಣಿ ಗುರುವರನನ್ನು ಪರಿಪರಿ ನಿಂದಿಸುವರವ್ವಾ ||೧೨||

ಪರಿಪರಿ ನಿಂದಿಸುವ | ನರಪಾಪಿಗಳು ಮುಂದೆ ನರಿ–ನಾಯಿ ಜನ್ಮಕ್ಹೋಗು-ವರು ||

ನರಿ—ನಾಯಿ ಜನ್ಮಗಳ | ತಿರುಗುವದಲ್ಲದೆಕಲ್ಪ | ವರಿಗೂ ಘೋರನರಕ ಬಿಡದೌವ್ವಾ ||೧೩||

ಕಲಿಯೊಳಿಂಥಾ ಜನರು | ಬಲುಬಾಳಾಗಿಹರವ್ವಾ | ತಿಳಿದಾದುಷ್ಟರ ಸಂಗತೊರೆಯೇ ||

ತೊರೆದು ದುಷ್ಟರ ಸಂಗ | ಬೆರಿದು ಗುರುವಿನೊಳು ನೀ ನರಿಯವ್ವಾ ಸುಜ್ಞಾನದ ಪಥವಾ ||೧೪||

ಇಂತಹ ಗುರುವರ ತಾನು ನಿಂತಿಹನೆ ನಡಕಟ್ಟಿ | ಸಂತತ ಬ್ರೂಲತ ಪುರದಿ ||

ನಿಂತ ಗುರುಸಿದ್ಧೇಶಿ | ನ್ನಂತರಂಗದಿ ತಾನೆ | ನಿಂತು ಹೇಳಿದ ನೀಪದ್ಯವನು ||೧೫||

ತನುವೆಂಬ ಪುರದೊಳು | ಮನವೆಂಬ ಮಠದಲ್ಲಿ | ಚಿನುಮಯಾತ್ಮನೆ ಗುರುವೆಂದೆ ||

ಚಿನುಮಯಾತ್ಮನೆ ಯನ್ನ | ಘನಗುರುವೆಂದು ನಾಂ | ಮನವಲಿದು ಜಯ ಜಯವೆಂದೆ ||೧೬||

ಎಂದು ಜ್ಞಾನಿಗಳು ಸ್ವಾರಸ್ಯವಾಗಿ ಪ್ರಕಟಿಸಿದ್ದಾರೆ. ಗುರುವರನಿಗೆ ನರನೆಂದು ತಿಳಿದು ನಿಂದಿಸುವ ಹಂದಿಗಳಿಗೆ ಯಮಪಾಶವು ಎಂದಿಗೂ ತಪ್ಪದು. ಯಮಭಟರು ಅವನನ್ನು ಎಳೆದೊಯ್ದು ಕಲ್ಪದ [ಬ್ರಹ್ಮನ ಒಂದು ಹಗಲಿನ] ವರೆಗೂ ಘೋರ ನರಕಕೂಪದಲ್ಲಿ ಬಿಸುಟಬಿಡುವರು. ಅದುಕಾರಣ "ಯೋಗಿ ವರನನ್ನು ವಂದಿಸು. ನಿಂದಿಸದಿರು. ವಂದಿಸಿದಾಗಳೆ ಬಹು ಪುಣ್ಯ, ನಿಂದಿಸಿ

ದಾಗಳೆ ಬಹು ಪಾಪ" ವೆಂದು ಶ್ರೀ ನಿಜಗುಣರು ಅಪ್ಪಣೆಕೊಡಿಸಿದ್ದಾರೆ. ಹೀಗೆ ಇಂಥ ಸದ್ಗುರುವಿನ ಸದ್ವಾರ್ತೆಯನ್ನು ಕೇಳಿ ಅರಸರು ಜಾತ್ರೆಯ ಸಮಯದಲ್ಲಿ ಸಹಾಯವನ್ನು ಸಲ್ಲಿಸಬೇಕೆಂದು ಅತಿ ಸಂತೋಷದಿಂದ ನಡು ಕಟ್ಟಿನಿಂತು, ತಮಗೆ ಸಲ್ಲುವ ಸೇವೆಯನ್ನು ಬಹು ಭಯಭಕ್ತಿಯಿಂದ ಮಾಡ ಹತ್ತಿದರು. ಮತ್ತು ಕೆಲವು ರಾಜರು ಇವರ ಚರಿತ್ರೆಯನ್ನು ಇಂಗ್ಲೀಷ ಭಾಷೆ ಯಲ್ಲಿ ಪರಿವರ್ತಿಸಲಿಕ್ಕೆ ಉತ್ತೇಜನ ಕೊಟ್ಟರು. ಇದು ಅಲ್ಲದೆ ಇವನ ಲೀಲೆಯನ್ನು ಸ್ವತಃ ತಾವೇ ನಿಂತು, ಎರಡನೇ ಪ್ರಾಂತದಲ್ಲಿ ಹಬ್ಬಿಸುತ್ತ "ಇವನೇ ಜಗದೊಡೆಯ." ನೆಂದು ಸಾರಹತ್ತಿದರು.

## ಸಿದ್ಧನಾಮದ ಮಹಿಮೆ

ಇವನ ನಾಮಮಹಿಮೆಯನ್ನು ಹೇಳುವದು ಅಸಾಧ್ಯವು. ಶುದ್ಧ ಮನಸ್ಸಿನಿಂದ ಸಿದ್ಧನೆಂದರೆ ಅವನ ಜನ್ಮಾಂತರದ ದುರಿತಗಳು, ಹರಿದು ಹೋಗುವವು. ಈ ಸಿದ್ಧಾಂತದ ನೆಲೆ ಸರಸ್ವತಿಗೆ ನಿಲುಕದಾಯಿತು. ಅಂತೆಯೇ ಅವಳ ಮೂಗು ಹೋಯಿತು. ಸಿದ್ಧನ ನಾಮವು ಕಾಮಿಗಳಿಗೆ ಕಾಮಧೇನು, ಸಿದ್ಧನ ಚಿಂತನ ಅವರ ಚಿಂತಾಮಣಿಯು, ಸಿದ್ಧನ ಕಲ್ಪನೆಯೇ ಅವರ ಕಲ್ಪವೃಕ್ಷವು. ಇನ್ನೂ ವಿವರಿಸಿ ನೋಡಿದ್ದಾದರೆ, ಸಿದ್ಧಾರೂಢರ ಚರಿತ್ರವೆಂಬ ಕಲ್ಪವೃಕ್ಷಕ್ಕೆ ನಾಲ್ಕು ವೇದಗಳೇ ತಾಯಿ ಬೇರುಗಳು ! ಮೆರವ ಸ್ಮೃತಿಗಳೇ ಗಡ್ಡೆಗಳು, ಅಷ್ಟಾದಶ ಪುರಾಣಗಳೇ ಶಾಖೋಪ ಶಾಖೆಗಳು ; ಇನ್ನುಳಿದ ಇವನ ಇತಿಹಾಸಗಳೆಲ್ಲ, ರಸಭರಿತವಾದ ಪರ್ಣ, ಪುಷ್ಪ, ಫಸಗ ಳೆನಿಸಿ ಶೋಭಿಸುತ್ತಿರುವವು. ಬೋಧಾನಂದ ರಸಭರಿತವಾದ ಫಲಗಳಿಂದ ಸಿದ್ಧನಾಮವೆಂಬ ಈ ಕಲ್ಪವೃಕ್ಷವು, ಯಾರ ಮನೆಯಲ್ಲಿರುವದೋ ಅವರಿಗೆ ಅರಸರ, ಚೋರರ ವೈರಿಗಳ ಮತ್ತು ಭೂತ, ಪಿಶಾಚಿ, ಹುಲಿ ಕರಡಿ, ಸಿಂಹ, ಸರ್ಪ, ಚೇಳು ಮೊದಲಾದ ಯಾವತರದ ಭೀತಿ ಇರದೆ ನಿರ್ಭಯರಾಗುತ್ತಾರೆ.

## ಗ್ರಂಥ ಮಹಿಮೆ

ಅಮರ ಸಂಜೀವಿನಿಯಂತಿರುವ ಈ ಚರಿತ್ರವನ್ನು ಯಾರು ಸ್ಪರ್ಶಿಸಿ ನಮಿಸುವರೋ, ಅವರಿಗೆ ಭಯಾನಕ ಬ್ರಹ್ಮರಾಕ್ಷಸ, ಭೂತ ಬೇತಾಳ, ಪ್ರೇತ, ಪಿಶಾಚಿ, ನೀರು, ಬೆಂಕಿ ಗಾಳಿ, ಸಿಡಿಲು ಮೊದಲಾದವುಗಳ ಭಯವು

ಏನೊಂದು ತೋರದೆ ಅವರು ನಿರ್ಭೀತರಾಗಿ, ಬಾಳುವರು, ಯಾರು ಈ ಚರಿತ್ರವನ್ನು ಸ್ತುತಿಸುವರೋ ಅಂಥ ಭಾಗ್ಯಶಾಲಿಗಳ ಬಂಧು ಬಾಂಧವರು, ತಂದೆ-ತಾಯಿ, ಮಿತ್ರ, ಕಳತ್ರ, ಪುತ್ರ ಮೊದಲಾದವರೆಲ್ಲರೂ ಪ್ರೀತಿಯುಕ್ತ ರಾಗುವರು. ಸತಿಯರು ನೀತಿವಂತರಾಗುವರು. ಇದಲ್ಲದೆ ತಮ್ಮ ಶರೀರ ಗಳಿಗೆ ಸಧ್ಯಕ್ಕಿರುವ ಮತ್ತು ಮುಂದೆ ಬರುವ ಸರ್ವ ರೋಗಗಳೂ, ಮನ ವನ್ನು ಕೊರೆಯುತ್ತಿರುವ ಕಡು ಬಡತನ ಇವೆಲ್ಲವೂ ನಾಶಹೊಂದುವವು. ಇದು ಅಲ್ಲದೆ ಧನ, ಧಾನ್ಯ, ಗೃಹ, ವಸ್ತ್ರ, ವಾಹನ ಸೇವಕ, ಸೇವಕಿಯರು ಮೊದಲಾದ ಎಲ್ಲ ವೈಭವದಿಂದ ಮೆರೆಯುವರು, ರಾಜರು ಮೊದಲು ಗೊಂಡು, ಬಡವರು ಕಡೆಯಾಗಿ, ಎಲ್ಲರೂ ದಿಗ್ದೇಶದಲ್ಲಿ ಕೀರ್ತಿಯನ್ನು ಪಡೆದು ಬಾಳುವರು. ಯಾರು ಈ ಗ್ರಂಥವನ್ನು ನಿಷ್ಕಾಮ ಭಕ್ತಿಯಿಂದ ಪಠಣ ಮಾಡುವರೋ, ಅಂಥವರ ಚಿತ್ತದಲ್ಲಿ ಹುದುಗಿಕೊಂಡಿದ್ದ ಜನ್ಮ ಜನ್ಮಾಂತರದ ಪಾಪಗಳ ರಾಶಿಯು ಹರಿದು ಹೋಗುವದು. ಅವರ ಅಂತಃ ಕರಣ ಪರಿಶುದ್ಧವಾಗಿ ಕೆಳಗೆ ಹೇಳಿದ ಪ್ರಕಾರ ವಿವೇಕ ಉಂಟಾಗುವದು.

ತೋರುವ ಈ ನಾಮರೂಪ ಜಗತ್ತನ್ನು, ಆತ್ಮನೇ ಪ್ರಕಾಶಿಸುವನು ಅವನನ್ನು ಈ ಜಗತ್ತು ಪ್ರಕಾಶಿಸಲಾರದು ಯಾಕಂದರೆ ಇವೆಲ್ಲವೂ ಅನಾತ್ಮ ವಸ್ತುಗಳಾಗಿರುವವು. ಅನಾತ್ಮಮಯವಾದ ಈ ಜಗತ್ತಿನ ಸಂಗ ಯಾರು ಮಾಡುವರೋ ಅವರ ಭ್ರಾಂತಿ ಹೆಚ್ಚುತ್ತ ಹೋಗುವದು. ಅದರಿಂದ ಕಡು ದುಃಖವಾಗುವದು. ಆದ್ದರಿಂದ ಇವೆಲ್ಲವನ್ನು ಸಂತೋಷದಿಂದ ಬಿಡಬೇಕೆಂಬ ವಿವೇಕವುಂಟಾಗುವದು. ಆದರಿಂದ ಕಡುತರ ವೈರಾಗ್ಯ ಪ್ರಾಪ್ತವಾಗುವದು.

ಯಾರು ನಿಷ್ಕಾಮ ಭಕ್ತಿಯಿಂದ ಈ ಗ್ರಂಥದ ಉಪವಾಸನೆ ಮಾಡು ವರೋ ಅವರ ಚಿತ್ತ ಚಾಂಚಲ್ಯವು ಅಳಿದು, ಶಮಾದಿ ಷಟ್ಸಂಪತ್ತು ಮತ್ತು ಮುಮುಕ್ಷುತ್ವಗಳು ಅವರ ಕೈವಶವಾಗುವವು. ಇದು ಅಲ್ಲ ತಾವು ಸ್ವಸ್ವರೂಪ ತಿಳಿದುಕೊಳ್ಳಲಿಕ್ಕೆ ಅತಿ ಆತುರತೆಯಿಂದ ಸದ್ಗುರುವರನನ್ನು ಅರಸಿ ಅವರ ಕರುಣೆಗೆ ಪಾತ್ರರಾಗುವರು ಇದು ಗ್ರಂಥ ಮಹಿಮೆಯ ಫಲವು.

ಯಾರು ಸದ್ಗುರುವರನ ಸನ್ನಿದಾನದಲ್ಲಿದ್ದುಕೊಂಡು ಅಭಿಮಾನವನ್ನು ತೊರೆದು, ಭಯ-ಭಕ್ತಿಯುಕ್ತರಾಗಿ ಈ ಗ್ರಂಥವನ್ನು ಶ್ರವಣ ಮಾಡುವರೋ

ಅವರ ಮೊದಲಿನ ಅಜ್ಞಾನದಿಂದ "ಪರಮಾತ್ಮನು ನಾನಾಗುವದು ಎಂದೂ ಸಂಭವವಿಲ್ಲ" ಎಂಬುವ ಅಸಂಭಾವನೆ ದೋಷವು ದೂರಾಗುವದು. ಯಾರು ಇದರ ಮನನ ಮಾಡುವರೋ ಅವರ, "ನಾನು ಜೀವನೋ ? ಬ್ರಹ್ಮನೋ ?" ಎಂಬ ಸಂಶಯ ಭಾವನೆಯು ನಶಿಸುವದು. ಈ ಗ್ರಂಥವನ್ನು ನಿಧಿಧ್ಯಾಸನ ಮಾಡುವದರಿಂದ ಅವರ ಚಿತ್ತಚಾಂಚಲ್ಯವು ಅಡಗಿ, ಮನದಲ್ಲಿ ಮನ ಮಾಡ ಕೊಂಡಿದ್ದ ಅಜ್ಞಾನದಿಂದ "ನಾನು ಬ್ರಹ್ಮನಲ್ಲಾ, ಜೀವನೇ ನಾನು. ಬ್ರಹ್ಮನೇ ನಾನಾಗಿದ್ದರೆ, ನನಗೆ ಎಂದೂ ದುಃಖ ಬರುತ್ತಿದ್ದಿಲ್ಲ. ದುಃಖ ಬರುತ್ತದೆಂದ ಮೇಲೆ ಬ್ರಹ್ಮನಾನಲ್ಲ" ಎಂಬ ವಿಪರೀತ ಭಾವನೆಯ ದೋಷವು ಪರಿಹಾರವಾಗು ವದು. ಈ ದೋಷತ್ರಯಗಳು ತೋರದ ಪರಿಪಕ್ವ ಹೃದಯದಲ್ಲಿ ನಿಧಿಧ್ಯಾ-ಸನದ ಪರಿಪಕ್ವಾವಸ್ಥೆಯು ಸಂಭವಿಸಿ, ನಿರಂತರವಾಗಿ ನಿಜಸುಖದ ಅನುಭವ ವಾಗಹತ್ತುವದು, ಇದೇ ಸವಿಕಲ್ಪ ಸಮಾಧಿಯೆನಿಸುವದು ಇದರ ಪರಿಪಕ್ವಾ ವಸ್ಥೆಯೆ ನಿರ್ಮಲವಾದ ಸಹಜ ಸ್ಥಿತಿಯು. ಅದೇ ನಿರ್ವಿಕಲ್ಪ ಸಮಾಧಿ ಎಂದು ಹೇಳಿಸಿಕೊಳ್ಳುವದು. ಇದುವೇ ಕೈವಲ್ಯವು. ಇದೇ ಅದ್ವೈತಾನು ಭವದ ಇರವು ಇದೇ ಪರಮಾನಂದದ ಅಬ್ಧಿ ಅಪಾರ ಸ್ವರೂಪವು ! ಸಚ್ಚಿದಾನಂದ ರೂಪವು.

## ಶ್ರವಣ ಫಲ

ಈ ಪುರಾಣದಲ್ಲಿ ಕೇವಲ ಸಿದ್ಧಾರೂಢರ ಲೀಲಾಮೃತ ತುಂಬಿರುವದು. ಇದರಲ್ಲಿ ಮೆರೆಯುವ ಮೊದಲನೆ ಕಾಂಡವನ್ನು ಭಕ್ತಿಪೂರ್ವಕವಾಗಿ ಸಂತೋಷ ದಿಂದ ಓದಿದವರಿಗೂ, ಕೇಳಿದವರಿಗೆ ಅನ್ನಮಯ ಕೋಶದ ಭ್ರಾಂತಿ ನಶಿಸಿ ಸದ್ವರ್ತನೆಯು ಒದಗುವದು ಎರಡನೇ ಕಾಂಡವನ್ನು ಅವರಂತೆಯೇ ಹೇಳ ಕೇಳುವವರಿಗೆ ಪ್ರಾಣಮಯಕೋಶದ ಭ್ರಮೆಯು ಬಿಟ್ಟು ಸಕಲ ವಿಷಯಗಳ ಮೋಹ ಮಾಯವಾಗುವದು. ಮೂರನೇ ಕಾಂಡವನ್ನು ವಿಚಾರಿಸಿ ಓದಿ ಕೇಳಿದ್ದಾದರೆ ಮನೋಮಯ ಕೋಶದ ಹುಚ್ಚು ಬಿಟ್ಟು ಹಿಂದಿನ ಜನ್ಮದ ದೋಷಗಳೆಲ್ಲ ಹರಿದು ಹೋಗುವವು. ಇದರಂತೆ ನಾಲ್ಕನೇ ಕಾಂಡವನ್ನು ತಿಳಿದು ಓದಿದರೆ ವಿಜ್ಞಾನಮಯ ಕೋಶವು ನಾನೆಂಬ ಅವಿವೇಕವಡಗಿ ಅನರ್ಥ ನಿವೃತ್ತಿ, ಪರಮಾನಂದ ಪ್ರಾಪ್ತಿಯಾಗುವದು. ಪರಮ ಭಕ್ತಿಯಿಂದ ಪಂಚಮ

ಕಾಂಡವನ್ನು ಓದಿ ಕೇಳಿದರೆ ಆನಂದಮಯ ಕೋಶದ ಭ್ರಮೆಯು ಅಡಗಿ ಶ್ರೇಷ್ಠತಮವಾದ ನಿರಂಕುಶ ಸ್ಥಿತಿಯು ಸತ್ಯವಾಗಿ ಫಲಿಸುವದು.

ಯಾವ ಪ್ರಕಾರ ಮೊದಲು ಜ್ಞಾನದೇವನು, ಚದುರತನದಿಂದ ಅಂತರ್ಯಾಮಿ ರೂಪದಿಂದ, ಅಜ್ಞಾನಿಯಾದ ಕೋಣನ ಹೃದಯದಲ್ಲಿ ಪ್ರವೇಶಿಸಿ ಅದರ ಮುಖದಿಂದಲೇ ವೇದವನ್ನು ಓದಿದನೋ, ಅದರಂತೆಯೇ ದಯಾ ಸಾಗರನಾದ ಸಿದ್ಗುರು ಸಿದ್ಧ ಭಾರತಿ ಸ್ವಾಮಿಗಳು, ಜಗದುದ್ಧಾರಕ್ಕೋಸುಗ, ಅತಿ ಕರುಣೆಯಿಂದ, ಅಂತರ್ಯಾಮಿ ರೂಪದಿಂದ, ಪಾಮರನೆನಿಸಿದ ಒಬ್ಬ **ಬಸವಂತಾಚಾರ್ಯನಾದ** ನನ್ನ ಹೃದಯದಲ್ಲಿ ಪ್ರವೇಶಿಸಿ ಮೋದಾತಿಶಯದಿಂದ ಶ್ರೇಷ್ಠ ಪಂಡಿತರು ಮೆಚ್ಚಿ ತಲೆದೂಗುವಂತೆ ಸಡಗರದ ಹದಿನೆಂಟು ಪ್ರಸ್ಥಾನಗಳ ಸಾರವನ್ನು ಹಿಂಡಿ, ತನ್ನ ಚರಿತ್ರವೆಂಬ ಸಾರವನ್ನು ಈ ಪುರಾಣದಲ್ಲಿ ತುಂಬಿರುವರು. ಸುಂದರವಾದ ಮೂಲಕವಿತಾ ಪ್ರಬಂಧವನ್ನು ತಮ್ಮ ಗರ್ವವನ್ನು ಚೂರುಗಡಿದು, ಅವರಿವರೆಂಬಭೇದ ಭಾವನೆಯಿಲ್ಲದೆ, ಸಮಭಾವದಲ್ಲಿ ನಿಂತು ಗ್ರಂಥಕರ್ತರು ರಚಿಸಿರುವರು. ಈ ಗ್ರಂಥವು ಸರ್ವರಿಗೂ ಹೇಳಲಿಕ್ಕೂ ಕೇಳಲಿಕ್ಕೂ ಬಹು ಯೋಗ್ಯವಾಗಿರುವದು.

ಪರಮ ಸಿದ್ಧಸದ್ಗುರುಗಳು, ಅಂತರ್ಯಾಮಿರೂಪದಿಂದ ಪ್ರೇರಿಸಿದ ರಸಯುಕ್ತವಾದ, ಈ ಕಾವ್ಯಕ್ಕೆ ಗುರುವರ್ಯರಾದ ಶ್ರೀ ಜಡಿ ಸಿದ್ಧಸ್ವಾಮಿಗಳು, ಮೆಚ್ಚಿ ಸಂತೋಷ ಉಕ್ಕಿ ಪರಮ ಕಲ್ಪದ್ರುಮವೆಂಬ ನಾಮಕರಣವನ್ನು ಮಾಡಿರುವರು. ಸದ್ಭಕ್ತರೆಲ್ಲರೂ ಸದ್ಭಾವದಿಂದೊಡಗೂಡಿ ಬಿಡದೆ ಇದನ್ನು ಓದಿ ಕೇಳಿ ಧನ್ಯರಾಗಬೇಕೆಂದು ಬಸವಂತಾಚಾರ್ಯರು ವಿನಯದಿಂದ ಸರ್ವರಿಗೂ ಬಿನ್ನಯಿಸಿಕೊಂಡಿದ್ದಾರೆ.

## ಶ್ರೀ ಸಿದ್ಧಾರೂಢ ಹಾಗು ಗುರುನಾಥಾರೂಢರ ವಿದೇಹಕೈವಲ್ಯ.

ಗುರುನಾಥಾರೂಢರನ್ನು ಮಠಕ್ಕೆ ಮರಿಯನ್ನಾಗಿ ಮಾಡಿದ ಮೇಲೆ ಆರೂಢರು ಗುರುನಾಥನನ್ನು ಸಂಸ್ಕೃತ ಕಲಿಯಲಿಕ್ಕೆ ಶಿವಪುತ್ರಸ್ವಾಮಿಗಳವರ ಸನ್ನಿಧಿಗೆ ಕಳುಹಿಸಿಕೊಟ್ಟರು. ಗುರಪ್ಪನು ಅವರು ಹೇಳಿದಷ್ಟು ಪಾಠ ಮಾಡದಿದ್ದರೆ ಇಲ್ಲವೆ ಏನಾದರೂ ತಪ್ಪಿದರೆ ಹೊಡಿಸಿಕೊಂಡು ಅಳುತ್ತ ಬಂದು ಶ್ರೀ ಸದ್ಗುರುಗಳ ಸಮ್ಮುಖದಲ್ಲಿ ನಿಂತನು. ಆರೂಢರು, "ಗುರು ಯಾಕೆ

ಅಳುತ್ತಿ" ? ಎಂದು ಕೇಳಿದರು ಗುರಪ್ಪನು, "ಅವರು ಹೊಡೆಯುತ್ತಾರೆ ನಾನು ಕಲಿಯಲಿಕ್ಕೆ ಒಲ್ಲೆ", ಎಂದನು. "ಹಾಗಾದರೆ ಒಲ್ಲದಿದ್ದರೆ ಬಿಡು. ಗುರುಕೃಪೆಯಿಂದ ಎಲ್ಲ ವಿದ್ಯೆಯೂ ತಾನಾಗಿಯೇ ಪ್ರಾಪ್ತವಾಗುತ್ತದೆ", ಎಂದು ಹೇಳಿ ಅವತ್ತಿನಿಂದ ಕಲಿಯುವದನ್ನು ಆರೂಢರು ಬಿಡಿಸಿಬಿಟ್ಟರು. ಗುರಪ್ಪನು ಬಹಳ ಕಿಡಿಗೇಡಿಯೂ, ಹಟಮಾರಿಯೂ ಇದ್ದ ಮೂಲಕ ಮೇಲಿಂದ ಮೇಲೆ ತಪ್ಪು ಮಾಡುತ್ತಿದ್ದನು. ಒಂದು ಸಮಯ ಸಾಧಿಸಿ ಸದ್ಗುರುಗಳು ಅವನನ್ನು ಕರೆದರು. ಕೂಡಲೇ ಗುರಪ್ಪನು ಭಯಗೊಂಡು ಸಣ್ಣ ಮುಖ ಮುದ್ರೆಯುಳ್ಳವನಾಗಿ ಬಂದು ಕಂಬಕ್ಕೆ ಭುಜಹಚ್ಚಿ ನಿಂತನು. ಆಗ ಆರೂಢರು ಜೋರಿನಿಂದ ಗುರಪ್ಪನ ಕಪಾಳಕ್ಕೆ ಕರತಾಡನೆ ಮಾಡಿದರು. ಗುರುಗಳ ಪೆಟ್ಟು ಒಂದು ಕಂಬದ ಪೆಟ್ಟು ಒಂದು ಹೀಗೆ ಎರಡು ಪೆಟ್ಟುಗಳು ಏಕಕಾಲಕ್ಕೆ ತಗಲಿದವು. ಅಂದಿನಿಂದ ಗುರಪ್ಪನ ಹಟಮಾರಿ-ತನವೂ ಉಡಾಳತನವೂ ಎರಡೂ ಮಾಯವಾಗಿ ವಿವೇಕ ವೈರಾಗ್ಯ ಉಂಟಾ-ದವು. ಜನಸಂಗವನ್ನು ತೊರೆದು ಏಕಾಂತದಲ್ಲಿ ಇರಹತ್ತಿದನು. ದಿನದಿನಕ್ಕೆ ಅವನಲ್ಲಿ ಸಾತ್ವಿಕಗುಣ, ಅಧಿಕವಾಗಹತ್ತಿತು. ಅದನ್ನು ಸದ್ಗುರುಗಳು ಕಂಡು, ಬಹಳ ಸಂತೋಷ ಪಡಹತ್ತಿದರು. ಮತ್ತು ಭಕ್ತರನ್ನು ಕುರಿತು, "ನೀವು ಶುಕನ, ವೈರಾಗ್ಯವನ್ನು ಪುರಾಣ, ಇತಿಹಾಸಗಳಲ್ಲಿ, ಕೇಳಿದ್ದೀರಿ. ಆದರೆ ನಮ್ಮ ಗುರುನ ವೈರಾಗ್ಯವು ಶುಕನ, ವೈರಾಗ್ಯಕ್ಕಿಂತಲೂ, ಅಧಿಕ-ನೋಡಿರಿ", ಎಂದು ಮೇಲಿಂದ ಮೇಲೆ ಹೇಳುತ್ತಿದ್ದರು.

ಮುಂದೆ ಶ್ರಾವಣ ಜಾತ್ರೆಯ ಸಮಯದಲ್ಲಿ ಧರ್ಮಶಾಲೆಯಲ್ಲಿ ಶಾಸ್ತ್ರ ಶ್ರವಣ ನಡೆದಿತ್ತು. ಆವಾಗ್ಗೆ ಸ್ವಾಮಿಗಳವರಿಗೆ ಜ್ವರ ಬಹಳ ಬಂದವು. ಆಗ ಅವರನ್ನು ಒಂದು ಕುರ್ಚಿಯ ಮೇಲೆ ಕೂಡ್ರಿಸಿ ಹೊತ್ತುಕೊಂಡು ಕೈಲಾಸ ಮಂಟಪಕ್ಕೆ ತಂದು ಕೂಡ್ರಿಸಿದೆವು. ಆಗ ಸದ್ಗುರುಗಳು ನನಗೆ ಗುರುನ್ನ ಕರೆದುಕೊಂಡು ಬಾ" ಎಂದು ಹೇಳಿದರು. ನಾನು ಹೋಗಿ ಗುರಪ್ಪನವರನ್ನು ಕರೆದುಕೊಂಡು ಬಂದೆನು ಆಗ ಗುರಪ್ಪನವರಿಗೆ, "ಗುರು ಇವತ್ತು ಪೂಜಾಕ್ಕೆ ಮೇಲೆ ಹೋಗಿ ಕೂಡ್ರು" ಎಂದು ಅಪ್ಪಣೆಕೊಡಿಸಿದರು ಗುರಪ್ಪನವರು ತುಂಬಿದ ಕಣ್ಣುಗಳಿಂದ ಅಶ್ರುಗಳನ್ನು ಸುರಿಸುತ್ತ ಸ್ತಂಭದಂತೆ ಸುಮ್ಮನೆನಿಂತು

ಬಿಟ್ಟರು, ಅದನ್ನು ಕಂಡು ಸದ್ಗುರುಗಳು, "ಗುರುನಾಜ್ಞೆ ಪಾಲಿಸ್ತಿಯಿಲ್ಲೊ ?" ಎಂದು ರೇಗಿದರು. ಗುರಪ್ಪನವರು ಏನೊಂದು ಮಾತನಾಡದೆ ಸುಮ್ಮನೆ ಹೋಗಿ ಸಿಂಹಾಸನದ ಮೇಲೆ ಕುಳಿತುಕೊಂಡರು. ಆಗ ಶ್ರೀಗುರು ಸಿದ್ಧಾ— ರೂಢರು ತಮ್ಮ ಸಮ್ಮುಖದಲ್ಲಿ ಕುಳಿತಂಥ ಸತ್ಪುರುಷರೆಲ್ಲರನ್ನು ಕುರಿತು, "ಗುರುನಾಥಾರೂಢರ ಕಡೆಗೆ ಮೇಲಕ್ಕೆ ಬೆರಳು ಮಾಡಿ, ಅವನ ನಿಮಗಷ್ಟೇ ಗುರು ಅಲ್ಲ ! ನನಗೂ ಗುರುಆಗಿದ್ದಾನೆ' ನೋಡಿರಿ ಎಂದು ಸೂಚಿಸಿದರು. ನಂತರ ಪರಮಾತ್ಮನ ಪೂಜೆಯಂತೆ, ಗುರುನಾಥಾರೂಢರ ಪೂಜೆಯನ್ನು ಒಳ್ಳೇ ವೈಭವದಿಂದ ಮಾಡಿ ಮಂಗಳಾರತಿಯೊಂದಿಗೆ ಮುಕ್ತಾಯಗೊಳಿಸಿದರು.

## ಗುರುನಾಥಾರೂಢರಿಗೆ ಉಪದೇಶ

ಒಂದು ದಿನ ಗುರುನಾಥಾರೂಢರನ್ನು ತಮ್ಮ ಪಕ್ಕದಲ್ಲಿ ಕೊಡ್ರಿಸಿ ಕೊಂಡು, "ನೋಡು ಗುರು ನೀನು ಈ ಆಸ್ತಿ, ಐಶ್ವರ್ಯ ಭೋಗ ಭಾಗ್ಯಾದಿ ಯಾವ ವಿಷಯಗಳನ್ನು ಎಷ್ಟೂ ನೆಚ್ಚಬೇಡ ಒಂದು ಮಗಿ, ಒಂದು ಪರಿವಾಣ, ಮಠದ ನೆರಳು ಇಷ್ಟೇ ನಿನ್ನ ಆಸ್ತಿಯೆಂದು ತಿಳಿದುಕೊ, ಮತ್ತು ಭಕ್ತರ ಕೈಯಲ್ಲಿ ನೀನು ಸಿಗಬೇಡ" ಎಂದು ಬೋಧಿಸಿದರು.

ಹೀಗೆ ಕಾಲವು ಗತಿಸಿದಂತೆ ಮಠದ ಆಸ್ತಿಯು ವರುಷಕ್ಕೆ ಹೆಚ್ಚುತ್ತ ನಡೆದು ಪ್ರತಿವರುಷಕ್ಕೆ ನಿಕ್ಕಿ ೨೫೦೦೦ ರೂಪಾಯಿಗಳು ಬರುವಷ್ಟು ಆಸ್ತಿ ಆಯಿತು. ಅದನ್ನು ಕಂಡು ಸ್ವಾಮಿಗಳವರು, ಭಕ್ತರನ್ನು ಕುರಿತು 'ಇನ್ನು ಮುಂದೆ ಮಠಕ್ಕೆ ಭಕ್ತರು ಯಾರೂ ದಕ್ಷಿಣಿ ವಗೈರೆ ಏನೂ ಕೊಡದಿದ್ದರೂ ಶ್ರಾವಣ, ಶಿವರಾತ್ರಿ, ರಾಮನವಮಿ ಮೊದಲಾದ ಎಲ್ಲ ಜಾತ್ರೆಗಳು ಸರಾಗ ವಾಗಿ ಸಾಗುವಷ್ಟು ಮಠದ ಆಸ್ತಿ ಆಯಿತು, ನೋಡಿರಿ' ಎಂದರು.

ಹೀಗೆ ಮಠದ ಆಸ್ತಿಯು ಹೆಚ್ಚುತ್ತಿರಲು, ಪಂಚಮಸಾಲಿಯವರಿಗೂ, ಪಟೇಗಾರರಿಗೂ ಮಠದ ಸಂಬಂಧ ವೈಷಮ್ಯಯುಂಟಾಗಿ ಕಲಹ ಪ್ರಾರಂಭ ವಾಯಿತು. ಅದನ್ನು ಕಂಡು ಇಚ್ಛಾ ಮರಣವುಳ್ಳ ಸದ್ಗುರುನಾಥನು, ಎರಡೂ ಪಂಗಡದವರನ್ನು ಕರೆಯಿಸಿ, ನೀವೀರ್ವರು ರಾಜಿಯಾದರೆ ನಾನು ಇನ್ನೂ ಇಪ್ಪತ್ತು ವರುಷ ಇರುವೆನು,' ಎಂದು ಆಶ್ವಾಸನ ಕೊಟ್ಟರು. ಅವರು ಸದ್ಗುರುವಿನಲ್ಲಿ ಶ್ರದ್ಧೆಯನ್ನಿಡದೆ ನಶ್ವರ ಆಸ್ತಿಯಮೇಲೆ ದೃಢವಿಶ್ವಾಸ

ವನಿಟ್ಟು, ರಾಜಿಯಾಗದೆಹೋದರು. ನ್ಯಾಯವು ಅಧಿಕವಾಗುತ್ತ ಹಾಯ ಕೋರ್ಟಿನವರೆಗೂ ಹೋಯಿತು. ಕೋರ್ಟು ಮಠದಲ್ಲಿಯೇ ಪ್ರಾರಂಭ ವಾಗಿ ಇಪ್ಪತ್ತೊಂದು ದಿವಸ ಶ್ರೀ ಸಿದ್ಧಾರೂಢರ ಜವಾಬು ನಡೆಯಿತು. ನಂತರ ಗುರುನಾಥರೂಢರು ಮಠಕ್ಕೆ ಅಧಿಕಾರಿಗಳಲ್ಲ 'ಅವರು ಟ್ರಸ್ಟ ಕಮೀಟಿಯೊಳಗೆ ಒಬ್ಬರಾಗಿ ಸಮಾಧಿ ಪೂಜಾ ಮಾಡಿಕೊಂಡು ಇರಬಹುದು' ಎಂದು ಜಜ್ಜಮೆಂಟ ಪಾಸಾಗಿ" ಬಂದಿತು ಸಿದ್ಧಪ್ಪ ಉಜ್ಜಣ್ಣನವರು ಮತ್ತೆ ಪ್ರೀವ್ಹಿಕೌನ್ಸಿಲ್ಲಿಗೆ ಅಪೀಲು ಮಾಡಿದರು. ಅವರು ಈ ನ್ಯಾಯವನ್ನು ಪುನಃ ಕೆಳಗಿನ ಕೋರ್ಟಿಗೆ ಹಾಕಿದರು. ಯಾವನೋಬ್ಬ ವಕೀಲ "ಮೂಲ ಪುರುಷನು ನಾಶವಾದರೆ ನ್ಯಾಯ ನಿಮ್ಮಂತೆ ಆಗುವದು" ಎಂದು ಹೇಳಿದನಂತೆ, ದುಷ್ಟರು ಸದ್ಗುರುವರನನ್ನು ನಾಶಮಾಡುವದಕ್ಕಾಗಿ ಒಂದು ದಿನ ಸ್ವಾಮಿಗಳು ಅಡುಗೆಯಮನೆಯೊಳಗೆ ಹೋಗುತ್ತಿರುವಾಗ್ಗೆ ಒಬ್ಬನು ಅವರ ಹಿಂದಿನಿಂದ ಬಂದು, 'ಬಕ್ರಿಪಾ' ಎಂದು ಕರೆದನು. ಗುರು ಗಳು, ಯಾಕೆ 'ಇಂಥ ಪಾಪಕಾರ್ಯ ಮಾಡುತ್ತೀರಿ' ಎಂದರು. ಅವನು ಸುಮ್ಮನಾಗಿ ಹಿಂದುರುಗಿದನು. ಹಿಂದಿನಿಂದ ಸ್ವಾಮಿಗಳು "ನಿಮಗೆ ಸುಖ ವಾಗುತ್ತದೆಂದರೆ ಬರುತ್ತೇನೆ, ನಡೆ ಎಂದು ಅವನ ಸಂಗಡ ಹೋದರು. ಮತ್ತು ನೀವು ಏನು ಕೊಡಬೇಕೆಂದು ಸಂಕಲ್ಪ ಮಾಡಿರುವಿರೋ, ಕೊಡಿರಿ ಎಂದು ವಿಷವನ್ನು ತಕ್ಕೊಂಡು ಶಿವಾರ್ಪಣವೆಂದು ಪಾನ ಮಾಡಿದರು, ಆಗ ಅದು ಆರೂಢರಿಗೆ ಏಳೆಂಟು ದಿನಗಳವರೆಗೆ ಬಹಳ ತ್ರಾಸು ಮಾಡಿತು. ಆ ಸಮಯಕ್ಕೆ ಗುರುನಾಥಾರೂಢರು ಸಾಂಗ್ಲಿಗೆ ಹೋಗಿದ್ದರು. ಸ್ವಾಮಿಗಳು, "ಗುರುನಾಥನಿಗೆ ತೀವ್ರ ತಾರುಮಾಡಿ ಕರೆಯಿಸಿರಿ" ಎಂದು ಹೇಳಿ ಸುಮ್ಮನೆ ಮಲಗಿಬಿಟ್ಟರು. ಮುಂದೆ ಗುರುನಾಥಾರೂಢರು ಬಂದ ಕೂಡಲೆ ಅವರನ್ನು ಸ್ವಾಮಿಗಳ ಹತ್ತರ ಕರೆದುಕೊಂಡು ಬಂದರು. ಆಗ ಸ್ವಾಮಿಗಳು ಗುರಪ್ಪ ನವರನ್ನು ತಮ್ಮ ಸಮ್ಮುಖದಲ್ಲಿ ಕೂಡ್ರಿಸಿಕೊಂಡು ಅವರ ಮೇಲೆ ತಮ್ಮ ಸಂಪೂರ್ಣ ಕೃಪಾದೃಷ್ಟಿಯನ್ನಿಟ್ಟು ಪರಕಾಯ ಪ್ರವೇಶಮಾಡಿದಂತೆ ತಮ್ಮ ಸರ್ವ ಶಕ್ತಿಯೆಲ್ಲವನ್ನು ಅವರಲ್ಲಿ ತುಂಬಿ ಶಾಲಿವಾಹನ ಶಕೆ ೧೮೫೧ ಶುಕ್ಲನಾಮ ಸಂವತ್ಸರ ಶ್ರಾವಣ ಶುದ್ಧ ಪೌರ್ಣಿಮೆಯ ಮಂಗಳವಾರ ಉಪಾದಿ ರಹಿತತ್ವ ದಿಂದ ಪೂರ್ಣತ್ವವನ್ನು ಹೊಂದಿದರು.

ಪುನಃ ಕೆಳಗಿನ ಕೋರ್ಟಿನಲ್ಲಿ "ಶ್ರೀ ಗುರುನಾಥಾರೂಢರು ಮಠಕ್ಕೆ ಅಧಿಕಾರಿಗಳು ಹೌದು. ಶ್ರೀ ಸಿದ್ಧಾರೂಢರಿಗೆ ಸಲ್ಲತಕ್ಕ ಮಾನ, ಮನ್ನಣೆ, ಪೂಜಾ, ಉತ್ಸವಾದಿಗಳೆಲ್ಲವೂ ಗುರುನಾಥಾರೂಢರಿಗೂ ಸಲ್ಲತಕ್ಕದ್ದು ಎಂಬ ತೀರ್ಮಾನವಾಯಿತು.

ಇತ್ತ ಗುರುನಾಥಾರೂಢರ ಸ್ಥಿತಿಯು ಏಕಕಾಲಕ್ಕೆ ಬದಲಾಯಿತು. ನಿಂತರೆಂದರೆ ಎರಡು ಮೂರು ದಿವಸ ನಿಂತೇ ಬಿಡುತ್ತಿದ್ದರು. ಕುಳಿತರೆ ಹಾಗೇ ಕುಳಿತೇ ಬಿಡುತ್ತಿದ್ದರು. ಮಲಗಿದರೆ, ಹಾಗೇ ಮಲಗೇ ಬಿಡುತ್ತಿದ್ದರು. ಅವರ ಎರಡೂ ಕನಿನಿಕೆಗಳು ಎಷ್ಟೂ ಚಲಿಸದೆ ತಟಸ್ಥವಾಗಿ ನಿಂತು, ಬಹಿರ್ ದೃಷ್ಟಿಯು ಅಡಗಿ ಹೋಯಿತು. ಊಟದ ಪರವೆಯಂತೂ ಇದ್ದೇ ಇಲ್ಲ ಅವರನ್ನು ಬಹಿರದೇಶಕ್ಕೆ ಕರೆದುಕೊಂಡು ಹೋಗುವದು, ಜಳಕ ಮಾಡಿಸು ವದು, ಪೂಜಿಸುವದು, ಊಟ ಮಾಡಿಸುವದು, ಹಾಸಿಗಿಹಾಸಿ ಮಲಗಿಸುವದು, ಪುನಃ ಎಬ್ಬಿಸುವ ಮೊದಲಾದ ಎಲ್ಲ ಕಾರ್ಯಗಳನ್ನು ಹೊತ್ತಿಗೆ ಸರಿಯಾಗಿ ಅಲ್ಲಿಯ ಶಿಷ್ಯರೇ ಮಾಡುತ್ತಿದ್ದರು. ಊಟ ಮಾಡಿಸಬೇಕಾದರೆ ಅದೊಂದು ದೊಡ್ಡ ಸಮಸ್ಯೆಯೇ ಆಗುತ್ತಿತ್ತು. ಸಣ್ಣ ಮಕ್ಕಳನ್ನು ರಮಿಸಿ ಉಣ್ಣಿಸುವಂತೆ ಉಣ್ಣಿಸಬೇಕಾಗುತ್ತಿತ್ತು. ಗುರುನಾಥಾರೂಢರು ಈ ಸ್ಥಿತಿಯಲ್ಲಿದ್ದುಕೊಂಡು ಸದ್ಗುರು ಶ್ರೀ ಸಿದ್ಧಾರೂಢರು ಅಪ್ಪಣೆ ಕೊಡಿಸಿದಂತೆ ಸಿರಿ-ಸಂಪತ್ತು, ಮಾನ-ಮನ್ನಣೆಗಳಿಗೆ ಮೋಹಿಸದೆ ಭಕ್ತರ ಕೈಗೆ ಸಿಗದೆ ತಮ್ಮ ೫೨ ನೆಯ ವಯಸ್ಸಿಗೆ ಶಕೆ ೧೮೮೪ ಶುಭಕೃತನಾಮ ಸಂವತ್ಸರದ ವೈಶಾಖ ಶುದ್ಧ ನವಮಿ ರವಿವಾರ ತಾ. ೧೩-೫-೧೯೬೨ ಇಸ್ವಿ ದಿವಸ ವಿದೇಹ ಕೈವಲ್ಯ ಹೊಂದಿದರು.

ಮಂಗಲ— ಗುರುವರನೆ ನೀಂ ನಿನ್ನ ಮರೆಯು |
ತ್ತಿರುವ ಪದವನ್ನೆನಗೆ ಮಾರಿದಿ |
ಸುರಸ ವೇದವೆನಿಪ್ಪ ಕಾಗದವನ್ನು ಬರಕೊಟ್ಟು ||
ಪರಮ ಭಕ್ತಿಯನ್ನಿಪ್ಪ ಧನವ |
ನ್ನಿರದೆ ಕೊಳ್ಳುತ್ತದನು ಕೊಡದಿರೆ |
ಭರದಿ ನ್ಯಾಯದಿ ನಮಿಸಿ ನಿನ್ನನೇ ನುಂಗಿ ನೀರ್ಗುಡಿವೆ ||

ಇತಿ ಶ್ರೀ ಸಿದ್ಧಾರೂಢ ಭಾರತಿ ಪರಿವ್ರಾಜಕಾಚಾರ್ಯಾವತಾರಲೀಲಾ ಚರಿತ್ರ ಕಲ್ಪದ್ರುಮದೊಳು ಗ್ರಂಥದ ಮಹಿಮೆ ಮತ್ತು ಸಿದ್ಧಾರೂಢರ ಹಾಗೂ ಗುರುನಾಥಾರೂಢರ ವಿದೇಹ ಕೈವಲ್ಯವೆಂಬ ೩೬ ನೇ ಅಧ್ಯಾಯಕ್ಕೆ ಶ್ರೀ ಗುರು ಸಿದ್ಧಾರೂಢ ಸ್ವಾಮಿಗಳವರ ಚರಿತ್ರೆ ಸಮಾಪ್ತಿ.

---

## ಸ್ತುತಿ

ಸಚ್ಚಿದ್ರೂಪಗೆ ಸಹಜಾನಂದಗೆ ಸದ್ಗುರು ಸಿದ್ಧಗೆ ನಮೋ ನಮೋ ||
ಚಿದಾನಂದಗೆ ಚಿದ್ರೂಪಾತ್ಮಗೆ ಚಿನ್ಮಯ ಸಿದ್ಧಗೆ ನಮೋ ನಮೋ ||
ನಿತ್ಯಾನಂದಗೆ ನಿಗಮಾತೀತಗೆ ನಿರ್ಗುಣ ಸಿದ್ಧಗೆ ನಮೋ ನಮೋ ||
ಪೂರ್ಣಾನಂದಗೆ ಪರಿಪೂರ್ಣಾತ್ಮಗೆ ಪರತರ ಸಿದ್ಧಗೆ ನಮೋ ನಮೋ ||
ಸಿದ್ಧಾರೂಢಗೆ ಸಹಜಾನಂದಗೆ ಸಚ್ಚಿದ್ರೂಪಗೆ ನಮೋ ನಮೋ ||
ಭಕ್ತೋದ್ಧಾರಗೆ ಭವಹರನಾಶಗೆ ಸದ್ಗುರು ಸಿದ್ಧಗೆ ನಮೋ ನಮೋ ||

## — ಮಂಗಳಾರುತಿ —

ಜ್ಞಾನದ ಜ್ಯೋತಿಯ ಬೆಳಗೀರೆ । ನಿಜ । ಜ್ಞಾನದ ಜ್ಯೋತಿಯ ಬೆಳಗೀರೆ ||
ಮಾನಿನಿಯರೆ ಗುರುಮೂರ್ತಿ ಭೋದಿಸಿದ । ಜ್ಞಾನದ ಜ್ಯೋತಿಯ ಬೆಳಗೀರೆ ॥
ನರದೇಹದಿ ತಾಂ । ವರಜಾಗ್ರತೆಯೋಳ್ । ಮೆರೆಯುವ ನೇತ್ರದ ।
ವಿಶ್ವನನರಿಯುವ || ಜ್ಞಾನದ ||೧||
ಮನಸಂ ಗೂಡುತ । ಕನಸಂ ರಚಿಸುತ । ಮಿನುಗುವ ಕಂಠದ ।
ತೈಜಸನರಿಯುವ ಜ್ಞಾನದ ||೨||
ಇದಮಾಕಾರವು । ಹೃದಯದೊಳಡಗುವ । ಯೊದವಿದ ನಿದ್ರೆಯ ।
ಪ್ರಾಜ್ಞನನರಿಯುವ || ಜ್ಞಾನದ ||೩||
ನಿಸ್ಸ್ಯಾಪಾರದಿ । ಸರ್ವಸಾಕ್ಷಿಯುಹ । ತುರ್ಯಾವಸ್ಥೆಯ ।
ತೂರ್ಯನನರಿಯುವ || ಜ್ಞಾನದ ||೪||
ಏನೊಂದಿಲ್ಲದೆ । ತಾನಿಲ್ಲೆನಿಸದೆ । ಯೀ ನಿಖಿಲವನಾ । ರೂಢನುಯವೆನಿಪ ||
ಜ್ಞಾನದ ಜ್ಯೋತಿಯ ಬೆಳಗೀರೆ ||

## ಮಂಗಳಾರುತಿ

ಆರೂಢ ಸದ್ಗುರು ಸುವಿಭೋ । ಜಯ ಜಯ । ಆರೂಢ ಸದ್ಗುರು ಸುವಿಭೋ
ಮಂಗಲ ಚಿನ್ಮಯ ಲೋಕ ಪೂಜ್ಯನೆ । ಆರೂಢ ಸದ್ಗುರು ಸುವಿಭೋ ||ಪ||

ಶ್ರುತಿಮತ ಶೀಲಾ । ಯತಿಜನ ಪಾಲಾ । ಗತಿಕಾಂತಾಯುತ ಲೋಲ
ನಿರ್ಮಲ || ಆರೂಢ ||೧||

ಪರಮೋದಾರಾ । ಹರನವತಾರಾ । ವರಮಾಂತೇಶ್ವರ ಧೀರ
ಪುರಹರ || ಆರೂಢ ||೨||

ಮೆರೆಯುವ ಭ್ರೂಲತ । ಪುರದೊಳು ಸಂಸ್ಥಿತ । ವರ ಶಾಂತಿಯುತ ನಾಥ
ಪರಹಿತ || ಆರೂಢ ಸದ್ಗುರು ನುವಿಭೋ ||೩||

ಚೈತನಂ ಶಾಶ್ವತಂ ಶಾಂತಂ ಯೋಮಾತೀತಂ ನಿರಂಜನಂ ।
ನಾದಬಿಂದು ಕಲಾತೀತಂ ತಸ್ಮೈ ಶ್ರೀಗುರುವೇ ನಮಃ ||

**ಓಂ ಶಾಂತಿಃ ಶಾಂತಿಃ ಶಾಂತಿಃ**

**— ಸಮಾಪ್ತಿ —**

# ನಮ್ಮ ಹೊಸ ಪ್ರಕಟನೆಗಳು

| | |
|---|---|
| ಶ್ರೀ ಕೃಷ್ಣ ಬೋಧಾಮೃತ | ೬-೦೦ |
| ಗದಗದ ಶ್ರೀ ಮಡಿವಾಳೇಶ್ವರ ಚರಿತ್ರೆ | ೫-೦೦ |
| ಕಲಬುರ್ಗಿ ಶ್ರೀ ಶರಣಬಸವೇಶ್ವರ ಚರಿತ್ರೆ | ೫-೦೦ |
| ಮುರಗೋಡ ಮಹಾಂತ ಶಿವಯೋಗಿಗಳ ಚರಿತ್ರೆ | ೫-೦೦ |
| ಶಿವನ ೨೫ ಲೀಲೆಗಳು | ೨-೦೦ |
| ನವಲಗುಂದ ಶ್ರೀ ನಾಗಲಿಂಗಸ್ವಾಮಿಗಳ ಚರಿತ್ರೆ | ೪-೦೦ |

# ಹೊಸ ನಾಟಕಗಳು

| | |
|---|---|
| ಪ್ರೀತಿಯೇ ದೇವರು | ೬-೦೦ |
| ಹಿರಿಯರಿಲ್ಲದ ಮನೆ | ೬-೦೦ |
| ಬುದ್ಧಿ ಇದ್ದರೂ ಭಾಗ್ಯಬೇಕು | ೬-೦೦ |
| ಸೇಡಿನ ಸಿಡಿಲು | ೬-೦೦ |
| ದೈವ ದುರಂತ | ೬-೦೦ |
| ಚಿತ್ರಾಂಗದಾ | ೬-೦೦ |
| ದಾರಿಬಿಟ್ಟ ಗಂಡ | ೬-೦೦ |
| ಬಲೆ ಬೀಸಿದ ಹೆಣ್ಣು | ೬-೦೦ |
| ಮುದ್ವಿಗಂಡ ಉಡ್ಕಿ ಹೆಂಡ್ತಿ | ೬-೦೦ |

[ ಬೆಲೆ : 12-00